# ಮೈಸೂರು ವಿಶ್ವವಿದ್ಯಾನಿಲಯ

## "ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ: ಒಂದು ವಿವರಣಾತ್ಮಕ ಅಧ್ಯಯನ"

ಪಿಎಚ್.ಡಿ. ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ
ಸಂಶೋಧನಾ ಮಹಾಪ್ರಬಂಧ

**ಸಂಶೋಧಕರು**

**ಸುರೇಶ**
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ
ಮೈಸೂರು-570006

**ಮಾರ್ಗದರ್ಶಕರು**

**ಡಾ.ಜಿ.ಕರಿಯಪ್ಪ**
ಸಹಪ್ರಾಧ್ಯಾಪಕರು/ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ
ಮೈಸೂರು-570006

2018

# ಪ್ರಮಾಣ ಪತ್ರ

**ಶ್ರೀ ಸುರೇಶ,** ಎಂಬ ಸಂಶೋಧನಾ ವಿದ್ಯಾರ್ಥಿಯಾದ ನಾನು **"ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ: ಒಂದು ವಿವರಣಾತ್ಮಕ ಅಧ್ಯಯನ"** ಎಂಬ ವಿಷಯದಲ್ಲಿ ಡಾ.ಜಿ.ಕರಿಯಪ್ಪ, ಸಹಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ಕೈಗೊಂಡ ಫಲವಾಗಿ ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿಗಾಗಿ ಮಹಾಪ್ರಬಂಧವನ್ನು ಪೂರ್ಣಗೊಳಿಸಿ ಸಲ್ಲಿಸಿರುತ್ತೇನೆಂದು ಪ್ರಮಾಣೀಕರಿಸುತ್ತೇನೆ. ನಾನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಷಯದಲ್ಲಿ ಪಿಎಚ್.ಡಿ. ಪದವಿ ಪ್ರಾಪ್ತಿಗಾಗಿ ಕೋರಿ ಈ ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಇಡಿಯಾಗಲಿ ಅಥವಾ ಬಿಡಿಯಾಗಲಿ ಯಾವುದೇ ಪದವಿ ಅಥವಾ ಡಿಪ್ಲೊಮಾ ಪದವಿಗಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

**(ಸುರೇಶ)**
ಸಂಶೋಧನಾ ವಿದ್ಯಾರ್ಥಿ
ಸಹಿ ಮಾಡಿದ ದಿನಾಂಕ:

**(ಜಿ.ಕರಿಯಪ್ಪ)**
ಮಾರ್ಗದರ್ಶಕರು
ಸಹಪ್ರಾಧ್ಯಾಪಕರು
ಸಹಿ ಮಾಡಿದ ದಿನಾಂಕ:

**ಮೇಲು ಸಹಿ**

**(ಕೆ.ಪ್ರಭು)**
ಸಹಾಯಕ ಪ್ರಾಧ್ಯಾಪಕರು/ಅಧ್ಯಕ್ಷರು
ಸಹಿ ಮಾಡಿದ ದಿನಾಂಕ:

## ಪ್ರಮಾಣ ಪತ್ರ

**ಶ್ರೀ ಸುರೇಶ,** ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಇವರು ನಮ್ಮ ವಿಭಾಗದಲ್ಲಿ ಪೂರ್ಣಕಾಲಿಕ ಸಂಶೋಧನಾ ವಿದ್ಯಾರ್ಥಿಯಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮೂಲಕ ಪಿಎಚ್.ಡಿ. ಪದವಿಗಾಗಿ ಸಂಶೋಧನಾಕಾರ್ಯ ಕೈಗೊಂಡು ಸಾದರಪಡಿಸಿರುವ **"ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ: ಒಂದು ವಿವರಣಾತ್ಮಕ ಅಧ್ಯಯನ"** ಎಂಬ ಮಹಾಪ್ರಬಂಧವು ನನ್ನ ಮಾರ್ಗದರ್ಶನದಲ್ಲಿ ಶ್ರೀ ಸುರೇಶ ಅವರಿಂದ ಸ್ವಯಂ ರಚಿತ ಕೃತಿಯಾಗಿದೆ ಎಂದು ದೃಢೀಕರಿಸುತ್ತೇನೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಯಾವುದೇ ಪದವಿ ಅಥವಾ ಡಿಪ್ಲೊಮಾಗಾಗಿ ಸಲ್ಲಿಸಿಲ್ಲವೆಂದು ಹಾಗೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ಮೈಸೂರು
ದಿನಾಂಕ:

**(ಜಿ.ಕರಿಯಪ್ಪ)**
ಸಹಪ್ರಾಧ್ಯಾಪಕರು/ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು-570006

# ಘೋಷಣಾ ಪತ್ರ

ಶ್ರೀ **ಸುರೇಶ,** ಸಂಶೋಧನಾ ವಿದ್ಯಾರ್ಥಿಯಾದ ನಾನು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ ಸಂಶೋಧನಾ ವಿದ್ಯಾರ್ಥಿಯಾಗಿ, ಇದೇ ವಿಭಾಗದಲ್ಲಿ ಸಹಪ್ರಾಧ್ಯಾಪಕರಾದ ಡಾ.ಜಿ.ಕರಿಯಪ್ಪರವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಂಶೋಧನಾಕಾರ್ಯ ಕೈಗೊಂಡು ಸಾದರಪಡಿಸಿರುವ **"ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ: ಒಂದು ವಿವರಣಾತ್ಮಕ ಅಧ್ಯಯನ"** ಎಂಬ ಮಹಾಪ್ರಬಂಧವು ಮಾರ್ಗದರ್ಶಕರ ಮೇಲ್ವಿಚಾರಣೆಯಲ್ಲಿ ನನ್ನಿಂದ ರಚಿತವಾದ ಸ್ವಯಂ ಕೃತಿಯಾಗಿದೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಯಾವುದೇ ಪದವಿ ಅಥವಾ ಡಿಪ್ಲೊಮಾಗಾಗಿ ಸಲ್ಲಿಸಿಲ್ಲವೆಂದು ಹಾಗೂ ಪ್ರಕಟವಾಗಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ: ಮೈಸೂರು
ದಿನಾಂಕ:

**(ಸುರೇಶ)**
ಸಂಶೋಧನಾ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಮಾನಸಗಂಗೋತ್ರಿ, ಮೈಸೂರು-570006

## ಕೃತಜ್ಞತೆಗಳು

**"ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ–ಒಂದು ವಿವರಣಾತ್ಮಕ ಅಧ್ಯಯನ"** ಎಂಬ ವಿಷಯದ ಬಗ್ಗೆ ಸಂಶೋಧನೆ ಕೈಗೊಳ್ಳಲು ಸೂಕ್ತ ಮಾರ್ಗದರ್ಶನವನ್ನು ನೀಡಿ ಪ್ರೋತ್ಸಾಹಿಸಿದ ನನ್ನ ಪೂಜ್ಯ ಗುರುಗಳಾದ ಡಾ.ಜಿ.ಕರಿಯಪ್ಪ, ಸಹಪ್ರಾಧ್ಯಾಪಕರು ಅವರಿಗೆ ಹೃದಯ ಪೂರ್ವಕವಾಗಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಈ ನನ್ನ ಸಂಶೋಧನಾ ಕಾರ್ಯವನ್ನು ನಡೆಸಲು ಅವಕಾಶ ನೀಡಿದ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನನ್ನ ಹೃದಯಪೂರ್ವಕ ನಮಸ್ಕಾರಗಳು.

ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಲ್ಲಿ ಸಂಶೋಧನೆ ನಡೆಸಲು ಸಹಕಾರ ನೀಡಿದ ಸಹಾಯಕ ಪ್ರಾಧ್ಯಾಪಕ/ಅಧ್ಯಕ್ಷರು ಆದ ಡಾ.ಕೆ.ಪ್ರಭು, ಸಹಾಯಕ ಪ್ರಾಧ್ಯಾಪಕರಾದ ಡಾ.ವಿ.ಶೋಭಾ ಅವರಿಗೆ ನನ್ನ ಕೃತಜ್ಞತೆಗಳು. ವಿಭಾಗದ ನಿವೃತ್ತ ಪ್ರಾಧ್ಯಾಪಕರುಗಳಾದ ಡಾ.ಎನ್.ಎಸ್.ರಂಗರಾಜು, ಡಾ.ಎಂ.ವಿ.ಕೃಷ್ಣಪ್ಪ, ಡಾ.ಎಂ.ಪಿ.ಮಹದೇವಯ್ಯ, ಅವರಿಗೆ ನನ್ನ ಕೃತಜ್ಞತೆಗಳು. ಡಾ.ಸಿ.ಈ.ಲೋಕೇಶ, ಸಹಾಯಕ ಪ್ರಾಧ್ಯಾಪಕರು ಹಾಗೂ ವಿಭಾಗದ ಮುಖ್ಯಸ್ಥರು, ಮಹಾರಾಜ ಕಾಲೇಜು, ಮೈಸೂರು, ಡಾ.ಬಿ.ಸಿ.ಸುರೇಶ ಸಹಾಯಕ ಪ್ರಾಧ್ಯಾಪಕರು, ಶ್ರೀ ಡಿ.ದೇವರಾಜ ಅರಸು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹುಣಸೂರು. ಡಾ.ಜಿ.ರಾಮದಾಸ ರೆಡ್ಡಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುವೆಂಪುನಗರ, ಮೈಸೂರು, ಅವರಿಗೆ ನನ್ನ ಕೃತಜ್ಞತೆಗಳು.

ವಿಶೇಷವಾಗಿ ನನ್ನ ಸಂಶೋಧನಾ ಕಾರ್ಯಕ್ಕೆ ಸಹಾಯ ಮಾಡಿದ ವಿಭಾಗದ ಸಂಶೋಧನಾ ಸಹಾಯಕರಾದ ಡಾ.ಕೆ.ಎಸ್.ಬೆಟ್ಟಪ್ಪ, ಶಶಿಕುಮಾರ ಎಸ್. ಇವರಿಗೆ ನನ್ನ ಧನ್ಯವಾದಗಳು ಮತ್ತು ಕಛೇರಿ ಸಿಬ್ಬಂದಿಯವರಾದ ಶ್ರೀಮತಿ ಉಷಾಗಣೇಶ್, ಶಿವರಾಜು ಇವರುಗಳಿಗೆ ಅಭಾರಿಯಾಗಿರುತ್ತೇನೆ. ನನ್ನ ಸಂಶೋಧನೆಗೆ ಸಹಾಯ ಮಾಡಿದ ವಿಭಾಗದ ಸಂಶೋಧಕರುಗಳಾದ ಶ್ರೀ.ಶಶಿಧರ.ಸಿ.ಎ, ಚಂದ್ರಯ್ಯ, ಶಿವಾನಂದ.ಎನ್, ಚಂದ್ರಶೇಖರ.ಎನ್, ಡಾ.ಎಚ್.ಎನ್.ಕಾಳಸ್ವಾಮಿ, ಡಾ.ಸಿದ್ದರಾಜು, ಡಾ.ಉಮೇಶ.ಸಿ.ಜಿ., ಅನಿಲ್.ಎಲ್., ಕುಮಾರಸ್ವಾಮಿ ಎಸ್.ಡಿ., ನೀಲಯ್ಯ, ಪ್ರಕಾಶ್.ಎಂ, ನಿಂಗನಾಯ್ಕ.ಸಿ.,

ಮಧುಸೂದನ, ಎಂ.ಎನ್, ಕೆಂಡಮ್ಮ ಕೆ., ಉಮಾ.ಡಿ.ಟಿ, ಗೀತಾ.ಪಿ. ಶ್ವೇತ.ಸಿ ಹಾಗೂ ವಿಭಾಗದ ಎಲ್ಲ ಸಂಶೋಧಕರುಗಳಿಗೆ ನನ್ನ ಕೃತಜ್ಞತೆಗಳು. ನನ್ನ ಸಂಶೋಧನಾ ಕಾರ್ಯವನ್ನು ನಡೆಸಲು ಸಹಾಯ ಮಾಡಿದ ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯದ ಸಿಬ್ಬಂದಿ, ಮಾನಸಗಂಗೋತ್ರಿ, ಭಾರತೀಯ ಪುರಾತತ್ವ ಇಲಾಖೆಯ ಗ್ರಂಥಾಲಯ, ಕರ್ನಾಟಕ ಸರ್ಕಾರ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯದ ಗ್ರಂಥಾಲಯ ಹಾಗೂ ಮಹಾರಾಜ ಕಾಲೇಜು ಗ್ರಂಥಾಲಯ. ಈ ಎಲ್ಲಾ ಗ್ರಂಥಾಲಯಗಳನ್ನು ನನ್ನ ಸಂಶೋಧನೆಗೆ ಅಪಾರವಾಗಿ ಬಳಸಿಕೊಂಡಿದ್ದೇನೆ. ಇದಕ್ಕಾಗಿ ನನಗೆ ಅವಕಾಶ ನೀಡಿದ ಎಲ್ಲಾ ಗ್ರಂಥಾಲಯದ ಮುಖ್ಯಸ್ಥರುಗಳಿಗೆ ಹಾಗೂ ಸಿಬ್ಬಂದಿವರ್ಗದವರಿಗೆ ಅಭಾರಿಯಾಗಿದ್ದೇನೆ.

ನನಗೆ ಜನ್ಮವಿತ್ತ ಪೂಜ್ಯರಾದ ಶ್ರೀ ಪುಟ್ಟಮಾದಯ್ಯ ಮತ್ತು ಶ್ರೀಮತಿ ರಾಜಮ್ಮ ಇವರ ಆಶೀರ್ವಾದ ನನ್ನ ವಿದ್ಯಾಭ್ಯಾಸಕ್ಕೆ ಪ್ರೇರಣೆ ನೀಡಿತು. ಇವರಿಗೂ ನನ್ನ ಕೃತಜ್ಞತೆಗಳು ಹಾಗೂ ಅಕ್ಕ ಬಾವಂದಿರಾದ ಶ್ರೀಮತಿ ನಾಗರತ್ನಮ್ಮ, ದೊರೆಸ್ವಾಮಿ, ಶ್ರೀಮತಿ ಪ್ರಮೀಳ, ಕಾಮರಾಜು, ಶ್ರೀಮತಿ ರೇಖಾ ನಾಗರಾಜು ಎನ್, ಶ್ರೀಮತಿ ಲಿಂಗರಾಜಮ್ಮ, ಶೇಖರ್, ಶ್ರೀಮತಿ ಪುಟ್ಟರಾಜಮ್ಮ, ನಂಜುಂಡಸ್ವಾಮಿ ಹಾಗೂ ಸಹೋದರರಾದ ಸಿದ್ದರಾಜು, ಹರೀಶ, ಗುರುಸ್ವಾಮಿ ಇವರಿಗೂ ನನ್ನ ಕೃತಜ್ಞತೆಗಳು.

ಆತ್ಮೀಯ ಗೆಳೆಯರಾದ ಶ್ರೀವಾಸುದೇವ.ಎ, ಮಹಾದೇವಸ್ವಾಮಿ(ಸೇಠು), ರಮೇಶ ಎಂ, ನವೀನ್‌ಚಂದ್ರ ಸಿ.ಬಿ., ಡಾ.ನಿರಂಜನ್‌ಕುಮಾರ್, ಡಾ.ಮಲ್ಲಿಕಾರ್ಜುನ, ಡಾ.ಬಾಬುರಾಜು, ಕಾಳಯ್ಯ, ದೊಡ್ಡರಾಜು, ಉಮೇಶ ಸಿ., ಶಶಿಧರ, ರಂಗಸ್ವಾಮಿ, ರಾಮು, ನಾಗೇಂದ್ರ, ಶಿವಣ್ಣ, ಹಾಗೂ ನನ್ನ ಬಂಧು-ಬಾಂಧವರಿಗೂ ಹೃದಯಪೂರ್ವಕ ಕೃತಜ್ಞತೆಗಳು.

ಈ ಮಹಾಪ್ರಬಂಧವನ್ನು ಡಿ.ಟಿ.ಪಿ. ಮಾಡಿದ ಚಂದ್ರಶೇಖರ ಎನ್., ಉಮೇಶ ಸಿ., ಹಾಗೂ ಈ ಮಹಾಪ್ರಬಂಧವನ್ನು ಅಚ್ಚುಕಟ್ಟಾಗಿ ಬೈಂಡಿಂಗ್ ಮಾಡಿಕೊಟ್ಟಂತಹ ಮಧುರಾ ಎಂಟರ್ ಪ್ರೈಸಸ್‌ನ ಶ್ರೀ ಏಕನಾಥ್ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಕ್ಷೇತ್ರಕಾರ್ಯವನ್ನು ಮಾಡುವಾಗ ದೇವಾಲಯಗಳ ಛಾಯಾಚಿತ್ರ ತೆಗೆಯಲು ಅವಕಾಶ ಮಾಡಿಕೊಟ್ಟ ಭಾರತೀಯ ಪುರಾತತ್ವ ಇಲಾಖೆಯ ಸಿಬ್ಬಂದಿವರ್ಗದವರಿಗೂ, ಮೈಸೂರು ಜಿಲ್ಲೆಯ ದೇವಾಲಯಗಳ ಅರ್ಚಕರುಗಳಿಗೂ, ಗ್ರಾಮಸ್ಥರಿಗೂ ಹಾಗೂ ಇನ್ನುಳಿದ ಎಲ್ಲಾ ನನ್ನ ಬಾಂಧವರು ಹಾಗೂ ಇನ್ನುಳಿದ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲಾ ಸ್ನೇಹಿತರೆಲ್ಲರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

**(ಸುರೇಶ)**

# ಸಂಕೇತಾಕ್ಷರಗಳು

| | | |
|---|---|---|
| ಎಂ.ಎ.ಆರ್. | – | ಮೈಸೂರು ಆರ್ಕಿಯೊಲಾಜಿಕಲ್ ರಿಪೋರ್ಟ್ |
| ಎ.ಕ.ಸಂ. | – | ಎಪಿಗ್ರಾಫಿಯ ಕರ್ನಾಟಿಕ ಸಂಪುಟ |
| ಕ.ವಿ.ವಿ.ಕೋ. | – | ಕನ್ನಡ ವಿಷಯ ವಿಶ್ವಕೋಶ |
| ಶಾ.ಸಂ. | – | ಶಾಸನ ಸಂಖ್ಯೆ |
| ಪು.ಸಂ. | – | ಪುಟಸಂಖ್ಯೆ |
| ಚಿ.ಸಂ. | – | ಚಿತ್ರ ಸಂಖ್ಯೆ |
| ಹೆ.ಕೋ. | – | ಹೆಗ್ಗಡದೇವನಕೋಟೆ |
| ಪಿ.ಪ. | – | ಪಿರಿಯಾಪಟ್ಟಣ |
| ಮೈ. | – | ಮೈಸೂರು |
| ಹು.ಸೂ. | – | ಹುಣಸೂರು |
| ತಿ.ನ. | – | ತಿರುಮಕೂಡಲು ನರಸೀಪುರ |
| ಕೃ.ನ. | – | ಕೃಷ್ಣರಾಜನಗರ |
| ನಂ.ಗೂ. | – | ನಂಜನಗೂಡು |
| ಗುಂ.ಪೇ. | – | ಗುಂಡ್ಲುಪೇಟೆ |
| ಚಾ.ನ. | – | ಚಾಮರಾಜನಗರ |
| ಚ.ಕಿ.ಮೀ. | – | ಚದರ ಕಿಲೋ ಮೀಟರ್ |
| ಕಿ.ಮೀ. | – | ಕಿಲೋ ಮೀಟರ್ |
| ಮೀ. | – | ಮೀಟರ್ |

# ಪರಿವಿಡಿ

ಪುಟ ಸಂಖ್ಯೆ

## ಅಧ್ಯಾಯ–1

## ಪೀಠಿಕೆ

ಭಾರತೀಯ ಇತಿಹಾಸ ಪರಂಪರೆಯಲ್ಲಿ ಇಂದಿಗೂ ಗತವೈಭವವನ್ನು ಸಾರುತ್ತಾ, ನಮ್ಮ ಜನಸಮುದಾಯಕ್ಕೆ ಮತ್ತು ಮುಂದಿನ ಪೀಳಿಗೆಗೆ ಹಾಗೂ ಜಗತ್ತಿಗೆ ನಮ್ಮ ನಾಡಿನ ಭವ್ಯ ಪರಂಪರೆಯನ್ನು ಕೊಂಡೊಯ್ಯುವ ಸ್ಥಾನದಲ್ಲಿ ನಿಂತು ನೋಡುಗರ ಕಣ್ಮನಗಳನ್ನು ಸೆಳೆಯುತ್ತಾ ಮೂಕವಿಸ್ಮಿತರನ್ನಾಗಿ ಮಾಡುತ್ತಿರುವ, ಇತಿಹಾಸದ ಆಧಾರಗಳಲ್ಲೇ ಅತಿ ಹೆಚ್ಚು ನಂಬಲರ್ಹವಾಗಿರುವ ಪುರಾತನ ಸ್ಮಾರಕಗಳು ಹಾಗೂ ದೇವಾಲಯಗಳು ಎಂದರೇ ತಪ್ಪಾಗಲಾರದು. ಭಾರತೀಯ ಹಿಂದೂ ಸಂಪ್ರದಾಯದಲ್ಲಿ ದೇವಾಲಯಗಳಿಗೆ ಅತ್ಯಂತ ಮಹತ್ವದ ಸ್ಥಾನವನ್ನು ನೀಡಲಾಗಿದೆ. ಭಾರತದಾದ್ಯಂತ ನಮ್ಮ ಪೂರ್ವಿಕರು, ಸಾಮ್ರಾಟರು, ಚಕ್ರವರ್ತಿಗಳು, ಸಾಮಂತರುಗಳು ಹಾಗೂ ಜನಸಮುದಾಯಗಳು ನಿರ್ಮಾಣ ಮಾಡಿರುವ ದೇವಾಲಯಗಳು, ಭಾರತ ದೇಶದ ಉತ್ತರದ ತುದಿಯಿಂದಿಡಿದು ದಕ್ಷಿಣದ ತುದಿಯವರೆಗೂ ಹಾಗೂ ಪೂರ್ವದಿಂದ ಪಶ್ಚಿಮ ದಿಕ್ಕಿನವರೆಗೂ ಇಂದಿಗೂ ಸಹಸ್ರಾರು ದೇವಾಲಯಗಳು ಕಂಡುಬರುತ್ತವೆ. ಅಳಿದು ಹೋದ ಸಾಮ್ರಾಜ್ಯಗಳ ಭವ್ಯ ಇತಿಹಾಸವನ್ನು ಇಂದಿಗೂ ನಮ್ಮ ಕಣ್ಣಿಗೆ ಕಟ್ಟಿಕೊಡಲು ಇರುವಂತಹ ಆಧಾರಗಳೆಂದರೆ, ಅದು ನಮ್ಮ ದೇವಾಲಯಗಳು.

ವಾಸ್ತು ಎಂದರೆ ವಸ್ತುಗಳಿಂದ ನಿರ್ಮಿತವಾದುದು ಎಂಬ ಅರ್ಥವಿದೆ. ಶಿಲ್ಪ ಎನ್ನುವುದು ಪ್ರಸಿದ್ಧವಾದ ಅರವತ್ತನಾಲ್ಕು ಕಲೆಗಳಿಗೆಲ್ಲಾ ಅನ್ವಯವಾಗುವಂತಹ ಪದವಾಗಿದೆ. ವಾಸ್ತುವಿನ ಅರ್ಥದಡಿಯಲ್ಲಿ ಕೇವಲ ಕಟ್ಟಡದ ನಿರ್ಮಾಣಗಳಿಗೆ ಮಾತ್ರವಲ್ಲದೆ ಪಟ್ಟಣದ ನಿರ್ಮಾಣದ ಯೋಜನೆ, ಉದ್ಯಾನವನ, ರಸ್ತೆಗಳು, ಚರಂಡಿಗಳು, ಪೀಠೋಪಕರಣಗಳ ನಿರ್ಮಾಣವು ಸಹ ಈ ಪದದ ಅರ್ಥ ವ್ಯಾಪ್ತಿಯಲ್ಲಿಯೇ ಬರುತ್ತವೆ. ಆದುದರಿಂದ ಕರ್ನಾಟಕದ ಇತಿಹಾಸದಲ್ಲೇ ಕಲೆ ಮತ್ತು ವಾಸ್ತುಶಿಲ್ಪವು ಒಂದು ಪ್ರಮುಖವಾದ ಚರ್ಚಾ ವಿಷಯವಾಗಿದೆ. ಇಂತಹ ವಾಸ್ತು ಶಿಲ್ಪ ಕಲೆಯ ಅಧ್ಯಯನಕ್ಕೆ ದೊರಕುವ ವಿಶಿಷ್ಟವಾದ ಸಾಮಾಗ್ರಿಗಳೆಂದರೆ ದೇವಾಲಯಗಳು. ಕರ್ನಾಟಕವನ್ನಾಳಿದ ಅನೇಕ ರಾಜಮನೆತನಗಳು ಎಲ್ಲಾ ರಂಗಗಳಲ್ಲೂ ವಿಶಿಷ್ಟವಾದ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಅವುಗಳಲ್ಲಿ ಸಾಂಸ್ಕೃತಿಕ ಕೊಡುಗೆಗಳಾಗಿ ದೇವಾಲಯಗಳ ನಿರ್ಮಾಣದ ಕಾರ್ಯವು ಒಂದಾಗಿವೆ. ದೇವರು ಹಾಗೂ ದೇವತೆಗಳ ಹೆಸರಿನಲ್ಲಿ ಮಾಡುವ ಕೆಲಸಕಾರ್ಯಗಳನ್ನು ಧಾರ್ಮಿಕ ಕಾರ್ಯಗಳೆಂದು ಕರೆಯಲಾಗಿದೆ. ಆದುದರಿಂದಲೇ ನಮಗೆ ಇಂದಿಗೂ ಹಲವು ಪ್ರಾಚೀನ ಕಾಲದ ದೇವಾಲಯಗಳು ದೊರೆಯುತ್ತಿವೆ. ಮತ್ತೊಂದು ಅಂಶವೆಂದರೆ ದೇವಾಲಯಗಳನ್ನು ವಾಸದ ಮನೆಗಳಿಗಿಂತ ಹೆಚ್ಚು ಕಾಲ ಉಳಿಯುವಂತಹ

ರೀತಿಯಲ್ಲಿ ಅವುಗಳನ್ನು ಕಟ್ಟಿ ಉಳಿಸಿಕೊಂಡು ಬಂದರು. ಅಂದರೆ 'ವಾಸ್ತುಶಿಲ್ಪ' ಪ್ರಧಾನವಾಗಿ ಬೆಳೆದು ಬಂದುದು ಧಾರ್ಮಿಕ ತಳಹದಿಯಿಂದಲೇ ಎನ್ನಬಹುದು. ಇದರ ಜೊತಗೆ ಭೌಗೋಳಿಕ ಸನ್ನಿವೇಶಗಳು, ಸಾಮಾಜಿಕ ಮತ್ತು ರಾಜಕೀಯ ಪರಿವರ್ತನೆಗಳು, ಐತಿಹಾಸಿಕ ಘಟನೆಗಳು ಮೊದಲಾದವುಗಳು ಮುಖ್ಯವಾದವು. ಇದರಿಂದ ಕರ್ನಾಟಕವನ್ನಾಳಿದ ಎಲ್ಲಾ ರಾಜ ಮನೆತನಗಳು ಪೈಪೋಟಿಯಿಂದ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಪ್ರೋತ್ಸಾಹ ನೀಡಿದರು. ಇದರ ಫಲವಾಗಿ ಶಿಲ್ಪ ಕಲೆಯಲ್ಲೇ ಅದ್ಭುತವೆನಿಸುವ, ಪವಾಡವೆನಿಸುವ ಅನೇಕ ದೇವಾಲಯಗಳು ನಿರ್ಮಾಣವಾದವು ಜೊತೆಗೆ ಕಲಾತ್ಮಕವಾದ ಬಿಡಿ ಶಿಲ್ಪಗಳು ನಿರ್ಮಾಣವಾದವು.

ವಾಸ್ತುಶಿಲ್ಪದ ದೃಷ್ಟಿಯಲ್ಲಿ ನೋಡಿದಾಗ ಮೈಸೂರು ಜಿಲ್ಲೆಯಲ್ಲಿ ಗಂಗ, ಚೋಳ, ಹೊಯ್ಸಳ, ಚಂಗಾಳ್ವ, ವಿಜಯನಗರದ ಅರಸರು ಮತ್ತು ಮೈಸೂರು ಒಡೆಯರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು ಇಲ್ಲಿ ಕಂಡುಬರುತ್ತವೆ. ಆದರೆ ಕಲಾಸೃಷ್ಟಿಯ ದೇವಾಲಯಗಳು ಒಂದು ಪರ್ವಕಾಲವೆನಿಸುತ್ತದೆ. ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪದ ಅಧ್ಯಯನದಲ್ಲಿ ನಿಷ್ಠಾವಂತರೆನಿಸಿದ ಶ್ರೀಕಂಠಶಾಸ್ತ್ರಿ.ಎಸ್, ಶೇಷಾದ್ರಿ. ಎಂ, ಕೃಷ್ಣ.ಎಂ.ಎಚ್, ಶೆಟ್ಟರ್ ಎಸ್, ಗೋಪಾಲ್. ಬಾ.ರಾ. ಇನ್ನೂ ಮುಂತಾದವರು ಈ ವಿಚಾರದಲ್ಲಿ ಈಗಾಗಲೇ ಸಾಕಷ್ಟು ಸಂಶೋಧನೆಗಳನ್ನು ಮಾಡಿ ತರ್ಕಬದ್ಧವಾದ ತೀರ್ಮಾನಗಳನ್ನು ನೀಡಿದ್ದಾರೆ. ಇವರೆಲ್ಲರ ಮುಖ್ಯ ಉದ್ದೇಶ ಇಡೀ ವಾಸ್ತುಶಿಲ್ಪದ ಅಧ್ಯಯನವಾಗಿದೆ. ಈ ಅಧ್ಯಯನದಲ್ಲಿ ದೇವಾಲಯಗಳು ಇರುವ ಸ್ಥಳದ ಇತಿಹಾಸ ಮತ್ತು ಐತಿಹ್ಯ, ದೇವಾಲಯಗಳ ಇತಿಹಾಸ, ವಾಸ್ತುವಿನ ಮುಖ್ಯ ಲಕ್ಷಣಗಳು, ದೇವಾಲಯ ನಿರ್ಮಾಣಕಾಲ, ನಿರ್ಮಾತೃ, ಕಲಾಪೋಷಕರು ವಾಸ್ತು ಮತ್ತು ಶಿಲ್ಪದ ಶ್ರೇಷ್ಠತೆ, ವಾಸ್ತುವಿನ ವೈವಿಧ್ಯತೆ ಮತ್ತು ಶಿಲ್ಪಗಳ ಶ್ರೇಷ್ಠತೆ ಮುಂತಾದ ಎಲ್ಲಾ ವಿಚಾರಗಳನ್ನು ಸಂಪೂರ್ಣವಾಗಿ ವಿಮರ್ಶಿಸುವುದೇ ಆಗಿದೆ. ಆದರೆ ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪವನ್ನು ಮುಖ್ಯ ವಿಷಯ ವಸ್ತುವನ್ನಾಗಿಟ್ಟುಕೊಂಡು ಯಾರು ಸಮಗ್ರವಾಗಿ ಅಧ್ಯಯನ ನಡೆಸಿಲ್ಲ. ಆದರೆ ಕೆಲವು ದೇವಾಲಯಗಳ ಬಗ್ಗೆ ಅಲ್ಲಲ್ಲಿ ಬಿಡಿಲೇಖನಗಳು, ತಾಲೂಕುವಾರು ದೇವಾಲಯಗಳ ಅಧ್ಯಯನ ಹಾಗೂ ಮೈಸೂರು ಆರ್ಕಿಯಾಲಾಜಿಕಲ್ ರೀಪೋರ್ಟ್‌ನಲ್ಲಿ ಕೆಲವು ದೇವಾಲಯಗಳ ವಾಸ್ತುವಿನ ಲಕ್ಷಣಗಳನ್ನು ಸಂಪಾದಿಸಿದ್ದಾರೆ. ಇಂತಹ ಕಾರ್ಯಗಳನ್ನು ಬಿಟ್ಟರೆ ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ವಾಸ್ತುಶೈಲಿಗಳ ಸಮಗ್ರ ಅಧ್ಯಯನ ನಡೆದಿಲ್ಲ ಎಂದೇ ಹೇಳಬಹುದು. ಆದ್ದರಿಂದ ಮೈಸೂರು ಜಿಲ್ಲೆಗೆ ಸಂಬಂಧಿಸಿದ ಹೊಯ್ಸಳರ ಕಾಲದ ದೇವಾಲಯಗಳನ್ನು ಸಮಗ್ರವಾಗಿ ಅಧ್ಯಯನ ಮಾಡಿ ಕ್ಷೇತ್ರಕಾರ್ಯ ನಡೆಸಿ ಸೂಕ್ಷ್ಮವಾಗಿ

ಅವಲೋಕಿಸಿ, ವಿಮರ್ಶೆ ಮಾಡಿ, ಕ್ರೋಢಿಕರಿಸಿ ಒಂದು ಮಹಾಪ್ರಬಂಧವನ್ನು ರಚಿಸುವ ಉದ್ದೇಶದಿಂದ ಈ ಶೀರ್ಷಿಕೆಯಡಿಯಲ್ಲೇ ಸಂಶೋಧನೆ ಕೈಗೊಂಡಿದ್ದೇನೆ.

ಪ್ರಸ್ತುತವಾಗಿ ನಾನು ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಅಧ್ಯಯನ ನಡೆಸುತ್ತಿದ್ದು, ಪ್ರಸ್ತುತ ಇದಕ್ಕೆ ಅಂದರೆ, ಹೊಯ್ಸಳರ ಉಗಮದ ಬಗ್ಗೆ ನಾವು ತಿಳಿದುಕೊಳ್ಳಬೇಕಾಗಿದೆ ಹಾಗೂ ಹೊಯ್ಸಳರ ಉಗಮಸ್ಥಾನವು ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕಿನಲ್ಲಿರುವ ಶಶಕಪುರ ಅಥವಾ ಸೊಸೆವೂರು ಈಗಿನ ಅಂಗಡಿಯಾಗಿದೆ. ತರುವಾಯ ಅವರು ಮಲೆನಾಡಿನ ಕಾಡು ಪ್ರದೇಶದಿಂದ ಬಯಲು ಪ್ರದೇಶವಾದ ದ್ವಾರಸಮುದ್ರಕ್ಕೆ ರಾಜಧಾನಿಯನ್ನು ಬದಲಾಯಿಸಿಕೊಂಡು ಆಳ್ವಿಕೆ ಮಾಡಲು ಮುಂದಾದರು ಎಂಬುದು ಸರ್ವವಿಧಿತವಾದ ವಿಷಯವಾಗಿದೆ. ಆಗ ಮೈಸೂರು ಜಿಲ್ಲೆಯಲ್ಲಿ ನಿರ್ಮಿಸಿದಂತಹ ಅನೇಕ ದೇವಾಲಯಗಳು ನಮಗೆ ದೂರೆಯುತ್ತವೆ.

ನನ್ನ ಸಂಶೋಧನೆಗೆ ಸಂಬಂಧಪಟ್ಟಂತೆ ಮೈಸೂರು ಜಿಲ್ಲೆಯಲ್ಲಿ ಏಳು ತಾಲೂಕುಗಳಿದ್ದು, ಅದರಲ್ಲಿ ಕೆಲವು ತಾಲೂಕುಗಳು ಮಾತ್ರ ನನಗೆ ಚಿರಪರಿಚಿತವಾಗಿತ್ತು. ಇನ್ನುಳಿದ ತಾಲೂಕುಗಳು ಚಿರಪರಿಚಿತವಾಗಿರಲಿಲ್ಲ. ಆದ್ದರಿಂದ ಇಲ್ಲಿ ಸುಮಾರು ನಾಲ್ಕು ವರ್ಷಗಳವರೆಗೆ ಕ್ಷೇತ್ರಕಾರ್ಯವನ್ನು ಮಾಡಬೇಕಾಗಿ ಬಂದಿತು. ಕ್ಷೇತ್ರಕಾರ್ಯದಲ್ಲಿ ಹಲವಾರು ಅಡೆತಡೆಗಳು ಉಂಟಾದವು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಕೆಲವು ದೇವಾಲಯಗಳ ಪ್ರವೇಶ ನಿಷಿದ್ಧವಾಗಿತ್ತು. ಕೆಲವು ದೇವಾಲಯಗಳ ಛಾಯಾಚಿತ್ರ ತೆಗೆಯುವುದು ನಿಷಿದ್ಧ ಹಾಗೂ ಸ್ಥಳೀಯರಿಂದ ಸಂಪೂರ್ಣವಾದ ಮಾಹಿತಿ ದೊರೆಯದೆ ಇರುವುದು ಮತ್ತೆ ಕೆಲವು ಕಡೆಯಲ್ಲಿ ದೇವಾಲಯಗಳ ಒಳ ವಾಸ್ತುವನ್ನು ನೋಡಬೇಕಾದರೆ ಸಮಯದ ಅಭಾವ. ಏಕೆಂದರೆ ಕೆಲವು ದೇವಾಲಯದ ಅರ್ಚಕರು ಬೇರೆ ಸ್ಥಳಗಳಲ್ಲಿ ವಾಸಿಸುತ್ತಿದ್ದುದರಿಂದ ಅವರು ಆ ಸ್ಥಳಕ್ಕೆ ಬಂದಾಗ ಮಾತ್ರ ಅಲ್ಲಿಯ ವಾಸ್ತುವನ್ನು ನೋಡಲು ಮಾತ್ರ ಸಾಧ್ಯವಾಗುತ್ತಿತ್ತು. ಈ ರೀತಿಯಲ್ಲಿ ಹಲವು ಸಮಸ್ಯೆಗಳ ನಡುವೆ ಕೆಲವು ಕಡೆ 2-3 ಬಾರಿ ಒಂದೇ ದೇವಾಲಯಕ್ಕೆ ಭೇಟಿ ಮಾಡಿದ್ದು ಉಂಟು. ಈ ಎಲ್ಲಾ ಸಮಸ್ಯೆಗಳ ನಡುವೆಯೂ ನಾನು ಜಿಲ್ಲೆಯ ಎಲ್ಲಾ ದೇವಾಲಯಗಳಿಗೂ ಭೇಟಿ ಮಾಡಿ, ಸ್ಥಳದಲ್ಲೇ ಅವುಗಳ ಅಧ್ಯಯನ ಮಾಡಿ ವಿವರಣೆಗಳನ್ನು ಬರೆದುಕೊಂಡು ಛಾಯಾಚಿತ್ರಗಳನ್ನು ತೆಗೆದುಕೊಂಡು ದೇವಾಲಯಗಳ ವಿವರಣೆ ಮಾಡಿ, ಸಂಯೋಜಿಸಿ ವಿಮರ್ಶಿಸಿ, ಬರೆದುದರ ಫಲಿತಾಂಶದ ಶ್ರಮವೇ ಈ ಮಹಾಪ್ರಬಂಧ ರಚಿಸಲು ಸಾಧ್ಯವಾಯಿತು. ಕಲೆ ಮತ್ತು ವಾಸ್ತುಶಿಲ್ಪಗಳನ್ನು ಕುರಿತ ಒಂದು ವಿವೇಚನೆ ಈ ಸಂಶೋಧನಾ ಮಹಾಪ್ರಬಂಧ ಮುಖ್ಯ ಆಶಯ. ಕಲೆ ಮತ್ತು ವಾಸ್ತುಶಿಲ್ಪ ಎಂಬುದು ಅಮೂರ್ತವಾದುದು.

ಇದು ಭಾವನೆಗಳ ಸಮುಚ್ಛಯವಾಗಿದ್ದು, ಇಂತಹ ಭಾವನೆಗಳಿಗೆ ಬಿಂದು ಸ್ವರೂಪವನ್ನು ಕೊಟ್ಟಾಗ ಅವುಗಳು ಕಲಾ ಸ್ಮಾರಕಗಳಾಗಿ ಸಮಾಜದಲ್ಲಿ ಕಾಣಿಸಿಕೊಳ್ಳುತ್ತವೆ. ವಸ್ತುವಿಷಯಕ್ಕೆ ಸಂಬಂಧಿಸಿದಂತೆ ನಮ್ಮಲ್ಲಿ ಕೆಲವು ಪ್ರಶ್ನೆಗಳು ಮೂಡುವುದು ಸಹಜವಾಗಿದ್ದು, ಇದರಲ್ಲಿ ವಿಶಿಷ್ಟವಾದುದೇನಿದೆ? ಈ ಪ್ರದೇಶದಲ್ಲಿಯ ದೇವಾಲಯಗಳ ಬೆಳವಣಿಗೆಯನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವೇ? ವಾಸ್ತುಶಿಲ್ಪವು ಒಂದು ಕಾಲಕ್ಕಿಂತ ಮತ್ತೊಂದು ಕಾಲಕ್ಕೆ ಭಿನ್ನವಾಗಿದ್ದಿತ್ತೇ ಹಾಗೂ ಕಾಲದಿಂದ ಕಾಲಕ್ಕೆ ಬದಲಾಗಲು ಕಾರಣವಾದರೂ ಏನು? ಬೇರೆ ಬೇರೆ ಧರ್ಮಗಳ ವಾಸ್ತುವಿನ ರೀತಿ ಯಾವುದಾಗಿತ್ತು. ಒಟ್ಟಾರೆ ನಿರೂಪಣೆಯಲ್ಲಿ ವಿಷಯಕ್ಕೆ ಸಂಬಂಧಿಸಿದಂತೆ ನ್ಯೂನತೆಗಳೇನಾದರೂ ಇವೆಯೇ? ಈ ನ್ಯೂನತೆಗಳನ್ನು ಬಗೆಹರಿಸುವುದರಿಂದ ವಾಸ್ತುಶಿಲ್ಪದ ಬೆಳವಣಿಗೆಯನ್ನು ಸೃಷ್ಟೀಕರಿಸಲು ಸಾಧ್ಯವೇ ಇಂತಹ ಸಿದ್ಧಾಂತ ಆಚರಣೆಗಳನ್ನು ತಿಳಿಯುವ ವಿಶ್ಲೇಷಿಸುವ ಹಾಗೂ ಮೇಲ್ಕಂಡ ಪ್ರಶ್ನೆಗಳಿಗೆ ಸಂಪ್ರದಾಯದ ಚೌಕಟ್ಟಿನಲ್ಲಿ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ಸಂಶೋಧನಾ ಮಹಾಪ್ರಬಂಧದಲ್ಲಿ ಮಾಡಲಾಗಿದೆ. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ದೇವಾಲಯಗಳು ಚಿರಸ್ಥಾಯಿಯಾಗಿದ್ದು, ಅವುಗಳ ಸಂಶೋಧನೆ ಮತ್ತು ನಿಯಮಬದ್ಧ ಅಧ್ಯಯನ ಇಂದು ಬಹಳ ಮುಖ್ಯವಾಗಿದೆ.

**ಅಧ್ಯಯನದ ಉದ್ದೇಶ**

ಮೈಸೂರು ಜಿಲ್ಲೆಯ ಇತಿಹಾಸದ ಮೇಲೆ ಬೆಳಕನ್ನು ಚೆಲ್ಲುವ ನೂರಾರು ಶಾಸನಗಳು ಕಂಡು ಬಂದಿದ್ದು, ಇವುಗಳನ್ನು ವಿದ್ವಾಂಸರುಗಳು ಓದಿ ಅಧ್ಯಯನ ಮಾಡಿ ಅರ್ಥೈಸಿ, ವಿಮರ್ಶಿಸಿ, ಆ ಕಾಲದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಇತಿಹಾಸ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಇಲ್ಲಿಯ ದೇವಾಲಯಗಳ ವಾಸ್ತು ಮತ್ತು ಶಿಲ್ಪಕಲೆಯನ್ನು ಕುರಿತಂತೆ ಅಧ್ಯಯನ ಕೈಗೊಂಡಾಗ ಹಲವಾರು ಹೊಸ ವಿಷಯಗಳು ಗಮನಕ್ಕೆ ಬಂದಿವೆ. ಈ ದಿಸೆಯಲ್ಲಿ ಪ್ರಸ್ತುತ ಅಧ್ಯಯನವು ಒಂದು ಉತ್ತಮ ಸಂಶೋಧನಾತ್ಮಕ ಪ್ರಯತ್ನವಾಗಿದೆ.

ನನ್ನ ಸಂಶೋಧನೆಯಲ್ಲಿ ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳನ್ನು ಕುರಿತಂತೆ ಅಧ್ಯಯನವನ್ನು ಕೈಗೊಂಡು ಹಿಂದೂ ದೇವಾಲಯಗಳು ಜೈನ ಬಸದಿಗಳು, ಶಿಲ್ಪಗಳು, ಶಾಸನೋಕ್ತ ವೀರಗಲ್ಲುಗಳನ್ನು ಕುರಿತ ಕ್ಷೇತ್ರಕಾರ್ಯ ಆಧಾರಿತ ಸಂಶೋಧನೆಯನ್ನು ನಡೆಸಿ ಎಲ್ಲಾ ವಿಚಾರವನ್ನು ಅಧ್ಯಯನದ ಕಕ್ಷೆಗೆ ಒಳಪಡಿಸಿದ್ದೇನೆ. ಇವುಗಳು ಕರ್ನಾಟಕದ ವಾಸ್ತು ಕಲೆಯ ಬೆಳವಣಿಗೆಯ ಅತ್ಯಂತ ಮಹತ್ವದ ಘಟ್ಟವನ್ನು ನಿರೂಪಿಸುತ್ತವೆ. ಇವುಗಳ ನಿರ್ಮಾಣದ ಕಾಲ ಮತ್ತು ದೇವಾಲಯಗಳಲ್ಲಿ ಕಂಡುಬರುವ ವಾಸ್ತು

ಲಕ್ಷಣಗಳಾದ ಜಗತಿ, ಅಧಿಷ್ಠಾನ, ಭಿತ್ತಿ, ಭಿತ್ತಿಶಿಲ್ಪಗಳು(ಕಥಾನಕ ಶಿಲ್ಪಗಳು), ಶಿಖರಗಳು, ಕಂಬಗಳು, ಭುವನೇಶ್ವರಿಗಳು, ಲಲಾಟಬಿಂಬಗಳು ಹಾಗೂ ವಿವಿಧ ವಿನ್ಯಾಸದ ಅಲಂಕಾರಿಕ ಕೆತ್ತನೆಗಳು, ಅವುಗಳ ಲಕ್ಷಣಗಳು ಮತ್ತು ವಿಶೇಷತೆ ಮುಂತಾದ ವಿಚಾರಗಳಿಗೆ ವಿಶೇಷ ಗಮನ ನೀಡಲಾಗಿದೆ. ಇವುಗಳ ಅಧ್ಯಯನದಿಂದ ಆ ಕಾಲದ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಟ್ಟನ್ನು ಗುರುತಿಸುವ ಪ್ರಯತ್ನ ನಡೆಸಿದ್ದೇನೆ.

ಮೈಸೂರು ಜಿಲ್ಲೆಗೆ ಸೀಮಿತವಾದಂತೆ ನನ್ನ ಕ್ಷೇತ್ರಕಾರ್ಯದಲ್ಲಿ ಗುರುತಿಸಿರುವಂತೆ ಗಂಗ, ಚೋಳ, ಹೊಯ್ಸಳ, ವಿಜಯನಗರ ಮತ್ತು ಮೈಸೂರು ಒಡೆಯರ ಕಾಲದ ದೇವಾಲಯಗಳೇ ಹೆಚ್ಚಾಗಿ ಕಂಡುಬಂದಿದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಿಸಲ್ಪಟ್ಟ ದೇವಾಲಯಗಳ ವಾಸ್ತು ರಚನೆಗಳನ್ನು ಸಾದರಪಡಿಸುವುದಾಗಿದೆ. ಆಯಾ ಕಾಲಘಟ್ಟಗಳಲ್ಲಿ ರಾಜರುಗಳು ನಿರ್ಮಿಸಿದ ದೇವಾಲಯಗಳು ಬಹುತೇಕವಾಗಿ ಉತ್ತಮ ಸ್ಥಿತಿಯಲ್ಲಿದ್ದು, ಮೂಲ ಸ್ವರೂಪವನ್ನು ಸ್ವಲ್ಪಮಟ್ಟಿಗೆ ಹಾಗೇ ಉಳಿಸಿಕೊಂಡು ಬಂದಿರುವ ದೇವಾಲಯಗಳನ್ನು ಇಲ್ಲಿ ಗಮನಿಸಲಾಗಿದೆ ಹಾಗೂ ಶಿಲ್ಪಶೈಲಿಯ ಲಕ್ಷಣಗಳನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಆಶಯವಾಗಿದೆ.

**ಅಧ್ಯಯನದ ವಿಧಾನ**

ಒಂದು ಸಂಶೋಧನಾ ಪ್ರಬಂಧವನ್ನು ರಚಿಸುವಲ್ಲಿ ಪೂರ್ವಯೋಜಿತ ಅಧ್ಯಯನ ಕ್ರಮವನ್ನು ಅನುಸರಿಸುವುದು ಅತಿಮುಖ್ಯ. ಇದು ಈ ಅಧ್ಯಯನವನ್ನು ವ್ಯವಸ್ಥಿತವಾಗಿ ಸುಲಭವಾಗಿ ಕಟ್ಟಿಕೊಡುವಲ್ಲಿ ಸಹಾಯಕವಾಗುತ್ತದೆ. ಒಂದೇ ಅರ್ಥದಲ್ಲಿ ಹೇಳುವುದಾದರೆ ಸಂಶೋಧನಾ ಪ್ರಬಂಧಕ್ಕೆ ಪ್ರಥಮ ಹಾಗೂ ಅಂತಿಮ ರೂಪವನ್ನು ಈ ಅಧ್ಯಯನ ಕ್ರಮವೇ ನೀಡುತ್ತದೆ ಎಂದು ಹೇಳಬಹುದು. ಪ್ರಸ್ತುತ ಅಧ್ಯಯನವು **"ಮೈಸೂರು ಜಿಲ್ಲೆಯ ಹೊಯ್ಸಳ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ-ಒಂದು ವಿವರಣಾತ್ಮಕ ಅಧ್ಯಯನ"**ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಈ ಮುಂದಿನ ಅಧ್ಯಯನ ಕ್ರಮವನ್ನು ಅನುಸರಿಸಲಾಗಿದೆ. ಪ್ರಪ್ರಥಮವಾಗಿ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಗ್ರಂಥಸೂಚಿಯನ್ನು ತಯಾರಿಸಿ ಆಕಾರಾದಿಯಾಗಿ ಜೋಡಿಸಿಕೊಳ್ಳಲಾಯಿತು. ಪ್ರಸ್ತುತ ಅಧ್ಯಯನಕ್ಕೆ ದೇವಾಲಯಗಳೇ ಪ್ರಾಥಮಿಕ ಆಕಾರಗಳಾಗಿದ್ದು, ವ್ಯವಸ್ಥಿತವಾದ ಪೂರ್ವನಿಯೋಜಿತ ವಿಧಾನವನ್ನು ಅನುಸರಿಸಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತು. ಮೊದಲನೆಯದಾಗಿ ಈ ಜಿಲ್ಲೆಯಲ್ಲಿ ಕಂಡುಬರುವ ಪ್ರಮುಖ ದೇವಾಲಯಗಳ ತಳನಕ್ಷೆಯನ್ನು ಮೈಸೂರು ಆರ್ಕಿಯಾಲಾಜಿಕಲ್ ವಾರ್ಷಿಕ ವರದಿಗಳಿಂದ ಸಂಗ್ರಹಿಸಿಕೊಳ್ಳಲಾಯಿತು. ನಂತರ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಈ

ತಳನಕ್ಷೆಯನ್ನು ಬಳಸಿಕೊಂಡು ಹಾಗೂ ತಳನಕ್ಷೆ ದೊರೆಯದ ದೇವಾಲಯಗಳ ತಳನಕ್ಷೆಯನ್ನು ತಯಾರಿಸಿಕೊಂಡು, ದೇವಾಲಯದ ಪ್ರತ್ಯೇಕ ಭಾಗಗಳ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಯಿತು. ಇದರಲ್ಲಿ ವಾಸ್ತುಶಿಲ್ಪದ ಸೂಕ್ಷ್ಮ ಅಧ್ಯಯನದ ದೃಷ್ಟಿಯಿಂದ ದೇವಾಲಯದ ಪ್ರತಿಭಾಗ ಅಂದರೆ ವಾಸ್ತುಶಿಲ್ಪದಲ್ಲಿ ಬರುವ ಷಡ್ವರ್ಗಗಳಾದ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿ ಮುಂತಾದ ಭಾಗಗಳು ಸರಿಯಾಗಿ ಗೋಚರಿಸುವಂತೆ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಯಿತು ಹಾಗೂ ದೇವಾಲಯದ ಒಳಭಾಗಗಳಾದ ಕ್ರಮವಾಗಿ ಗರ್ಭಗೃಹ, ಸುಕನಾಸಿ, ನವರಂಗ, ಮುಖಮಂಟಪ, ಸಭಾಮಂಟಪ, ಕಲ್ಯಾಣಮಂಟಪ, ನಂದಿಮಂಟಪ ಮತ್ತು ಇವುಗಳಲ್ಲಿನ ಕಂಬಗಳೂ ಹಾಗೂ ಅವುಗಳ ಮೇಲೆ ಇರುವ ಉಬ್ಬುಕೆತ್ತನೆಯ ಶಿಲ್ಪಗಳ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಯಿತು. ದೇವಾಲಯದ ಪ್ರಾಕಾರದ ಒಳ ಆವರಣದಲ್ಲಿ ದೊರೆಯುವ ಶಾಸನಗಳು, ಬಿಡಿ ಶಿಲ್ಪಗಳು ಮತ್ತು ವೀರಗಲ್ಲುಗಳ ಛಾಯಾಚಿತ್ರಗಳನ್ನು ವಿಭಾಗಿಸಿಕೊಂಡು ಅಲ್ಲದೇ ವಿಷಯಕ್ಕೆ ಅಗತ್ಯವೆನಿಸಿದ ಅನುಸಂಗಿಕ ಆಕಾರಗಳನ್ನು ಬಳಸಿಕೊಂಡು ಮತ್ತು ಸ್ಥಳೀಯರು ನೀಡಿರುವ ಮೌಖಿಕ ಮಾಹಿತಿಯನ್ನು ವಿಶ್ಲೇಷಿಸಿ ಬರವಣಿಗೆಯನ್ನು ಕೈಗೊಳ್ಳಲಾಯಿತು. ಹೀಗೆ ಮೇಲಿನ ವಿಧಾನವನ್ನು ಅನುಸರಿಸಿ ಪ್ರಸ್ತುತ ಅಧ್ಯಯನವನ್ನು ಪೂರ್ಣಗೊಳಿಸಲಾಗಿದೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ **'ಮೈಸೂರು ಜಿಲ್ಲೆಯ ಹೊಯ್ಸಳ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ-ಒಂದು ವಿವರಣಾತ್ಮಕ ಅಧ್ಯಯನ"**ಎಂಬ ಪ್ರಬಂಧದ ವಿಷಯವನ್ನು ವ್ಯವಸ್ಥಿತವಾಗಿ ಮತ್ತು ಅರ್ಥಪೂರ್ಣವಾಗಿ ಅಧ್ಯಯನ ಮಾಡುವ ಸಲುವಾಗಿ ಆರು ಅಧ್ಯಾಯಗಳಾಗಿ ವಿಭಾಗಿಸಲಾಗಿದ್ದು, ಪ್ರತಿಯೊಂದು ಅಧ್ಯಾಯವು ಅವಶ್ಯಕತೆಗಳಿಗನುಸಾರವಾಗಿ ಉಪ ವಿಭಾಗಗಳನ್ನು ಒಳಗೊಂಡಿದೆ.

ಮೊದಲನೇ ಅಧ್ಯಾಯದಲ್ಲಿ ಪೀಠಿಕೆ, ಅಧ್ಯಯನದ ಉದ್ದೇಶ, ವಿಧಾನ, ಸ್ವರೂಪ, ವ್ಯಾಪ್ತಿ ಹಾಗೂ ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಭೌಗೋಳಿಕ ಲಕ್ಷಣಗಳು, ಐತಿಹಾಸಿಕ ಹಿನ್ನೆಲೆ, ಇತಿಹಾಸ ಪೂರ್ವಕಾಲ ಮತ್ತು ರಾಜಕೀಯ ಇತಿಹಾಸದ ಬಗ್ಗೆ ಚರ್ಚಿಸಲಾಗಿದೆ. ಅಂದರೆ ಭೌಗೋಳಿಕವಾಗಿ ಈ ಪ್ರದೇಶದ ವಿಶೇಷತೆಯನ್ನು ವಿವರಿಸಲಾಗಿದೆ. ಅಲ್ಲದೇ ಮೈಸೂರು

ಜಿಲ್ಲೆಯ ಹೊಯ್ಸಳ ಕಾಲದ ರಾಜಕೀಯ ಇತಿಹಾಸವನ್ನು ಶಾಸನಾಧಾರಗಳನ್ನು ಇಟ್ಟುಕೊಂಡು ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಹೊಯ್ಸಳರ ಕಾಲದ ದೇವಾಲಯಗಳ ಪ್ರಮುಖ ಲಕ್ಷಣಗಳಿಗೆ ಸಂಬಂಧಿಸಿದಂತೆ ದೇವಾಲಯಗಳ ಭಾಗಗಳಾದ ತಳವಿನ್ಯಾಸ, ಜಗತಿ, ಅದಿಷ್ಠಾನ, ಭಿತ್ತಿ, ಶಿಖರ ಹಾಗೂ ದೇವಾಲಯಗಳ ಒಳವಿನ್ಯಾಸಗಳಾದ ಗರ್ಭಗೃಹ, ಸುಕನಾಸಿ, ನವರಂಗ ಅಲ್ಲದೇ ಅವುಗಳಲ್ಲಿರುವ ಕಂಬಗಳ ವಿನ್ಯಾಸ, ಭುವನೇಶ್ವರಿಗಳು, ದ್ವಾರಬಂಧಗಳು, ದೇವ-ದೇವತಾ ಮೂರ್ತಿಗಳು ಹಾಗೂ ಮತ್ತಿತರ ವಿಷಯಗಳನ್ನು ಕುರಿತು ವಿವರವಾಗಿ ಅಧ್ಯಯನ ಮಾಡಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಜಿಲ್ಲೆಯಲ್ಲಿರುವ ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು ಹಾಗೂ ಜೈನ ಬಸದಿಗಳ ಬಗ್ಗೆ ವಿವರಣಾತ್ಮಕವಾಗಿ ವಿವರಿಸಲಾಗಿದ್ದು, ಹೊಯ್ಸಳ ಕಾಲದ ದೇವಾಲಯಗಳನ್ನು ಕಾಲಾನುಕ್ರಮದಲ್ಲಿ ವಿವರಿಸುತ್ತಾ ಶೈವ, ವೈಷ್ಣವ ಮತ್ತು ಜೈನಬಸದಿಗಳ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ವಿವರಣಾತ್ಮಕ ವಿವರಣೆಯನ್ನು ನೀಡಲಾಗಿದೆ.

ಐದನೇ ಅಧ್ಯಾಯದಲ್ಲಿ ಜಿಲ್ಲೆಯ ದೇವಾಲಯಗಳಲ್ಲಿ ಹಾಗೂ ಹೊರ ಆವರಣದಲ್ಲಿ ಕಂಡುಬಂದಿರುವ ಬಿಡಿ ಶಿಲ್ಪಗಳ ಬಗ್ಗೆ ವಿವರಣೆಯನ್ನು ನೀಡಲಾಗಿದೆ ಮತ್ತು ಜಿಲ್ಲೆಯಲ್ಲಿ ಕಂಡುಬರುವ ವೀರಗಲ್ಲುಗಳ ಬಗ್ಗೆ ಚರ್ಚಿಸಲಾಗಿದೆ.

ಆರನೇ ಅಧ್ಯಾಯವು ಸಮಾರೋಪವಾಗಿದ್ದು, ಇದು ಒಟ್ಟಾರೆ ಅಧ್ಯಯನದ ಸಂಕ್ಷಿಪ್ತ ರೂಪ, ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಂಗತಿಗಳ ಸಮೀಕ್ಷೆಯನ್ನು ಹಾಗೂ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನಲ್ಲದೇ ನಿರ್ಧಾರಗಳನ್ನು ತಿಳಿಸಲಾಗಿದೆ.

ಹೀಗೆ **'ಮೈಸೂರು ಜಿಲ್ಲೆಯ ಹೊಯ್ಸಳ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ- ಒಂದು ವಿವರಣಾತ್ಮಕ ಅಧ್ಯಯನ"** ಎಂಬ ಶೀರ್ಷಿಕೆ ಅಡಿಯಲ್ಲಿ ಮೈಸೂರು ಜಿಲ್ಲೆಯ ದೇವಾಲಯಗಳ ಸಮಗ್ರ ಚಿತ್ರಣವನ್ನು ಕಟ್ಟಿಕೊಡುವ ಪ್ರಯತ್ನವನ್ನು ಈ ಪ್ರೌಢ ಪ್ರಬಂಧದಲ್ಲಿ ಮಾಡಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಯಾವುದೇ ಒಂದು ಅಧ್ಯಯನವು ಒಂದು ನಿರ್ಧಿಷ್ಟ ಚೌಕಟ್ಟನ್ನು ಹೊಂದಿರುತ್ತದೆ. ಹಾಗೆಯೇ ಪ್ರಸ್ತುತ ಅಧ್ಯಯನವು ಸಹ ಒಂದು ನಿರ್ಧಿಷ್ಟ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಈ ಅಧ್ಯಯನಕ್ಕೆ ಶೀರ್ಷಿಕೆಯೇ ಸೂಚಿಸುವಂತೆ ಭೌಗೋಳಿಕವಾಗಿ ಮೈಸೂರು ಜಿಲ್ಲಾ ವ್ಯಾಪ್ತಿಗೆ ಸೀಮಿತಗೊಳಸಲಾಗಿದೆ. ಈ ಜಿಲ್ಲೆಯು ಪಿರಿಯಾಪಟ್ಟಣ, ಕೃಷ್ಣರಾಜನಗರ, ಮೈಸೂರು, ಹೆಗ್ಗಡದೇವನಕೋಟೆ, ನಂಜನಗೂಡು, ಹುಣಸೂರು ಮತ್ತು ತಿರುಮಕೂಡಲು ನರಸೀಪುರ ತಾಲೂಕುಗಳನ್ನು ಒಳಗೊಂಡಿದ್ದು, ಈ ತಾಲೂಕುಗಳು ಮೈಸೂರು ಜಿಲ್ಲಾ ವ್ಯಾಪ್ತಿಗೆ ಬರುತ್ತವೆ. ಹಾಗಾಗಿ ಇವುಗಳನ್ನು ಪ್ರಸ್ತುತ ಅಧ್ಯಯನಕ್ಕೆ ಮಿತಿಗೊಳಸಲಾಗಿದ್ದು, ದೇವಾಲಯಗಳ ಅಧ್ಯಯನವನ್ನು ಶೈವ, ವೈಷ್ಣವ ಮತ್ತು ಜೈನ ಎಂದು ವಿಭಾಗಿಸಿಕೊಳ್ಳಲಾಗಿದೆ. ಜೊತೆಗೆ ಬಿಡಿಶಿಲ್ಪಗಳು ಶಾಸನೋಕ್ತ ವೀರಗಲ್ಲುಗಳ ವಿವರಣೆಯನ್ನು ಒಳಗೂಂಡಿದೆ.

**ಇದುವರೆಗೂ ನಡೆದಿರುವ ಅಧ್ಯಯನಗಳು**

ಮೈಸೂರು ಜಿಲ್ಲೆಯ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪವನ್ನು ಕುರಿತಂತೆ ಸಮಗ್ರವಾದ ಅಧ್ಯಯನ ನಡೆದಿಲ್ಲ. ಕೆಲವು ಅಧ್ಯಯನಗಳು ನಡೆದಿದ್ದರೂ, ಒಂದು ತಾಲೂಕಿಗೆ ಸಂಬಂಧಿಸಿದಂತೆ ಸ್ವಲ್ಪಮಟ್ಟಿನ ಅಧ್ಯಯನಗಳು ನಡೆದಿವೆ. ಆದರೆ ಮೈಸೂರು ಜಿಲ್ಲೆಯ ಹೊಯ್ಸಳ ಕಾಲದ ಮನೆತನಕ್ಕೆ ಸಂಬಂಧಿಸಿದಂತೆ ಇದುವರೆಗೂ ಅಧ್ಯಯನ ನಡೆದಿಲ್ಲ. ಆದರೆ ಕೆಲವು ಕಿರುಪ್ರಬಂಧಗಳು, ಸ್ಮರಣ-ಸಂಚಿಕೆಗಳು ಮತ್ತು ಬಿಡಿಲೇಖನಗಳು ಪ್ರಕಟಗೊಂಡಿರುವುದನ್ನು ಗಮನಿಸಬಹುದು. ಹಾಗಾಗಿ ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಅಧ್ಯಯನ ಮಾಡಿ ಒಂದು ಪ್ರೌಢ ಪ್ರಬಂಧವನ್ನು ರಚಿಸಬೇಕೆಂಬುದು ನಮ್ಮ ಆಶಯವಾಗಿದೆ.

**ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್:** ಕ್ರಿ.ಶ.1906-1956 ಮೈಸೂರು ಜಿಲ್ಲೆಯ ದೇವಾಲಯಗಳ ಬಗ್ಗೆ ನಮಗೆ ಸಿಗುವ ಮೊದಲ ಪ್ರಾಥಮಿಕ ಆಧಾರಗಳೆಂದರೆ ಈ ವಾರ್ಷಿಕ ವರದಿಗಳಾಗಿವೆ. ಈ ವಾರ್ಷಿಕ ವರದಿಗಳಲ್ಲಿ ಆಯಾ ವರ್ಷಗಳಲ್ಲಿ ಕ್ಷೇತ್ರಕಾರ್ಯಕೈಗೊಂಡು ದೇವಾಲಯಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಅಲ್ಲದೆ ದೇವಾಲಯದಲ್ಲಿರುವ ಶಾಸನಗಳ ಬಗ್ಗೆ ಹಾಗೂ ಆ ದೇವಾಲಯದ ಸಂರಕ್ಷಣೆಯ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ.ಈ ವರದಿಗಳಲ್ಲಿ ಕೆಲವು ಪ್ರಮುಖ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ಬಗ್ಗೆ ವಿವರಣೆಯನ್ನು ನೀಡುವುದರ ಜೊತೆಗೆ ತಳನಕ್ಷೆಯನ್ನು ನೀಡಿದ್ದಾರೆ.

ಸೂರ್ಯನಾಥ್ ಯು ಕಾಮತ್‌ಅವರ **'ಮೈಸೂರು ಜಿಲ್ಲಾ ಗ್ಯಾಸೆಟಿಯರ್'** (ಕ್ರಿ.ಶ.1998). ಈ ಗ್ರಂಥವು ಕ್ರಿ.ಶ.1988ರಲ್ಲಿ ಪ್ರಕಟಗೊಂಡಿದ್ದು, ಮೈಸೂರು ಜಿಲ್ಲೆಗೆ ಸಂಬಂಧಿಸಿದ ದೇವಾಲಯಗಳ ಸ್ಥಳನಾಮ, ಭೌಗೋಳಿಕತೆ, ವಾಯುಗಣ, ಸಸ್ಯವರ್ಗ, ಪ್ರಾಣಿವರ್ಗ ಹಾಗೂ ನದಿಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ.

**ಎಪಿಗ್ರಾಫಿಯ ಕರ್ನಾಟಿಕ, ಸಂಪುಟ-03-04 ಮತ್ತು 05, 1974-1975**: ಎಪಿಗ್ರಾಫಿಯ ಕರ್ನಾಟಿಕ ಸಂಪುಟ 03ರಲ್ಲಿ ನಂಜನಗೂಡು, ಹೆಗ್ಗಡದೇವನಕೋಟೆ, ಸಂಪುಟ 04ರಲ್ಲಿ ಹುಣಸೂರು, ಪಿರಿಯಾಪಟ್ಟಣ ಹಾಗೂ ಸಂಪುಟ 05ರಲ್ಲಿ ಕೃಷ್ಣರಾಜನಗರ, ಮೈಸೂರು, ತಿರುಮಕೂಡಲು ನರಸೀಪುರ ತಾಲೂಕಿನಲ್ಲಿರುವ ಶಾಸನಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ. ಈ ಜಿಲ್ಲೆಯಲ್ಲಿ ಆಡಳಿತ ನಡೆಸಿದ ಹೊಯ್ಸಳ ರಾಜಮನೆತನಗಳು ಹಾಗೂ ಅವರು ನೀಡಿದ ಸಾಂಸ್ಕೃತಿಕ ಕೊಡುಗೆಗಳು, ಅವರು ನಿರ್ಮಿಸಿದ ದೇವಾಲಯಗಳ ಬಗ್ಗೆ ಮಾಹಿತಿಯನ್ನು ನೀಡುವ ಮೂಲಕ ಪ್ರಾಥಮಿಕ ಆಕಾರವೆನಿಸಿದೆ.

ಶೆಟ್ಟರ್ ಎಸ್. ಅವರ **'ದಿ ಹೊಯ್ಸಳ ಟೆಂಪಲ್ಸ್'** (ಕ್ರಿ.ಶ.1992) ಎಂಬ ಗ್ರಂಥದಲ್ಲಿ ಕರ್ನಾಟಕದಲ್ಲಿರುವ ಹೊಯ್ಸಳ ದೇವಾಲಯಗಳ ಪಟ್ಟಿಯನ್ನು ಕೊಡಲಾಗಿದ್ದು, ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಸೋಮನಾಥಪುರದ ಕೇಶವ ದೇವಾಲಯ, ತಲಕಾಡಿನ ಕೀರ್ತಿನಾರಾಯಣ, ವರಕೂಡಿನ ವರದರಾಜಸ್ವಾಮಿ ದೇವಾಲಯ, ಹೆಡತಲೆಯ ಲಕ್ಷ್ಮೀಕಾಂತ ದೇವಾಲಯ, ಭೇರ್ಯದ ಚೆನ್ನಕೇಶವ ದೇವಾಲಯ, ಕಂಪಲಾಪುರದ ಕರಕಂಠೇಶ್ವರ ದೇವಾಲಯ, ಧರ್ಮಾಪುರದ ಚೆನ್ನಕೇಶವ ದೇವಾಲಯ, ಕ್ಯಾತನಹಳ್ಳಿಯ ಲಕ್ಷ್ಮೀಕಾಂತ ದೇವಾಲಯ, ವಾಜಮಂಗಲದ ಅಂಕನಾಥೇಶ್ವರ ದೇವಾಲಯ, ತರೀಕಲ್ಲಿನ ಸೋಮೇಶ್ವರ ದೇವಾಲಯ, ಸಾಲಿಗ್ರಾಮದ ಯೋಗನರಸಿಂಹ ದೇವಾಲಯ, ಕಲ್ಲಂಬಾಳುವಿನ ಕಾಮೇಶ್ವರ ದೇವಾಲಯಗಳನ್ನು ಹೊಯ್ಸಳರ ಕಾಲದ ದೇವಾಲಯಗಳೆಂದು ಗುರುತಿಸಿದ್ದಾರೆ.

**'ಮೈಸೂರು ಜಿಲ್ಲಾ ದರ್ಶನ'**, ಸಂಪುಟ 1,2,3,4 ಈ ಸಂಪುಟದಲ್ಲಿ ಮೈಸೂರು ಜಿಲ್ಲೆಯ ಭೌಗೋಳಿಕ ಲಕ್ಷಣಗಳು, ಸ್ಥಳಪುರಾಣ, ಐತಿಹಾಸಿಕ ಹಿನ್ನೆಲೆಯ ಬಗ್ಗೆ ಮಾಹಿತಿಯನ್ನು ನೀಡುತ್ತದೆ.

ಪರ್ಸಿಬ್ರೌನ್‌ರವರ **'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್'** ಎಂಬ ಗ್ರಂಥವು ಭಾರತದ ಬೌದ್ಧ, ಜೈನ ಹಾಗೂ ಹಿಂದೂ ದೇವಾಲಯದ ಉಗಮ, ವಿಕಾಸ ಮತ್ತು ಕಲಾ ಲಕ್ಷಣಗಳ ಬಗ್ಗೆ ಕೂಲಂಕಷವಾಗಿ ವಿವರಣೆ ನೀಡುತ್ತದೆ. ಇತಿಹಾಸ ಸಂಶೋಧನಾ ಆಸಕ್ತರಿಗೆ ಇದು ಅತ್ಯುತ್ತಮ ಗ್ರಂಥವಾಗಿದೆ.

ಮೇಟಿ.ಎಸ್.ಕೆ.ಅವರ **'ಮಾಸ್ಟರ್ ಥಿಸೀಸ್ ಆಫ್ ಹೊಯ್ಸಳ ಆರ್ಟ್ ಬೇಲೂರು ಹಳೇಬೀಡು, ಸೋಮನಾಥಪುರ',** (ಕ್ರಿ.ಶ.1979) ಎಂಬ ಗ್ರಂಥದಲ್ಲಿ ಹೊಯ್ಸಳರ ಪ್ರಮುಖ ದೇವಾಲಯಗಳ ವಾಸ್ತುಶಿಲ್ಪ ರಚನೆಗಳ ವೈವಿಧ್ಯತೆಯ ಮೇಲೆ ಬೆಳಕು ಚೆಲ್ಲುತ್ತದೆ.

ಕರಿಯಪ್ಪ ಜಿ. ಅವರ **"ಹೊಯ್ಸಳ ಆಳ್ವಿಕೆಯಲ್ಲಿ ಜೈನರ ಕಲೆ ಮತ್ತು ವಾಸ್ತುಶಿಲ್ಪ"** ಎಂಬ ಪಿಹೆಚ್.ಡಿ. ಪ್ರೌಢ ಪ್ರಬಂಧದಲ್ಲಿ ಮೈಸೂರು ಜಿಲ್ಲೆಯ ಕೃಷ್ಣರಾಜನಗರ ತಾಲೂಕಿನ ಚಿಕ್ಕಹನಸೋಗೆ ಗ್ರಾಮದಲ್ಲಿರುವ ತ್ರಿಕೂಟಚಲ ಜೈನ ಬಸದಿಯ ಬಗ್ಗೆ ವಿವರಣೆ ನೀಡಿದ್ದಾರೆ. ಹಾಗೂ ಮೂಗೂರಿನ ಆದಿನಾಥ ಬಸದಿಯ ಬಗ್ಗೆ ವಿವರಣೆ ನೀಡಿದ್ದು, ಜೊತೆಗೆ ಹೊಯ್ಸಳರ ಕಾಲದಲ್ಲಿ ಜೈನರ ಕಲೆಯ ಆರಂಭ ಮತ್ತು ಬೆಳವಣಿಗೆಯ ಬಗ್ಗೆ ಸಂಪೂರ್ಣವಾದ ಮಾಹಿತಿ ನೀಡಿದ್ದಾರೆ.

ಸರಸ್ವತಿ.ಎನ್. ಅವರ **'ಹೊಯ್ಸಳರ ಇತಿಹಾಸ'** ಎಂಬ ಕೃತಿಯು ತಿರುಮಕೂಡಲು ನರಸೀಪುರ ತಾಲೂಕಿನ ಹೊಯ್ಸಳರ ರಾಜಕೀಯ ಇತಿಹಾಸವನ್ನು ತಿಳಿಯಲು ಸಹಕಾರಿಯಾಗಿದೆ.

ಮಹಾದೇವಸ್ವಾಮಿ ಕೆ.ಎಂ. ಅವರ **'ಹೊಯ್ಸಳ ಕಾಲದ ಮುಖ್ಯ ನಗರ ಕೇಂದ್ರಗಳು ಮತ್ತು ನಗರೀಕರಣ'** ಎಂಬ ಕೃತಿಯಲ್ಲಿ ಮೈಸೂರು ಜಿಲ್ಲೆಯ ಐತಿಹಾಸಿಕ ಹಿನ್ನೆಲೆ, ಸ್ಥಳಪುರಾಣ ಮತ್ತು ದೇವಾಲಯಗಳ ಬಗ್ಗೆ ಕೆಲವು ಮಾಹಿತಿಗಳಿವೆ.

ರಂಗರಾಜು. ಎನ್.ಎಸ್. ಅವರ **'ಹೊಯ್ಸಳ ಟೆಂಪಲ್ ಇನ್ ಮಂಡ್ಯ ಅಂಡ್ ತುಮಕೂರು ಡಿಸ್ಟ್ರಿಕ್ಟ್'** (ಕ್ರಿ.ಶ.2001) ಪ್ರಕಟಿತ ಪಿ.ಹೆಚ್.ಡಿ. ಪ್ರೌಢ ಪ್ರಬಂಧದಲ್ಲಿ ಮಂಡ್ಯ ಮತ್ತು ತುಮಕೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ಬಗ್ಗೆ ವಿವರಣೆಯನ್ನು ನೀಡಲಾಗಿದೆ. ಈ ವಿವರಣೆಯು ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಹೊಯ್ಸಳರ ಕಾಲದ ದೇವಾಲಯಗಳಾದ ಧರ್ಮಾಪುರದ ಚೆನ್ನಕೇಶವ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪದ ವಿವರಣೆಗೆ ಸಹಾಯಕವಾಗಿದೆ.

ಪದ್ಮನಾಭ ಕೆ. ಅವರ **'ಹೊಯ್ಸಳ ಸ್ಕಲ್ಪ್‌ಚರ್ಸ್ ಎ ಕಲ್ಚರಲ್ ಸ್ಟಡಿ'** ಕ್ರಿ.ಶ.1989 ಎಂಬ ಗ್ರಂಥದಲ್ಲಿ ಹೊಯ್ಸಳರ ಕಾಲದ ದೇವಾಲಯದ ಲಕ್ಷಣಗಳು ಮತ್ತು ವಿವಿಧ ಮಾದರಿಗಳ ಬಗೆಗೆ ಮಾಹಿತಿಯನ್ನು ಒದಗಿಸುತ್ತದೆ. ಹೊಯ್ಸಳರ ಕಾಲದ ಶಿಲ್ಪಗಳ ಆಧಾರದ ಮೇಲೆ ಸಮಕಾಲೀನ ಸಮಾಜದಲ್ಲಿ ಅಂದು ಜನಪದರು ಬಳಸುತ್ತಿದ್ದಂತಹ ಉಡುಪುಗಳು, ಪೀಠೋಪಕರಣಗಳು ಹಾಗೂ ಕಿರೀಟಗಳ ಬಗ್ಗೆ ವಿವರವಾಗಿ ತಿಳಿಸಲಾಗಿದೆ.

ಸುರೇಶ ಕೆ.ಎಂ.ಅವರ **'ಟೆಂಪಲ್ಸ್ ಆಫ್ ಕರ್ನಾಟಕ'** (ಕ್ರಿ.ಶ.2003) ಎಂಬ ಎರಡು ಸಂಪುಟಗಳನ್ನೊಳಗೊಂಡಿದೆ. ಮೊದಲನೆಯ ಸಂಪುಟದಲ್ಲಿ ಹಲವಾರು ದೇವಾಲಯಗಳ ವಾಸ್ತುಶೈಲಿಯ ಲಕ್ಷಣಗಳನ್ನು ತಿಳಿಸಲಾಗಿದೆ. ಏಕಕೂಟ ದೇವಾಲಯದಿಂದ ಆರಂಭಗೊಂಡು ನವಕೂಟ ದೇವಾಲಯದವರೆಗೆ ಅವುಗಳ ವಿಸ್ತರಣೆಯನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಎರಡನೇ ಸಂಪುಟದಲ್ಲಿ ದೇವಾಲಯಗಳ ತಳನಕ್ಷೆ ಹಾಗೂ 540 ಛಾಯಾಚಿತ್ರಗಳನ್ನು ನೀಡಲಾಗಿದೆ. ಮೈಸೂರು ಜಿಲ್ಲೆಗೆ ಸಂಬಂಧಪಟ್ಟಂತೆ ಸೋಮನಾಥಪುರದ ಕೇಶವ ದೇವಾಲಯ, ಕ್ಯಾತನಹಳ್ಳಿಯ ಲಕ್ಷ್ಮೀಕಾಂತ ದೇವಾಲಯ ಹಾಗೂ ತಲಕಾಡಿನ ಕೀರ್ತಿನಾರಾಯಣ ದೇವಾಲಯಗಳ ವಾಸ್ತುಶಿಲ್ಪಗಳ ಬಗ್ಗೆ ವಿವರಣೆಯನ್ನು ನೀಡಿದ್ದಾರೆ.

ಮಂಜುಶ್ರೀ ಎಸ್.ಪಿ.ಅವರ **'ಮೈಸೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ'** ಕ್ರಿ.ಶ.2016 ಎಂಬ ಪಿಹೆಚ್.ಡಿ. ಪ್ರೌಢ ಪ್ರಬಂಧದಲ್ಲಿ ಮೈಸೂರು ಜಿಲ್ಲೆಗೆ ಸಂಬಂಧಿಸಿದಂತೆ ಭೌಗೋಳಿಕ ಸ್ಥಳನಾಮಗಳು, ಹೊಯ್ಸಳ ಕಾಲದ ಶಾಸನಗಳು ಮುಂತಾದವುಗಳ ಬಗ್ಗೆ ವಿವರಣೆಯನ್ನು ನೀಡಿದ್ದಾರೆ.

ಶೇಷಶಾಸ್ತ್ರಿ. ಆರ್. ಅವರ **'ಕರ್ನಾಟಕದ ವೀರಗಲ್ಲು'** (ಕ್ರಿ.ಶ. 1982) ಎಂಬ ಪಿ.ಹೆಚ್.ಡಿ. ಅಪ್ರಕಟಿತ ಗ್ರಂಥದಲ್ಲಿ ವೀರಗಲ್ಲುಗಳ ಉಗಮ ಮತ್ತು ವಿಕಾಸವನ್ನು ಚರ್ಚಿಸಲಾಗಿದೆ. ಕರ್ನಾಟಕವನ್ನಾಳಿದ ವಿವಿಧ ರಾಜಮನೆತನಗಳ ಕಾಲದ ವೀರಗಲ್ಲುಗಳನ್ನು ಗುರುತಿಸುವ ಬಗೆಯನ್ನು ವಿವರಿಸಲಾಗಿದ್ದು, ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ವೀರಗಲ್ಲುಗಳನ್ನು ಗುರುತಿಸುವಲ್ಲಿ ಸಹಾಯಕವಾಗಿದೆ.

ಚಿದಾನಂದ ಮೂರ್ತಿ ಎಂ. ಅವರ **'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'** (ಕ್ರಿ.ಶ.2002) ಎಂಬ ಪ್ರೌಢ ಪ್ರಬಂಧದಲ್ಲಿ ಯುದ್ಧಕಲೆ ಮತ್ತು ಆತ್ಮಬಲಿಯ ಹಲವು ಪ್ರಕಾರಗಳು ಎಂಬ ಅಧ್ಯಯಗಳಲ್ಲಿ ವೀರಗಲ್ಲುಗಳ ಬಗ್ಗೆ ಸಾಕಷ್ಟು ವಿಸ್ತಾರವಾದ ಚರ್ಚೆ ಮಾಡಿದ್ದಾರೆ.

ಗೆರಾರ್ಡ್ ಪೋರ್ಕೇಮಾ ರವರ **'ಹೊಯ್ಸಳ ಟೆಂಪಲ್ಸ್'** (ಕ್ರಿ.ಶ.1996) ಎಂಬ ಗ್ರಂಥದಲ್ಲಿ ಸುಮಾರು 15 ಹೊಯ್ಸಳರ ಕಾಲದ ದೇವಾಲಯಗಳ ವಾಸ್ತುಶಿಲ್ಪಗಳ ಬಗ್ಗೆ ವಿವರಗಳಿವೆ. ಹೊಯ್ಸಳ ದೇವಾಲಯಗಳ ನಿರ್ಮಾಣದ ತಾಂತ್ರಿಕತೆ, ದೇವಾಲಯದ ವಿನ್ಯಾಸ, ಭಿತ್ತಿ, ವಿಮಾನ, ನವರಂಗ ಹಾಗೂ ಎಲ್ಲಕ್ಕಿಂತ ಹೆಚ್ಚಾಗಿ ದೇವಾಲಯಗಳ ತಳನಕ್ಷೆಗಳ ಬಗ್ಗೆ ಗಮನ ಹರಿಸಲಾಗಿದೆ. ಪ್ರಸ್ತುತ ಅಧ್ಯಯನ ವ್ಯಾಪ್ತಿಗೆ ಬರುವ ಸೋಮನಾಥಪುರದ ಕೇಶವ

ದೇವಾಲಯ ತಲಕಾಡಿನ ಕೀರ್ತಿನಾರಾಯಣ ದೇವಾಲಯದ ಕುರಿತು ಚಿತ್ರಸಹಿತವಾದ ವಿವರಣೆಯನ್ನು ಕಾಣಬಹುದು.

ಗೋಪಿನಾಥ್ ಟಿ.ಎ. ಅವರ **'ದಿ ಎಲಿಮೆಂಟ್ಸ್ ಆಫ್ ಹಿಂದು ಐಕಾನೋಗ್ರಫಿ'** (ಕ್ರಿ.ಶ.1911) ಎಂಬ ಗ್ರಂಥದಲ್ಲಿ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಕುರಿತಂತೆ ಉಲ್ಲೇಖಗಳಿವೆ. ಇತ್ತೀಚಿನ ವರ್ಷಗಳಲ್ಲಿ ಪ್ರಕಟವಾದ ಶ್ರೀನಿವಾಸ ವಿ. ಪಾಡಿಗಾರ್ ರವರ **'ದಿ ಕಲ್ಚರ್ ಆಫ್ ವಿಷ್ಣು'** ಎಂಬ ಕೃತಿಯು ಹೊಯ್ಸಳ ಶಿಲ್ಪಗಳ ಉದಾಹರಣೆಗಳೊಂದಿಗೆ ಪ್ರತಿಮಾ ಲಕ್ಷಣಗಳನ್ನು ಕುರಿತು ವಿವರಿಸುತ್ತದೆ.

ಚುಂಚಯ್ಯ ಅವರ **"ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯ ದ್ರಾವಿಡ ವಾಸ್ತುಶಿಲ್ಪದ ಪ್ರಾರಂಭ ಮತ್ತು ಬೆಳವಣಿಗೆ"** (ಕ್ರಿ.ಶ.2008) ಎಂಬ ಅಪ್ರಕಟಿತ ಪಿ.ಹೆಚ್.ಡಿ. ಪ್ರೌಢ ಪ್ರಬಂಧದಲ್ಲಿ ಈ ಎರಡು ಜಿಲ್ಲೆಗಳ ದ್ರಾವಿಡ ವಾಸ್ತುಶೈಲಿಯ ಬೆಳವಣಿಗೆಯನ್ನು ವಿವರಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೊಯ್ಸಳರ ಕಾಲದ ಮೈಸೂರು ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಕೆಲವು ದೇವಾಲಯಗಳನ್ನು ತೆಗೆದು ದ್ರಾವಿಡ ವಾಸ್ತು ಶಿಲ್ಪದ ಬೆಳವಣಿಗೆಯನ್ನು ಚರ್ಚಿಸಿದ್ದಾರೆ.

ಶ್ರೀಕಂಠಶಾಸ್ತ್ರಿ ಎಸ್. ಅವರ **'ಹೊಯ್ಸಳ ವಾಸ್ತುಶಿಲ್ಪ'** (ಕ್ರಿ.ಶ.1965) ಹೊಯ್ಸಳ ವಾಸ್ತುಶಿಲ್ಪವನ್ನು ವಿಶೇಷವಾಗಿ ಪರಿಶೀಲಿಸಿರುವ ಗ್ರಂಥ ಇದು. ಹೊಯ್ಸಳ ಶೈಲಿಯ ಎಲ್ಲಾ ದೊಡ್ಡ ಮತ್ತು ಸಣ್ಣ ದೇವಾಲಯಗಳನ್ನು ಕುರಿತು ಒಂದು ಮಾರ್ಗದರ್ಶಕ ಕೃತಿಯಾಗಿದೆ. ಇದರಲ್ಲಿ 20 ಛಾಯಾಚಿತ್ರಗಳನ್ನು ನೀಡಿದ್ದಾರೆ.

ಪದ್ಮನಾಭ ಕೆ. ಅವರ **'ಹೊಯ್ಸಳ ಸ್ಕಲ್ಪ್‌ಚರ್ ಎ ಕಲ್ಚರಲ್ ಸ್ಟಡಿ'** (ಕ್ರಿ.ಶ.1989) ಎಂಬ ಗ್ರಂಥದಲ್ಲಿ ಹೊಯ್ಸಳರ ಕಾಲದ ದೇವಾಲಯದ ಲಕ್ಷಣಗಳು ಮತ್ತು ವಿವಿಧ ಮಾದರಿಗಳ ಬಗೆಗೆ ಮಾಹಿತಿಯನ್ನು ಒದಗಿಸಿದೆ. ಹೊಯ್ಸಳರ ಕಾಲದ ಶಿಲ್ಪಗಳ ಆಧಾರದ ಮೇಲೆ ಸಮಕಾಲೀನ ಸಮಾಜದಲ್ಲಿ ಅಂದು ಜನಪದರು ಬಳಸುತ್ತಿದ್ದಂತಹ ಉಡುಪುಗಳು, ಪೀಠೋಪಕರಣಗಳು, ಕಿರೀಟಗಳು, ಪಾತ್ರೆಗಳು, ಸಂಗೀತ, ಸಾಧನಗಳು, ಆಯುಧಗಳು ಹಾಗೂ ಇನ್ನಿತರ ವಸ್ತುಗಳ ಬಗ್ಗೆ ವಿವರವಾಗಿ ತಿಳಿಸಲಾಗಿದೆ.

ಡಾ. ದೇವರಾಜು ಡಿ.ವಿ. ರವರ **'ಹಿಸ್ಟರಿ ಆಫ್ ಸೋಮನಾಥಪುರ ಟೆಂಪಲ್ ಕಾಂಪ್ಲೆಕ್ಸ್'** ಎಂಬ ಗ್ರಂಥವು ದೇವಾಲಯಗಳ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ.

**'ಇತಿಹಾಸ ಮತ್ತು ಪುರಾತತ್ವ' ಕನ್ನಡ ವಿಷಯ ವಿಶ್ವಕೋಶ,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಪ್ರಸರಾಂಗ-2009ರಲ್ಲಿ ಹೊಯ್ಸಳರ ಕಾಲದ ದೇವಾಲಯಗಳು, ರಾಜಕೀಯ ಇತಿಹಾಸ, ಸಾಮಾಜಿಕ, ಧಾರ್ಮಿಕ ಸ್ಥಿತಿಗಳು ಹಾಗೂ ಮೂರ್ತಿಶಿಲ್ಪಗಳ ಬಗ್ಗೆ ಸವಿವರವಾದ ಮಾಹಿತಿಯನ್ನು ನೀಡಲಾಗಿದೆ.

ವೆಂಕೋಬರಾವ್.ಬಿ. ಅವರ **'ಮೈಸೂರು ದೇಶದ ವಾಸ್ತುಶಿಲ್ಪ'** (ಕ್ರಿ.ಶ.1928) ಎಂಬ ತಮ್ಮ ಗ್ರಂಥದಲ್ಲಿ ಹಳೆಯ ಮೈಸೂರು ರಾಜ್ಯದ ದೇವಾಲಯಗಳನ್ನು ಕುರಿತು ಪರಿಚಯಾತ್ಮಕವಾಗಿ ತಿಳಿಸಿದ್ದಾರೆ ಹಾಗೂ ಆಕಾಲಕ್ಕೆ ಲಭ್ಯವಿದ್ದ ಮಾಹಿತಿಗಳ ಆಧಾರದ ಮೇರೆಗೆ ಆಗಿನ ಮೈಸೂರು ದೇಶದ ಭೌಗೋಳಿಕ ವ್ಯಾಪ್ತಿಗೆ ಅನ್ವಯಿಸಿ ನೋಡಿದಾಗ ಗ್ರಂಥದ ಮಹತ್ವ ತಿಳಿಯುತ್ತದೆ.

ಡಾಖೆ ಎಂ.ಎ. ಅವರ **'ದ ಇಂಡಿಯನ್ ಟೆಂಪಲ್ಸ್ ಪಾಮ್'**-1977 ಎಂಬ ಗ್ರಂಥದಲ್ಲಿ ಚಿತ್ರಗಳ ಸಹಿತ ದೇವಾಲಯಗಳ ವಾಸ್ತುಶೈಲಿಯ ಲಕ್ಷಣಗಳನ್ನು ತಿಳಿಸಿದ್ದಾರೆ ಹಾಗೂ ನಾಗರ, ದ್ರಾವಿಡ, ವೇಸರ ಶೈಲಿಯ ಲಕ್ಷಣಗಳ ವಿವರಣೆ ನೀಡಲಾಗಿದೆ.

ವಿಲಿಯಂ ಕೊಹಿಲೊ ರವರ **'ಹೊಯ್ಸಳ ವಂಶ'** ಎಂಬ ಗ್ರಂಥದಲ್ಲಿ ಬಹುಶಃ ಹೊಯ್ಸಳರ ಮೇಲೆ ಬರೆದ ಒಂದೇ ವಿಷಯವುಳ್ಳ ಮೊದಲನೇಯ ಗ್ರಂಥ. ಇವರ ಮುಖ್ಯ ವಿಷಯವೆಂದರೆ ರಾಜಕೀಯ ಚರಿತ್ರೆ, ಪರಿಚ್ಛೇಧಗಳು, ಆಡಳಿತ, ಸಮಾಜ ಧರ್ಮ ಮೊದಲಾದವುಗಳನ್ನು ಅವುಗಳ ಸ್ವರೂಪದ ಮೇಲೆ ಬರೆದಿದ್ದಾರೆ.

ಕೃಷ್ಣಸ್ವಾಮಿ ಅಯ್ಯಾಂಗರ್.ಎ.ಎಸ್. **'ಬೆಂಗಳೂರಿನ ಮಿಥಿಕ್ ಸೊಸೈಟಿಯ ತ್ರೈಮಾಸಿಕೆ'**ಯಲ್ಲಿ (Q.J.M.S) ಹಲವಾರು ಲೇಖನಗಳು ಪ್ರಕಟಗೊಂಡಿವೆ. ಇವರ ಲೇಖನದಲ್ಲಿ ಶ್ರೀವೈಷ್ಣವ ಧರ್ಮ, ಹೊಯ್ಸಳ ರಾಜವಂಶ ಕುರಿತು ಹಲವಾರು ವಿಷಯಗಳನ್ನು ಬರೆದಿದ್ದಾರೆ.

ಡಾ.ಎಸ್. ಅನೀಸ್ ಸಿರಾಜ್ ಇವರ ಮುಖ್ಯ ಸಂಪಾದಕತ್ವದಲ್ಲಿ ಲೇಖಕರು ಡಾ. ಮಂಜುಳ ಹುಲ್ಲಹಳ್ಳಿ ಇವರ ಸಹಕಾರದಿಂದ ಹೊರಬಂದಿರುವ **'ನಂಜನಗೂಡು ತಾಲೂಕು ಗ್ಯಾಸೆಟಿಯರ್'** 2011ರಲ್ಲಿ ನಂಜನಗೂಡು ತಾಲೂಕಿಗೆ ಸಂಬಂಧಿಸಿದಂತೆ ಕೆಲವು ಮಾಹಿತಿಗಳು ದೊರೆಯುತ್ತವೆ.

ಹೆಗ್ಗಡದೇವನಕೋಟೆ ತಾಲೂಕಿಗೆ ಸಂಬಂಧಿಸಿದಂತೆ ಇವರದೇ ಮುಖ್ಯ ಸಂಪಾದಕತ್ವದಲ್ಲಿ ನಿ.ಗಿರಿಗೌಡ ಎಂಬ ಲೇಖಕರು ರಚಿಸಿರುವ **'ಹೆಗ್ಗಡದೇವನಕೋಟೆ ತಾಲೂಕು ಗ್ಯಾಸೆಟಿಯರ್'**2011, ಇಲ್ಲಿ ಹೊಯ್ಸಳರಿಗೆ ಸಂಬಂಧಿಸಿದಂತೆ ಕೆಲವು ಮಾಹಿತಿಗಳು

ದೊರಕುತ್ತವೆ. ಇದರಲ್ಲಿ ಸಂಪೂರ್ಣವಾಗಿ ಇಡೀ ತಾಲೂಕಿನ ಬಗ್ಗೆ ಚರ್ಚಿಸಿರುವುದರಿಂದ ಹೊಯ್ಸಳರಿಗೆ ಸಂಬಂಧಿಸಿದ ಕೆಲವೇ ಕೆಲವು ಮಾಹಿತಿಗಳು ಮಾತ್ರ ಲಭ್ಯವಾಗಿವೆ.

ಪಿರಿಯಾಪಟ್ಟಣ ತಾಲೂಕಿಗೆ ಸಂಬಂಧಿಸಿದಂತೆ **'ಪಿರಿಯಾಪಟ್ಟಣ ತಾಲೂಕು ಗ್ಯಾಸೆಟಿಯರ್'** 2011ರಲ್ಲಿ ಡಾ.ಪಿ.ಕೆ.ರಾಜಶೇಖರ್ ಲೇಖಕರು ಹಾಗೂ ಮುಖ್ಯ ಸಂಪಾದಕರಾದ ಎಸ್.ಅನೀತ್ ಸಿರಾಜ್‌ರವರ ಸಂಪಾದಕತ್ವದಲ್ಲಿ ಹೊರತಂದು ತಾಲೂಕಿಗೆ ಸಂಬಂಧಿಸಿದ ಭೂಪಟ, ಭೌಗೋಳಿಕ ಹಿನ್ನೆಲೆ, ರಾಜಕೀಯ ಇತಿಹಾಸ, ದೇವಾಲಯಗಳ ವಾಸ್ತುರಚನೆಯ ಬಗ್ಗೆ ಕೆಲವು ಮಾಹಿತಿಗಳು ಲಭ್ಯವಾಗಿರುವುದರಿಂದ ಇನ್ನು ಹೆಚ್ಚಿನ ಮಾಹಿತಿಗಳನ್ನು ಕಲೆಹಾಕಿ ನನ್ನ ಮಹಾಪ್ರಬಂಧವನ್ನು ರಚಿಸುವ ಉದ್ದೇಶವನ್ನು ಹೊಂದಿದ್ದೇನೆ.

ಇವರದೇ ಮುಖ್ಯ ಸಂಪಾದಕತ್ವದಲ್ಲಿ ಹೊರಬಂದಿರುವ **'ಮೈಸೂರು ತಾಲೂಕು ಗ್ಯಾಸೆಟಿಯರ್'**, 2010ರಲ್ಲಿ ಡಾ.ಎಸ್.ಚಿಕ್ಕಮಾದು ಎಂಬ ಲೇಖಕರಾಗಿದ್ದು, ಇವರುಗಳ ಸಹಕಾರದಿಂದ ಹೊರಬಂದಿರುವ ಈ ಗ್ಯಾಸೆಟಿಯರ್‌ನಲ್ಲಿ ಮೈಸೂರು ನಗರ ಸಂಸ್ಕೃತಿ, ಐತಿಹಾಸಿಕ ಹಿನ್ನೆಲೆ, ಪೌರಾಣಿಕತೆ, ಮೈಸೂರಿನಲ್ಲಿ ಕಂಡುಬರುವ ಶಾಸನಗಳು ಹಾಗೂ ದೇವಾಲಯಗಳ ಬಗ್ಗೆ ಕೆಲವು ಮಾಹಿತಿಯನ್ನು ಈ ಗ್ರಂಥದಲ್ಲಿ ತಿಳಿಸಿದ್ದಾರೆ.

ಲೇಖಕರು. ಶಾಮಸುಂದರ ಬಿ. ಹಾಗೂ ಮುಖ್ಯ ಸಂಪಾದಕರಾದ ಡಾ. ಅನೀಸ್ ಸಿರಾಜ್‌ರವರು **'ಹುಣಸೂರು ತಾಲೂಕು ಗ್ಯಾಸೆಟಿಯರ್'** 2011ನ್ನು ಹೊರ ತಂದಿದ್ದಾರೆ. ಈ ಗ್ಯಾಸೆಟಿಯರ್‌ನಲ್ಲಿ ಹುಣಸೂರು ತಾಲೂಕಿಗೆ ಸಂಬಂಧಪಟ್ಟ ಪ್ರೇಕ್ಷಣಿಯ ಸ್ಥಳಗಳು, ಹೊಯ್ಸಳರ ರಾಜರ ವಂಶಾವಳಿ, ಹುಣಸೂರು ಹೆಸರಿನ ಮೂಲ ಮುಂತಾದ ಮಾಹಿತಿಗಳು ಲಭ್ಯವಾಗಿದೆ.

**'ತಿರುಮಕೂಡಲು ನರಸೀಪುರ ತಾಲೂಕು ಗ್ಯಾಸೆಟಿಯರ್'**2011ರಲ್ಲಿ ಮುಖ್ಯ ಸಂಪಾದಕರಾದ ಡಾ.ಅನೀಸ ಸಿರಾಜ್ ಹಾಗೂ ಲೇಖಕರು ಡಾ.ರಾಜೇಂದ್ರಪ್ಪ ಇವರುಗಳ ಸಹಕಾರದೊಂದಿಗೆ ಈ ಪುಸ್ತಕವನ್ನು ಹೊರತಂದಿದ್ದು, ಇದರಲ್ಲಿ ಸೋಮನಾಥಪುರದ ಕೇಶವ ದೇವಾಲಯ, ತಲಕಾಡಿನ ಕೀರ್ತಿನಾರಾಯಣ ದೇವಾಲಯದ ರಚನೆಯಲ್ಲಿ ದೊರೆತಿರುವ ಕೆಲವು ಶಾಸನಗಳ ಬಗ್ಗೆ ಸಂಪೂರ್ಣ ಮಾಹಿತಿ ದೊರೆಯದಿದ್ದರೂ ಸಹ ನನ್ನ ಸಂಶೋಧನೆಗೆ ಕೆಲವು ಅಂಶಗಳನ್ನು ಸೇರಿಸಲು ಉಪಯುಕ್ತ ಮಾಹಿತಿ ಲಭ್ಯವಾಗಿದೆ.

ಇವರದೇ ಮುಖ್ಯ ಸಂಪಾದಕತ್ವದಲ್ಲಿ ಹೊರಬಂದಿರುವ **'ಕೃಷ್ಣರಾಜನಗರ ತಾಲೂಕು ಗ್ಯಾಸೆಟಿಯರ್'**-2011ನಲ್ಲಿ ಕೃಷ್ಣರಾಜನಗರದ ಇತಿಹಾಸದ ಮೂಲ, ದೇವಾಲಯದ ರಚನೆ,

ಭೂಪಟ, ಶಾಸನಗಳು ಮುಂತಾದ ವಿವರಗಳನ್ನು ನೀಡುವಲ್ಲಿ ಲೇಖಕರಾದ ಡಾ.ರಾಜೇಂದ್ರಪ್ಪ ರವರು ನನ್ನ ಸಂಶೋಧನಾ ಪ್ರಬಂಧವನ್ನು ರಚಿಸಲು ನೆರವಾಗಿದ್ದಾರೆ.

ಡಾ.ಶೋಭಾರವರ **'ಮಂಡ್ಯ ಜಿಲ್ಲೆಯ ಹೊಯ್ಸಳ ದೇವಾಲಯಗಳು'**-2011ರಲ್ಲಿ ಹೊಯ್ಸಳರ ಕಾಲದ ದೇವಾಲಯಗಳ ನೆಲೆ, ಉಡುಪು, ಆಭರಣ, ಕೇಶಾಲಂಕಾರ, ಪೀಠೋಪಕರಣಗಳು, ಸಂಗೀತ, ವಾದ್ಯಗಳು, ಆಯುಧಗಳ ಬಗ್ಗೆ ಉಪಯುಕ್ತ ಮಾಹಿತಿ ದೊರೆಯುತ್ತದೆ.

ಸ್ವಾಮಿ. ಎಲ್.ಎನ್. **'ಮೈಸೂರು ಜಿಲ್ಲಾ ಕೈಪಿಡಿ'**, ಮೈಸೂರು, 1940ರಲ್ಲಿ ಮೈಸೂರು ಜಿಲ್ಲೆಗೆ ಸಂಬಂಧಪಟ್ಟ ಕೆಲವು ಮಾಹಿತಿಗಳು ಲಭ್ಯವಿದೆ.

ಡಾ. ಮೈಸೂರು ನಾಗರಾಜಶರ್ಮ **'ಹೊಯ್ಸಳ ಶಿಲ್ಪದಲ್ಲಿ ಶಿವ'**, 2010, ಇದು ಶಿವಶಿಲ್ಪಗಳ ಜೊತೆಗೆ ಹೊಯ್ಸಳ ಕಾಲದ ಶೈವ ವಾಸ್ತುವಿನಲ್ಲಿ ಕಾಣಬರುವ ಬಹುಕೋಷ್ಠಗಳ ಬಗ್ಗೆ ವಿವರವಿದೆ.

ಗೋಪಾಲ್ ಆರ್. ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಅವರ ಸಂಪಾದಕತ್ವದಲ್ಲಿ 2010ರಲ್ಲಿ **'ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ'** ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. ಮೈಸೂರು ಜಿಲ್ಲೆ ಮತ್ತು ತಾಲೂಕಿನ ಕೆಲವು ದೇವಾಲಯಗಳು, ಶಾಸನಗಳು ಹಾಗೂ ರಾಜಕೀಯ ಇತಿಹಾಸದ ಬಗ್ಗೆ ಕೆಲವು ಸಂಶೋಧನಾ ಲೇಖನಗಳು ವಿವರವಾದ ಮಾಹಿತಿಯನ್ನು ನೀಡಿವೆ.

ಬಿ.ಸಿ.ಸುರೇಶ–**'ಚಿಕ್ಕಮಗಳೂರು ಜಿಲ್ಲೆಯ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ, 2014,** ಇವರು ತಮ್ಮ ಗ್ರಂಥದಲ್ಲಿ ಹೊಯ್ಸಳ ದೇವಾಲಯಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

ಮನೋಜ್ ಜಿ.-**'ವಾಸ್ತುವಿಜ್ಞಾನ'**, 2015, ಇದರಲ್ಲಿ ಹೊಯ್ಸಳ ಕಾಲದ ದೇವಾಲಯದ ಭಾಗಗಳಾದ ಅಧಿಷ್ಠಾನ, ಭಿತ್ತಿ, ಶಿಖರ, ಕಪೋತ, ಕಂಬಗಳ ಬಗ್ಗೆ ಉಪಯುಕ್ತ ಮಾಹಿತಿ ದೊರೆಯುತ್ತದೆ.

ಈ ಮೇಲೆ ವಿವರಿಸಿದ ಲೇಖಕರುಗಳಲ್ಲದೆ ಹಲವಾರು ವಿದ್ವಾಂಸರು ಕರ್ನಾಟಕದ ದೇವಾಲಯಗಳ ವಾಸ್ತುಶಿಲ್ಪಕ್ಕೆ ಸಂಬಧಿಸಿದ ಲೇಖನಗಳನ್ನು ಪ್ರಕಟಿಸಿದ್ದಾರೆ. **'ಇತಿಹಾಸ ದರ್ಶನ'** ಸಂಪುಟ 1 ರಿಂದ 29, ಮತ್ತು **'ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ ಅಂಡ್ ಕಲ್ಚರ್'** ಎಂಬ ಮೊದಲಾದ ಸಂಪುಟಗಳಲ್ಲಿ ಲೇಖನಗಳು ಸಂಗ್ರಹಗೊಂಡಿವೆ. ಈ ಎಲ್ಲಾ ಮಾಹಿತಿಗಳನ್ನು

ಗಮನಿಸಿ, ವಿಶ್ಲೇಷಿಸಿ ನನ್ನ ಅಧ್ಯಯನದಲ್ಲಿ ಸಂದರ್ಭೋಚಿತವಾಗಿ ಬಳಸಿಕೊಳ್ಳಲು ಪ್ರಯತ್ನಿಸಿದ್ದೇನೆ. ಜೊತೆಗೆ ಕ್ಷೇತ್ರಕಾರ್ಯ ಕೈಗೊಂಡು ಮೈಸೂರು ಜಿಲ್ಲೆಯ ಹೊಯ್ಸಳ ದೇವಾಲಯಗಳನ್ನು ಪರಿಶೀಲಿಸಿ ವಿವರಗಳನ್ನು ಟಿಪ್ಪಣಿ ಮಾಡಿಕೊಂಡು ಅಧ್ಯಯನದ ಫಲವನ್ನು ನನ್ನ ಸಂಶೋಧನ ಮಹಾಪ್ರಬಂಧದಲ್ಲಿ ಅಳವಡಿಸಿಕೊಂಡಿದ್ದೇನೆ.

# ಅಧ್ಯಾಯ–2

## ಭೌಗೋಳಿಕ ಲಕ್ಷಣಗಳು, ಐತಿಹ್ಯ ಮತ್ತು ರಾಜಕೀಯ ಇತಿಹಾಸ

### ಭೌಗೋಳಿಕ ಲಕ್ಷಣಗಳು

ಮೈಸೂರು ಜಿಲ್ಲೆಯು ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎಂದೇ ಹೆಸರುವಾಸಿಯಾಗಿರುವ ಇದು, 1973ರಲ್ಲಿ ಕರ್ನಾಟಕ ರಾಜ್ಯವೆಂದು ಪುನರ್ನಾಮಕರಣ ಆಗುವವರೆಗೆ ಕರ್ನಾಟಕ ರಾಜ್ಯಕ್ಕೆ ಮೈಸೂರಿನ ಹೆಸರೇ ಇದ್ದದ್ದು ಅದರ ಮಹತ್ವವನ್ನು ಸೂಚಿಸುತ್ತದೆ. ಕರ್ನಾಟಕ ರಾಜ್ಯವನ್ನು ಆಡಳಿತದ ದೃಷ್ಠಿಯಿಂದ ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದ್ದು, ಅದರಲ್ಲಿ ಮೈಸೂರು ಸಹ ಒಂದು ವಿಭಾಗಿಯ ಜಿಲ್ಲೆಯಾಗಿದೆ.

ಮೈಸೂರು ವಿಭಾಗಕ್ಕೆ ಮಂಡ್ಯ, ಕೊಡಗು, ಹಾಸನ, ಮೈಸೂರು, ದಕ್ಷಿಣ ಕನ್ನಡ ಮತ್ತು ಚಿಕ್ಕಮಗಳೂರು, ಚಾಮರಾಜನಗರ ಹಾಗೂ ಉಡುಪಿ ಜಿಲ್ಲೆಗಳು ಸೇರಿವೆ. ಮೈಸೂರು ಜಿಲ್ಲೆಯು ಏಳು ತಾಲೂಕುಗಳನ್ನು ಹೊಂದಿದೆ. ಅವುಗಳೆಂದರೆ, ಹೆಗ್ಗಡದೇವನಕೋಟೆ, ನಂಜನಗೂಡು, ಪಿರಿಯಾಪಟ್ಟಣ, ಮೈಸೂರು, ಹುಣಸೂರು, ತಿರುಮಕೂಡಲು ನರಸೀಪುರ ಹಾಗೂ ಕೃಷ್ಣರಾಜನಗರಗಳಾಗಿವೆ.[1]

ಕರ್ನಾಟಕ ರಾಜ್ಯವು ಭಾರತದ ನೈರುತ್ಯ ಭಾಗದಲ್ಲಿದೆ. ಇದು ಮುಖ್ಯವಾಗಿ ಒಂದು ಮೈದಾನ ಪ್ರದೇಶ ಮತ್ತು ದಖನ್ ಪ್ರಸ್ಥಭೂಮಿಯ ವಿಸ್ತರಣೆಯಾಗಿ, ಇದು ಆಕಾರದಲ್ಲಿ ಸಮಚತುರ್ಭುಜವಾಗಿದೆ. ರಾಜ್ಯದ ಉತ್ತರದಿಂದ ದಕ್ಷಿಣಕ್ಕೆ 805 ಕಿ.ಮೀ. ಮತ್ತು ಪೂರ್ವದಿಂದ ಪಶ್ಚಿಮಕ್ಕೆ ಸುಮಾರು 283 ಕಿ.ಮೀ. ವಿಸ್ತಾರವನ್ನು ಹೊಂದಿದ್ದು, ರಾಜ್ಯದ ಒಟ್ಟು ಭೂಪ್ರದೇಶವು 192,493 ಚ.ಕಿ.ಮೀ. ಹೊಂದಿದೆ.

ಮೈಸೂರು ಜಿಲ್ಲೆಯು ದಕ್ಷಿಣ ಪ್ರಸ್ಥಭೂಮಿಯಲ್ಲಿದ್ದು, ಇದು ಕರ್ನಾಟಕ ರಾಜ್ಯದ ದಕ್ಷಿಣ ಭಾಗದಲ್ಲಿದೆ. ಭೌಗೋಳಿಕವಾಗಿ ಈ ಜಿಲ್ಲೆಯಲ್ಲಿ ಕಂಡುಬರುವ ಪ್ರದೇಶವನ್ನು ಭಾಗಶಃ ಮೈದಾನ ಮತ್ತು ಭಾಗಶಃ ಮಲೆನಾಡು ಗುಡ್ಡಪ್ರದೇಶಗಳು ಎಂದು ವರ್ಗೀಕರಿಸಬಹುದು. ಮೈಸೂರು ಜಿಲ್ಲೆಯು ಆಗ್ನೇಯ ಪೂರ್ವ ಮತ್ತು ದಕ್ಷಿಣದಲ್ಲಿ ತಮಿಳುನಾಡು ನೈರುತ್ಯದಲ್ಲಿ ಕೇರಳ ರಾಜ್ಯಗಳೂ, ಪಶ್ಚಿಮದಲ್ಲಿ ಕೊಡಗು ಜಿಲ್ಲೆ, ಉತ್ತರದಲ್ಲಿ ಹಾಸನ, ಈಶಾನ್ಯ ಭಾಗದಲ್ಲಿ ಮಂಡ್ಯ ಜಿಲ್ಲೆಗಳು ಸುತ್ತುವರೆದಿವೆ.[2]

ಮೈಸೂರು ಜಿಲ್ಲೆಯು ದಕ್ಷಿಣ ಪ್ರಸ್ಥಭೂಮಿಯ ಒಂದು ಭಾಗವಾಗಿದ್ದು, ಈ ಜಿಲ್ಲೆ ಉತ್ತರ ಅಕ್ಷಾಂಶ $11^{\circ}$-$30^{\circ}$ ನಿಂದ $12^{\circ}$-$45^{\circ}$, ಪೂರ್ವ ರೇಖಾಂಶ $75^{\circ}$-$45^{\circ}$ ನಿಂದ $77^{\circ}$-$45^{\circ}$ವರೆಗೆ ಹಬ್ಬಿದೆ. ಉತ್ತರ-ದಕ್ಷಿಣವಾಗಿ 95 ಕಿ.ಮೀ. ಪೂರ್ವ ಪಶ್ಚಿಮವಾಗಿ 192ಕಿ.ಮೀ. ಅಗಲವಿದ್ದು, ಇದು ಒಂದು ಸಾಂಸ್ಕೃತಿಕ ಅಸ್ತಿತ್ವದ ಜೊತೆಗೆ ವಿಶಿಷ್ಟವಾದ ಭೂಮಿಯ ಘಟಕವನ್ನು ರೂಪಿಸುತ್ತದೆ. ಇದು 6854 ಚದರ ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ. ಅದು ರಾಜ್ಯದ ಒಟ್ಟು ಭೌಗೋಳಿಕ ಪ್ರದೇಶದ 3.57ರಷ್ಟು ಆಗಿದೆ. ಇದು 2001ರ ಜನಗಣತಿಯ ಪ್ರಕಾರ 2.641 ಮಿಲಿಯನ್ ಜನಸಂಖ್ಯೆ ಹೊಂದಿರುವ ಪ್ರದೇಶವಾಗಿದ್ದು, ಕರ್ನಾಟಕ ರಾಜ್ಯದಲ್ಲಿ 6ನೇ ಸ್ಥಾನವನ್ನು ಪಡೆದುಕೊಂಡಿದೆ.[3]

ಮೈಸೂರು ಜಿಲ್ಲೆಯು ಸಮುದ್ರ ಮಟ್ಟದಿಂದ ಸುಮಾರು 610 ಮೀಟರ್ ಎತ್ತರದಲ್ಲಿದೆ. ಇದು ಮೈದಾನ ಮತ್ತು ಅರೆಮಲೆನಾಡು ಪ್ರದೇಶದ ವ್ಯಾಪ್ತಿಯ ನಡುವೆ ಇದ್ದು, ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶದಲ್ಲಿ 6,72,382 ಹೆಕ್ಟೇರ್‌ಗಳನ್ನು ಹೊಂದಿದೆ. ಅದರಲ್ಲಿ 62,285 ಹೆಕ್ಟೇರ್‌ಗಳ ಅರಣ್ಯ ಪ್ರದೇಶವನ್ನು ಹೊಂದಿದ್ದು, ಮೈಸೂರು ಜಿಲ್ಲೆಯಲ್ಲಿ ಪಿರಿಯಾಪಟ್ಟಣ ಮತ್ತು ಹೆಗ್ಗಡದೇವನಕೋಟೆ ತಾಲೂಕುಗಳ ಪಶ್ಚಿಮಘಟ್ಟಗಳು ಮತ್ತು ಕೊಳ್ಳೇಗಾಲ ತಾಲೂಕಿನ ಪೂರ್ವಘಟ್ಟಗಳ ನಡುವೆ ಹಬ್ಬಿದೆ. ಈ ಜಿಲ್ಲೆಯ ಮುಖ್ಯ ಬೆಟ್ಟಗಳಲ್ಲಿ ಮೈಸೂರಿನ ಚಾಮುಂಡಿಬೆಟ್ಟ (1063 ಮೀ.) ತಿ.ನರಸೀಪುರದ ಶಂಭುಲಿಂಗೇಶ್ವರಬೆಟ್ಟ ಮತ್ತು ವಾಯುವ್ಯದ ಕಡೆ ಇರುವ ಬೆಟ್ಟದಪುರದಬೆಟ್ಟ (ಸುಮಾರು.1337.76 ಮೀ.) ಇದರಲ್ಲದೆ. ಅನೇಕ ಸಣ್ಣಪುಟ್ಟ ಬೆಟ್ಟಗಳು ಮೈಸೂರು ಜಿಲ್ಲೆಯಲ್ಲಿ ಕಂಡುಬರುತ್ತದೆ.[4]

ಈ ಜಿಲ್ಲೆಯನ್ನು ಪಶ್ಚಿಮದ ಉಪಮಲೆನಾಡು ಪ್ರದೇಶ, ಮಧ್ಯದ ಕಾಲುವೆ ನೀರಾವರಿ ಪ್ರದೇಶ, ಪೂರ್ವದ ಕೆರೆನೀರಾವರಿಯ ಶುಷ್ಕ ಪ್ರದೇಶವೆಂದು ವಿಂಗಡಿಸಬಹುದು. ಪಶ್ಚಿಮದ ಉಪಮಲೆನಾಡನ್ನು ಬಿಟ್ಟು, ಜಿಲ್ಲೆಯ ಉಳಿದ ಭಾಗ ಅಸಮ ಇಳಿಜಾರಿನ ಏರಿಳಿತಗಳಿಂದ ಕೂಡಿದ ಮೈದಾನ ಪ್ರದೇಶವಾಗಿದೆ. ಮಧ್ಯಭಾಗ ಕಾಲುವೆ ಮತ್ತು ನದಿಗಳ ನೀರಾವರಿಯಿಂದ ಕೂಡಿದ ತರಿಬೆಳೆಗಳ ಸಮೃದ್ಧ ವ್ಯವಸಾಯ ಪ್ರದೇಶವಾದರೆ, ಪೂರ್ವ ಮೈದಾನ, ಕೆರೆ ನೀರಾವರಿಯ ಶುಷ್ಕ ಆಹಾರಬೆಳೆ ಮತ್ತು ವಾಣಿಜ್ಯ ಬೆಳೆಗಳ ಪ್ರದೇಶವಾಗಿದೆ.[5] ಒಟ್ಟಿನಲ್ಲಿ ಈ ಜಿಲ್ಲೆಯ ಭೂ ಮಟ್ಟವು ಪಶ್ಚಿಮದಿಂದ ಪೂರ್ವದ ಕಡೆಗೆ ಹೋದಂತೆ ಕ್ರಮೇಣ ಇಳಿಜಾರಾಗಿದೆ.

**ವಾಯುಗುಣ:-** ಮೈಸೂರು ಜಿಲ್ಲೆಯಲ್ಲಿ ಉಷ್ಣವಲಯದ ಮಾನ್‌ಸೂನ್ ಮಾರುತಗಳ ವಾಯುಗುಣವಿದೆ. ಸರಾಸರಿ ಉಷ್ಣತೆ $12.9^{\circ}$ ನಿಂದ $36.5^{\circ}$ ಇರುತ್ತದೆ. ಪಶ್ಚಿಮದ ಉಪಮಲೆನಾಡು ಪ್ರದೇಶಕ್ಕೆ ಸೇರಿದ ಹೆಗ್ಗಡದೇವನಕೋಟೆ, ಹುಣಸೂರು ಮತ್ತು ಪಿರಿಯಾಪಟ್ಟಣ

ತಾಲೂಕುಗಳಲ್ಲಿ ಚಳಿಗಾಲ ಮತ್ತು ಮಳೆಗಾಲದಲ್ಲಿ ತೇವಾಂಶದಿಂದ ಕೂಡಿದ ತಂಪಾದ ಹವೆ ಇರುತ್ತದೆ. ಉಳಿದ ತಾಲೂಕುಗಳಲ್ಲಿ ನದಿ ಹರಿಯುವ ಪ್ರದೇಶಗಳನ್ನು ಬಿಟ್ಟು ಉಳಿದ ಇತರ ಎಲ್ಲಾ ಭಾಗಗಳಲ್ಲೂ ಶುಷ್ಕ ಹವೆ ಇರುತ್ತದೆ. ಇಲ್ಲಿ ಹಗಲು ಮತ್ತು ರಾತ್ರಿ ಹಾಗೂ ಚಳಿಗಾಲ ಮತ್ತು ಬೇಸಿಗೆ ಕಾಲದ ಉಷ್ಣತೆಯಲ್ಲಿ ಹೆಚ್ಚಿನ ವ್ಯತ್ಯಾಸ ಕಂಡುಬರುತ್ತದೆ. ಸಾಮಾನ್ಯವಾಗಿ ಜೂನ್‌ನಿಂದ ಸೆಪ್ಟೆಂಬರ್ ತನಕ ಬೀಸುವ ನೈರುತ್ಯ ಮಾನ್‌ಸೂನ್ ಮಾರುತಗಳಿಂದ ಅಧಿಕ ಮಳೆಯಾಗುತ್ತದೆ. ಜಿಲ್ಲೆಯ ಸರಾಸರಿ ಮಳೆಯ ಪ್ರಮಾಣ ಸುಮಾರು 761.9 ಮಿ.ಮೀ. ಆಗಿದೆ. ಪಶ್ಚಿಮದ ಉಪಮಲೆನಾಡು ಪ್ರದೇಶದಲ್ಲಿ ಜಿಲ್ಲೆಯ ಇತರ ಭಾಗಕ್ಕಿಂತ ಹೆಚ್ಚು ಮಳೆ ಬೀಳುತ್ತದೆ. ಆದರೆ ಪಶ್ಚಿಮದಿಂದ ಪೂರ್ವಕ್ಕೆ ಮಳೆಯ ಪ್ರಮಾಣ ಕಡಿಮೆಯಾಗುತ್ತ ಹೋಗುತ್ತದೆ. ಈ ಜಿಲ್ಲೆಯಲ್ಲಿ ಒಟ್ಟು 74 ವೃಷ್ಠಿ ಮಾಪಕ ಕೇಂದ್ರಗಳಿವೆ.[6]

ಜಿಲ್ಲೆಯ ಹವಾಮಾನ ಪರಿಸ್ಥಿತಿಗಳು ಭತ್ತ, ಜೋಳ, ರಾಗಿ, ದ್ವಿದಳ ಧಾನ್ಯಗಳು, ಕಬ್ಬು ಮತ್ತು ತಂಬಾಕು ಮುಂತಾದ ಬೆಳೆಗಳಿಗೆ ಅನುಕೂಲಕರವಾಗಿರುತ್ತದೆ. ಹಾಗಾಗಿ ಜಿಲ್ಲೆಯನ್ನು ಎರಡು ಪ್ರಮುಖ ಕೃಷಿ ಹವಾಮಾನ ವಲಯಗಳಾಗಿ ವಿಂಗಡಿಸಬಹುದು. ಅವುಗಳೆಂದರೆ, ನಂಜನಗೂಡು, ತಿರುಮಕೂಡಲು ನರಸೀಪುರ, ಮೈಸೂರು, ಕೃಷ್ಣರಾಜನಗರ ಇವು ಉತ್ತರ ವಲಯಗಳು ಹಾಗೂ ಹೆಗ್ಗಡದೇವನಕೋಟೆ, ಹುಣಸೂರು, ಪಿರಿಯಾಪಟ್ಟಣ ತಾಲೂಕುಗಳನ್ನು ಒಳಗೊಂಡ ದಕ್ಷಿಣ ವಲಯಗಳಾಗಿವೆ. ಹೀಗಾಗಿ ಮೈಸೂರು ಜಿಲ್ಲೆ ವಿಭಿನ್ನ ಋತುಗಳಲ್ಲಿ ಹವಾಮಾನ ಮತ್ತು ತಾಪಮಾನದಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಹಾಗೆಯೇ ಮೈಸೂರು ಜಿಲ್ಲೆಯು ಸಮಶೀತೋಷ್ಣ ವಲಯದಿಂದ ಕೂಡಿದ ಜಿಲ್ಲೆಯಾಗಿದೆ.[7]

**ನದಿಗಳು**:- ಮೈಸೂರು ಜಿಲ್ಲೆಯು ಅನೇಕ ದೀರ್ಘಕಾಲಿಕ ಮತ್ತು ದೀರ್ಘಕಾಲಿಕ ಅಲ್ಲದ ನದಿಗಳನ್ನು ಹೊಂದಿದೆ. ಮೈಸೂರು ಜಿಲ್ಲೆಯಲ್ಲಿ ಪ್ರಮುಖವಾಗಿ ಕಾವೇರಿ, ಲಕ್ಷ್ಮಣತೀರ್ಥ, ಕಬಿನಿ ನದಿಗಳು ಮುಖ್ಯವಾದ ನದಿಗಳಾಗಿವೆ. ಕಾವೇರಿ ನದಿಯು ಕೊಡಗು ಜಿಲ್ಲೆಯ ತಲಕಾವೇರಿ ಎಂಬಲ್ಲಿ ಹುಟ್ಟಿ, ವಾಯುವ್ಯ ಕಡೆಯಿಂದ ಜಿಲ್ಲೆಯನ್ನು ಪ್ರವೇಶಿಸಿ ಪೂರ್ವಾಭಿಮುಖವಾಗಿ ಹರಿದು ಮಂಡ್ಯ ಜಿಲ್ಲೆಯ ಮೂಲಕ ಪುನಃ ಮೈಸೂರು ಜಿಲ್ಲೆಯನ್ನು ಈಶಾನ್ಯ ದಿಕ್ಕಿನಿಂದ ಸೇರಿ ಪೂರ್ವ ದಿಕ್ಕಿಗೆ ಹರಿಯುತ್ತದೆ. ಜಿಲ್ಲೆಯಲ್ಲಿ ಇದು ಸುಮಾರು 242 ಕಿ.ಮೀ. ದೂರ ಪ್ರವೇಶಿಸುತ್ತದೆ. ಕಬಿನಿ ನದಿಯು ಕೇರಳದ ವೈನಾಡಿನಲ್ಲಿ ಹುಟ್ಟಿ, ಕೊಡಗು ಜಿಲ್ಲೆಯಿಂದ ಹರಿದು ಹೆಗ್ಗಡದೇವನ ಕೋಟೆಯ ಮೂಲಕ ಜಿಲ್ಲೆಯನ್ನು ತಲುಪಿ ತಿರುಮಕೂಡಲು ನರಸೀಪುರ ಹತ್ತಿರ ಕಾವೇರಿಯಾಗಿ ಸೇರುತ್ತದೆ. ಕಬಿನಿ ನದಿಗೆ ಗುಂಡ್ಲುಹೊಳೆ, ನುಗುಹೊಳೆ ಎಂಬ ಉಪನದಿಗಳಿವೆ. ಹಾಗೆಯೇ ಉಡುತೊರೆಹಳ್ಳ ಮಾವಿನಹಳ್ಳ, ಸುವರ್ಣಾವತಿ, ಚಿಕ್ಕಹೊಳೆ ಮುಂತಾದ ನದಿಗಳಿವೆ.

ಲಕ್ಷ್ಮಣತೀರ್ಥ ನದಿಯು ಜಿಲ್ಲೆಯ ಹುಣಸೂರು ತಾಲೂಕಿನಲ್ಲಿ ಹರಿದು ಅಂತಿಮವಾಗಿ ಕೃಷ್ಣರಾಜ ಸಾಗರ ಅಣೆಕಟ್ಟುನ್ನು ತಲುಪುತ್ತದೆ.[8]

**ಮಣ್ಣು**:- ಮೈಸೂರು ಜಿಲ್ಲೆಯಲ್ಲಿ ಕೆಂಪುಮಣ್ಣು, ಮರಳುಮಣ್ಣು, ಲ್ಯಾಟರೈಟ್ ಮಣ್ಣು, ಕೆಂಪು ಜೇಡಿಮಣ್ಣು ಮತ್ತು ಕಪ್ಪುಮಣ್ಣು ಕಂಡುಬರುತ್ತವೆ. ಲ್ಯಾಟರೈಟ್ ಮಣ್ಣು ಜಿಲ್ಲೆಯ ಪಶ್ಚಿಮ ಭಾಗದಲ್ಲೂ, ಕೆಂಪುಮಣ್ಣು ವಾಯುವ್ಯ ಭಾಗದಲ್ಲೂ ಕಂಡುಬರುತ್ತವೆ. ಈ ಎರಡು ವಿಧದ ಮಣ್ಣು ಜಿಲ್ಲೆಯ ಸುಮಾರು ಅರ್ಧಭಾಗದಷ್ಟು ಕೆಂಪುಮಿಶ್ರಿತ ಮರಳುಮಣ್ಣು, ಪಿರಿಯಾಪಟ್ಟಣ, ಹೆಗ್ಗಡದೇವನಕೋಟೆ ಮತ್ತು ಹುಣಸೂರು ತಾಲೂಕುಗಳಲ್ಲಿ ಕಂಡುಬರುತ್ತದೆ. ಹಾಗೆಯೇ ಸಾರಜನಕ ಪೋಷಕಾಂಶಯುಕ್ತ ಮಣ್ಣು ಅನೇಕ ತಾಲ್ಲೂಕುಗಳಲ್ಲಿ ಕಂಡುಬರುತ್ತದೆ.[9]

**ಸಸ್ಯವರ್ಗ**:- ಮೈಸೂರು ಜಿಲ್ಲೆಯು ರಾಜ್ಯದ ಅರಣ್ಯ ಸಂಪತ್ತಿನಲ್ಲಿ ಮೂರನೇ ಸ್ಥಾನದಲ್ಲಿದೆ. ಜಿಲ್ಲೆಯ ಹೆಚ್ಚಿನ ಸಸ್ಯಸಂಪತ್ತು ಹೆಗ್ಗಡದೇವನಕೋಟೆ, ಹುಣಸೂರು ತಾಲೂಕುಗಳಲ್ಲಿ ಕೇಂದ್ರಿಕೃತವಾಗಿದೆ. ಈ ಭಾಗದಲ್ಲಿ ಹೆಚ್ಚು ಕಾಡುಗಳು ಮತ್ತು ಹುಲ್ಲುಗಾವಲು ಪ್ರದೇಶಗಳು ಕಂಡುಬರುತ್ತವೆ. ಇಲ್ಲಿ ಕಾಡುಗಳಲ್ಲಿ ತೇಗ, ಗಂಧ, ಬೀಟೆ, ನಂದಿ, ಹೊನ್ನೆ, ಮತ್ತಿ, ಎತ್ತಿಗ, ರೋಸವುಡ್, ಯೂಕಲಿಪ್ರಸ್ ಮುಂತಾದ ಸಾಗುವಾನಿ ಮರಗಳಲ್ಲದೆ, ಈ ಜಿಲ್ಲೆಯು ಶ್ರೀಗಂಧದ ಮರ ಹೆಚ್ಚಾಗಿ ಕಂಡುಬಂದಿದ್ದು, ಈ ಜಿಲ್ಲೆಯು ಗಂಧದನಾಡು ಎಂದು ಹೆಸರುವಾಸಿಯಾಗಿದೆ. ಬೆಂಕಿಪೊಟ್ಟಣ ಕೈಗಾರಿಕೆಗಳಿಗೆ ಬೇಕಾದ ಮೃದುಮರ, ಬಿದಿರು, ಅರಗು, ಗೋಂದು ಮುಂತಾದ ಮರಗಳು ಕಂಡುಬರುತ್ತವೆ. ಅಲ್ಲದೆ ಜಿಲ್ಲೆಯ ಕೆಲವು ಭಾಗಗಳಲ್ಲಿ ನೀಲಗಿರಿ, ತೇಗ, ಗೋಡಂಬಿ ಮುಂತಾದ ಸಸಿಗಳನ್ನು ನೆಟ್ಟು ಬೆಳೆಸಿದ್ದಾರೆ ಹಾಗೂ ಜಿಲ್ಲೆಯಲ್ಲಿ 4,126,45 ಚ.ಕಿ.ಮೀ. ಅರಣ್ಯ ಪ್ರದೇಶವಿದೆ.[10]

**ಮೈಸೂರು ಜಿಲ್ಲೆಯ ಐತಿಹ್ಯ**

**'ಸಾಂಸ್ಕೃತಿಕ ನಗರಿ'** ಎಂಬ ಹೆಗ್ಗಳಕೆಗೆ ಪಾತ್ರವಾಗಿರುವ ಕರ್ನಾಟಕ ರಾಜ್ಯದ 30 ಜಿಲ್ಲೆಗಳಲ್ಲಿ ಒಂದಾದ ಹಾಗೂ ಸಾಂಸ್ಕೃತಿಕ ಜಗತ್ತಿನಲ್ಲಿ ವಿವಿಧ ಆಯಾಮಗಳಲ್ಲಿ ಐತಿಹಾಸಿಕ ಮತ್ತು ಚಾರಿತ್ರಿಕವಾಗಿ ತನ್ನದೇ ಆದ ಮಹತ್ವವನ್ನು ಹೊಂದಿರುವ ಮೈಸೂರು ಜಿಲ್ಲೆಯು ಸಾಂಸ್ಕೃತಿಕ ರಾಜಧಾನಿ, ಅರಮನೆಗಳ ನಗರ ಎಂಬ ಖ್ಯಾತಿಯನ್ನು ಹೊಂದಿದೆ, ಜೊತೆಗೆ ಶ್ರೀಮಂತ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಸಮೃದ್ಧ ಜಿಲ್ಲೆಯಾಗಿದೆ.[11]

ಇತಿಹಾಸ ಬರೆವಣಿಗೆಯ ಸಂದರ್ಭದಲ್ಲಿ ಆಕರಗಳಾಗಿ ಶಾಸನ ದಾಖಲೆಗಳಿಗೆ ಪ್ರಥಮ ಸ್ಥಾನ ಸಲ್ಲುತ್ತದೆ. ಇತರೆ ಆಕರಗಳಿಗೆ ಅನಂತರದ ಸ್ಥಾನವಿದ್ದು, ಇವುಗಳಲ್ಲಿ ಕೈಫಿಯತ್ತುಗಳೂ

ಗಮನಾರ್ಹವಾಗಿವೆ. ಇವುಗಳ ಜೊತೆಗೆ ಸ್ಥಳೀಯ ಐತಿಹ್ಯಕ್ಕೂ ಪ್ರಧಾನ್ಯವಿದ್ದು, ಜನಪದ ಸಾಹಿತ್ಯ ಮತ್ತು ಸಂಸ್ಕೃತಿ ವಿಚಾರಗಳು ಅಲಿಖಿತ ಚಾರಿತ್ರಿಕ ದಾಖಲೆಗಳಾಗಿವೆ. ಈ ಆಕರಗಳು ಶಾಸನಗಳಂತೆ ಕೇವಲ ದಾನ-ವೀರ ಘಟನೆಗಳನ್ನು ಹೇಳದೇ ಗ್ರಾಮ, ಕೋಟೆ, ಕೊತ್ತಲ, ಕೆರೆ, ದೇವಾಲಯಗಳ ನಿರ್ಮಾಣ ವಿವರಣೆಗಳನ್ನು, ಧಾರ್ಮಿಕ ಆಚರಣೆ, ನಂಬಿಕೆ, ಹಾಗೂ ಪುರಾಣ ಕಥೆಗಳನ್ನು ಒಳಗೊಂಡಿರುತ್ತದೆ. ಸಾಮಾನ್ಯವಾಗಿ ಯಾವುದೇ ಸ್ಥಳ ಇಲ್ಲವೇ ವಿಷಯಗಳಿಗೆ ಸಂಬಂಧಿಸಿದ ನೈಜ ಘಟನೆಗಳಿಗೆ ಪೌರಾಣಿಕ ಪರಿವೇಷ ಕಲ್ಪಿಸುವುದು ಭಾರತದಲ್ಲಿ ಬೆಳೆದುಬಂದ ಜನಪದ ಮನೋಧರ್ಮವಾಗಿದೆ. ಇದರ ಅರಿವು ಇತಿಹಾಸಕಾರನಿಗೆ ಅತ್ಯಗತ್ಯವಾಗಿ ಇರಬೇಕಾಗುತ್ತದೆ.

ಈ ಜಿಲ್ಲೆಯ ಅನೇಕ ಸ್ಥಳಗಳು ಪುರಾಣೇತಿಹಾಸ ಪ್ರಸಿದ್ಧವಾದವುಗಳಾಗಿವೆ. ಇತಿಹಾಸವು ಮಾನವನ ಉಗಮ ಮತ್ತು ವಿಕಾಸದ ಬಗೆಗೆ ತಿಳುವಳಿಕೆ ನೀಡುವುದರ ಜೊತೆಗೆ ತಮ್ಮ ಪ್ರಾಚೀನ ಪರಂಪರೆಯ ಮೇಲೂ ಬೆಳಕು ಚೆಲ್ಲುತ್ತದೆ. ಒಂದು ಸಮಾಜದ ಸರ್ವತೋಮುಖ ಅಭಿವೃದ್ಧಿಯ ಒಟ್ಟು ಚಿತ್ರವನ್ನು ನೀಡುವ ಐತಿಹಾಸಿಕ ಜ್ಞಾನ ಮಾನವ ಜ್ಞಾನದ ಪೂರ್ವತೆಗೆ ಅವಶ್ಯಕವಾಗಿದೆ. ಈ ಕಾರಣಗಳಿಂದ ಒಂದು ಪ್ರದೇಶದ ಬಗ್ಗೆ ಅಧ್ಯಯನ ಮಾಡುವಾಗ ಆ ಪ್ರದೇಶದ ಐತಿಹಾಸಿಕ ಮಹತ್ವವನ್ನು ಅರಿಯುವುದು ಬಹಳ ಮುಖ್ಯ.

ಪ್ರಾಚೀನ ಬೌದ್ಧ ಗ್ರಂಥಗಳಲ್ಲಿ ಮಹಿಷರಾಷ್ಟ್ರ ಎಂಬ ಹೆಸರಿದೆ. ಅದು ಮೈಸೂರಿಗೆ ಸಂಬಂಧಿಸಿದೆಂಬ ಅಭಿಪ್ರಾಯವಿದ್ದು, ಅಶೋಕ ಚಕ್ರವರ್ತಿಯು ಬೌದ್ಧ ಭಿಕ್ಕುಗಳನ್ನು ಮತ ಪ್ರಚಾರಕ್ಕಾಗಿ ಮಹಿಷಮಂಡಲಕ್ಕೆ ಹಾಗೂ ಮೈಸೂರು ಸುತ್ತಮುತ್ತಲ ಪ್ರಾಂತ್ಯಗಳಿಗೆ ಕಳುಹಿಸಿದನೆಂದು ಹೇಳಲಾಗುತ್ತದೆ. ಹಾಗೆಯೇ ತಮಿಳಿನ ಬಹು ಪ್ರಾಚೀನ ಸಾಹಿತ್ಯದಲ್ಲಿ 'ಎರುಮೈನಾಡು' ಎಂದು ಉಲ್ಲೇಖಿಸಲಾಗಿದೆ.[12] ಆದ್ದರಿಂದ ಕ್ರಿ.ಪೂ.ದಿಂದಲೂ ಮೈಸೂರಿನ ಪ್ರಾಚೀನತೆಯನ್ನು ಗುರುತಿಸಬಹುದು. ಈ ಶಾಸನಗಳಲ್ಲಿ ಮೈಸೂರನ್ನು 'ಮಹಿಷಲೂರು' 'ಮಹಿಷಪುರ' 'ಮಹಿಷೂರಪುರ' ಎಂದು ಉಲ್ಲೇಖಿಸಿರುವುದು ಕಂಡುಬರುತ್ತದೆ. ನಂದಿಗುಂದ ಗ್ರಾಮ ಮೈಸುನಾಡು-70ಕ್ಕೆ ಸೇರಿತ್ತು. ಈ ಮೈಸೂನಾಡು70 ಎಂಬ 70 ಗ್ರಾಮಗಳ ಪ್ರಾಂತ್ಯಕ್ಕೆ ಮೈಸೂರು ಕೇಂದ್ರವಾಗಿತ್ತು ಮತ್ತು ರಾಜಧಾನಿಯಾಗಿತ್ತು ಎಂಬುದು ನಂಜನಗೂಡು ಶಾಸನ ಕ್ರಿ.ಶ.1021ರಲ್ಲಿ ತಿಳಿಸಲಾಗಿದೆ.[13] ಹಾಗೆಯೇ ಮಂಡ್ಯ ತಾಲ್ಲೂಕಿನ ಕದಲೂರಿನ ಕ್ರಿ.ಶ.862ರ ತಾಮ್ರ ಶಾಸನದಲ್ಲಿ ಮೈಸೂರು ಎಂದು ಸ್ಪಷ್ಟವಾಗಿ

ಉಲ್ಲೇಖಿತವಾಗಿದೆ. ನಂತರ ಕ್ರಿ.ಶ.11–12ನೇ ಶತಮಾನದ ಕೆಲವು ಶಾಸನಗಳಲ್ಲಿ ಮೈಸೂರನಾಡು ಎಂದಿರುವುದನ್ನು ಗುರುತಿಸಲಾಗಿದೆ.[14]

ಪೌರಾಣಿಕವಾಗಿ ಹೇಳುವುದಾದರೆ, ಈಗಿನ ಚಾಮುಂಡಿಬೆಟ್ಟದಲ್ಲಿ ಹಿಂದೆ ಕೋಣನ ತಲೆಯುಳ್ಳ ಮಹಿಷಸುರನೆಂಬ ರಾಕ್ಷಸ ಇದ್ದನೆಂದೂ, ಅವನು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಹೆಣ್ಣಿನಿಂದ ಮಾತ್ರ ತನಗೆ ಸಾವು ಬರಬೇಕೆಂದು, ವರ ಪಡೆದು ಮಹಿಷಮಂಡಲವನ್ನು ಆಳುತ್ತಿದ್ದ, ಅವನ ಉಪಟಳವನ್ನು ಸಹಿಸಲಾಗದ ದೇವತೆಗಳು ತಮ್ಮೆಲ್ಲ ಶಕ್ತಿಯನ್ನು ಚಾಮುಂಡೇಶ್ವರಿಗೆ ನೀಡಿ ಅವಳು ಅವನನ್ನು ಸಂಹರಿಸಿ ಚಾಮುಂಡಿಬೆಟ್ಟದಲ್ಲೇ ನೆಲೆಸಿದ್ದರಿಂದ ಅದಕ್ಕೆ ಚಾಮುಂಡಿಬೆಟ್ಟವೆಂದೂ, ಮಹಿಷಾಸುರನಿದ್ದ ಊರಿಗೆ ಮಹಿಷಪುರವೆಂದು ಹೆಸರಾಗಿ ಮುಂದೇ ಅದೇ ಮೈಸೂರಾಯಿತೆಂದು ಹೇಳಲಾಗುತ್ತದೆ.[15]

**ಹೆಗ್ಗಡದೇವನಕೋಟೆ ತಾಲೂಕಿನ–ಐತಿಹ್ಯ**

ಈ ತಾಲ್ಲೂಕಿಗೆ ಹೊಯ್ಸಳ ದಂಡನಾಯಕ ಹೆಗ್ಗಡದೇವನಿಂದ (ಕ್ರಿ.ಶ.1327) ಈ ಹೆಸರು ಬಂದಿದೆ ಎಂದು ಹೇಳಲಾಗುತ್ತದೆ. ಇದಕ್ಕೆ ಪೂರಕವಾಗಿ ಬಪ್ಪನಹಳ್ಳಿಯ ಕ್ರಿ.ಶ.1327ರ ಶಾಸನವನ್ನು ಉಲ್ಲೇಖಿಸಬಹುದಾಗಿದೆ. ಅದರಲ್ಲಿ ಹೆಗ್ಗಡದೇವ ಎಂಬುವವನು ಊರಿನ ಸುತ್ತ ಕೋಟೆಯನ್ನು ಕಟ್ಟಿಸಿ ಆಡಳಿತ ನಡೆಸುತ್ತಿದ್ದುದ್ದರಿಂದ ಈ ಊರಿಗೆ ಹೆಗ್ಗಡದೇವನಕೋಟೆ ಎಂಬ ಹೆಸರು ಬಂದಿದೆ ಎಂದು ತಿಳಿದುಬರುತ್ತದೆ. ಪ್ರಾಚೀನ ಕಾಲದಲ್ಲಿ ಈ ಪ್ರದೇಶವನ್ನು ಪುನ್ನಾಟ ಪ್ರದೇಶವೆಂದೂ, ಅನಂತರ ನುಗುನಾಡೆಂದು ಕರೆಯಲಾಗುತ್ತಿತ್ತು. ಈ ಪ್ರದೇಶದಲ್ಲಿ ದೊರೆತ ಹೊಯ್ಸಳರ ಶಾಸನದಲ್ಲಿಯೂ ಸಹ ಈ ಪ್ರದೇಶವನ್ನು 'ನುಗುನಾಡು' ಎಂದು ಕರೆಯಲಾಗಿದೆ.[16] ಹಾಗೆಯೇ ಹೆಗ್ಗಡದೇವನಕೋಟೆಯ ತಾಲೂಕಿನ ಕಲ್ಲಂಬಾಳು ಗ್ರಾಮವು ಹೊಯ್ಸಳ ಬಲ್ಲಾಳನ ಕಾಲವಾದ ಕ್ರಿ.ಶ.1211ರ ಶಾಸನದಲ್ಲಿ ಈ ಊರನ್ನು 'ಕಲ್ಲಂಬಾಳು' 'ಕಲ್ಲಂಬಾರು' ಎಂದು ಕರೆದಿದೆ ಹಾಗೂ ತಮಿಳನಲ್ಲಿ ಬರೆದಿರುವ ದಾಖಲೆಯಲ್ಲಿ ಕಲ್ಲಂಬಾಳನ್ನು 'ಕಲ್ಲಮ್ಮಾರು' ಎಂದು ಹಾಗೂ 'ಸಿಲೆಪುರ' ಎಂದು ಕರೆಯಲಾಗಿದೆ.[17] ಹಾಗೆಯೇ ತಾಲೂಕಿನ ಇನ್ನೊಂದು ಗ್ರಾಮವಾದ ಕಿತ್ತೂರಿನ ಬಗ್ಗೆ ಇರುವ ಐತಿಹ್ಯವೆಂದರೆ ಪ್ರಾಚೀನ ಕಾಲದಲ್ಲಿ 'ಅನಂತಕೀರ್ತಿ' 'ಮಹಾನಗರಪುರ' 'ರಾಜಾಸ್ಥಾನ' ಎಂಬ ಹೆಸರಿನಿಂದ ಕರೆಯುತ್ತಿದ್ದರು ಎಂದು ಕ್ರಿ.ಶ.1079ರ ಕಿತ್ತೂರು ಶಾಸನದಿಂದ ತಿಳಿದು ಬರುತ್ತದೆ.[18]

ದ್ವಾಪರಯುಗದಲ್ಲಿ ಪಾಂಡವರು ವನವಾಸದಿಂದ ಹಿಂತಿರುಗುವಾಗ ಹೆಗ್ಗಡದೇವನಕೋಟೆ ಮಾರ್ಗವಾಗಿ ಬಂದು ಕೋಟೆಯ ವರದರಾಜಸ್ವಾಮಿ ದೇವಸ್ಥಾನದಲ್ಲಿ ವಿಶ್ರಾಂತಿ ಪಡೆದರೆಂಬ ಪುರಾಣಕಥೆ ಇಲ್ಲಿ ಪ್ರಸಿದ್ಧವಾಗಿದೆ. ಪಾಂಡವರು ಇಲ್ಲಿ ತಂಗಿದ್ದರು ಎಂಬ

ಐತಿಹ್ಯ ಬಿಟ್ಟರೆ ಇನ್ಯಾವ ಪೌರಾಣಿಕ ಅಂಶಗಳೂ ಕಂಡುಬರುವುದಿಲ್ಲ, ಆದರೂ ಪಾಂಡವರು ಇಂದಿನ ಹೆಗ್ಗಡದೇವನಕೋಟೆ ಪ್ರದೇಶವನ್ನು ಒಳಗೊಂಡಿದ್ದ, ಪುನ್ನಾಟ ಪ್ರದೇಶದಲ್ಲಿ ಸ್ವಲ್ಪಕಾಲ ಇದ್ದರೆಂಬುದಕ್ಕೆ ಸಾಕ್ಷಿಯಾಗಿ ತಾಲೂಕಿನ ಅನೇಕ ಹಳ್ಳಿಗಳಲ್ಲಿ ಕುಂತಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಟ್ಟು ಪ್ರತಿವರ್ಷ ನವರಾತ್ರಿಯಲ್ಲಿ ಕುಂತಿ ಪೂಜೆಯನ್ನು ತಿಂಗಳ ಕಾಲ ಆಚರಿಸುತ್ತಾರೆ. ಆ ಸಂದರ್ಭದಲ್ಲಿ ಕುಂತಿದೇವಿಗೆ ಸಂಬಂಧಿಸಿದ ಜನಪದ ಹಾಡುಗಳನ್ನು ಸುಮಂಗಲಿಯರು ಹಾಡುತ್ತಾರೆ.[19]

**ಹುಣಸೂರು ತಾಲೂಕಿನ ಐತಿಹ್ಯ**

ಹುಣಸೂರು ಎಂಬ ನಾಮಪದದ ಮೂಲ ಸರಿಯಾಗಿ ತಿಳಿದುಬಂದಿಲ್ಲ. ಆದರೆ ಇದುವರೆಗೂ ದೊರೆಕಿರುವ ಶಾಸನಗಳಲ್ಲಾಗಲೀ ಹಾಗೂ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಾಗಲೀ 'ಹುಣಸೂರು' ಹೆಸರಿನ ಉಲ್ಲೇಖವಿಲ್ಲ, ಆದರೆ ಈ ಊರಿನ ಸುತ್ತಮುತ್ತಲಿನ ಅರಣ್ಯ ಪ್ರದೇಶದಲ್ಲಿ ದಟ್ಟವಾಗಿ ಹುಣಸೆಮರಗಳಿದ್ದು, ಹುಣಸೆಹಣ್ಣಿನ ಉತ್ಪತ್ತಿ ಹೆಚ್ಚಾಗಿತ್ತು. ಹಾಗಾಗಿ ಅಕ್ಕಪಕ್ಕದ ಊರಿನ ಜನರು ಹುಣಸೆ ಹಣ್ಣಿಗಾಗಿ ಇಲ್ಲಿಗೆ ಬರುತ್ತಿದ್ದು, ಈ ಊರನ್ನು 'ಹುಣಸೆಯೂರು' ಎಂದು ಗುರುತಿಸಲಾರಂಭಿಸಿದರು. ಕಾಲಕಳೆದಂತೆ ಜನರ ಬಾಯಲ್ಲಿ 'ಹುಣಸೆಯೂರು' 'ಹುಣಸೂರು' ಆಗಿ ಅದೇ ಶಾಶ್ವತವಾಗಿ ಬಳಕೆಯಾಗತೊಡಗಿತು ಎಂಬುದು ಜನಪದ ನಿರುಕ್ತಿ[20] ಹಾಗೂ ರಾಮಾಯಣಕ್ಕೆ ಸಂಬಂಧಿಸಿದ ಪುರಾಣ ಕಥೆಗಳಲ್ಲಿ ವನವಾಸ ನಿಮಿತ್ತ ಬಂದ ಶ್ರೀರಾಮ, ಸೀತೆ ಮತ್ತು ಲಕ್ಷ್ಮಣ ಈ ಪ್ರದೇಶದಲ್ಲಿ ಸಂಚರಿಸಿದ್ದರೆಂದು ಪ್ರತೀತಿ. ಇವರು ತಂಗಿದ್ದ ಸ್ಥಳವೇ ರಾಮಪಟ್ಟಣವೆಂದೂ, ಲಕ್ಷ್ಮಣ ಬಿದಿರಕ್ಕಿಯನ್ನು ಮರೆತು ಬಿಟ್ಟುಬಂದ ಸ್ಥಳವೇ 'ಮರದೂರು' ಎಂದು ಗುರುತಿಸುತ್ತಾರೆ. ಹಾಗೆಯೇ ಸೀತೆಯ ಬಾಯಾರಿಕೆ ತಣಿಸಲು ಲಕ್ಷ್ಮಣ ಕೊಡಗಿನ ಇರ್ಪು ಎಂಬಲ್ಲಿ ಬಾಣಬಿಟ್ಟು ಬಂಡೆಯನ್ನು ಸೀಳಿ ಜಲ ಉಕ್ಕಿ ಬರುವಂತೆ ಮಾಡಿದ್ದು, ಹುಣಸೂರಿನಲ್ಲಿ ಅದೇ ಲಕ್ಷ್ಮಣತೀರ್ಥ ನದಿಯಾಗಿ ಹರಿಯಿತೆಂದು ಪ್ರತೀತಿಯಿದೆ.[21]

ಹಾಗೆಯೇ ಧರ್ಮಾಪುರ ಗ್ರಾಮದಲ್ಲಿ ಒಂದನೇ ನರಸಿಂಹನ (ಕ್ರಿ.ಶ.1152-73) ಕಾಲದ ಶಾಸನವೊಂದು ದೊರೆತಿದ್ದು, ಈ ಶಾಸನದಲ್ಲಿ ತೂಗರವಾಡಿ ಮತ್ತು ಬೂವನಹಳ್ಳಿ ಎಂಬ ಗ್ರಾಮಗಳನ್ನು ಧರ್ಮಾಪುರ ಎಂಬ ಅಗ್ರಹಾರವನ್ನಾಗಿ ಪರಿವರ್ತಿಸಿದ ಅಂಶ ತಿಳಿದು ಬರುತ್ತದೆ.[22]

**ಪಿರಿಯಾಪಟ್ಟಣ ತಾಲೂಕಿನ ಐತಿಹ್ಯ**

ಪಿರಿಯಾಪಟ್ಟಣ ತಾಲೂಕು ಐತಿಹಾಸಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಪಡೆದಿದೆ. ಪ್ರಾಚೀನ ಹಾಗೂ ಅರ್ವಾಚೀನ ಕಾಲಗಳ ನಡುವೆ ಇದು ಅನೇಕ ಸ್ಥಿತ್ಯಂತರಗಳನ್ನು ಕಂಡಿದೆ. ಪಿರಿಯಾಪಟ್ಟಣವು ಚಂಗಾಳ್ವರ ರಾಜಧಾನಿಯಾಗಿಯೂ ಐತಿಹಾಸಿಕ ಮನ್ನಣೆಯನ್ನು ಗಳಿಸಿತ್ತು. ಪಿರಿಯಾಪಟ್ಟಣದ ಮೊದಲ ಹೆಸರು 'ಸಿಂಹಪಟ್ಟಣ' (ಸಿಂಗಪಟ್ಟಣ). ಈ ಸಿಂಹಪಟ್ಟಣದ ಹೆಸರಿನ ಬಗೆಗೊಂದು ಐತಿಹ್ಯವಿದೆ. ಚಂಗಾಳ್ವ ಅರಸನೊಬ್ಬನು ಚೋಳರ ಆಗ್ರಹಕ್ಕೆ ತುತ್ತಾದಾಗ, ಸೈನಿಕರು ಅವನನ್ನು ಬಂಧಿಸಿ ಚೋಳರಾಜನು ಬೀಡುಬಿಟ್ಟಿದ್ದ ಸ್ಥಳಕ್ಕೆ ಎಳೆದೊಯ್ಯುತ್ತಿದ್ದಾಗ, ಮಾರ್ಗಮಧ್ಯದಲ್ಲಿ ಆಯಾಸವನ್ನು ಪರಿಹರಿಸಿಕೊಳ್ಳಲು ಎಲ್ಲರೂ ಒಂದೆಡೆ ತಂಗಿದ್ದರು. ಚಂಗಾಳ್ವ ಅರಸನಿಗೆ ಜೊಂಪು ಹತ್ತಿದಂತಾಗಿ ಮೊಣಕೈಯನ್ನು ತಲೆಗೆ ಆಸರೆಯಿಟ್ಟುಕೊಂಡು ಹಾಗೆಯೇ ನೆಲದಲ್ಲಿ ಒರಗಿಕೊಂಡಾಗ ಅವನಿಗೊಂದು ದಿವ್ಯ ಸ್ವಪ್ನವಾಯಿತು. ಆ ಕನಸಿನಲ್ಲಿ ಮಸಣಿಕಮ್ಮ ದೇವತೆ ಕಾಣಿಸಿಕೊಂಡು ಈ ಸ್ಥಳದಲ್ಲಿ ನನಗೊಂದು ದೇವಾಲಯವನ್ನು ಕಟ್ಟಿಸಿ ನನ್ನನ್ನು ನಿನ್ನ ಮನೆ ದೇವತೆಯನ್ನಾಗಿ ಸ್ವೀಕರಿಸುವುದಾದರೆ ನಿನ್ನನ್ನು ಬಂಧನದಿಂದ ಪಾರು ಮಾಡುತ್ತೇನೆ. ಎಂದಂತಾಯಿತು. ಆಗ ಚಂಗಾಳ್ವನು ಎಚ್ಚರಗೊಂಡು ದೇವತೆಯ ಆದೇಶದಂತೆ ನಡೆದುಕೊಳ್ಳವುದಾಗಿ ಹರಕೆಯನ್ನು ಕಟ್ಟಿಕೊಂಡನು. ಹರಕೆಯನ್ನು ಕಟ್ಟಿಕೊಂಡ ಕೂಡಲೇ ಒಂದು ಮಾಯಸಿಂಹವು ಕಾಣಿಸಿಕೊಂಡು ಸೈನಿಕರ ಮೇಲೇರಗಿ ಸೈನಿಕರು ದಿಕ್ಕಾಪಾಲಾಗಿ ಓಡಿದರು. ಇದನ್ನು ನೋಡುತ್ತಿದ್ದಂತೆಯೇ ಸಿಂಹವು ಅದೃಶ್ಯವಾಯಿತು. ಹೀಗೆ ಸಿಂಹವು ರಕ್ಷಿಸಿದ ಸ್ಥಳದಲ್ಲಿ ಒಂದು ಕೋಟೆಯನ್ನು ಕಟ್ಟಿಸಿ ಅದಕ್ಕೆ 'ಸಿಂಹಪಟ್ಟಣ'ವೆಂದು ಕರೆದನು. ಕ್ರಮೇಣ ಇದು ಸಿಂಗಪಟ್ಟಣವಾಯಿತೆಂದು ತಿಳಿಯಬಹುದು.[23]

ಇನ್ನೊಂದು ಐತಿಹ್ಯದ ಪ್ರಕಾರ ಸಿಂಹಪಟ್ಟಣದಲ್ಲಿ ಪೆರಿಯಾರಾಜದೇವನು ಕಲ್ಲಿನಕೋಟೆ ಕಟ್ಟಿಸಿದ ನಂತರ 'ಪೆರಿಯಾರಾಜಪಟ್ಟಣ'ವೆಂಬ ಹೆಸರು ರೂಢಿಗೆ ಬಂದಿತ್ತು. ಪಿರಿಯಾಪಟ್ಟಣದ ಚೆನ್ನಿಗರಾಯನ ದೇವಾಲಯದ ಬಾಗಿಲುವಾಡದಲ್ಲಿರುವ ಕ್ರಿ.ಶ.೧೫೯೦ರ ಶಾಸನ ಶ್ರೀಕಂಠರಾಜೇಯನ ಮಗನಾದ ಶ್ರೀಪಿರಿಯಾರಾಜ ದೇವನು ಪ್ರಾಚೀನ ರಾಜಧಾನಿ ಸಿಂಹಪುರವನ್ನು ಜೀರ್ಣೋದ್ಧಾರ ಮಾಡಿ ಅದಕ್ಕೆ 'ಪೆರಿಯಾರಾಜಪಟ್ಟಣ' ಎಂದು ಪುನರ್ ನಾಮಕರಣ ಮಾಡಿದನೆಂದು ತಿಳಿಸುತ್ತದೆ.[24]

**ನಂಜನಗೂಡು ತಾಲೂಕಿನ ಐತಿಹ್ಯ**

ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕು ಹಲವಾರು ದೃಷ್ಟಿಯಿಂದ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ನಂಜನಗೂಡನ್ನು 'ದಕ್ಷಿಣ ವಾರಣಾಸಿ.' ಪರಶುರಾಮಕ್ಷೇತ್ರ ಎಂಬ ಸ್ಥಳ ಮಹಿಮೆಯ ಹಿರಿಮೆಯನ್ನು ಸೂಚಿಸುವ ಹೆಸರುಗಳಂದ ಕರೆಯಬಹುದು. ಪ್ರಸ್ತುತ ನಂಜುಂಡೇಶ್ವರನ ವಾಸಸ್ಥಳ ಎಂಬ ಅರ್ಥದಲ್ಲಿಯೇ, ನಂಜನಗೂಡು ಹೆಸರನ್ನು ಬಳಸಲಾಗುತ್ತದೆ. ಶಾಸನಗಳೂ ಕೂಡ ಈ ಅರ್ಥವನ್ನೇ ಸ್ಮರಿಸುತ್ತವೆ. ಡಾ.ಎಂ.ಎಂ.ಕಲಬುರ್ಗಿಯವರು 'ನಂಜ' ಅಥವಾ ನಂಜಲಾ ಎಂಬ ಹೆಸರಿನ ವ್ಯಕ್ತಿ ಇಲ್ಲಿ ಗುಡಿಯನ್ನು ಕಟ್ಟಿಸಿದ ಕಾರಣದಿಂದ ಇದು 'ನಂಜನಗುಡಿ' ಅಥವಾ ನಂಜಲಾಗುಡಿ ಎಂದಿದ್ದು, ಕ್ರಮೇಣ ಈ ಹೆಸರು ಇಡೀ ಊರಿನ ಅನ್ವಯವಾಗಿರುವ ಸಾಧ್ಯತೆಯನ್ನು ಸೂಚಿಸುತ್ತಾರೆ. ಇನ್ನೂ ಈ ಊರಿನ ಹೆಸರಿನ ಸಂಸ್ಕೃತ ರೂಪವಾದ 'ಗರಳಪುರಿ'[25]ಯೂ ಸಾಕಷ್ಟು ಪ್ರಸಿದ್ಧವಾಗಿದ್ದು, ಕ್ರಿ.ಶ.1211ರ ಶಾಸನದಲ್ಲಿಯೇ ಇದು 'ಗರಳಗ್ರಾಮ' ಎಂಬ ಉಕ್ತವಾಗಿದೆ. 'ಗರಳ ಅಥವಾ ನಂಜು' ಎರಡು ಪದಗಳು ವಿಷವೆಂಬ ಅರ್ಥವನ್ನು ಕೊಡುತ್ತವೆ. ಆ ಪ್ರಕಾರ ಈ ಊರು ವಿಷವನ್ನು ಉಂಡು ಇಲ್ಲಿ ನೆಲೆಸಿದವನ ಪ್ರದೇಶವಾಗದೆ, ಕೇವಲ ಗರಳ ಅಥವಾ ನಂಜಿನ ಪ್ರದೇಶವಾಗುತ್ತದೆ. ಜನಪದ ಸಾಹಿತ್ಯವು 'ವಿಷಪ್ರಾಜಿ ವನದಲ್ಲಿ ಸ್ವಾಮಿ ನಂಜುಂಡಲಿಂಗ ಏಳುಬಾಯ ಹೊನ್ನುತ್ತದಲ್ಲಿ ಉದ್ಭವ ಆದರಂತೆ' ಎಂದರೆ ಸ್ಥಳಪುರಾಣ ಕೇಶಿ ರಕ್ಕಸನಿಂದ ಹರಡಿದ ವಿಷದ ಕಾರಣದಿಂದ ಈ ಪ್ರದೇಶ ನಂಜನಗೂಡು ಅಥವಾ ಗರಳಪುರಿ ಆಯಿತು. ಹೀಗೆ ಪ್ರಾರಂಭವಾದ ಹೆಸರು ಮುಂದೆ ಸ್ಥಳ ದೇವತೆಯ ಪ್ರಸಿದ್ಧಿ ಹೆಚ್ಚಿದಂತೆ ನಂಜುಂಡನ ಗುಣಗಳನ್ನು ಈ ದೇವತೆಗೂ ಆರೋಪಿಸಿ ಅವನನ್ನು 'ನಂಜುಂಡೇಶ್ವರ'[26] ಎಂದೂ, ಅವನ ಪ್ರದೇಶವನ್ನು 'ನಂಜನಗೂಡು' ಎಂಬ ಸ್ಥಳನಾಮದಿಂದ ಕರೆಯುವುದು ರೂಢಿಗೆ ಬಂದಿರುವುದು ಸಹಜವಾಗಿದೆ.

**ಕೃಷ್ಣರಾಜನಗರ ತಾಲೂಕಿನ ಐತಿಹ್ಯ**

ಕೃಷ್ಣರಾಜನಗರ ತಾಲೂಕಿನ ಪ್ರಾಚೀನ ಹೆಸರು ಎಡತೊರೆ ಎಂಬುದಾಗಿದೆ. ಎಡ ಎಂದರೆ ಸಮೀಪ ಅಥವಾ ಹತ್ತಿರ, ತೊರೆ ಎಂದರೆ ಹರಿಯುತ್ತಿರುವ ನೀರು ಎಂದರ್ಥ. ಹರಿಯುತ್ತಿರುವ ಕಾವೇರಿ ನದಿಯ ಸಮೀಪದ ಸ್ಥಳವಾಗಿದ್ದರಿಂದ ಇದನ್ನು ಕ್ರಿ.ಶ.1934ಕ್ಕೂ ಮೊದಲು ಎಡತೊರೆ ಎಂದು ಕರೆಯುತ್ತಿದ್ದರು. ನಂತರ ಈ ತಾಲೂಕಿಗೂ ಎಡೆತೊರೆಗೂ 3 ಕಿ.ಮೀ. ಅಂತರದಲ್ಲಿ, ಎತ್ತರದ ನೆಲೆಯಲ್ಲಿ ನೂತನವಾಗಿ ನಿರ್ಮಿಸಲ್ಪಟ್ಟ ಕೃಷ್ಣರಾಜನಗರ ಪಟ್ಟಣದ ಹೆಸರನ್ನು ಅನ್ವಯಿಸಲಾಯಿತು.[27] ಕಾವೇರಿ ನದಿಯ ಎರಡು ದಂಡೆಗಳ ಮೇಲೆ

ಹರಡಿರುವ ಈ ತಾಲೂಕು ಪ್ರದೇಶವು ಧಾರ್ಮಿಕ ಮಹತ್ವವನ್ನು ಪಡೆದುಕೊಂಡಿದೆ. ಎಡತೊರೆ ಪ್ರದೇಶದ ಚುಂಚನಕಟ್ಟೆ ಹಿಂದೆ ದಂಡಕಾರಣ್ಯ ಪ್ರದೇಶವಾಗಿದ್ದು, ಶ್ರೀರಾಮ, ಸೀತೆ, ಲಕ್ಷ್ಮಣರು ಕೆಲಕಾಲ ಚುಂಚನಕಟ್ಟೆಯಲ್ಲಿದ್ದರಿಂದ 'ದಕ್ಷಿಣಕಾಶಿ' ಎಂದೇ ಪ್ರಸಿದ್ಧವಾಗಿರುವ ಕಾವೇರಿ ದಂಡೆಯಲ್ಲಿರುವ ಆರ್ಕೇಶ್ವರ ಲಿಂಗವು ಸೂರ್ಯನಿಂದ ಸ್ಥಾಪಿಸಲ್ಪಟ್ಟಿದೆಯೆಂದು ಅಭಿಪ್ರಾಯವಿದೆ. ಈ ಹಿನ್ನೆಲೆಯಲ್ಲಿ ಇಲ್ಲಿಯ ಪುಷ್ಕರಿಣಿಗಳಲ್ಲಿ ಸ್ನಾನ ಮಾಡಿ ಸೂರ್ಯದೇವನ ಉಪಾಸನೆ ಮಾಡುವುದು ಹಾಗೂ ಆರ್ಕೇಶ್ವರ ದೇವಾಲಯಕ್ಕೆ ಭಕ್ತಿಶ್ರದ್ಧೆಯಿಂದ ನಡೆದುಕೊಳ್ಳುವುದು ಈಗಲೂ ರೂಢಿಯಲ್ಲಿದೆ.[28]

**ತಿರುಮಕೂಡಲುನರಸೀಪುರ ತಾಲೂಕಿನ ಐತಿಹ್ಯ**

ತಿರುಮಕೂಡಲು ನರಸೀಪುರ ರಾಜ್ಯದ ಬಹುಪಾಲು ತಾಲೂಕುಗಳಂತೆ ಇದು ಕೂಡ ತಾಲೂಕು ಕೇಂದ್ರದ ಹೆಸರಿನಿಂದಲೇ ಕರೆಯಲ್ಪಡುತ್ತಿದೆ. ಆದರೆ ದಕ್ಷಿಣಕಾಶಿ, ವಾರಣಾಸಿ, ದಕ್ಷಿಣಪ್ರಯಾಗ, ರುದ್ರಪಾದಭೂಮಿ ಎಂದೆಲ್ಲಾ ಶಾಸನಗಳಲ್ಲಿ ಉಲ್ಲೇಖಿತಗೊಂಡಿರುವ ಇದು ಕಾವೇರಿ–ಕಪಿಲ ನದಿಗಳ ಸಂಗಮ ಸ್ಥಳದಲ್ಲಿರುವುದರಿಂದ 'ತಿರುಮಕೂಡಲು'[29] (ತಮಿಳಿನಲ್ಲಿ ತಿರು ಎಂದರೆ ಶ್ರೀ ಎಂದರ್ಥ) ಎಂಬ ಹೆಸರು ಬಳಕೆಗೆ ಬಂದು, ಸುಮಾರು ಕ್ರಿ.ಶ.11–12ನೇ ಶತಮಾನದಿಂದೀಚಿನ ಶಾಸನಗಳಲ್ಲಿ ನಿರಂತರವಾಗಿ ಉಲ್ಲೇಖಿತಗೊಂಡಿದೆ. ಕಾವೇರಿ–ಕಪಿಲ ನದಿಗಳ ಜೊತೆಗೆ ಗುಪ್ತಗಾಮಿನಿಯಾದ ಸ್ಫಟಿಕ ಸರೋವರದ ಉಲ್ಲೇಖವೂ ಶಾಸನದಲ್ಲಿದೆ. ತಿರುಮಕೂಡಲಿನಲ್ಲಿ ಎರಡು ನದಿಗಳು ಕೂಡುವಲ್ಲಿ ನಂದಿ ಕಂಬವಿರುವ ಸ್ಥಳವೇ ಸ್ಫಟಿಕ ಸರೋವರವೆಂದು ಸ್ಥಳೀಯವಾಗಿ ಹೇಳಲಾಗುತ್ತದೆ. ಇದರಿಂದಾಗಿ ಶಾಸನಗಳಲ್ಲಿ 'ತಿರುಮ(ನ)ಕ್ಕುಡಲ್'[30]ಎಂಬ ಪ್ರಯೋಗವು (ಮೂರು ಪವಿತ್ರ ಹೊಳೆಗಳು ಕೂಡುವ ಸ್ಥಳ) ಎಂಬ ಅರ್ಥವನ್ನು ನೀಡುತ್ತದೆ.

**ಪೂರ್ವ ಇತಿಹಾಸ**

ಮಾನವನ ಇತಿಹಾಸವನ್ನು ಪ್ರಮುಖವಾಗಿ ಎರಡು ಮುಖ್ಯ ವಿಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯದು ಅಕ್ಷರಜ್ಞಾನವಿಲ್ಲದ ಹಂತ ಇದನ್ನು ಪ್ರಾಗೀತಿಹಾಸ ಅಥವಾ ಪೂರ್ವ ಇತಿಹಾಸ ಕಾಲವೆಂದು ಕರೆಯಲಾಗುತ್ತದೆ. ಎರಡನೆಯದು ಅಕ್ಷರಜ್ಞಾನವಿದ್ದ ಹಂತ ಇದನ್ನು ಇತಿಹಾಸ ಕಾಲ ಎಂದು ಕರೆಯಲಾಗುತ್ತದೆ. ಇವುಗಳಲ್ಲಿ ಪ್ರಾಗೀತಿಹಾಸದ ಕಾಲವು ಬಹಳ ಸುದೀರ್ಘವಾಗಿದ್ದು, ಸುಮಾರು 5 ಲಕ್ಷ ವರ್ಷಗಳ ಹಿಂದಿನಿಂದ ಕ್ರಿ.ಶ.ದ ಆರಂಭದವರೆಗೂ ಅದು ಮುಂದುವರೆದಿರುವುದನ್ನು ಕಾಣಬಹುದಾಗಿದೆ. ಈ ಕಾಲಮಾನವನ್ನು

ಆಗ ನಿತ್ಯ ಬಳಕೆಯಲ್ಲಿ ಬಳಸುತ್ತಿದ್ದ ವಸ್ತುವಿನ ಆಧಾರದಿಂದ ಶಿಲಾಯುಗ ಸಂಸ್ಕೃತಿ ಮತ್ತು ಲೋಹಯುಗ ಸಂಸ್ಕೃತಿ ಎಂದು ಎರಡು ವಿಭಾಗಗಳನ್ನಾಗಿ ಮಾಡಲಾಗಿದೆ.

ಶಿಲಾಯುಗ ಸಂಸ್ಕೃತಿಯ ಹಂತವನ್ನು ಅವಶೇಷ ಹಾಗೂ ಅವುಗಳ ಬೆಳವಣಿಗೆ ಮತ್ತು ಕುಶಲತೆಯನ್ನು ಅನುಸರಿಸಿ ಹಳೆಯ ಶಿಲಾಯುಗ ಸಂಸ್ಕೃತಿ, ಸೂಕ್ಷ್ಮಶಿಲಾಯುಗ ಸಂಸ್ಕೃತಿ ಮತ್ತು ನೂತನ ಶಿಲಾಯುಗ ಸಂಸ್ಕೃತಿ ಎಂದು ವಿಂಗಡಿಸಲಾಗಿದೆ. ಅಧ್ಯಯನದ ತೀವ್ರತೆ ಹಾಗೂ ಪ್ರತಿಯೊಂದು ಹಂತಗಳಲ್ಲಾದ ಬದಲಾವಣೆಗಳನ್ನು ಗುರುತಿಸಿ ಈ ಶಿಲಾಯುಗ ಸಂಸ್ಕೃತಿಗಳನ್ನು ಹಲವು ಉಪಗುಂಪುಗಳನ್ನಾಗಿ ಆದಿ ಹಳೆಶಿಲಾಯುಗ, ಮಧ್ಯಶಿಲಾಯುಗ, ಅಂತ್ಯ ಶಿಲಾಯುಗ, ಸೂಕ್ಷ್ಮಶಿಲಾಯುಗ, ನೂತನ ಶಿಲಾಯುಗ ಹಾಗೂ ಬೃಹತ್ ಶಿಲಾಯುಗಗಳನ್ನಾಗಿ ವರ್ಗೀಕರಿಸಿಕೊಳ್ಳಲಾಗಿದೆ.

ಭಾರತದ ಪ್ರಾಗೀತಿಹಾಸದ ಅಧ್ಯಯನದ ಆರಂಭ ಕರ್ನಾಟಕದಿಂದಲೇ ಆಗಿದೆ ಎಂಬುದು ಗಮನಾರ್ಹ ಸಂಗತಿಯಾಗಿದೆ. ಬ್ರಿಟೀಷ್ ಅಧಿಕಾರಿ ಕ್ಯಾಪ್ಟನ್ ಕ್ಯೂಬೋಲ್ಡ್ ಕ್ರಿ.ಶ.1836ರಲ್ಲಿ ಕುಡತಿನಿ ಮತ್ತು ಕುಪ್ಪಗಲ್‌ನ ಬೂದಿದಿಬ್ಬದ ನೆಲೆಗಳನ್ನು ಪ್ರಪ್ರಥಮವಾಗಿ ಶೋಧಸಿದ್ದಾನೆ. ನಂತರ ಕ್ರಿ.ಶ.1842ರಲ್ಲಿ ಡಾ.ಪ್ರಿಮ್ ರೋಸ್‌ರವರು ರಾಯಚೂರಿನಲ್ಲಿ ತಮ್ಮ ಕೈ ತೋಟವನ್ನು ಸ್ವಚ್ಛಗೊಳಿಸುವ ಸಮಯದಲ್ಲಿ ಶಿಲೋಪಕರಣಗಳಾದ ಬಾಣದ ಮೊನೆ ಹಾಗೂ ನೀಳ ಚಕ್ಕೆಗಳು ದೊರೆತವು. ಇದೇ ರೀತಿಯಾಗಿ ಕ್ರಿ.ಶ.1863ರಲ್ಲಿ ತಮಿಳುನಾಡಿನ ಪಲ್ಲಾವರಂನಲ್ಲಿ ರಾಬರ್ಟ್ ಬ್ರೂಸ್ ಫೂಟ್‌ರವರು ಶೋಧಿಸಿದ ಆದಿ ಹಳೆಶಿಲಾಯುಗದ ಉಪಕರಣಗಳ ಶೋಧವು ಭಾರತದ ಪುರಾತತ್ವ ನೆಲೆಗಳ ಶೋಧನೆಯ ಮೈಲುಗಲ್ಲಾಯಿತು.[31] ಅದೇ ರೀತಿ ರಾಬರ್ಟ್ ಬ್ರೂಸ್ ಫೂಟ್‌ರವರು ಕ್ರಿ.ಶ.1916ರಲ್ಲಿ ಕರ್ನಾಟಕದಲ್ಲಿಯೂ ಹಲವು ನೆಲೆಗಳನ್ನು ಶೋಧಿಸಿದ್ದು, ಅವುಗಳಲ್ಲಿ ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರದ ನೂತನ ಶಿಲಾಯುಗದ ನೆಲೆಗಳ ಶೋಧವು ಮಹತ್ವವಾದವುಗಳಾಗಿವೆ. ನಂತರ ಎಂ.ಶೇಷಾದ್ರಿರವರು ಕ್ರಿ.ಶ.1971ರಲ್ಲಿ ಟಿ.ನರಸೀಪುರದಲ್ಲಿ ನಡೆಸಿದ ಉತ್ಖನನಗಳಿಂದಾಗಿ ನೂತನ ಶಿಲಾಯುಗ ಸಂಸ್ಕೃತಿಯ ವಿವಿಧ ಮಾದರಿಯ ಉಪಕರಣಗಳು, ಮಡಕೆಯ ಮಾದರಿಗಳು, ವಿಶಿಷ್ಟವಾದ ತಲೆಯಾನಿಕೆ ದೊರೆತಿದೆ. ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಕಪ್ಪು-ಕೆಂಪು, ಕಪ್ಪು, ಕೆಂಪುವರ್ಣದ ಮಡಕೆ ಚೂರುಗಳು ದೊರೆತಿವೆ ಹಾಗೂ ಇತಿಹಾಸ ಆರಂಭಯುಗ ಸಂಸ್ಕೃತಿಯ ಕೆಂಪು ಲೇಪನದಡಿ ಬಿಳಿವರ್ಣದ ಚಿತ್ರಿತ ಮಡಕೆ ಚೂರುಗಳು ದೊರೆತಿವೆ.[32]

ತಲಕಾಡಿನಲ್ಲಿ ನಡೆದಿರುವ ಉತ್ಖನನಗಳಿಂದ ನೂತನ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಮತ್ತು ಇತಿಹಾಸ ಆರಂಭಯುಗದ ಸಂಸ್ಕೃತಿಯ ಕೆಂಪು ಲೇಪನದಡಿ ಬಿಳಿವರ್ಣದ ಚಿತ್ರಿತ ಮಡಕೆ ಚೂರುಗಳು ಹಾಗೂ ರೋಮನ್ ನಾಣ್ಯದ ಅಚ್ಚುಗಳು ದೊರೆತಿವೆ.[33]

ಕ್ರಿ.ಶ.1974ರಲ್ಲಿ ಹೆಮ್ಮಿಗೆಯಲ್ಲಿ ಹನುಮಂತರಾವ್ ಎಂ. ಮತ್ತು ನಾಗರಾಜು ಎಸ್. ರವರು ಕೈಗೊಂಡ ಉತ್ಖನನದಿಂದ ಮಧ್ಯಹಳೆಶಿಲಾಯುಗದ ಉಪಕರಣಗಳು, ಸೂಕ್ಷ್ಮಶಿಲಾಯುಗ, ನೂತನ ಶಿಲಾಯುಗ, ಶಿಲಾ-ತಾಮ್ರಯುಗ ಹಾಗೂ ಇತಿಹಾಸ ಆರಂಭಯುಗದ ಸಂಸ್ಕೃತಿಗಳ ಅವಶೇಷಗಳು ದೊರೆತಿವೆ.[34]

ತಿ.ನರಸೀಪುರದ ಕಾವೇರಿ ನದಿಯ ಎಡದಂಡೆಯಲ್ಲಿರುವ ಮುತ್ತಲವಾಡಿ ಗ್ರಾಮದಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ, ಕೈಯಲ್ಲಿ ಮಾಡಿದ ಕಂದುವರ್ಣದ ಮಡಕೆ, ಉಜ್ಜಿ ನಯಗೊಳಿಸಿದ ಕೊಡಲಿ ಮತ್ತು ಇಲ್ಲಿ ದೊರೆತಿರುವ ತಲೆಯಾನಿಕೆಯು ನೂತನ ಶಿಲಾಯುಗದ ನಂತರದ ಹಂತದ್ದೆಂದು ತಿಳಿಯಲಾಗಿದ್ದು, ಇದರ ಕಾಲಮಾನ ಸುಮಾರು ಕ್ರಿ.ಪೂ.1600 ಎಂದು ತಿಳಿದುಬರುತ್ತದೆ. ಮತ್ತು ಇಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳಾದ ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು ದೊರೆತಿವೆ.[35]

ನಂಜನಗೂಡು ತಾಲೂಕಿನ ಅಲತ್ತೂರು, ಉಪ್ಪನಹಳ್ಳಿ, ಕಂಬಲ್ಲು, ಗೌಡರಹುಂಡಿ, ತರದಲೆ, ದೊಡ್ಡಹೊಮ್ಮ ಗ್ರಾಮಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಾಗಿದ್ದು, ಕಪ್ಪು-ಕೆಂಪು ವರ್ಣದ ಮಡಕೆಯ ಅವಶೇಷಗಳು ದೊರೆತಿವೆ.[36] ಹಾಗೂ ಮಲ್ಲಾಪುರ ಗ್ರಾಮದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕಲ್ಲುಗುಪ್ಪೆಗಳು ದೊರೆತಿವೆ.[37]

ನಂಜನಗೂಡಿನ ಯೇಚಹಳ್ಳಿಯಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಉಜ್ಜಿನಯಗೊಳಿಸಿದ ಕೊಡಲಿ, ಕೈನಲ್ಲಿ ಮಾಡಿದ ನಸುಕಂದು ವರ್ಣದ ಮಡಕೆ ಚೂರು ದೊರೆತಿದೆ.[38] ಲಕ್ಷ್ಮಣಾಪುರ ಗ್ರಾಮದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಗೋರಿ ನೆಲೆಇದ್ದು, ಇಲ್ಲಿ ಕಲ್ಲುಗಪ್ಪೆ ಹಾಗೂ ಶವ ಕುಣಿಗಳು ಕಂಡುಬಂದಿವೆ.[39]

ಸುತ್ತೂರಿನಲ್ಲಿ ಬೃಹತ್ ಶಿಲಾಯುಗ ಕಾಲದ ಕಪ್ಪು-ಕೆಂಪು ವರ್ಣದ ಮಡಕೆ ಚೂರುಗಳು, ಸಿಂಧುವಳ್ಳಿಯಲ್ಲಿ ಇದೇ ಸಂಸ್ಕೃತಿಯ ಕಲ್ಲುಗಪ್ಪೆ ಹಾಗೂ ಶವಕುಣಿ ಮಾದರಿಗಳು ದೊರೆತಿವೆ.[40] ಹಾಗೂ ಹೆಬ್ಯ ಗ್ರಾಮದಲ್ಲಿ ಆದಿಹಳೆ ಶಿಲಾಯುಗದ ಕೈಗೊಡಲಿ, ಬೃಹತ್ ಶಿಲಾಯುಗ ಸಂಸ್ಕೃತಿಯ ಕಪ್ಪು-ಕೆಂಪು ವರ್ಣದ ಮಡಕೆ ಚೂರುಗಳು ಕಂಡುಬಂದಿವೆ.

ಪಿರಿಯಾಪಟ್ಟಣ ತಾಲೂಕಿನ ಕೊಪ್ಪ ಗ್ರಾಮದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ವಿವಿಧ ಮಾದರಿಯ ಗೋರಿಗಳು ಕಂಡುಬಂದಿವೆ.[41] ಚಾಕೂರಿನಲ್ಲಿ ಬೃಹತ್ ಶಿಲಾಯುಗದ ಕಲ್ಲುಗಪ್ಪೆಗಳುಳ್ಳ ಶಿಲಾವೃತ್ತಗಳನ್ನು ಹೊಂದಿರುವ ಗೋರಿಗಳವೆ.[42]ಚಿಕ್ಕನೇರಳೆ, ಚನ್ನಕಲ್ಲು, ಬಿಳಗುಂದಗಳು ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಾಗಿದ್ದು, ಬಿಳಗುಂದದಲ್ಲಿ ನಿಲಸುಗಲ್ಲು ದೊರೆತಿದೆ.[43] ಹಾಗೂ ಇಲ್ಲಿನ 'ಬೆಣಗಾಲು' ಎಂಬ ಗ್ರಾಮದಲ್ಲಿ ಸುಮಾರು 150ಕ್ಕೂ ಹೆಚ್ಚಿನ ಕಲ್ಗೋರಿಗಳಿದ್ದು, ಇವುಗಳು ೩೦೦೦ ವರ್ಷಗಳಷ್ಟು ಹಿಂದಿನ ಬೃಹತ್ ಶಿಲಾಸಂಸ್ಕೃತಿಯ ಮುಖ್ಯ ನೆಲೆ ಎಂದು ಎ.ವಿ.ನರಸಿಂಹಮೂರ್ತಿರವರು ಅಭಿಪ್ರಾಯಪಟ್ಟಿದ್ದಾರೆ.[44] ಮತ್ತು ಕೊಪ್ಪದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಹಾಗೂ ಪುರಾತತ್ವ ಅಧ್ಯಯನ ವಿಭಾಗದ ಕೆ.ಕೆ.ಸುಬ್ಬಯ್ಯನವರ ನೇತೃತ್ವದಲ್ಲಿ ನಡೆದ ಉತ್ಖನನದಲ್ಲಿ ಬೃಹತ್ ಶಿಲಾಸಂಸ್ಕೃತಿಯ ಶಿಲಾಶವ ಸಂಪುಟಗಳು, ಮೂರು ಕಾಲಿನ ಕೆಂಪು ಬಣ್ಣದ ಜಾಡಿಗಳು, ನವಶಿಲಾಯುಗದ ಕೊಡಲಿ, ಅಗೇಟ್-ಸ್ಟಿಯಟೈಟ್-ಕಾರ್ನೇಲಿಯನ್ ಮಣಿಗಳು ಹಾಗೂ ಮಾನವನ ಅಸ್ಥಿಪಂಜರದ ಭಾಗಗಳು ದೊರೆತಿವೆ.[45]

ಮೈಸೂರು ತಾಲೂಕಿನ ಅಯ್ಯರಹಳ್ಳಿ ಗ್ರಾಮದಲ್ಲಿ ಬೃಹತ್ ಶಿಲಾಯುಗದ ನೆಲೆಯಲ್ಲಿ ನೂರಕ್ಕೂ ಹೆಚ್ಚು ಸಮಾಧಿಗಳಿದ್ದು, ಶಿಲಾ ವೃತ್ತಗಳನ್ನು ಹೊಂದಿವೆ. ಲಕ್ಷ್ಮೀಪುರದಲ್ಲಿ ನೂತನ ಶಿಲಾಯುಗ, ಬೃಹತ್ ಶಿಲಾಯುಗ, ಇತಿಹಾಸ ಆರಂಭ ಯುಗದ ಅವಶೇಷಗಳು ದೊರೆತಿವೆ.[46]

ಹುಣಸೂರು ತಾಲೂಕಿನ ಆಯ್ಯರಹಳ್ಳಿಯ ಬೃಹತ್ ಶಿಲಾಯುಗ ನೆಲೆಯಲ್ಲಿ ವಿವಿಧ ಮಾದರಿಯ ನೂರಾರು ಗೋರಿಗಳು ದೊರೆತಿವೆ.[47] ಐರಹಳ್ಳಿ, ಕಲತಪುರ, ಕೆಳಸನಗೂರು, ಚಿಲ್ಕುಂದ, ಚನ್ನಸೋಗೆ, ತಟ್ಟೆಕೆರೆ ಹಾಗೂ ಬೂದಿ ತಿಟ್ಟುಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ದೊರೆತಿವೆ.[48] ರಂಗೇನಕೊಪ್ಪಲು ಹಾಗೂ ಬೂದಿತಿಟ್ಟು, ಲಕ್ಕೂರು, ಹೆಬ್ಬನಕುಪ್ಪೆ, ಹೆಗ್ಗಂದೂರುಗಳಲ್ಲಿ ಬೃಹತ್ ಶಿಲಾಯುಗದ ಶಿಲಾವೃತ್ತಗಳು ಮತ್ತು ನೂತನ ಶಿಲಾಯುಗದ ಬೂದುವರ್ಣದ ಮಡಕೆ ಚೂರುಗಳು ದೊರೆತಿವೆ.[49]

ಹೀಗೆ ಮೈಸೂರು ಜಿಲ್ಲೆಯ ಹಲವಾರು ಗ್ರಾಮಗಳಲ್ಲಿ ವಿವಿಧ ಸಂಸ್ಕೃತಿಯ ಅವಶೇಷಗಳು ದೊರೆತಿರುವುದರಿಂದ ಮತ್ತು ದೊರೆಯುತ್ತಿರುವುದರಿಂದ ಈ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಮಾನವನು ವಾಸ ಮಾಡುತ್ತಿದ್ದನೆಂದು ತಿಳಿದುಬರುತ್ತದೆ.

## ರಾಜಕೀಯ ಇತಿಹಾಸ

ಕರ್ನಾಟಕದ ಇತಿಹಾಸದ ಪುಟಗಳಲ್ಲಿ ಹೊಯ್ಸಳ ಸಾಮ್ರಾಜ್ಯದ ಕಾಲವು ಒಂದು ಅವಿಸ್ಮರಣಿಯ ಅಧ್ಯಾಯವಾಗಿದೆ. ಅದರಲ್ಲೂ ದಕ್ಷಿಣ ಕರ್ನಾಟಕದಲ್ಲಿ ತಮಿಳುನಾಡಿನ ಕೆಲವು ಭಾಗಗಳನ್ನೊಳಗೊಂಡಂತೆ ಅವರು ನೀಡಿರುವ ಅಭೂತಪೂರ್ವ ಆಡಳಿತ ಹಾಗೂ ಕೊಡುಗೆಗಳ ಮೂಲಕ ತದನಂತರದ ಕಾಲಘಟ್ಟಗಳಲ್ಲಿ ಉದಯಿಸಿದ ಸಾಮ್ರಾಜ್ಯಗಳಿಗೆ ಮಾದರಿ ಸಾಮ್ರಾಜ್ಯವಾಗಿತ್ತೆಂಬುದು ನಿರ್ವಿವಾದಸಂಗತಿಯಾಗಿದೆ. ಕ್ರಿ.ಶ.10ನೆಯ ಶತಮಾನದ ಉತ್ತರಾರ್ಧದಿಂದ ಕ್ರಿ.ಶ.14ನೇ ಶತಮಾನದ ಪೂರ್ವಾರ್ಧದವರೆಗೂ ಆಳ್ವಿಕೆ ನಡೆಸಿದ ಹೊಯ್ಸಳ ವಂಶದವರು, ಸಾಮಂತರಾಗಿ ಆಳ್ವಿಕೆ ಆರಂಭಿಸಿದಾಗ ದಕ್ಷಿಣಭಾರತದ ಹಲವಾರು ರಾಜಮನೆತನಗಳು ಅಧಿಕಾರಕ್ಕಾಗಿ ಹೋರಾಟ ಮಾಡುತ್ತಿದ್ದವು. ಕಲ್ಯಾಣಿಚಾಲುಕ್ಯರು ಮತ್ತು ಚೋಳರು ತಮ್ಮ ಅಧಿಕಾರವನ್ನು ವಿಸ್ತರಿಸಿಕೊಳ್ಳಲು ಯುದ್ಧಗಳಲ್ಲಿ ತೊಡಗಿದ್ದರು. ಅಂದಿನ ಪ್ರಮುಖ ರಾಜಮನೆತನಗಳಾದ ತಲಕಾಡಿನ ಗಂಗರು ಮತ್ತು ನೊಳಂಬರು ತಮ್ಮ ಬಣಗಳನ್ನು ಆಗಾಗ್ಗೆ ಬದಲಿಸುತ್ತಾ ರಾಜಕೀಯವಾಗಿ ಅಸ್ಥಿರವಾಗಿದ್ದರು. ಆದರೂ ಇವರುಗಳು ಹೆಚ್ಚುಕಾಲ ಕಲ್ಯಾಣಿಚಾಲುಕ್ಯರ ಮಾಂಡಲೀಕ ಅರಸರಾಗಿಯೇ ಆಡಳಿತ ನಡೆಸುತ್ತಿದ್ದರು. ಇಂತಹ ರಾಜಕೀಯ ಅಸ್ಥಿರತೆಯನ್ನು ಉಪಯೋಗಿಸಿಕೊಂಡು ಹೊಯ್ಸಳರು ಪ್ರಾರಂಭದಲ್ಲಿ ಒಂದು ಸಣ್ಣ ಸಾಮ್ರಾಜ್ಯವನ್ನು ಕಟ್ಟಿ ರಾಜ್ಯಾಡಳಿತವನ್ನು ಪ್ರಾರಂಭಿಸಿದರು. ಹೊಯ್ಸಳರು ಪ್ರಾರಂಭದಿಂದ ಹಿಡಿದು ವಿಷ್ಣುವರ್ಧನನ ತಂದೆಯಾದ ಎರೆಯಂಗನ ಕಾಲದವರೆಗೂ ಸಹ ರಾಷ್ಟ್ರಕೂಟರು ಮತ್ತು ಕಲ್ಯಾಣಿಚಾಲುಕ್ಯರ ಮಾಂಡಲೀಕರಾಗಿಯೇ ಆಳ್ವಿಕೆ ನಡೆಸಿದರು. ಹೊಯ್ಸಳರು ಅಂದಿನ ಪರಿಸ್ಥಿತಿಯಲ್ಲಿ ಬಹಳ ಪ್ರಬಲರಾಗಿದ್ದಂತಹ ಕಲ್ಯಾಣಿಚಾಲುಕ್ಯರ ಮಾಂಡಲೀಕರಾಗಿದ್ದ ಸಂದರ್ಭದಲ್ಲಿ ಅವರ ಜೊತೆಗೂಡಿ ಹಲವಾರು ಯುದ್ಧಗಳಲ್ಲಿ ಭಾಗವಹಿಸಿ ಅನುಭವಗಳಿಸಿಕೊಳ್ಳುವುದರ ಜೊತೆಗೆ ಈ ಯುದ್ಧಗಳಲ್ಲಿ ನಿರ್ಣಾಯಕ ಪಾತ್ರಗಳನ್ನು ವಹಿಸಿರುವುದು ಹಲವಾರು ಶಾಸನಗಳಿಂದ ತಿಳಿದುಬರುತ್ತದೆ. ಈ ಯುದ್ಧಗಳಿಂದಲೇ ಅವರು ತಮ್ಮ ಸಾಮ್ರಾಜ್ಯದಲ್ಲಿ ಭದ್ರ ಬುನಾದಿಯನ್ನು ಹಾಕುತ್ತಾ ತಮ್ಮ ಸ್ವತಂತ್ರ ರಾಜ್ಯ ಕಟ್ಟುವುದಕ್ಕೆ ದಾರಿಯನ್ನು ಸುಗಮಗೊಳಿಸಿಕೊಂಡರು. ಇದರಿಂದ ಅವರು ರಾಜಕೀಯ ಆಡಳಿತ ಗಳಿಸಲು ಹಾಗೂ ಯುದ್ಧಗಳಲ್ಲಿ ಹಿಡಿತ ಸಾಧಿಸುವ ಕಲೆಯು ಅವರಿಗೆ ಸಿದ್ದಿಸಿತು. ಆದರೆ, ಹೊಯ್ಸಳರ ಆರಂಭಿಕ ಇತಿಹಾಸದ ಬಗೆಗೆ ಸ್ಪಷ್ಟವಾದ ದಾಖಲೆಗಳಿಲ್ಲ. ಹೊಯ್ಸಳರ ಮೂಲ ಪುರುಷ ಸಳ ಅಥವಾ ನೃಪಕಾಮ. ಇವನ ಕಾಲದ ಶಾಸನಗಳಲ್ಲಿ ಸಳನೇ ಇವರ ಮೂಲ ಪುರುಷನೆಂದು

ಉಲ್ಲೇಖಿಸಿದೆ. ಇವರು ತಮ್ಮನ್ನು ಯಾದವ ವಂಶಕ್ಕೆ ಸೇರಿದವರೆಂದು ಕರೆದುಕೊಂಡಿದ್ದಾರೆ. ಬೆಂಜಮಿನ್ ಲೂಯಿಸ್ ರೈಸ್ ಹಾಗೂ ಇತರ ವಿದ್ವಾಂಸರು ಅಭಿಪ್ರಾಯಪಡುವಂತೆ ಹೊಯ್ಸಳರ ಮೂಲನೆಲೆ ಶಶಕಪುರ ಅಥವಾ ಸೊಸೆವೂರು. ಇದನ್ನು ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕಿನ ಈಗಿನ ಅಂಗಡಿ ಎಂಬ ಸ್ಥಳ ಎಂದು ಗುರುತಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಇದೊಂದು ವ್ಯಾಪಾರ ಕೇಂದ್ರವಾಗಿದ್ದಿತು[50] ಎಂದು, ಸೊಸೆವೂರನ್ನು ಸೊಸೆಯೂರಿನ ವ್ಯಾಪಾರಸ್ಥರು ಸೇರಿ **"ಲೋಕಜಿತನಿಗೆ"** ಸ್ಮಾರಕವನ್ನು ನಿರ್ಮಿಸಿದರೆಂದು ಕ್ರಿ.ಶ.1060 ಶಾಸನದಲ್ಲಿ ಹೇಳಿರುವುದರಿಂದ ಈ ಸ್ಥಳ ವ್ಯಾಪಾರ ಕೇಂದ್ರವಾಗಿತ್ತು[51] ಎಂಬುದರ ಜೊತೆಗೆ ಜೈನ ಕೇಂದ್ರವಾಗಿತ್ತೆಂಬ ಅಂಶವು ತಿಳಿದುಬರುತ್ತದೆ ಮತ್ತು ಕ್ರಿ.ಶ.1040ರ ಶಾಸನದಲ್ಲಿ ಜೈನ ಆಚಾರ್ಯನಾದ ವಜ್ರಪಾಣಿ ಭರತೇಶ್ವರನು ಇಲ್ಲಿಯೇ ಕಾಲವಾದನೆಂದು ಉಲ್ಲೇಖಿಸಿದೆ.[52] ವಿಜಯನಗರದ ಅರಸ ಅಚ್ಯುತರಾಯನ ಶಾಸನವೊಂದರಲ್ಲಿ ಅಂಗಡಿ ಸ್ಥಳದ ಉಲ್ಲೇಖ ಅದರ ಭೌಗೋಳಿಕ ವರ್ಣನೆಯು ಕಂಡುಬಂದು ಅಂಗಡಿಯೇ ಸೊಸೆವೂರು ಎಂಬುದನ್ನು ಸ್ಪಷ್ಟಪಡಿಸಲು ಸಾಕಷ್ಟು ಉತ್ತಮ ಆಧಾರಗಳು ದೊರೆಯುತ್ತವೆ.[53]

ಹೊಯ್ಸಳರ ಮೂಲದ ಬಗ್ಗೆ ಇರುವ ಸಾಂಪ್ರದಾಯಿಕ ಕಥೆಯೊಂದರ ಪ್ರಕಾರ, ಹೊಯ್ಸಳರು ಯಾದವವಂಶದವರೆಂದೂ, ಇವರ ಆದ್ಯನಾದ ಸಳ ಎಂಬುವನು ತನ್ನ ಗುರುವಾದ ಜೈನಯತಿ ಸುದತ್ತಾಚಾರ್ಯನೊಡನೆ ಶಶಕಪುರದ ಬಳಿಯ ವಾಸಂತಿಕಾ ದೇವಾಲಯದಲ್ಲಿ ದೇವತೆಯ ಅರ್ಚನೆಯಲ್ಲಿ ತೊಡಗಿದ್ದಾಗ ಒಂದು ದಿನ ಹುಲಿಯೊಂದು ಅವರತ್ತ ಜಿಗಿದು ಬಂದಿತೆಂದೂ ಜೈನ ಮುನಿಗಳು ತನ್ನ ಕೈಯಲ್ಲಿದ್ದ ಕೋಲನ್ನು ಸಳನ ಕೈಗಿತ್ತು 'ಪೊಯ್‌ಸಳ' ಎಂದು ಅಪ್ಪಣೆ ಮಾಡಿದನೆಂದೂ, ಸಳನು ಧೈರ್ಯದಿಂದ ಹುಲಿಯನ್ನು ಕೊಂದನೆಂದೂ, ಇದರಿಂದ ಸುಪ್ರೀತನಾದ ಮುನಿ ತನ್ನ ಶಿಷ್ಯನು ರಾಜನಗುವಂತೆ ದೇವತೆಯಿಂದ ವರ ಪಡೆದು ಸಳನನ್ನು ಹರಸಿದನೆಂದೂ, ಆದ್ದರಿಂದಲೇ ಅವನ ವಂಶಕ್ಕೆ ಪೊಯ್ಸಳ ಎಂದು ಹೆಸರಾಯಿತೆಂದೂ ಹೊಯ್ಸಳರ ಕಾಲದ ಸುಮಾರು 11 ಶಾಸನಗಳು ತಿಳಿಸುತ್ತವೆ. ಆದರೆ ಈ ಕಥೆಗಳೆಲ್ಲ ಅನೇಕ ಮೂಲ ವ್ಯತ್ಯಾಸಗಳೊಡನೆ ಕೇವಲ 12 ಮತ್ತು ಅನಂತರದ ಶತಮಾನಗಳಲ್ಲಷ್ಟೇ ಕಂಡುಬರುವುದರಿಂದ ಇವೆಲ್ಲ ಹೊಯ್ಸಳರು ರಾಜ್ಯ ಸಾಧಿಸಿದ ಮೇಲೆ ಆ ವಂಶದ ಹೆಸರನ್ನು ವಿವರಿಸಲು ಹುಟ್ಟಿಕೊಂಡ ಕಟ್ಟು ಕಥೆಗಳೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದ್ಯನೆಂದು ಹೇಳುವ ಸಳ ಐತಿಹಾಸಿಕ ವ್ಯಕ್ತಿ ಎಂಬುದು ಸಹ ಅನುಮಾನಾಸ್ಪದ. ಆದರೆ ಹೊಯ್ಸಳರು ಮೊದಲಿಗೆ ರಾಜ್ಯ ಸ್ಥಾಪನೆ ಮಾಡಿದ ಈಗಿನ ಅಂಗಡಿ ಗ್ರಾಮ ದಟ್ಟಡವಿಯಿಂದ ಕೂಡಿದ್ದು, ಒಬ್ಬ ಯುವಕ ಹುಲಿಯನ್ನು ಎದುರಿಸಿ ಕೊಂದಿರುವುದು ಅಸಂಭವವಲ್ಲ. ಇಂತಹ ಪ್ರಕರಣ ಬೇಲೂರು ನಾಯಕರ ಕಾಲದಲ್ಲೂ ಈ

ಮಲೆನಾಡಿನಲ್ಲಿ ನಡೆದಿದ್ದು, ಹುಲಿ ಕೊಂದವನು ರಾಜನ ಪ್ರಶಂಸೆಗೆ ಪಾತ್ರನಾದುದು ಆ ಕಾಲದ ಶಾಸನವೊಂದರಿಂದ ತಿಳಿದುಬರುತ್ತದೆ.[54]

ಹೊಯ್ಸಳರ ಶಾಸನಗಳಲ್ಲಿ ಆದ್ಯ ಸಳನಿಗೂ ಅಂಗಡಿಯ ವಾಸಂತಿಕಾದೇವಿಗೂ ಸಂಬಂಧವನ್ನು ಹೇಳಿರುವುದರಿಂದ ಮತ್ತು ಅತಿ ಪ್ರಾಚೀನ ಶಾಸನಗಳೆಲ್ಲ ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳಲ್ಲೇ ದೊರೆಯುವುದರಿಂದ ಇವರು ಮೂಲತಃ ಮಲೆನಾಡಿನವರು ಎಂದು ಸುಲಭವಾಗಿ ಊಹಿಸಬಹುದು. ಮೊದಮೊದಲು ಅಲ್ಲಿದ್ದ ಇತರ ತುಂಡು ರಾಜರ ಮೇಲೆ ವಿಜಯಗಳಿಸಿ ಇವರು ಪ್ರಸಿದ್ಧಿಗೆ ಬಂದಿರಬೇಕೆಂದು ಮಲೆವರ ಮಾರಿ, ಮಲೆಪರೊಳ್‌ಗೊಂಡ ಮುಂತಾದ ಇವರ ಬಿರುದುಗಳು ತೋರಿಸುತ್ತವೆ.[55] ಇತ್ತೀಚಿನ ಚಿಕ್ಕಮಗಳೂರು ಪಟ್ಟಣದ ಸಮೀಪದ ಉಪ್ಪಳ್ಳಿ ಅಥವಾ ಉಪ್ಪವಳ್ಳಿಯಲ್ಲಿ ದೊರೆತ ಶಾಸನವನ್ನು ಶಾಸನತಜ್ಞ ಎಚ್.ಎಂ.ನಾಗರಾಜರಾವ್‌ರವರು ಪ್ರಚುರಪಡಿಸಿದ್ದಾರೆ. ಈ ಶಾಸನವನ್ನು ಕ್ರಿ.ಶ.1136ರಲ್ಲಿ ವಿಷ್ಣುವರ್ಧನನ ಕಾಲದಲ್ಲಿ ಹಾಕಿಸಿದ್ದರೂ ಅದರಲ್ಲಿ ಕ್ರಿ.ಶ.1083ರಲ್ಲಿ ಎರಡನೆಯ ವಿನಯಾದಿತ್ಯನ ಕಾಲದಲ್ಲಿ ಹಾಕಿಸಿದ್ದ ಶಾಸನದ ಮೂಲ ಪಾಠದ ಭಾಗವೂ ಇದೆ.[56]

ಇದು ಇದುವರೆಗೆ ತಿಳಿಯದಿದ್ದ ಹೊಯ್ಸಳ ರಾಜರ ಸ್ಪಷ್ಟ ಚಿತ್ರಣ ನೀಡುತ್ತದೆ. ಆ ಪ್ರಕಾರ ಮಾರಪೊಯ್ಸಳ ದೇವ, ಉಪ್ಪಿಡಿಪೊಯ್ಸಳ, ಎರೆಯಂಗಪೊಯ್ಸಳ, ತಳೆಕಾಡುಪೊಯ್ಸಳ, ಉದಿಯಾದಿತ್ಯ, ಕುಂಟ ವಿನಯಾದಿತ್ಯ, ನೃಪಕಾಮ ಹಿರಿಯ ಪೊಯ್ಸಳದೇವ. ಇವರು ವಿಜಯಾದಿತ್ಯನಿಗಿಂತ ಮೊದಲು ಆಳಿದ ರಾಜರು. ಮೂಡಿಗೆರೆ ತಾಲ್ಲೂಕಿನ ಕೆಸೆಪೊಳಲು ಗ್ರಾಮದಲ್ಲಿ ಒಂದು ಹೊಸ ಶಾಸನ ದೊರೆತಿದ್ದು ಅದನ್ನು ಡಿ.ಎಸ್‌ಜಯಪ್ಪಗೌಡ ಪ್ರಚುರಪಡಿಸಿದ್ದು ಎಪಿಗ್ರಾಫಿಯ ಕರ್ನಾಟಿಕದ ಹನ್ನೊಂದನೆಯ ಸಂಪುಟದಲ್ಲಿ ಬೆಳಕುಕಂಡಿದೆ. ಇದರಲ್ಲಿ ಚಾಳುಕ್ಯರ ನಾಲ್ಕನೆಯ ವಿಕ್ರಮಾದಿತ್ಯನ ಮಗ ಶೋಭನರಸ ಅಥವಾ ಶೋಭನಯ್ಯಾ ಸೊಸೆವೂರ ಅಂದರೆ ಈಗಿನ ಅಂಗಡಿ ಗ್ರಾಮದಲ್ಲಿ ಆಳುತ್ತಿದ್ದ ಹೊಯ್ಸಳರಲ್ಲಿ ಸಂಧಿವಿಗ್ರಹಿಯಾಗಿದ್ದದ್ದು ತಿಳಿದುಬರುತ್ತದೆ.

ಚಾಳುಕ್ಯರ ಎರಡನೆಯ ತೈಲಪ ಕ್ರಿ.ಶ.973ರಲ್ಲಿ ರಾಷ್ಟ್ರಕೂಟರನ್ನು ಸೋಲಿಸಿ ಸಾಮ್ರಾಜ್ಯ ಸ್ಥಾಪಿಸಿದಾಗ ಆತನಿಗೆ ಚೋಳರ ವಿರುದ್ಧ ಹೊಯ್ಸಳರ ಬೆಂಬಲ ಬೇಕಾಗಿತ್ತು. ಅವನು ಸಹೋದರ ಶೋಭನರಸನನನ್ನು ಹೊಯ್ಸಳ ರಾಜ್ಯಕ್ಕೆ ರಾಜತಾಂತ್ರಿಕ ಪ್ರತಿನಿಧಿಯಾಗಿ ಕಳುಹಿಸಿದ್ದ. ಈ ಶೋಭನರಸ ಕ್ರಿ.ಶ.980ರ ದಶಕದಲ್ಲಿ ಬನವಾಸಿ ಪ್ರಾಂತ್ಯದಲ್ಲಿ ಮಹಾಮಂಡಲೇಶ್ವರನಾಗಿದ್ದದ್ದು ಶಾಸನಗಳಿಂದ ತಿಳಿದುಬರುತ್ತದೆ. ಇದರಿಂದಲೂ ಹೊಯ್ಸಳರ ಹತ್ತನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ದೃಢವಾಗಿ ಮಲೆನಾಡಿನ ಈ ಭಾಗದಲ್ಲಿ ಚಿಕ್ಕ

ರಾಜ್ಯದ ಅಧಿಪತಿಗಳಾಗಿದ್ದದ್ದು ಸ್ಪಷ್ಟಪಡುತ್ತದೆ. ಸು.ಕ್ರಿ.ಶ.978ರಲ್ಲಿ ರಚಿತವಾದ ಚಾವುಂಡರಾಯ ಪುರಾಣದಲ್ಲಿ ಪ್ರಬಲನಾಗಿದ್ದ ಹೊಯ್ಸಳ ರಾಜನ ಕೂಟವನ್ನು ಮಾರಸಿಂಹ ಸೋಲಿಸಿದ ಬಗ್ಗೆ ಪ್ರಸ್ತಾಪವಿದೆ. ಇದು ಈ ದೃಷ್ಟಿಗೆ ಸಮರ್ಥನೆ ಒದಗಿಸುತ್ತದೆ.

ಇತಿಹಾಸಕಾರರು ಕ್ರಿ.ಶ.1006ರ[57] ತಿರುಮಕೂಡಲು ನರಸೀಪುರ ತಾಲ್ಲೂಕಿನ ಕಲಿಯೂರು ಶಾಸನದ ಆಧಾರದ ಮೇಲೆ ಹತ್ತನೆಯ ಶತಮಾನದ ಕೊನೆಯ ಹೊತ್ತಿಗೆ ಹೊಯ್ಸಳರು ಆಗತಾನೇ ಚೋಳರ ದಾಳಿಯಿಂದ ಕಣ್ಮರೆಯಾಗಿದ್ದ ತಲಕಾಡಿನ ಗಂಗರ ಸಾಮ್ರಾಜ್ಯದ ಒಂದು ಭಾಗದಲ್ಲಿ ತಲೆ ಎತ್ತಿದರೆಂದು ಭಾವಿಸಿದ್ದು, ಆದರೆ ಪೂರ್ವೋಕ್ತ ಶಾಸನಗಳಲ್ಲದೆ ಮೂಡಿಗೆರೆ ತಾಲ್ಲೂಕಿನ ಅಂಗಡಿ ಮತ್ತು ಉಗ್ಗೇಹಳ್ಳಿಗಳಲ್ಲಿ ದೊರೆತಿರುವ ಶಾಸನಗಳು ಹಾಗೂ ಬೇಲೂರು ತಾಲ್ಲೂಕಿನ ತೊಳಲು ಗ್ರಾಮದ ಒಂದು ವೀರಗಲ್ಲು ಹೊಯ್ಸಳ ಮಾರೆಯ, ಮಾರನೃಪತಿ ಮತ್ತು ಕಾಮವೊಯ್ಸಳರ ಬಗ್ಗೆ ಮಾಹಿತಿ ನೀಡುತ್ತವೆ. ಈ ಎಲ್ಲ ಹೆಸರುಗಳು ಒಂದೇ ವ್ಯಕ್ತಿಯದೋ ಅಲ್ಲವೋ ಎಂಬ ಬಗ್ಗೆ ಹೆಚ್ಚಿನ ಪರೀಶಿಲನೆಯ ಅಗತ್ಯವಿದೆ. ಚಿಕ್ಕಮಗಳೂರು ತಾಲ್ಲೂಕು ಉಪ್ಪವಳ್ಳಿಯ ಒಂದನೆಯ ವಿನಯಾದಿತ್ಯನ ಶಾಸನ ಕ್ರಿ.ಶ.1012ಕ್ಕೆ ಸೇರಿದ್ದು, ಆದರೆ ಒಂದನೆಯ ವಿನಯಾದಿತ್ಯ ಇರಲೇ ಇಲ್ಲ ಎಂಬ ಕಲ್ಪನೆಯ ಮೇರೆಗೆ ಶಾಸನತಜ್ಞರು ಈ ಶಾಸನದ ಕಾಲವನ್ನು 60ವರ್ಷ ಮುಂದೂಡಿದ್ದರು. ಈಗ ಬೆಳಕಿಗೆ ಬಂದಿರುವ ಆಧಾರಗಳ ಮೇಲೆ 1ನೇ ವಿನಯಾದಿತ್ಯ ಇದ್ದ ಬಗ್ಗೆ ಸ್ಪಷ್ಟಪಡುತ್ತದೆ ಹಾಗೂ ಹೊಯ್ಸಳರಲ್ಲಿ ಅನೇಕ ಪ್ರಾರಂಭದ ಅರಸರು ಆಳಿದ್ದಾರೆ ಎಂದು ತಿಳಿದುಬರುತ್ತದೆ. ಗಂಗರ ಸಮಕಾಲೀನನಾಗಿ ಆಳಿದ ಕಾಮವೊಯ್ಸಳ ರಾಜಮಲ್ಲ ಪೆರ್ಮಾಡಿ ಎಂದು ಬಿರುದು ಧರಿಸಿದ್ದು, ರಕ್ಕಸಗಂಗ ಎಂಬ ಬಿರುದನ್ನೂ ಈ ವಂಶದ ರಾಜರು ಧರಿಸಿದ್ದು ತಿಳಿದುಬಂದಿದೆ. ಇದರಿಂದ ಹೊಯ್ಸಳ ಮನೆತನ ಪ್ರಾರಂಭದ ಅರಸರು ತಲಕಾಡಿನ ಗಂಗ ಮನೆತನದೊಂದಿಗೆ ನಿಕಟ ಸಂಬಂಧ ಹೊಂದಿದ್ದುದು ಸ್ಪಷ್ಟವಾಗುತ್ತದೆ.[58]

ಕಲಿಯೂರು ಕದನ ಹೊಯ್ಸಳರ ಇತಿಹಾಸದಲ್ಲಿ ಮೈಲಿಗಲ್ಲಾಯಿತು. ಅವರು ಆಗತಾನೇ(ಕ್ರಿ.ಶ.1004) ಗಂಗವಾಡಿಯ ಮೇಲೆ ಅಧಿಪತ್ಯ ಸ್ಥಾಪಿಸಿದ್ದ ಚೋಳರನ್ನು ಎದುರಿಸಿದ್ದರು. ಹೊಯ್ಸಳ ರಾಜನ ನೇತೃತ್ವದಲ್ಲಿ ನಡೆದ ಈ ಯುದ್ಧದಲ್ಲಿ ದಕ್ಷಿಣಕರ್ನಾಟಕದ ಅನೇಕ ತುಂಡರಸರು ಪಾಲ್ಗೊಂಡಿದ್ದರು. ಇದರಿಂದಾಗಿ ಯುದ್ಧದಲ್ಲಿ ಈ ಮೈತ್ರಿಕೂಟ ಸೋತರೂ ಚೋಳರ ವಿಸ್ತರಣಾ ಆಕಾಂಕ್ಷೆಗೆ ದೊಡ್ಡ ಪೆಟ್ಟುಬಿದ್ದಿತು. ಚಾಳುಕ್ಯರಿಗೆ ಸಾಮ್ರಾಜ್ಯ ಭದ್ರಪಡಿಸಲು ಇದು ಪ್ರೋತ್ಸಾಹದಾಯಕವಾಯಿತು.

**ನೃಪಕಾಮ**:- ಹೊಯ್ಸಳರ ಪ್ರಥಮ ಪ್ರಮುಖ ದೊರೆ ಎನಿಸಿದ ಇವನ ಕಾಲವನ್ನು ಸುಮಾರು ಕ್ರಿ.ಶ.1020-45 ಎಂದು ನಿರ್ಧರಿಸಲಾಗಿದೆ.[59] ಹಾಸನ ಜಿಲ್ಲೆ ಮತ್ತು ಸುತ್ತಲ ಪ್ರದೇಶಗಳು ಮಾತ್ರ ಇವನ ಆಳ್ವಿಕೆಗೆ ಒಳಪಟ್ಟಿರಬೇಕು ಎಂದು ಇವನ ಶಾಸನಗಳ ಸೀಮಿತ ವ್ಯಾಪ್ತಿಯಿಂದ ತಿಳಿಯಬಹುದು. ಆದರೆ ತನ್ನ ಕಿರುರಾಜ್ಯ ಕಾಲದಲ್ಲಿ ಚೋಳಾಶ್ರಿತರಾದ ಕೊಂಗಾಳ್ವರನ್ನು ಎದುರಿಸಿದ್ದಲ್ಲದೆ (ಕ್ರಿ.ಶ.1022-1026) ಯಾವುದೋ ಸಂದರ್ಭದಲ್ಲಿ ಬನವಾಸಿಯ ಮೇಲೆ ನಡೆದ (ಕ್ರಿ.ಶ.1027) ಧಾಳಿಯನ್ನು ಎದುರಿಸಲು ಅಲ್ಲಿಯ ಅರಸರಿಗೆ ಸಹಾಯ ಮಾಡಿದ. ಅಂದರೆ ಈ ಕಾಲದಲ್ಲಿ ಹೊಯ್ಸಳರ ಪ್ರಭಾವ ಏರುಗತಿಯಲ್ಲಿದ್ದಿತೆಂದು ಊಹಿಸಲು ಅವಕಾಶವಿದೆ.

**ವಿನಯಾದಿತ್ಯ**:-ಮುಂದಿನ ದೊರೆ 2ನೆಯ ವಿನಯಾದಿತ್ಯನಿಗೂ (ಸುಮಾರು ಕ್ರಿ.ಶ.1045-98) ನೃಪಕಾಮನಿಗೂ ಸಂಬಂಧವೇನೆಂದು ಸ್ಪಷ್ಟವಾಗಿಲ್ಲ. ಆದರೆ ಆನಂತರದ ಕೆಲವು ಶಾಸನಗಳ ಆಧಾರದಿಂದ ಇವರು ತಂದೆ-ಮಕ್ಕಳಿರಬೇಕೆಂದು ಊಹಿಸುವ ಸಾಧ್ಯತೆ ಇದೆ. ಹೊಯ್ಸಳ ವಿನಯಾದಿತ್ಯನನ್ನೇ ವಂಶಾದ್ಯನಾಗಿ ವಿವರಿಸುತ್ತವೆಯಾದ್ದರಿಂದ ಪ್ರಾಯಶಃ ಇವನ ಕಾಲದಲ್ಲಿ ಹೊಯ್ಸಳ ರಾಜ್ಯ ನೃಪಕಾಮನ ಪಾಳೆಯಗಾರಿಕೆ ಸ್ಥಿತಿಯನ್ನು ಮೀರಿ, ಮೊದಲಿಗೆ ಸ್ಪಷ್ಟ ರಾಜಕೀಯ ಶಕ್ತಿಯಾಗಿ ರೂಪುಗೊಂಡಿರಬೇಕು. ಎರಡನೆಯ ವಿನಯಾದಿತ್ಯರ ಆಳ್ವಿಕೆ ಹಾಸನ, ಚಿಕ್ಕಮಗಳೂರು ಜಿಲ್ಲೆಗಳನ್ನೂ ಮೀರಿ ಸುತ್ತಣ ತುಮಕೂರು ಮತ್ತು ಮೈಸೂರು ಜಿಲ್ಲೆಗಳ ಭಾಗಗಳಿಗೂ ಹಬ್ಬಿದ್ದಿತು. ಒಂದು ಶಾಸನದ ಪ್ರಕಾರ ವಿನಯಾದಿತ್ಯನ ಕಾಲದಲ್ಲಿ ಹೊಯ್ಸಳ ರಾಜ್ಯಕ್ಕೆ ಕೊಂಕಣ, ಆಳ್ವಖೇಡ, ವೈನಾಡು ಮತ್ತು ತಲಕಾಡು ಗಡಿ ಪ್ರದೇಶಗಳಾಗಿದ್ದವು. ಆಗಿನ ದಕ್ಷಿಣಭಾರತದ ಪ್ರಭಾವಿ ರಾಜಕೀಯ ಶಕ್ತಿಗಳಾಗಿದ್ದ ಚಾಳುಕ್ಯ ಮತ್ತು ಚೋಳರ ರಾಜ್ಯಗಳ ನಡುವೆ ಇವನು ಆಳಬೇಕಾದ್ದರಿಂದ ಈತ ತನ್ನ ನಡೆಯಲ್ಲಿ ಬಹಳ ಜಾಗರೂಕತೆಯನ್ನು ವಹಿಸಬೇಕಾಗಿತ್ತು, ಹಳೆಯ ಗಂಗವಾಡಿಯ ಭಾಗಗಳನ್ನು ಇವನು ಆಳುತ್ತಿದ್ದುದರಿಂದ ಸ್ಥಳೀಯರೊಡನೆ ಇವನ ಸಂಬಂಧ ನಿಕಟವಾಗಿದ್ದು ಚೋಳರೊಡನೆ ಸ್ನೇಹ ಬೆಳೆಸುವ ಸಾಧ್ಯತೆಯೇ ಇರಲಿಲ್ಲವಾಗಿ ತನ್ನ ಅಧಿಕಾರ ಭದ್ರತೆಗಾಗಿ ಚಾಲುಕ್ಯರೊಡನೆ ರಕ್ತಸಂಬಂಧ ಮತ್ತು ರಾಜಕೀಯ ಬಾಂಧವ್ಯವನ್ನು ಬೆಳಸಿ, ಹೊಯ್ಸಳರ ಮೂಲೋದ್ದೇಶವಾದ ಚೋಳರ ಉಚ್ಚಾಟನೆಗಾಗಿ ಶಕ್ತಿ ಸಂಚಯ ಮಾಡಿಕೊಳ್ಳಲಾರಂಭಿಸಿದ ಉದ್ದೇಶ ಸ್ಪಷ್ಟವಾಗಿದ್ದರೂ ಇನ್ನೂ ತಾನಿದ್ದ ಅಬಲ ಸ್ಥಿತಿಯಲ್ಲಿ ಚೋಳರ ಮೇಲೆ ಬೀಳುವುದು ಅಪಾಯಕರವೆಂದು ವಿನಯಾದಿತ್ಯ ಅರಿತಿರಬೇಕು. ಇವನ ಅರ್ಧ ಶತಮಾನಕ್ಕೆ ಹೆಚ್ಚಿನ ಆಳ್ವಿಕೆಯಲ್ಲಿಯೂ ಅವರೊಡನೆ ನೇರವಾಗಿ ಸೆಣಸಿಲ್ಲದಿರುವುದಕ್ಕೆ ಇದೇ ಕಾರಣ. ಆದರೆ ಚಾಳುಕ್ಯ 2ನೆಯ ಸೋಮೇಶ್ವರ ಮತ್ತು 6ನೆಯ ವಿಕ್ರಮಾದಿತ್ಯರೊಡನೆ ಉತ್ತಮ ಬಾಂಧವ್ಯವನ್ನು ಸಾಧಿಸಿಕೊಂಡು ತನ್ನ ಮಗ

ಎರೆಯಂಗನನ್ನೂ ಮೊಮ್ಮಕ್ಕಳಾದ 1ನೆಯಬಲ್ಲಾಳ, ವಿಷ್ಣುವರ್ಧನನ್ನೂ ಚಾಳುಕ್ಯರ ದಂಡೆಯಾತ್ರೆಗಳಲ್ಲಿ ಪಾಲ್ಗೊಳ್ಳುವಂತೆ ಮಾಡಿ ಮೇಲ್ಪಟ್ಟದ್ದ ರಾಜಕೀಯ ಮತ್ತು ಯುದ್ಧತಂತ್ರಗಳಲ್ಲಿ ಅವರನ್ನು ನಿಷ್ಣಾತರಾಗುವಂತೆ ಮಾಡಿದಲ್ಲದೆ ಚಾಳುಕ್ಯರ ಬೆಂಬಲವನ್ನೂ ಗಳಸಿಕೊಂಡ. ಈ ರಾಜಕೀಯ ಮುತ್ಸದ್ದಿತನ ಮುಂದೆ ಹಲವೇ ವರ್ಷಗಳಲ್ಲಿ ಫಲ ನೀಡಿತು. ಚೋಳರ ಉಚ್ಚಾಟನೆ, ಹೊಯ್ಸಳರ ಬೃಹತ್ ಸಾಮ್ರಾಜ್ಯ ಸ್ಥಾಪನೆ ನೆರವೇರಿತು ವಿನಯಾದಿತ್ಯನ ಆನಂತರ ಪಟ್ಟಕ್ಕೆ ಬಂದ ಅವನ ಮಗ ಎರೆಯಂಗನ ಆಳ್ವಿಕೆಯ ಕಾಲ (ಸು.ಕ್ರಿ.ಶ.1098-1100) ಗಮನಾರ್ಹವಾದುದೇನಲ್ಲ. ಈ ಕಾಲಕ್ಕಾಗಲೇ ಇವನ ಮಕ್ಕಳಾದ 1ನೆಯ ಬಲ್ಲಾಳ, ವಿಷ್ಣುವರ್ಧನರು ರಾಜಕೀಯ ಕ್ಷೇತ್ರದಲ್ಲಿ ಸಮರ್ಥರಾಗಿದ್ದರು.[60]

**1ನೇ ಬಲ್ಲಾಳ**(ಸು.ಕ್ರಿ.ಶ.1100-1108): ಈತನ ಆಳ್ವಿಕೆಯ ಕಾಲದಲ್ಲಿ ಹೊಯ್ಸಳ ಇತಿಹಾಸದಲ್ಲಿ ಒಂದು ಮುಖ್ಯ ತಿರುವು ಕಂಡುಬರುತ್ತದೆ. ಈ ಹಿಂದಿನ ದೊರೆಗಳಂತೆ ಈತನೂ ತ್ರಿಭುವನಮಲ್ಲ ಎಂಬ ಬಿರುದನ್ನು ಧರಿಸಿ ಚಾಳುಕ್ಯ ಸಾಮಂತತ್ವವನ್ನು ಒಪ್ಪಿಕೊಂಡಿದ್ದರೂ ಪ್ರಾಯಶಃ ಚಾಳುಕ್ಯ ವಿಕ್ರಮಾದಿತ್ಯನ ತಪ್ಪು ನಡೆಯಿಂದಾಗಿ ಅವನ ಮಿತ್ರ ಸಾಮಂತ ಹೊಯ್ಸಳರ ಮೇಲೆರಗಿ ಬಂದು ಚಾಳುಕ್ಯ-ಹೊಯ್ಸಳ ಸಂಬಂಧವನ್ನು ಕಲಕಿದೆ. ಈ ಸಂದರ್ಭದಲ್ಲಿ ಶೌರ್ಯದಿಂದ ಹೋರಾಡಿ ವಿಜಯಿಗಳಾದ ಬಲ್ಲಾಳ-ವಿಷ್ಣುವರ್ಧನರಲ್ಲಿ ಹೊಸ ಧೈರ್ಯ, ಹುಮ್ಮಸ್ಸು ಬೆಳೆದುಬಂದು ಸುತ್ತಣ ಚೆಂಗಾಳ್ವ, ಆಳೂಪ ರಾಜ್ಯಗಳನ್ನೇ ಅಲ್ಲದೆ ಚಾಳುಕ್ಯರ ಸಾಮಂತರಾದ ಉಚ್ಚಂಗಿಯ ಪಾಂಡ್ಯರ ಮೇಲೂ ಜಯಗಳಿಸಿದರು.[61] ಇದು ಮಂಡಲೇಶ್ವರರಾಗಿದ್ದ ಹೊಯ್ಸಳರು ಸ್ವತಂತ್ರ್ಯ ರಾಜ್ಯವನ್ನು ಸಾಧಿಸುವತ್ತ ಇಟ್ಟ ಮೊದಲ ಹೆಜ್ಜೆ ಎಂದು ಗುರುತಿಸಬಹುದು.

ವಿಷ್ಣುವರ್ಧನನ 34ವರ್ಷಗಳ ಆಳ್ವಿಕೆ (ಸು.ಕ್ರಿ.ಶ.1108-52) ಹೊಯ್ಸಳ ಇತಿಹಾಸದಲ್ಲಿ ಮಹತ್ವಪೂರ್ಣವಾದುದು. ಚಿಕ್ಕ ಹೊಯ್ಸಳ ರಾಜ್ಯ ಸಾಮ್ರಾಜ್ಯ ಪದವನ್ನು ರೂಢಿಸಿಕೊಂಡಿದ್ದು ಈ ಕಾಲದಲ್ಲಿ ವಿಷ್ಣುವರ್ಧನ ತಾನು ಪಟ್ಟವೇರುವ ಮೊದಲೇ ತಂದೆ ಎರೆಯಂಗ ಮತ್ತು ಅಣ್ಣ ಬಲ್ಲಾಳರ ಕಾಲದಲ್ಲಿ ಯುದ್ಧ ಮತ್ತು ರಾಜ್ಯಾಡಳಿತದಲ್ಲಿ ಭಾಗಿಯಾಗಿದ್ದು, ಅಪಾರ ಪ್ರದೇಶದ ಶೂರ ಯೋಧರನ್ನು ಕಲೆಹಾಕಿ, ಗಂಗವಾಡಿಯನ್ನು ಪರಕೀಯರ ಆಳ್ವಿಕೆಯಿಂದ ಮುಕ್ತಗೊಳಿಸಿ, ಹೊಯ್ಸಳ ರಾಜ್ಯವನ್ನು ಚಾಳುಕ್ಯಾಧೀನತ್ವದಿಂದ ಪಾರು ಮಾಡುವ ಎರಡು ಗುರಿಗಳನ್ನಿಟ್ಟುಕೊಂಡು ಕಾರ್ಯಾರಂಭ ಮಾಡಿದ. ಚೋಳರೂ ಚಾಳುಕ್ಯರೂ ಪ್ರಬಲ ಸಾಮ್ರಾಟರಾದ್ದರಿಂದ ಅವರನ್ನು ಮೊದಲು ಎದುರಿಸುವುದು ಆತ್ಮಘಾತಕವಾದೀತೆಂದು ಭಾವಿಸಿ, ತನ್ನ ರಾಜ್ಯಾಡಳಿತದ ಆರಂಭದಲ್ಲಿ ಮೊದಲಿಗೆ ರಾಜ್ಯದ ಸುತ್ತಲಿದ್ದ ಚಿಕ್ಕ ಪುಟ್ಟ ತುಂಡರಸರನ್ನು ಮೆಟ್ಟಿ ತನ್ನ ಸೈನ್ಯ ಬಲ ಹಾಗೂ ಕೋಶವನ್ನು ವೃದ್ಧಿಸಿಕೊಂಡ. ಈ ಕಾರ್ಯಾಚರಣೆಯಲ್ಲಿ

ಚೆಂಗಾಳ್ವ ಕೊಂಗಾಳ್ವರೂ ಆಳೂಪರೂ ಪ್ರಾಯಶಃ ಉಚ್ಚಂಗಿಯ ಪಾಂಡ್ಯರೂ ಪೆಟ್ಟು ತಿಂದರು. ಇವರುಗಳ ಮೇಲೆ ಗಳಿಸಿದ ಜಯ ವಿಷ್ಣುವರ್ಧನನಿಗೆ ಹೆಚ್ಚು ಕೆಚ್ಚನ್ನು ಒದಗಿಸಿತು. ಕುಲೋತ್ತುಂಗ ಚೋಳನು ವೆಂಗಿಯ ರಾಜಕೀಯದಲ್ಲಿ ಮಗ್ನನಾಗಿದ್ದ ಸುಸಂದರ್ಭವನ್ನು ಉಪಯೋಗಿಸಿಕೊಂಡು ತಲಕಾಡಿನ ಮೇಲೆ ಧಾಳಿ ಮಾಡಿ (ಕ್ರಿ.ಶ.1116) ಅಲ್ಲಿದ್ದ ಅದಿಯಮನೆಂಬ[62] ಚೋಳ ಪ್ರತಿನಿಧಿಯನ್ನೂ ಇನ್ನಿತರ ಚೋಳಾಧಿಕಾರಿಗಳನ್ನೂ ಓಡಿಸಿ ತಲಕಾಡನ್ನು ವಶಪಡಿಸಿಕೊಂಡದ್ದೇ, ಅಲ್ಲದೇ ಅದೇ ಭರದಲ್ಲಿ ಅವರುಗಳನ್ನು ಅಟ್ಟಿಸಿಕೊಂಡು ಘಟ್ಟದ ಮೇಲೆ ಈಗಿನ ಕೋಲಾರ, ಬೆಂಗಳೂರು ಜಿಲ್ಲೆಯ ಪ್ರದೇಶಗಳು ಹಾಗೂ ಘಟ್ಟದ ಕೆಳಗಿನ ಕೊಯಮತ್ತೂರು, ಸೇಲಂ, ಧರ್ಮಪುರಿ, ಉತ್ತರ ಆರ್ಕಾಟು ಜಿಲ್ಲೆಗಳ ಭಾಗಗಳ ಮೇಲೂ ದಾಳಿ ಮಾಡಿ, ಪ್ರಾಯಶಃ ಕಾಂಚೀಪುರದವರೆಗೂ ಮುನ್ನಡೆದ.

ಇದೇ ಹುರುಪಿನಲ್ಲೇ ಉಚ್ಚಂಗಿಯ ಪಾಂಡ್ಯರನ್ನೂ ಸೋಲಿಸಿದ. ಒಂದು ಚಿಕ್ಕ ಅಧೀನ ರಾಜ್ಯದ ಚಿಕ್ಕ ಅರಸನೊಬ್ಬ ಬೃಹತ್ ಚೋಳ ಸಾಮ್ರಾಟನ ಮೇಲೆ ಜಯಗಳಿಸಿದುದು ನಿಜಕ್ಕೂ ಮಹತ್ತ್ವದ ಸಂಗತಿ. ಈ ಎಲ್ಲ ಸಾಧನೆಗಳಿಂದ ಕ್ರಿ.ಶ.1117ರ ಒಂದು ಶಾಸನ ವಿವರಿಸುವಂತೆ ದಕ್ಷಿಣದಲ್ಲಿ ಚೀರಮನ ಮಲೆ, ಕೊಂಗು ವಿಷಯದಿಂದ ಹಿಡಿದು (ನೀಲಗಿರಿ, ಕೊಯಮತ್ತೂರು ಭಾಗಗಳು) ಉತ್ತರದಲ್ಲಿ ಸಾವಿಮಲೆಯ (ಸಂಡೂರು ಬಳ್ಳಾರಿ ಜಿಲ್ಲೆ)ವರೆಗೂ, ಪೂರ್ವದಲ್ಲಿ ಸಂಗಲಿಘಟ್ಟದಿಂದ (ಕೋಲಾರ ಜಿಲ್ಲೆ ಮುಳಬಾಗಿಲು ಬಳಿಯ ನಂಗಲಿ) ಪಶ್ಚಿಮದಲ್ಲಿ ಬಾರಕನೂರು ಘಟ್ಟದ (ಸಹ್ಯಾದ್ರಿಯ ಪಶ್ಚಿಮ ಅಂಚು) ವರೆಗೂ ಹೊಯ್ಸಳ ರಾಜ್ಯ ವಿಸ್ತೃತವಾಯಿತು. ಹಿಂದೆ ಗಂಗರ ಅನೂಚಾನ ಅಧಿಪತ್ಯಕ್ಕೊಳಪಟ್ಟಿದ್ದ ರಾಜ್ಯವೆಲ್ಲ ವಿಷ್ಣುವರ್ಧನನ ಏಕಛತ್ರದಡಿಗೆ ಬಂದು ಹೊಯ್ಸಳರು ಗಂಗವಾಡಿ೯೬೦೦ದ ನಾಯಕರೆಂಬ ಹೇಳಿಕೆಯೂ ಇವನ ವೇರಗಂಗನೆಂಬ ಬಿರುದೂ ಸಫಲವಾದುವು.[63] ಚಾಳುಕ್ಯ 6ನೆಯ ವಿಕ್ರಮಾಧಿತ್ಯ ಮೊದಲಿಗೆ ತನ್ನ ಸಾಮಂತರಾಗಿದ್ದ ಈ ಹೊಯ್ಸಳರ ಏಳ್ಗೆಯನ್ನು ಗಮನಿಸುತ್ತಲೇ ಬಂದಿದ್ದ ಅವನು ತನ್ನ ರಾಜ್ಯದಲ್ಲಿ ದಕ್ಷಿಣದಲ್ಲಿ ಪ್ರಬಲವಾಗುತಿದ್ದುದಲ್ಲದೆ ಹಿಂದೆ ಉಂಟಾದ ಚಾಳುಕ್ಯ-ಹೊಯ್ಸಳ ವಿರಸದಿಂದ ಹೆಚ್ಚು ಕಡಿಮೆ ಸ್ವತಂತ್ರರಂತೆಯೇ ವರ್ತಿಸುತ್ತ, ನಿಷ್ಠಾವಂತ ಚಾಳುಕ್ಯ ಸಾಮಂತರಾಗಿದ್ದ ಉಚ್ಚಂಗಿಯ ಪಾಂಡ್ಯರ ಮೇಲೂ ಹೊಯ್ಸಳರ ಧಾಳಿ ನಡೆದದ್ದನ್ನು ಸಹಿಸಲಿಲ್ಲ. ಕ್ರಿ.ಶ.1118ರಲ್ಲಿ ವಿಷ್ಣುವರ್ಧನನ್ನು ಬಗ್ಗಿಸಲು ಬೃಹತ್ ಸೈನ್ಯವೊಂದನ್ನು ಕಳುಹಿಸಿದಾಗ ಹೊಯ್ಸಳ ದಂಡನಾಯಕರು ಶೌರ್ಯದಿಂದ ಎದುರಿಸಿ ಚಾಳುಕ್ಯ ಬಲವನ್ನು ಹಿಮ್ಮೆಟ್ಟಿಸಿದರು ಚಾಲುಕ್ಯಶೃಂಖಲೆ ಮುರಿಯಿತು[64] ಹೊಯ್ಸಳ ಸಾರ್ವಭೌಮತ್ವ ಸಿದ್ಧವಾಯಿತು. ಮುಂದಿನ ವರ್ಷಗಳಲ್ಲಿ ವಿಷ್ಣುವರ್ಧನ ತಾನು ಗಳಿಸಿದ ನಾಡಿನ ಸುವ್ಯವಸ್ಥೆಗೆ ಗಮನಕೊಟ್ಟುದಲ್ಲದೆ ಅವಕಾಶ ಒದಗಿದಾಗ ಚಾಳುಕ್ಯ ರಾಜ್ಯದ ಒಳಕ್ಕೂ ತನ್ನ ಅಧಿಪತ್ಯವನ್ನು

ವಿಸ್ತರಿಸಲು ಯತ್ನಿಸಿದ. ಈ ಕೆಲಸ ಸುಲಭ ಸಾಧ್ಯವಾಗಿರಲಿಲ್ಲ. ಆತ ಪ್ರತಿ ಹೆಜ್ಜೆಯಲ್ಲೂ ಚಾಳುಕ್ಯರು ಮತ್ತು ಅರೆನಿಷ್ಠ ಸಾಮಂತರೊಡನೆ ಸತತ ಹೋರಾಟ ನಡೆಸಬೇಕಾಯಿತು. 6ನೆಯ ವಿಕ್ರಮಾದಿತ್ಯನ ಆನಂತರ ಬಂದ ಭೂಲೋಕಮಲ್ಲ ಅಷ್ಟೇನೂ ಶಕ್ತನಾಗಿರಲಿಲ್ಲವಾಗಿದ್ದರಿಂದ ಅವನ ರಾಜ್ಯದಲ್ಲೇ ಸ್ವಹಿತ ಸಾಧಕರು ಬೆಳೆದಿದ್ದು, ಸ್ವಲ್ಪಮಟ್ಟಿಗೆ ವಿಷಮ ಪರಿಸ್ಥಿತಿಯೂ ಇದ್ದಿತಾದ್ದರಿಂದ ವಿಷ್ಣುವರ್ಧನ ಹಲವು ಸಂದರ್ಭಗಳಲ್ಲಿ ಹಾನಗಲ್ಲಿನ ಕದಂಬರು ಮೊದಲಾದವರನ್ನು ಸೋಲಿಸಿ ಕೃಷ್ಣಾ ನದಿಯವರೆಗೂ ಮುನ್ನಡೆದನಲ್ಲದೆ ತನ್ನ ಆಳ್ವಿಕೆಯ ಕೊನೆಯ ಘಟ್ಟದಲ್ಲಿ ಬೆಳ್ವಾಲ ಪ್ರಾಂತ್ಯವೆನ್ನೆಲ್ಲ ಆಕ್ರಮಿಸಿ ಬಂಕಾಪುರವನ್ನು ನೆಲೆವೀಡಾಗಿ ಮಾಡಿಕೊಂಡ. ಪ್ರಾಯಶಃ ಈ ಕಾಲದಲ್ಲಿ ದಕ್ಷಿಣದಲ್ಲಿದ್ದ ಚೋಳರೂ ಬಲಗುಂದಿದ್ದು, ಅತ್ತ ಕಡೆಯಿಂದ ಆಕ್ರಮಣ ಭಯವೂ ಇಲ್ಲದ್ದು ಉತ್ತರದಲ್ಲಿ ಹೊಯ್ಸಳ ರಾಜ್ಯದ ವಿಸ್ತರಣೆಗೆ ಕಾರಣವಾಗಿರಬೇಕು. ವಿಷ್ಣುವರ್ಧನನ ಶೌರ್ಯ ರಾಜಕೀಯ ಮುತ್ಸದ್ದಿತನ, ಇವನ ದಂಡನಾಯಕರು ಮತ್ತು ಸಾಮಂತರ ಅಚಲ ನಿಷ್ಠೆ ಇವುಗಳಿಂದ ಹೊಯ್ಸಳರು ದಕ್ಷಿಣ ಭಾರತದ ರಾಜಕೀಯದ ಚೋಳ ಚಾಳುಕ್ಯರ ಜೊತೆಗೆ ಇನ್ನೊಂದು ಮುಖ್ಯ ಬಲವಾಗಿ ನೆಲೆಗೊಂಡರು.[65]

**ವಿಷ್ಣುವರ್ಧನ**:-ಮೈಸೂರು ಜಿಲ್ಲೆಯಲ್ಲಿ ದೊರೆತಿರುವ ವಿಷ್ಣುವರ್ಧನನ ಶಾಸನಗಳಲ್ಲಿ ಪ್ರಾಚೀನ ಶಾಸನವು ಕ್ರಿ.ಶ.1109-10 ಕಾಲದ್ದಾಗಿದೆ.[66] ಈ ಶಾಸನದಲ್ಲಿ ವಿಷ್ಣುವರ್ಧನನ್ನು 'ಬಿಟ್ಟಿಗ' ಎಂದು ಹೆಸರಿಸಿದ್ದು,ವಿಷ್ಣುವರ್ಧನನು ಈ ಕಾಲದಲ್ಲಿ ವೈಷ್ಣವ ಧರ್ಮಕ್ಕೆ ಇನ್ನು ಮತಾಂತರ ವಾಗಿರಲಿಲ್ಲವೆಂಬುದನ್ನು ಸ್ಪಷ್ಟಪಡಿಸುತ್ತದೆ. ಇದರಲ್ಲಿ ಬಿಟ್ಟಿಗ ಹಾಗೂ ಆತನ ಸಂಧಿವಿಗ್ರಹಿಯಾದ ಪುಣಿಸಮಯ್ಯನ ನಾಮೊಲ್ಲೇಖಗಳಿದ್ದು, ಬಿಟ್ಟಿಗನ ಆಜ್ಞೆಯ ಮೇರೆಗೆ ಪುಣಿಸಮಯ್ಯನು ಇಲ್ಲಿರುವ ಬಸದಿಯ ಪೂಜಾ ಕೈಂಕರ್ಯಗಳಿಗೆ ಎಣ್ಣೆ ಹಾಗೂ ವಿವಿಧ ಸೇವೆಗಳಿಗಾಗಿ ದಾನಬಿಟ್ಟ ಉಲ್ಲೇಖವಿದೆ. ಈ ಶಾಸನವು ತ್ರುಟಿತಗೊಂಡಿದ್ದು, ಯಾವ ಬಸದಿ ಎಂಬುದು ತಿಳಿದು ಬರುವುದಿಲ್ಲ. ಈ ಶಾಸನವು ಮೈಸೂರು ತಾಲೂಕಿನ ವರಕೂಡು ಗ್ರಾಮದಲ್ಲಿದೆ.

ಕ್ರಿ.ಶ.1116ರ ಶಾಸನವು ಚಾಮರಾಜನಗರ ಜಿಲ್ಲೆಯಲ್ಲಿ ದೊರೆತಿರುವ ವಿಷ್ಣುವರ್ಧನನ 2ನೇ ಪ್ರಾಚೀನ ಶಾಸನವಾಗಿದೆ. ಇದು ಗಂಗವಾಡಿ96,000ದ ದೊರೆ ಬಿಟ್ಟಿಗ ಎಂದು ಹೆಸರಿಸಿದ್ದು. ಈ ಶಾಸನದಿಂದ ಕ್ರಿ.ಶ.1116ರ ವೇಳೆಗೆ ವಿಷ್ಣುವರ್ಧನನ ತಲಕಾಡನ್ನು ಗೆದ್ದಿದ್ದನೆಂಬ ಅಂಶವನ್ನು ಧೃಢಪಡಿಸುತ್ತದೆ.[67] ಕೃಷ್ಣರಾಜನಗರದ ಲಾಳನಹಳ್ಳಿ ಗ್ರಾಮದಲ್ಲಿ ದೊರೆತಿರುವ ಕ್ರಿ.ಶ.1116-17ರ ಶಾಸನವು ಈತನ ಬಿರುದುಗಳಾದ ತ್ರಿಭುವನಮಲ್ಲ,

ತಲಕಾಡುಗೊಂಡ, ಭುಜಬಲವೀರಗಂಗ, ವಿಷ್ಣುವರ್ಧನ, ಬಿಟ್ಟಿಗ, ಹೊಯ್ಸಳದೇವ ರಾಜ್ಯವಾಳುತ್ತಿದ್ದಾನೆ ಎಂದು ನಮೂದಿಸಿದ್ದು, ಬಹುಶಃ ವಿಷ್ಣುವರ್ಧನನು ತಲಕಾಡನ್ನು ಗೆದ್ದ ನಂತರದಲ್ಲಿ ಹೊರಡಿಸಿದ ಶಾಸನವಾಗಿದೆ ಹಾಗೂ ಇದರಲ್ಲಿ ಬಿಟ್ಟಿಗ ಎಂಬ ಹೆಸರಿನ ಮುಂದೆ ವಿಷ್ಣುವರ್ಧನ ಎಂಬ ಹೆಸರು ಸೇರಿರುವುದರಿಂದ ಈ ವೇಳೆಗಾಗಲೆ ವಿಷ್ಣುವರ್ಧನನು ಶ್ರೀರಾಮಾನುಜಚಾರ್ಯರನ್ನು ಭೇಟಿಯಾಗಿ ವೈಷ್ಣವ ಮತದ ಅನುಯಾಯಿಯಾಗಿದ್ದನೆಂಬುದು ಸ್ಪಷ್ಟವಾಗುತ್ತದೆ.[68] ಕ್ರಿ.ಶ.1117ರ ಶಾಸನವು ವಿಷ್ಣುವರ್ಧನನ ಬಹುಮುಖ್ಯ ಶಾಸನವಾಗಿದೆ. ಈ ಶಾಸನವು ನರಸೀಪುರ ತಾಲೂಕಿನಲ್ಲಿದೆ. ಸಂಸ್ಕೃತ ಮತ್ತು ತಮಿಳು ಭಾಷೆಗಳಿಂದ ರಚನೆಯಾಗಿರುವ ಈ ಶಾಸನದಲ್ಲಿ ಸಂಸ್ಕೃತದ 10 ಪದ್ಯಗಳಿವೆ. ಇದು ತಲಕಾಡಿನ ಕೀರ್ತಿನಾರಾಯಣನ ದೇವಾಲಯದ ಅಧಿಷ್ಠಾನದಲ್ಲಿದ್ದು, ಹೊಯ್ಸಳರ ವಿನಯಾದಿತ್ಯನಿಂದ ಆರಂಭಿಸಿ ವಿನಯಾದಿತ್ಯ ಮತ್ತು ಕೆಳೆಯಬ್ಬರಿಸಿಯ ಮಗ ಎರೆಯಂಗ, ಅವನ ಮಗ ವಿಷ್ಣುವರ್ಧನ, ವಿಷ್ಣುವರ್ಧನನ ಹಿರಿಯಮಗ ನರಸಿಂಹ ಮತ್ತು ಆತನಿಗೆ ಏಚಲದೇವಿಯಲ್ಲಿ ಜನಿಸಿದ ಮಗ ಇಮ್ಮಡಿ ಬಲ್ಲಾಳಗಳನ್ನೊಳಗೊಂಡಂತೆ, ಹೊಯ್ಸಳರ ವಂಶಾವಳಿ ಇದರಲ್ಲಿದೆ. ಈ ಶಾಸನದಲ್ಲಿ ವಿಷ್ಣುವರ್ಧನನ್ನು ಮಾಂಡಲೀಕ ನಾರಾಯಣ, ಮಾಂಡಲೀಕ ವೆಟ್ಟೆಕಾರ, ಮಾಂಡಲೀಕ ಚೂಡಾಮಣಿ ಎಂಬ ಬಿರುದುಗಳನ್ನೊಳಗೊಂಡಿದ್ದು, ಈ ರಾಜನು ಶಾಸನೊಕ್ತದಿನದಂದು ತಲಕಾಡನ್ನು ಗೆದ್ದು, ಚೋಳ ದೊರೆ ಆದಿಯಮನನ್ನು ನಾಶಪಡಿಸಿದ ಮೇಲೆ ಕೀರ್ತಿನಾರಾಯಣನ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿ ದೇವಾಲಯದಲ್ಲಿ ಪೂಜೆ ಪುರಸ್ಕಾರಗಳಿಗಾಗಿ ಹಲವಾರು ಗ್ರಾಮಗಳನ್ನು ದತ್ತಿಬಿಟ್ಟದ್ದನೆಂದು ತಿಳಿಸುತ್ತದೆ. ಈ ಶಾಸನದಲ್ಲಿ ವಿಷ್ಣುವರ್ಧನನು ಪಂಚನಾರಾಯಣ ವಿಗ್ರಹಗಳನ್ನು ಪ್ರತಿಷ್ಠಾಪಿಸಿದನೆಂದು ದೃಡಪಡಿಸುತ್ತಿದ್ದು, ಅವುಗಳಲ್ಲಿ ಬೇಲೂರಿನ ಕೇಶವ ದೇವಾಲಯ, ತಲಕಾಡಿನ ಕೀರ್ತಿನಾರಾಯಣ, ಈ ಎರಡು ದೇವಾಲಯಗಳು ಮಾತ್ರ ಬೆಳಕಿಗೆಬಂದಿದೆ. ಉಳಿದ ಮೂರು ದೇವಾಲಯಗಳ ಬಗ್ಗೆ ಉಲ್ಲೇಖವಿಲ್ಲ.[69]

ಮೈಸೂರು ತಾಲೂಕಿನ ಕುಮಾರಬೀಡು ಗ್ರಾಮದಲ್ಲಿರುವ ಈಶ್ವರ ದೇವರಿಗೆ ಕೊಡುಗೆಯಾಗಿ ನೀಡಿರುವ ಹೊಲದಲ್ಲಿರುವ ಕ್ರಿ.ಶ.1121ರ ವಿಷ್ಣುವರ್ಧನನ ಈ ಶಾಸನವು ಕುತುಹಲಕಾರವಾಗಿದೆ. ಇದರಲ್ಲಿ 'ಹೊಯ್ಸಳ ದೇವ' ಎಂದು ಕರೆಯಲ್ಪಟ್ಟ ಈ ರಾಜನಿಗೆ 'ಕುಲೂತ್ತೂಂಗ ಚೋಳ ಭುಜಬಲ ವೀರಗಂಗ' ಎಂಬ ಬಿರುದು ಇದ್ದು. ತೀರ ಅಪರೂಪವಾಗಿ ಬರುವ ಈ ಬಿರುದು ಅವನು ಚೋಳರನ್ನು ಸೋಲಿಸಿ ತಲಕಾಡು ಮತ್ತು ಅದರ ಸುತ್ತಮುತ್ತಲಿನ ಪ್ರಾಂತ್ಯವನ್ನು ಗೆದ್ದಿದ್ದನ್ನು ಸೂಚಿಸುತ್ತದೆ. ಈ ಶಾಸನದಲ್ಲಿ ಅವನು ತಲಕಾಡಿನಲ್ಲಿದ್ದು ಗಂಗವಾಡಿ (ತೊಂಭತ್ತಾರು ಸಾವಿರ) ೯೬,೦೦೦ವನ್ನು ಆಳುತ್ತಿದ್ದನೆಂದು ಹೇಳಿದೆ ಮತ್ತು ಆತನ ಪ್ರಧಾನ

ದಂಡನಾಯಕ ಗಂಗಪ್ಪಯ್ಯನ ಹೆಸರಿದ್ದು, ಬಹುಶಃ ಈ ಹೆಸರು ಆತನ ಜೈನ ದಂಡನಾಯಕನಾದ ಗಂಗರಾಜನದಿರಬಹುದು ಇದರಲ್ಲಿ ಗಂಗರಾಜನ ತಮ್ಮ ಸೋಮಣ್ಣ ದಂಡನಾಯಕನು ನಿರ್ಮಿಸಿದ ಬಸದಿಯ ಸೇವೆಗಾಗಿ ವಿಷ್ಣುವರ್ಧನನು ಗ್ರಾಮವೊಂದನ್ನು ದೇವದಾನವಾಗಿ ನೀಡಿದ ಉಲ್ಲೇಖವಿದೆ.[70]

ನಂಜನಗೂಡು ತಾಲೂಕಿನ ಕಾರ್ಯ ಗ್ರಾಮದಲ್ಲಿ ದೊರೆತಿರುವ ವಿಷ್ಣುವರ್ಧನನ ಕ್ರಿ.ಶ. 1124ರ ಶಾಸನದಲ್ಲಿ ಕಲ್ಯಾಣಿ ಚಾಲುಕ್ಯರ 6ನೇ ವಿಕ್ರಮಾದಿತ್ಯನ ಮೊಮ್ಮಗನಾದ ಇಮ್ಮಡಿ ಚಾಲುಕ್ಯ ಜಗದೇಕಮಲ್ಲನು ವಿಷ್ಣುವರ್ಧನನನ್ನು ಪರಾಜಯಗೊಳಿಸುವಲ್ಲಿ ಪಾಲ್ಗೊಂಡುದ್ದಿರಬಹುದೆಂದು ಅದರಿಂದಲೇ ಹೊಯ್ಸಳರು ಜಗದೇಕಮಲ್ಲ ಎಂಬ ಬಿರುದನ್ನು ಹೊಂದಿದರು ಎಂದು ಹೇಳಿದೆ. ಇದು ಕ್ರಿ.ಶ.1122ರಲ್ಲಿ ಹೊಯ್ಸಳರಿಗೂ ಕಲ್ಯಾಣಿ ಚಾಲುಕ್ಯರಿಗೂ ನಡೆದ ಯುದ್ಧದ ಬಗ್ಗೆ ತಿಳಿಸುವ ಶಾಸನವಾಗಿದೆ.[71]ಕ್ರಿ.ಶ.1128-29ರ ಶಾಸನವು ಕೃಷ್ಣರಾಜನಗರದ ಮಳಲಿ ಗ್ರಾಮದಲ್ಲಿದ್ದು, ಇದರಲ್ಲಿ ಹೊಯ್ಸಳ ದೇವರಾದ ವಿಷ್ಣವರ್ಧನನು ಮಳಲಿ ಗ್ರಾಮದ ಮಲ್ಲೇಶ್ವರ ದೇವಾಲಯದ ಮಂಟಪವನ್ನು ನಿರ್ಮಿಸಿ ದೇವರ ಪೂಜಾಕಾರ್ಯಗಳಗಾಗಿ 10ಕೊಳಗ ಬೆಳೆಬೆಳೆಯುವ ಭೂಮಿಯನ್ನು ಶೈವಮತದ ದೇವಾಲಯಗಳಿಗೂ ದಾನಬಿಟ್ಟ ವಿಚಾರ ತಿಳಿದುಬರುತ್ತದೆ.

ಕೆ.ಆರ್.ನಗರ ತಾಲೂಕಿನ ನೆರಳೂರು ಗ್ರಾಮದ ನೈರುತ್ಯ ದಿಕ್ಕಿನ ಹೊಲದಲ್ಲಿರುವ ಒಂದು ಕಂಬದಲ್ಲಿ ಇರುವ ವಿಷ್ಣುವರ್ಧನನ ಕ್ರಿ.ಶ.1133ರ ಶಾಸನದಲ್ಲಿ ವಿಷ್ಣುವರ್ಧನನನ್ನು ಹೊಯ್ಸಳದೇವ ಮತ್ತು ತಲಕಾಡುಗೊಂಡ ಎಂಬ ಬಿರುದುಗಳನ್ನು ಉಲ್ಲೇಖಿಸಿದ್ದು, ಈತನ ಗೆಲುವಿನ ಪ್ರಸ್ತಾಪ ಈ ಶಾಸನದಲ್ಲಿಲ್ಲ. ಇದರಲ್ಲಿ ವಿಷ್ಣುವರ್ಧನನು ಆತನ ಉಪ ರಾಜಧಾನಿಯಾದ ತೊಣ್ಣೂರಿನಿಂದ ಆಳ್ವಿಕೆ ಮಾಡುತ್ತಿದ್ದುದ್ದಾಗಿ ತಿಳಿಸುತ್ತದೆ. ನಂತರ ತಲಕಾಡುಗೊಂಡ ಮತ್ತು ವೀರಗಂಗ ಎಂಬ ಬಿರುದನ್ನು ಮಾತ್ರ ಉಲ್ಲೇಖಿಸಿದ್ದು, ಇದರಿಂದ ತನ್ನ ರಾಜ್ಯದ ಇತರ ಭಾಗಗಳಲ್ಲಿ ಕೆತ್ತಿಸುತ್ತಿದ್ದ ಶಾಸನಗಳಲ್ಲಿ ಆತನ ಎಲ್ಲಾ ಬಿರುದುಗಳನ್ನು ಕೆತ್ತಿಸುತ್ತಿರಲಿಲ್ಲ ಎಂಬುದು ತಿಳಿದು ಬರುತ್ತದೆ.[72]

ತಿ.ನರಸೀಪುರ ತಾಲೂಕಿನ ಬನ್ನೂರು ಗ್ರಾಮದಲ್ಲಿರುವ ಜನಾರ್ಧನ ದೇವಾಲಯದ ಅಧಿಷ್ಠಾನದಲ್ಲಿ ವಿಷ್ಣುವರ್ಧನನ ಕ್ರಿ.ಶ.1135ರ ಶಾಸನವಿದ್ದು, ಇದರಲ್ಲಿ ಬೆಳ್ವಲದ ನರಸಿಂಹದೇವ ನಿರ್ಮಿಸಿದ ವಿಷ್ಣು (ವೈಷ್ಣವ) ದೇವಾಲಯಕ್ಕೆ ವಿಷ್ಣುವರ್ಧನನು ನೀಡಿದ ದೇವದಾನದ ಬಗ್ಗೆ ತಿಳಿಸುತ್ತದೆ.[73]

ಕೆ.ಆರ್.ನಗರ ತಾಲೂಕಿನ ಮಳಲಿ ಗ್ರಾಮದಲ್ಲಿರುವ ಮಲ್ಲೇಶ್ವರ ದೇವಸ್ಥಾನದ ಗೋಡೆಯ ಮೇಲಿರುವ ಶಾಸನದಲ್ಲಿ ವಿಷ್ಣುವರ್ಧನನ ಕ್ರಿ.ಶ.1136-37ರ ಶಾಸನವಿದ್ದು, ವೀರಗಂಗ ವಿಷ್ಣುವರ್ಧನ ಹೊಯ್ಸಳ ದೇವರ ಕಾಲದಲ್ಲಿ ಮಳಲಿಯಲ್ಲಿರುವ ಮಲ್ಲೇಶ್ವರ ದೇವಸ್ಥಾನಕ್ಕೆ ಮಂಟಪವನ್ನು ನಿರ್ಮಿಸಿ ದೇಗುಲಗಳ ಪೂಜಾ ಕೈಂಕರ್ಯಗಳಿಗೆ ಜಮೀನನ್ನು ದೇವದಾನವಾಗಿ ನೀಡಿರುವ ಉಲ್ಲೇಖವಿದೆ.[74]ಚಾಮರಾಜನಗರ ತಾಲೂಕಿನ ಬಾಗಳಿ ಗ್ರಾಮದಲ್ಲಿರುವ ಕಲ್ಲಿನಲ್ಲಿ ವಿಷ್ಣುವರ್ಧನನ ಕ್ರಿ.ಶ.1142ಕ್ಕೆ ಸೇರಿದ ಶಾಸನವಿದ್ದು,[75] ಇದರಲ್ಲಿ ತಮಿಳುನಾಡಿನ ನೀಲಗಿರಿಯಲ್ಲಿ ನಡೆದ ಯುದ್ಧದಲ್ಲಿ ಹೊಯ್ಸಳರ ಪರವಾಗಿ ವೀರಾವೇಶದಿಂದ ಹೋರಾಡಿ ಮಡಿದ ಕೋಟೆಯ ನಾಯಕನ ನೆನಪಿಗಾಗಿ ನಿಲ್ಲಿಸಿರುವ ಶಾಸನವಿದ್ದು, ಬಹುಶಃ ಇದು ವಿಷ್ಣುವರ್ಧನನ ಕೊನೆಯ ಕಾಲಘಟ್ಟದಲ್ಲಿ ಸಂಭವಿಸಿದ ಯುದ್ಧವಾಗಿದೆ. ವಿಷ್ಣುವರ್ಧನನ ಅಂತ್ಯದ ಬಗ್ಗೆ ವಿದ್ವಾಂಸರಲ್ಲಿ ನಿರ್ದಿಷ್ಟವಾದ ಅಭಿಪ್ರಾಯವಿಲ್ಲದಿರುವುದು ಗಮನಿಸಬೇಕಾದ ಅಂಶವಾಗಿದೆ. ಒಂದು ಅಭಿಪ್ರಾಯದ ಪ್ರಕಾರ ಈತನು ಕ್ರಿ.ಶ.1141ರಲ್ಲಿ ಬಂಕಾಪುರದಲ್ಲಿ ನಿಧನನಾದನೆಂದು ತಿಳಿದುಬಂದಿದೆ. ಮತ್ತೊಂದು ಅಭಿಪ್ರಾಯದ ಪ್ರಕಾರ ಈತನು ಕ್ರಿ.ಶ.1152ರವರೆಗೂ ರಾಜ್ಯಭಾರ ಮಾಡಿರಬಹುದೆಂಬ ಮತ್ತೊಂದು ಅಭಿಪ್ರಾಯವಿದೆ. ಆದರೆ ರಾಜ್ಯದ ವಿವಿಧೆಡೆ ವಿಷ್ಣುವರ್ಧನನ ಶಾಸನಗಳು ಸುಮಾರು ಕ್ರಿ.ಶ.1148ರವರೆಗೂ ದೊರೆತಿರುವುದು ಗಮನಾರ್ಹವಾಗಿದೆ. ಮಂಡ್ಯ ಜಿಲ್ಲೆಯ ಮಾರೇಹಳ್ಳಿಯ ಕ್ರಿ.ಶ.1148ರ ಶಾಸನವನ್ನು ಆಧರಿಸಿ ವಿಷ್ಣುವರ್ಧನನು ಕ್ರಿ.ಶ.1148ರವರೆಗೂ ಬದುಕಿದ್ದನೆಂದು ಹೇಳಬಹುದಾಗಿದೆ.[76]

**1ನೇನರಸಿಂಹ**(ಕ್ರಿ.ಶ.1142-73):-ವಿಷ್ಣುವರ್ಧನನಿಗೆ ಕುಮಾರ ಬಲ್ಲಾಳ ಮತ್ತು ನರಸಿಂಹರಲ್ಲದೆ ವಿಜಯನಾರಾಯಣನೆಂಬ ಮಗನೂ ಇದ್ದನೆಂದು ಉಪ್ಪವಳ್ಳಿ ಶಾಸನದಿಂದ ತಿಳಿದುಬರುತ್ತದೆ. ವಿಷ್ಣುವರ್ಧನನ ಮರಣಾನಂತರ ಪಟ್ಟಕ್ಕೆ ಬಂದ ಅವನ ಮಗ 1ನೆಯ ನರಸಿಂಹ ಇನ್ನೂ ಬಾಲಕನಾಗಿದ್ದುದರಿಂದಲೂ, ಪ್ರಾಪ್ತವಯಸ್ಕನಾದ ಮೇಲೂ ಸ್ವಭಾವತಃ ಅಶಕ್ತನೂ, ಸುಖಲೋಲೊಪನೂ ಆಗಿದ್ದುದರಿಂದಲೂ ಚಾಳುಕ್ಯ ಜಗದೇಕಮಲ್ಲ ಮತ್ತು ಹಿಂದೆ ವಿಷ್ಣುವರ್ಧನನಿಂದ ಪೆಟ್ಟು ತಿಂದಿದ್ದ ಚಾಳುಕ್ಯ ಸಾಮಂತರು, ಹರಿಹರದಿಂದ ಉತ್ತರಕ್ಕಿದ್ದ ಹೊಯ್ಸಳರ ಗಳಿಕೆಯನ್ನೆಲ್ಲ ಕಬಳಿಸಿದರು. ಪೂರ್ವದಲ್ಲಿ ಚೋಳರೂ ಈಗಿನ ಕೋಲಾರ ಜಿಲ್ಲೆಯ ಸ್ವಲ್ಪ ಭಾಗವನ್ನು ಆಕ್ರಮಿಸಿದರು. ದಕ್ಷಿಣದಲ್ಲಿ ಚೆಂಗಾಳ್ವರು ಈ ಸಂದರ್ಭದ ಲಾಭ ಪಡೆಯಲು ಪ್ರಯತ್ನಿಸಿದರೂ ಅದು ಸಫಲವಾಗಲಿಲ್ಲ. ನರಸಿಂಹನ ಕಾಲದಲ್ಲಿ ತಂದೆಯ ಬಾಹುಬಲದಿಂದ ವೃದ್ಧಿಸಿದ ಹೊಯ್ಸಳ ರಾಜ್ಯ ಸಂಕುಚಿತವಾಯಿತು. ನರಸಿಂಹ ಚಾಳುಕ್ಯರ ಸಾರ್ವಭೌಮತ್ವನ್ನೂ ಒಪ್ಪಬೇಕಾಯಿತು. ಪ್ರಾಯಶಃ ಈ ವಿಷಮ ಸ್ಥಿತಿಯಲ್ಲಾಗಲಿ ಹೊಯ್ಸಳ

ರಾಜ್ಯ ಛಿದ್ರವಾಗದಿದ್ದುದು ಕೆಲವು ನಿಷ್ಠಾವಂತ ಹೊಯ್ಸಳ ದಂಡನಾಯಕರಿಂದಾಗಿ ಎನ್ನಬಹುದು.

1ನೇ ನರಸಿಂಹನ ಆಳ್ವಿಕೆಗೆ ಸಂಬಂಧಿಸಿದಂತೆ ಮೈಸೂರು ಜಿಲ್ಲೆಯಲ್ಲಿ ದೊರೆಯುವ ಪ್ರಾಚೀನ ಶಾಸನವೆಂದರೆ ಕ್ರಿ.ಶ.1148ರ ಶಾಸನವಾಗಿದೆ.[77] ಈ ಶಾಸನದಲ್ಲಿ 1ನೇ ನರಸಿಂಹನನ್ನು ಶ್ರೀಮಾನ್ ಮಹಾಮಂಡಲೇಶ್ವರ ತ್ರಿಭುವನಮಲ್ಲ, ತಲಕಾಡುಗೊಂಡ, ಭುಜಬಲವೀರಗಂಗ, ವಿಷ್ಣುವರ್ಧನ, ನಾರಸಿಂಹ ಪೇರುಮಾಳದೇವನೆಂದು ಹೇಳಿದ್ದು ಈತನನ್ನು ಮೊದಲನೇ ನರಸಿಂಹನೆಂದು ಗುರುತಿಸಲಾಗಿದೆ. ವಿಷ್ಣುವರ್ಧನನು ಕ್ರಿಶ.1152ರವರೆಗೆ ಆಳ್ವಿಕೆ ಮಾಡುತ್ತಿದ್ದು, ಮೊದಲನೇ ನರಸಿಂಹನು ವಿಷ್ಣುವರ್ಧನನ ಜೊತೆಯಲ್ಲೆ ಆಳುತ್ತಿದ್ದು, ತನ್ನೊಬ್ಬನ ಹೆಸರಿನಲ್ಲಿ ಸ್ವತಂತ್ರವಾಗಿ ಶಾಸನಗಳನ್ನು ಹಾಕಿಸುತ್ತಿದ್ದನೆಂದು ಕ್ರಿ.ಶ.1148ರ ಪ್ರಸ್ತುತ ಶಾಸನದಿಂದ ತಿಳಿಯ ಬಹುದಾಗಿದೆ.

ಕ್ರಿ.ಶ.1157ನೇ ವ್ರ್ಷದ ಇದೇ 1ನೇ ನರಸಿಂಹನ ಆಳ್ವಿಕೆಗೆ ಸಂಬಂಧಿಸಿದ ಗುಂಡ್ಲುಪೇಟೆ ಶಾಸನವು ಮಹಾಪಸಾಯಿತನಾದ ವಾಮನ ಮಲ್ಲಣ್ಣನು ಕೋಂಗಿಗೆ (ತಮಿಳುನಾಡು) ದಾಳಿ ಇಟ್ಟನೆಂದು ತಿಳಿಸುತ್ತದೆ.[78] ಇದಕ್ಕೂ ಮೊದಲೇ ವಿಷ್ಣುವರ್ಧನನ ಆಳ್ವಿಕೆ ಕಾಲದಲ್ಲಿ ಕೊಂಗು ದೇಶವನ್ನು ಹೊಯ್ಸಳರು ವಶಪಡಿಸಿಕೊಂಡಿದ್ದನ್ನು ಶಾಸನಗಳಿಂದ ತಿಳಿದುಬಂದರೂ ಸಂಪೂರ್ಣವಾಗಿ ಹೊಯ್ಸಳರ ವಶವಾಗಿರಲಿಲ್ಲವಾದ್ದರಿಂದ 1ನೇ ನರಸಿಂಹನ ಕಾಲದಲ್ಲಿ ಪುನಃ ಅಲ್ಲಿಗೆ ದಾಳಿ ಮಾಡಿದ ವಿಚಾರವನ್ನು ಈ ಶಾಸನದಿಂದ ತಿಳಿಯ ಬಹುದಾಗಿದೆ.

ನಂಜನಗೂಡು ತಾಲೂಕಿನ ಹುಲ್ಲಹಳ್ಳಿ ಗ್ರಾಮದಲ್ಲಿ ದೊರೆತ್ತಿರುವ ಕ್ರಿ.ಶ.1162ರ ಶಾಸನದಲ್ಲಿ ಈತನ ಸಾಮ್ರಾಜ್ಯಕ್ಕೆ ಚಂಗಾಳ್ವರು ಮುತ್ತಿಗೆ ಹಾಕಿದರೆಂದು ತಿಳಿದುಬರುತ್ತದೆ. ಆದರೆ ಈ ಮುತ್ತಿಗೆಯ ಜಯ ಮತ್ತು ಅಪಜಯದ ಬಗ್ಗೆ ಈ ಶಾಸನದಲ್ಲಿ ಉಲ್ಲೇಖವಿಲ್ಲ. ನಂಜನಗೂಡು ತಾಲೂಕಿನ ಹುಣಸನಾಳು ಗ್ರಾಮದಲ್ಲಿರುವ ಕ್ರಿ,ಶ.1164ರ ಶಾಸನವು 1ನೇ ನರಸಿಂಹನ ಕಾಲದಾಗಿದ್ದು, ಈ ಶಾಸನದಲ್ಲಿ ನರಸಿಂಹನನ್ನು ಮಲಪೇರುಳಗೊಂಡ, ಗಂಡಬೇರುಂಡ, ಕದನಪ್ರಚಂಡ, ಏಕಾಂಗಿವೀರ, ಗಿರಿದುರ್ಗಮಲ್ಲ ಎಂಬ ಬಿರುದುಗಳಿಂದ ಹೆಸರಿಸಿದ್ದು, ಈತನ ಆಳ್ವಿಕೆಯಲ್ಲಿ ಮಸಣಗೌಡನ ಮಗ ಅಪ್ಪಗೌಡನು ನಿರ್ಮಿಸಿದ ಚಂದ್ರಕೀರ್ತಿವರ್ತಿ ದೇವರಿಗೆ 1ನೇ ನರಸಿಂಹನು ದತ್ತಿ ನೀಡಿದ ವಿಚಾರವನ್ನು ಪ್ರಸ್ತಾಪಿಸುತ್ತದೆ.[79]

ನಂಜನಗೂಡು ತಾಲೂಕಿನ ಸುತ್ತೂರು ಹೋಬಳಿಯಲ್ಲಿದೊರೆತಿರುವ ಕ್ರಿ.ಶ.1168-69ಕ್ಕೆ ಸೇರಿದ ಶಾಸನದಲ್ಲಿ 1ನೇ ನರಸಿಂಹನ ಆಜ್ಞೆಯ ಮೇರೆಗೆ ನಾಯಕನಾದ ಲಕ್ಕಯ್ಯ ಎಂಬುವವನು ನಾಗಕೇಶವ ದೇವರಿಗೆ ನೀಡಿದ ದಾನದ ಉಲ್ಲೇಖಗಳಿವೆ.[80]ನಂಜನಗೂಡು

ತಾಲೂಕಿನ ಮೂಡಹಳ್ಳಿಯಲ್ಲಿ ದೊರೆತಿರುವ ಕ್ರಿ.ಶ.1170ರ ಶಾಸನವಾಗಿದ್ದು, ಈ ಶಾಸನದಲ್ಲಿ 1ನೇ ನರಸಿಂಹನು ಬಿಟ್ಟ ದತ್ತಿ ಎಂಬುದು ತಿಳಿದುಬಂದಿದ್ದು ಉಳಿದ ವಿಚಾರಗಳು ತೃಟಿತಗೊಂಡಿವೆ.[81]

ಅಲ್ಲದೆ ಇವನ ಆಳ್ವಿಕೆಯ ಉತ್ತರಾರ್ಧದಲ್ಲಿ ಮಗನಾದ 2ನೆಯ ಬಲ್ಲಾಳನ ಆಡಳಿತದಲ್ಲಿ ಪಾಲ್ಗೊಂಡಿದ್ದೂ ಕಾರಣವಾಗಿರಬಹುದು. ಶಕ್ತನಾದ ಬಲ್ಲಾಳ ತಂದೆಯ ದುರ್ಬಲ ಆಡಳಿತವನ್ನು ಸಹಿಸದೆ ದಂಗೆಯೆದ್ದು ಕ್ರಿ.ಶ.1173ರಲ್ಲಿ ತಾನೇ ಸಿಂಹಾಸನವನ್ನೇರಿದ.[82]

**2ನೇ ಬಲ್ಲಾಳ(1173-1220):-** ತನ್ನ ತಾತನಾದ ವಿಷ್ಣುವರ್ಧನನ ಗುರಿಯಾಗಿದ್ದ ಸಾಮ್ರಾಜ್ಯ ಸ್ಥಾಪನೆಯನ್ನು ಸಾಧಿಸುವ ಸಂಕಲ್ಪ ಮಾಡಿ ಅಧಿಕಾರಕ್ಕೆ ಬಂದ ಕೂಡಲೇ ರಾಜ್ಯದಲ್ಲಿ ತಲೆದೋರಿದ್ದ ಅರಾಜಕತೆಯನ್ನು ಹೋಗಲಾಡಿಸಿ ವಿಸ್ತರಣಾ ಕಾರ್ಯದಲ್ಲಿ ತೊಡಗಿದ. ವಿಷ್ಣುವರ್ಧನನ ಕಾಲದಲ್ಲಿ ಸಾಮಂತನಾಗಿ ನರಸಿಂಹನ ಕಾಲದಲ್ಲಿ ಸ್ವತಂತ್ರನಾದ ಚೆಂಗಾಳ್ವ ರಾಜನನ್ನು ಹತ್ತಿಕ್ಕಿ (ಕ್ರಿ.ಶ.1173), ಕ್ರಿ.ಶ.1177ರಲ್ಲಿ ಉಚ್ಚಂಗಿಯನ್ನು ಮುತ್ತಿ ಪಾಂಡ್ಯ ಕಾಮದೇವನನ್ನು ಸೋಲಿಸಿದ. ಆನಂತರ ಕಳಚೂರಿಗಳ ಮೇಲೆ ಯುದ್ಧ ಮಾಡಿ ತುಂಗಭದ್ರಾ ನದಿಯ ಪ್ರದೇಶಗಳನ್ನು ವಶಪಡಿಸಿಕೊಂಡ. ಅದೇ ಸಮಯದಲ್ಲಿ ಸಿಂಧರಾಜನನ್ನೂ, ಸಾಂತರನ್ನೂ, ಹಾನಗಲ್ಲಿನ ಕದಂಬರನ್ನೂ, ತುಳುರಾಜನನ್ನೂ ಸೋಲಿಸಿದ. ಈ ವೇಳೆಗೆ ಚಾಳುಕ್ಯರ ಸಾಮಂತ ಪಕ್ಷವನ್ನು ವಹಿಸಿದ್ದ ಉಚ್ಚಂಗಿಯ ಕಾಮದೇವ ಪಾಂಡ್ಯನ ರಾಜ್ಯವನ್ನು ಕ್ರಿ.ಶ.1187ರಲ್ಲಿ ತನ್ನ ರಾಜ್ಯಕ್ಕೆ ಸೇರಿಸಿಕೊಂಡನು.

ಚಾಲುಕ್ಯ ಸೋಮೇಶ್ವರನು ಪುನಃ ಚಾಳುಕ್ಯರ ಅಧಿಕಾರವನ್ನು ಸ್ಥಾಪಿಸಿದರೂ ಕುಂತಳ ಸಾಮ್ರಾಜ್ಯದ ಅವನತಿಯ ಕುರುಹುಗಳು ಕಾಣಬಂದದ್ದರಿಂದ ವೀರಬಲ್ಲಾಳ ಕ್ರಿ.ಶ.1189ರಲ್ಲಿ ಕಲ್ಯಾಣಿಯವರೆಗೂ ದಂಡೆತ್ತಿ ಹೋಗಿ ಸೋಮೇಶ್ವರನ ಪ್ರಧಾನ ದಂಡನಾಯಕನಾದ ಬ್ರಹ್ಮದಂಡೇಶನನ್ನು ಸೋಲಿಸಿ ಚಾಳುಕ್ಯ ಸಾಮ್ರಾಜ್ಯದ ದಕ್ಷಿಣಭಾಗದ ಮೇಲೆ ತನ್ನ ಆಳ್ವಿಕೆಯನ್ನು ಸ್ಥಾಪಿಸಿ 'ಕರ್ನಾಟಕ ಚಕ್ರವರ್ತಿ'ಯೆಂಬ ಬಿರುದನ್ನು ಧರಿಸಿದ. ಆನಂತರ ಕುಂತಳ ಸಾಮ್ರಾಜ್ಯದ ಒಡೆತನಕ್ಕಾಗಿ ದೇವಗಿರಿಯ ಸೇವುಣರಿಗೂ, ಹೊಯ್ಸಳರಿಗೂ ಯುದ್ಧಗಳು ಪ್ರಾರಂಭವಾದವು. ಸೇವುಣ ರಾಜನಾದ ಭಿಲ್ಲಮ್ಮ ದಕ್ಷಿಣಕ್ಕೆ ಮುನ್ನುಗ್ಗಿದಾಗ ಬಲ್ಲಾಳ ಅವನನ್ನು ಸೊರಟೂರಿನ ಬಳಿಯಲ್ಲಿ ಎದುರಿಸಿ ಓಡಿಸಿದ(ಕ್ರಿ.ಶ.1190). ಸುತ್ತಲಿನ ಯಲಬುರ್ಗಿಯ ಸಿಂಧರು ಹಾಗೂ ಮೊದಲಾದ ಕಿರುದೊರೆಗಳನ್ನು ಜಯಿಸಿ ಹೊಯ್ಸಳ ರಾಜ್ಯವನ್ನು ಉತ್ತರದಲ್ಲಿ ಮಲಪ್ರಭಾ ಹಾಗೂ ಕೃಷ್ಣಾನದಿಗಳವರೆಗೂ ವಿಸ್ತರಿಸಿದ. ತನ್ನ ಸಾಮ್ರಾಟ ಪದವಿಯ ಕುರುಹಾಗಿ ಕ್ರಿ.ಶ.1192ರಲ್ಲಿ ತನ್ನ ಹೆಸರಿನಲ್ಲಿ ಶಕವೊಂದನ್ನು ಸ್ಥಾಪಿಸಿದ. ಕ್ರಿ.ಶ.1173-92ರ ಬಲ್ಲಾಳನ

ಆಳ್ವಿಕೆಯಲ್ಲಿ ನಿರಂತರ ಅಭಿವೃದ್ಧಿಯ ಕಾಲ. ಈ ಕಾಲದಲ್ಲಿ ಉತ್ತರಕರ್ನಾಟಕದ ರಾಜಕೀಯ ಶಕ್ತಿಗಳಾಗಿದ್ದ ಕಳಚೂರಿಗಳು ಮತ್ತು ಚಾಳುಕ್ಯರು ಇತಿಹಾಸದಿಂದ ಮರೆಯಾದರಷ್ಟೇ. ಇದರಿಂದ ಅಲ್ಲಿ ಉದ್ಭವವಾದ ರಾಜಕೀಯ ಶೂನ್ಯತೆಯನ್ನು ಬಲ್ಲಾಳನು ಚಾಕಚಕ್ಯತೆಯಿಂದ ತನಗೆ ಲಾಭದಾಯಕವಾಗಿ ಮಾಡಿಕೊಂಡ. ಆದರೆ ಆನಂತರದಲ್ಲಿ ಬಲ್ಲಾಳನ ಮುನ್ನಡೆ ಕುಂಠಿತವಾಯಿತು. ಮೊದಲಿಗೆ ಉತ್ತರಕರ್ನಾಟಕದ ಅನೇಕ ಚಿಕ್ಕ ರಾಜಮನೆಗಳೂ ಬಲ್ಲಾಳನಂತೆಯೇ ತತ್ಕಾಲದ ಸಾರ್ವಭೌಮ ಶೂನ್ಯತೆಯನ್ನು ಗಮನದಲ್ಲಿಟ್ಟು ಸ್ವಲಾಭ ನಿರತವಾಗಿದ್ದವು. ಹೊಸದಾಗಿ ಆ ಪ್ರದೇಶದಲ್ಲಿ ಕಾಲಿಟ್ಟದ ಬಲ್ಲಾಳನ ಸಾರ್ವಭೌಮತ್ವವನ್ನು ಸಹಿಸಲು ಒಪ್ಪಲಿಲ್ಲ. ಸಾಧ್ಯವಾದಷ್ಟು ಮಟ್ಟಿಗೆ ಸ್ವತಂತ್ರ ರಾಜರಾಗಿರಲು ಅಲ್ಲಿನ ಅರಸರು ಪ್ರಯತ್ನಿಸುತ್ತಿದ್ದರು. ಅಲ್ಲದೆ ದೇವಗಿರಿಯಲ್ಲಿ ಸಿಂಘಣ, ಕ್ರಮೇಣ ಬಲಯುತನಾಗುತ್ತಿದ್ದ ಬೆಳ್ವೊಲ, ಬನವಾಸಿ ಪ್ರಾಂತದಲ್ಲಿದ್ದ ಕೆಲವು ಚಿಕ್ಕ ರಾಜಮನೆತನಗಳಿಗೆ ಸಹಾಯ ಮಾಡುವ ನೆಪದಲ್ಲಿ ದಕ್ಷಿಣ ದಂಡಯಾತ್ರೆಯನ್ನು ಕೈಗೊಂಡ ಬೆಳ್ವೊಲ-ಬನವಾಸಿ ಪ್ರಾಂತ್ಯದ ಅಧಿಪತ್ಯಕ್ಕಾಗಿ ದಖನ್ನಿನ ಎರಡು ಬಲಿಷ್ಠ ರಾಜರು ಪರಸ್ಪರ ವಿರುದ್ಧವಾಗಿ ನಿಂತರು. ಬಲ್ಲಾಳನಿಗೆ ಈ ಪರಿಸ್ಥಿತಿ ಅನುಕೂಲರವಾಗಿರಲಿಲ್ಲವಾಗಿ ತಾನು ಗಳಿಸಿದ ಉತ್ತರಕರ್ನಾಟಕದ ಭಾಗಗಳನ್ನು ಉಳಿಸಿಕೊಳ್ಳುವುದೇ ಪ್ರಯಾಸವಾಯಿತು. ಕ್ರಿ.ಶ.1212ರವರೆಗೆ ಆ ನೆಲವನ್ನೆಲ್ಲ ಹಿಡಿತದಲ್ಲಿಟ್ಟುಕೊಂಡಿದ್ದರೂ ಮುಂದೆ ಕ್ರಿ.ಶ.1215ರ ಹೊತ್ತಿಗೆ ಸಿಂಘಣನ ಪ್ರಾಬಲ್ಯದಿಂದ ಬಲ್ಲಾಳ ತುಂಗಭದ್ರೆಯ ಉತ್ತರದ ಭಾಗವನ್ನೆಲ್ಲ ಕಳೆದುಕೊಂಡನು. ಆದರೆ ಹೊಯ್ಸಳ ರಾಜ್ಯ ಭದ್ರವಾದ ಬುನಾದಿಯ ಮೇಲೆ ನಿಂತಿತ್ತು. ಸಿಂಘಣನಂಥ ಶೂರನ ಪ್ರಯತ್ನಗಳು ಅದರ ಹೊರ ಎಲ್ಲೆಯನ್ನಷ್ಟೇ ಮುಟ್ಟಲು ಸಾಧ್ಯವಾಯಿತು.

ಈ ವೇಳೆಗೆ ಶಕ್ತಿಯುತವಾಗಿ ಬೆಳೆದಿದ್ದ ಹೊಯ್ಸಳ ರಾಜ್ಯಕ್ಕೆ ಹೊಸ ವಿಸ್ತರಣ ಅವಕಾಶಗಳು ಬೆಳೆದುಬಂದವು. ಈ ಹಿಂದೆಯೇ ರಕ್ತಸಂಬಂಧವನ್ನು ಬೆಳೆಸಿದ್ದ ಚೋಳರೊಡನೆ ರಾಜಕೀಯ ಸಂಬಂಧವನ್ನು ಬೆಳೆಸಲಾಯಿತು. 3ನೆಯ ಕಲೋತ್ತುಂಗ ಚೋಳ ತನ್ನ ಸಾಮಂತರಾದ ಪಾಂಡ್ಯರಿಂದ ಪರಾಜಿತನಾದಾಗ, ತನ್ನ ದುಃಸ್ಥಿತಿಯಲ್ಲಿ ಬಲ್ಲಾಳನ ಸಹಾಯವನ್ನು ಯಾಚಿಸಿದ. ಬಲ್ಲಾಳ ತನ್ನ ಕುಮಾರ 2ನೆಯ ನರಸಿಂಹನ ನೇತೃತ್ವದಲ್ಲಿ ಹೊಯ್ಸಳ ಸೈನ್ಯವನ್ನು ಕಲೋತ್ತುಂಗನ ಸಹಾಯಕ್ಕೆ ಕಳುಹಿಸಿದ. 2ನೇನರಸಿಂಹ ರಾಜರಾಜನ ಶತ್ರುಗಳನ್ನು ಸೋಲಿಸಿ ಅವನನ್ನು ಚೋಳ ಸಿಂಹಾಸನದ ಮೇಲೆ ಕೂರಿಸಿದ. ಇದರಿಂದ ತಮಿಳುನಾಡಿನ ರಾಜಕೀಯದಲ್ಲಿ ಹೊಯ್ಸಳರ ಕೈವಾಡದ ನಾಂದಿಯಾಯಿತು. ಬಲ್ಲಾಳ 'ಪಾಂಡ್ಯರಾಜ ಗಜಕೇಸರಿ', 'ಚೋಳರಾಜ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದಗಳನ್ನು ಧರಿಸಿದ.

ಇಮ್ಮಡಿ ವೀರಬಲ್ಲಾಳ (ಕ್ರಿ.ಶ.1173-1220) ಹೊಯ್ಸಳ ಸಂತತಿಯ ಸಾಮ್ರಾಟರಲ್ಲೆಲ್ಲ ಅತ್ಯಂತ ಪರಾಕ್ರಮಿ. ನರಸಿಂಹನ ಕಾಲದಲ್ಲಿ ಮುದುರಿಹೋಗಿದ್ದ ಹೊಯ್ಸಳರ ರಾಜ್ಯವನ್ನು ತನ್ನ ಬಾಹುಬಲ ಸಾಮರ್ಥ್ಯ ಹಾಗೂ ದೂರದೃಷ್ಟಿಯಿಂದ ವಿಸ್ತರಿಸಿ, ದಕ್ಷಿಣಭಾರತದ ರಾಜಕೀಯದಲ್ಲಿ ಹೊಯ್ಸಳ ವಂಶವನ್ನು ಒಂದು ಮುಖ್ಯ ಶಕ್ತಿಯಾಗಿ ರೂಪಿಸಿದ ಕೀರ್ತಿ ಈತನದು.

ಮೈಸೂರು ಜಿಲ್ಲೆಯಲ್ಲಿ ದೊರೆತಿರುವ 2ನೇ ಬಲ್ಲಾಳ ಪ್ರಾಚೀನ ಶಾಸನವೆಂದರೆ ಕ್ರಿ.ಶ.1173ರ ಶಾಸನವಾಗಿದೆ. ಈ ಶಾಸನದಲ್ಲಿ 2ನೇ ಬಲ್ಲಾಳನ ಬಿರುದುಗಳಾದ ತ್ರಿಭುವನ ಮಲ್ಲ, ತಲಕಾಡುಗೊಂಡ, ಕೊಂಗುನಂಗಲಿಗೊಂಡ, ಉಚ್ಚಂಗಿ, ಬನವಾಸಿ, ಹಾನಗಲ್ಲುಗೊಂಡ, ಭುಜಬಲ ವೀರನ ಸಹಾಯಶೂರ, ನಿಶ್ಯಂಕಬಳ್ಳ ಬಲ್ಲಾಳದೇವ ಈತನ ಎಲ್ಲಾ ಬಿರುದುಗಳನ್ನು ಹೊಂದಿದ್ದು, ಇದು ದ್ವಾರಸಮುದ್ರದಿಂದ ರಾಜ್ಯವನ್ನಾಳುತ್ತಿದ್ದನ್ನು ಹೇಳುವುದ್ದಲದೆ. ಶ್ರೀಎರೆಯಂಗನ ಬಸದಿಗೆ ನಿತ್ಯ ನೈವೇದ್ಯಕ್ಕೆ ದಾನ ನೀಡಿದ ಉಲ್ಲೇಖವಿದೆ.[83] ಮೈಸೂರು ತಾಲೂಕಿನ ಕೆ. ಹೆಮ್ಮನಹಳ್ಳಿಯಲ್ಲಿ ದೊರೆತಿರುವ ಕ್ರಿ.ಶ.1175ರ ಶಾಸನದಲ್ಲಿ ಹೊಯ್ಸಳರ 2ನೇ ವೀರಬಲ್ಲಾಳನು ಇಲ್ಲಿನ ಶಂಕರೇಶ್ವರ ದೇವಸ್ಥಾನದ ನಂದಾದೀವಿಗೆಗೆ ದಾನ ನೀಡಿದ ಉಲ್ಲೇಖವಿದೆ.[84] ಕೆ.ಆರ್.ನಗರ ತಾಲೂಕಿನ ಚೀರನಹಳ್ಳಿಯಲ್ಲಿ ದೊರೆತಿರುವ ಕ್ರಿ.ಶ.1176ರ ಶಾಸನವು 2ನೇ ಬಲ್ಲಾಳನು ಬಸಪ್ಪ ದೇವರಿಗೆ ನೀಡಿದ ದಾನದ ಉಲ್ಲೇಖವನ್ನು ಹೊಂದಿದೆ.[85]

ತಿ.ನರಸೀಪುರ ತಾಲೂಕಿನ ಮೂಗೂರಿನ ಕ್ರಿ.ಶ.1177ರ ಶಾಸನದಲ್ಲಿ ದೇವರಿಗೆ ದಾನ ನೀಡಿದ ಉಲ್ಲೇಖವಿದ್ದು, ದೇವಾಲಯದ ಹೆಸರುಗಳಾಗಲಿ ಮತ್ತು ಏನನ್ನು ನೀಡಿದ ಎಂಬ ಅಕ್ಷರಗಳು ಶಾಸನದಲ್ಲಿ ತೃಟಿತ ಗೊಂಡಿದ್ದು ದಾನ ನೀಡಿದ ಎಂಬುದಷ್ಟೆ ತಿಳಿದುಬರುತ್ತದೆ.[86] ತಿ.ನರಸೀಪುರ ತಾಲೂಕಿನ ಬೆಟ್ಟಹಳ್ಳಿಯಲ್ಲಿ ದೊರೆತಿರುವ ಕ್ರಿ.ಶ.1179ರ ಶಾಸನದಲ್ಲಿ 2ನೇಬಲ್ಲಾಳನು ಮಲ್ಲಿಕಾರ್ಜುನ ದೇವರಿಗೆ ದೇವದಾನ ನೀಡಿದ ಉಲ್ಲೇಖವಿದೆ.[87] ಇದೇ ತಿ.ನರಸೀಪುರದ ತುಂಬಲ ಗ್ರಾಮದಲ್ಲಿರುವ ಉಪ್ಪರಗೆ ಬಸವನ ಗುಡಿಯಲ್ಲಿರುವ ಕ್ರಿ.ಶ.1180ರ ಶಾಸನವು ತಿರುಮಕೂಡಲ ಅಗಸ್ತ್ಯೇಶ್ವರ ದೇವರ ನೈವೇದ್ಯಕ್ಕೆ ಕೆಲವು ಹಳ್ಳಿಗಳನ್ನು ದತ್ತಿ ಬಿಟ್ಟಿರುವುದನ್ನು ದೃಢಪಡಿಸಿತ್ತದೆ.[88]

ಮೈಸೂರು ತಾಲೂಕಿನ ಕೆ.ಹೆಮ್ಮನಹಳ್ಳಿಯ ಮಹಾಲಿಂಗೇಶ್ವರ ದೇವಸ್ಥಾನದಲ್ಲಿರುವ ಕ್ರಿ.ಶ. 1188-1193ರ ಶಿಲಾಶಾಸನವು 2ನೇ ಮಹಾಪಸಯಾತನಾದ ಮೊಕರಿಲಕ್ಕಯ್ಯ ನಿರ್ಮಿಸಿದ ಮಹಾಲಿಂಗೇಶ್ವರ ದೇವಾಲಯದ ನಂದಾದೀವಿಗಾಗಿ ಬಲ್ಲಾಳನು ದತ್ತಿ ಬಿಟ್ಟ ಪ್ರಸ್ತಾಪವಿದೆ.[89]

ತಿ.ನರಸೀಪುರ ತಾಲೂಕಿನ ತಡಿಮಾಲಂಗಿಯಲ್ಲಿ ದೊರೆತಿರುವ ಕ್ರಿ.ಶ.1195ರ ಶಾಸನದಲ್ಲಿ 2ನೇಬಲ್ಲಾಳನನ್ನು ವಾಸಂತಿಕಾದೇವಿಯ ವರಪ್ರಸಾದವೆಂದು ಚೋಳ ಕಟಕಬೇಟೆಕಾರ ಎಂಬ ಬಿರುದುಗಳನ್ನು ಒಳಗೊಂಡಿದ್ದು ವಿಶೇಷವಾಗಿದೆ. ಈತನ ಯಾವ ಶಾಸನದಲ್ಲಿ ವಾಸಂತಿಕಾದೇವಿಯ ವರಪ್ರಸಾದ ಎಂಬ ಬಿರುದು ಉಲ್ಲೇಖವಾಗಿಲ್ಲ. ಆದರೆ ಈ ಶಾಸನದಲ್ಲಿ ಉಲ್ಲೇಖವಾಗಿರುವುದು ಮುಖ್ಯವಾದ ಅಂಶವಾಗಿದೆ. ಇದರಲ್ಲಿ ಈತನ ಮಹಾ ಪ್ರಧಾನನಾದ ಕೋಮನಕೇಶಿಯು ನಿರ್ಮಿಸಿದ ಜನಾರ್ಧನ ದೇವರ ಪೂಜಾ ಕೈಂಕರ್ಯಗಳಿಗೆ ದಾನ ನೀಡಿದ ಉಲ್ಲೇಖವಿದೆ.[90]

ನಂಜನಗೂಡು ತಾಲೂಕಿನ ಜೋಡಿಕಾಟೂರಿನ ಗ್ರಾಮದಲ್ಲಿ 2ನೇ ವೀರಬಲ್ಲಾಳನು ಸೋಮೇಶ್ವರ ದೇವಾಲಯವನ್ನು ನಿರ್ಮಾಣ ಮಾಡಿದ ವಿಚಾರವನ್ನು ಇಲ್ಲಿ ದೊರೆತ್ತಿರುವ ಕ್ರಿ.ಶ.1198ರ ಶಾಸನವು ದೃಢಪಡಿಸುತ್ತದೆ. ಇದೇ ಶಾಸನವು ಮುಂದುವರಿದು ಈತನ ಪ್ರಧಾನ ದಂಡನಾಯಕನಾದ ಗೌಡಯ್ಯನ ಅಧಿಕಾರದಲ್ಲಿ ದೇವಾಲಯಕ್ಕೆ ಕೆರೆಯನ್ನು ನಿರ್ಮಿಸಿದ ಬಗ್ಗೆ ಪ್ರಸ್ತಾಪವಿದೆ.[91]

ತಿ.ನರಸೀಪುರದ ತಾಲೂಕಿನ ಬನ್ನೂರಿನಲ್ಲಿ ದೊರೆತಿರುವ ಬಲ್ಲಾಳನ ಕ್ರಿ.ಶ.1202-03ರ ಶಾಸನದಲ್ಲಿ ಪಾರ್ವತಿದೇವಿಯ ನೈವೇದ್ಯಕ್ಕೆ ನೀಡಿದ ದಾನದ ಉಲ್ಲೇಖ ಹೊಂದಿದ್ದು, ಈತನ ಕಾಲದಲ್ಲಿ ಸ್ತ್ರೀ ದೇವರಿಗೆ ನೀಡಿದ ಮೊದಲ ದಾನದ ಉಲ್ಲೇಖವಾಗಿದೆ.[92]

ಮೈಸೂರು ತಾಲೂಕಿನ ಚಟ್ನಹಳ್ಳಿಪಾಳ್ಯದಲ್ಲಿ ದೊರೆತಿರುವ ಈತನ ಕ್ರಿ.ಶ.1210ರ ಶಾಸನವು ಮೂಲಸ್ಥಾನೇಶ್ವರ ದೇವರ ನಂದಾದೀವಿಗೆ ನೀಡಿದ ಉಲ್ಲೇಖವಿದೆ.[93] ಮೈಸೂರಿನ ಚಾಮುಂಡಿಬೆಟ್ಟದಲ್ಲಿರುವ ಮಹಾಬಲೇಶ್ವರ ದೇವಾಲಯವನ್ನು ಕ್ರಿ.ಶ.1211ರಲ್ಲಿ 2ನೇ ಬಲ್ಲಾಳನು ನಿರ್ಮಿಸಿದನೆಂದು ಆ ದೇವಾಲಯದ ಪಶ್ಚಿಮ ದಿಕ್ಕಿಗಿರುವ ಬಂಡೆಯ ಮೇಲೆ ಉಲ್ಲೇಖಿಸಲಾಗಿದೆ.[94]

ಹೆಚ್.ಡಿ.ಕೋಟೆ ತಾಲೂಕಿನ ಕಲ್ಲಂಬಾಳು ಗ್ರಾಮದಲ್ಲಿ ದೊರೆತಿರುವ ಕ್ರಿ.ಶ.1218ರ ಶಾಸನವು 2ನೇ ಬಲ್ಲಾಳನ ಕಾಲದಲ್ಲಿ ಆತನ ದಂಡನಾಯಕರಾದ ಕೇಶವದಂಡನಾಯಕ, ಮೊದವದಂಡನಾಯಕ ಎಂಬುವರು ಕಾಮೇಶ್ವರ ದೇವಾಲಯವನ್ನು ನಿರ್ಮಿಸಿದ ವಿಚಾರ ತಿಳಿದು ಬರುತ್ತದೆ.[95]

**2ನೇ ನರಸಿಂಹ**(ಕ್ರಿ.ಶ.1220-35):- ಎರಡನೆಯ ನರಸಿಂಹನ ಕಾಲದಲ್ಲಿ ಈ ಹಿಂದೆ ಬಲ್ಲಾಳ ಸ್ಥಾಪಿಸಿದ್ಧ ಸಾಮ್ರಾಜ್ಯ ಭದ್ರಪಟ್ಟುದಲ್ಲದೆ, ಅಂದು ತಮಿಳುನಾಡಿನಲ್ಲಿ ಆಳುತ್ತಿದ್ದ ಚೋಳರು ಬಹಳ

ಬಲಹೀನರಾಗಿ, ಪಾಂಡ್ಯರು ಹಾಗೂ ಮೊದಲಾದವರಿಂದ ಪೀಡಿತರಾಗಿದ್ದು, ಹಲವು ಸಂದರ್ಭಗಳಲ್ಲಿ ರಾಜ್ಯವನ್ನೂ ಕಳೆದುಕೊಂಡಿದ್ದರು. ಬಲ್ಲಾಳನ ಕಾಲದಿಂದಲೂ ಬೆಳೆದುಬಂದಿದ್ದ ಚೋಳ-ಹೊಯ್ಸಳ ರಕ್ತಸಂಬಂಧ ಮತ್ತು ತತ್ಕಾಲೀನ ತಮಿಳುನಾಡಿನ ಅಸ್ತವ್ಯಸ್ತ ಸ್ಥಿತಿಯನ್ನು ಚಾಕಚಕ್ಯತೆಯಿಂದ ಬಳಸಿಕೊಂಡ ನರಸಿಂಹ ಹಲವು ಬಾರಿ ತಮಿಳುನಾಡಿಗೆ ನುಗ್ಗಿ ಚೋಳ ವೈರಿಗಳನ್ನು ಸದೆಬಡಿದು ಚೋಳರಿಗೆ ರಾಜ್ಯ ದಕ್ಕಿಸಿಕೊಟ್ಟ. ಚೋಳರು ಕೃತಜ್ಞತೆಯಿಂದ ಪ್ರಾಯಶಃ ನರಸಿಂಹನ ರಾಜಕೀಯ ಚಾತುರ್ಯದಿಂದಲೂ ಇರಬಹುದು, ತಮಿಳುನಾಡಿನ ಕೊಯಮತ್ತೂರು, ತಿರುಚ್ಚಿರಾಪಳ್ಳಿ ಜಿಲ್ಲೆಯ ಹಲವು ಭಾಗಗಳನ್ನು ಹೊಯ್ಸಳರಿಗೆ ವಹಿಸಿಕೊಟ್ಟರು. ಇದರಿಂದಾಗಿ ನರಸಿಂಹನ ಕಾಲದಲ್ಲಿ ಹೊಯ್ಸಳ ರಾಜ್ಯ ತಮಿಳುನಾಡಿಗೂ ವಿಸ್ತರಿಸಿತು. ಇತ್ತ ರಾಜ್ಯ ವಿಸ್ತರಣೆಯಾದರೂ ಉತ್ತರದಲ್ಲಿ ಸೇವುಣರ ಧಾಳಿಗಳು ಮುಂದುವರಿಯುತ್ತಲೇ ಇದ್ದವು. ಆದರೂ ರಾಜ್ಯದ ಉತ್ತರ ದಕ್ಷಿಣದ ಎರಡು ಕಡೆಗಳಲ್ಲೂ ಸೈನ್ಯಾಚರಣೆಯಲ್ಲಿ ನಿರತನಾಗಿ ಹೊಯ್ಸಳ ರಾಜ್ಯವನ್ನು ಗಟ್ಟಿಯಾಗಿ ಉಳಿಸಿದ್ದಲ್ಲದೆ ದಕ್ಷಿಣದಲ್ಲಿ ವಿಸ್ತರಿಸಿದ್ದು ಎರಡನೆಯ ನರಸಿಂಹನ ಮುಖ್ಯ ಸಾಧನೆ. ಈ ಕಾಲದಿಂದ ಹೊಯ್ಸಳರ ಪ್ರಭಾವ ತಮಿಳುನಾಡಿನಲ್ಲಿ ಭದ್ರವಾಗಿ ನೆಲೆಯೂರಿದ್ದೂ ಗಮನಾರ್ಹ ಅಂಶ.[96] ಮೈಸೂರು ಜಿಲ್ಲೆಯಲ್ಲಿ 2ನೇ ನರಸಿಂಹನ ಕೆಲವು ಶಾಸನೋಕ್ತ ವೀರಗಲ್ಲುಗಳನ್ನು ಬಿಟ್ಟರೆ ಯುದ್ಧ ಮಾಡಿದ ಪ್ರಸಂಗಗಳು ಹಾಗೂ ದೇವಾಲಯಗಳ ನಿರ್ಮಿಸಿದ ಶಾಸನ ಉಲ್ಲೇಖಗಳು ದೊರೆಯುವುದಿಲ್ಲ.

**ಸೋಮೇಶ್ವರ(1235-53):-** ತತ್ಕಾಲೀನ ರಾಜಕೀಯದಲ್ಲಿ ಹೇಳಿಕೊಳ್ಳುವ ಚಾಕಚಕ್ಯತೆಯನ್ನೂ ತೋರಿಸಲಿಲ್ಲ. ಇವನು ಹೆಚ್ಚಾಗಿ ತಮಿಳುನಾಡಿನಲ್ಲೇ ಇರುತ್ತಿದ್ದುದರಿಂದ ಹೊಯ್ಸಳ ರಾಜ್ಯದ ಉತ್ತರದಲ್ಲಿ ಸೇವುಣರು ಸಾಕಷ್ಟು ಬಲಸಂವರ್ಧನೆ ಮಾಡಿಕೊಂಡಂತೆ ತೋರುತ್ತದೆ. ಆದರೆ ಹೊಯ್ಸಳ ರಾಜ್ಯಕ್ಕೇನೂ ಹೆಚ್ಚು ಧಕ್ಕೆಯಾಗಲಿಲ್ಲ. ಲಾಭವಂತೂ ಸಾಧ್ಯವೇ ಇರಲಿಲ್ಲ. ತಮಿಳುನಾಡಿನಲ್ಲಿ ಅಂದಿನ ರಾಜಕೀಯ ಸಮತೋಲನ ಅಸ್ತವ್ಯಸ್ತವಾದ್ದರಿಂದ ಹಲವು ಯುದ್ಧಗಳಲ್ಲಿ ಈತ ಭಾಗವಹಿಸಬೇಕಾಯಿತು. ಇವನು ಚೋಳರೊಡನೆಯೇ ಅಲ್ಲದೆ ಅವರ ವೈರಿಗಳಾಗಿದ್ದ ಪಾಂಡ್ಯರೊಡನೆಯೂ ರಕ್ತಸಂಬಂಧ ಬೆಳೆಸಿದ್ದ. ಈ ಎರಡು ವಂಶದವರ ಶಾಸನಗಳೂ ಸೋಮೇಶ್ವರನನ್ನು ಮಾವ ಎಂದು ಹೆಸರಿಸುತ್ತವೆ. ಆದರೆ ಇದನ್ನೇ ಲಾಭ ಮಾಡಿಕೊಂಡ ಸೋಮೇಶ್ವರ ಇಬ್ಬರ ನಡುವೆ ಯುದ್ಧವಾದಾಗ ಯಾವ ಕಡೆಗೂ ಒಲವು ತೋರಿಸದೆ, ಇಬ್ಬರನ್ನೂ ನಿಗ್ರಹಿಸಿ ಹೊಯ್ಸಳ ಪ್ರಭಾವವನ್ನು ಸುಮಾರು ತಮಿಳುನಾಡಿನಲ್ಲೆಲ್ಲ ಹರಡಿ ಆ ದೇಶದ ಪ್ರಬಲ ಶಕ್ತಿಯಾದದ್ದು ಇವನ ಮುಖ್ಯ ಸಾಧನೆ. ಈ ಕಾಲದಲ್ಲಿ ಹೊಯ್ಸಳ ರಾಜ್ಯ ಬಹು ವಿಸ್ತಾರವಾಗಿದ್ದುದರಿಂದಲೂ ಇವನ ಮಕ್ಕಳಾದ 3ನೆಯ ನರಸಿಂಹ ಮತ್ತು

ರಾಮನಾಥರಲ್ಲಿ ಸಾಮರಸ್ಯವಿಲ್ಲದ್ದರಿಂದಲೂ ಸೋಮೇಶ್ವರ ತನ್ನ ಆಳ್ವಿಕೆಯ ಕಡೆಯ ಭಾಗದಲ್ಲಿ ರಾಜ್ಯವನ್ನು ಇಬ್ಭಾಗ ಮಾಡಿ ಹಂಚಿದ.[97]

ಮೈಸೂರು ಜಿಲ್ಲೆಯಲ್ಲಿ ಸೋಮೇಶ್ವರನ ಕಾಲದ ಪ್ರಾಚೀನ ಶಾಸನವೆಂದರೆ ಕ್ರಿ.ಶ. 1228ರ ಶಾಸನವಾಗಿದೆ. ಈ ಶಾಸನದಲ್ಲಿ ಈತನ ಪೂರ್ವಜರ ಬಿರುದುಗಳ ಜೊತೆಗೆ ಮಗದ ರಾಜ್ಯ ನಿರ್ಮೂಲನಚಾರ್ಯ, ಚೋಳರಾಜ್ಯ ಪ್ರತಿಷ್ಠಾಪನಾಚಾರ್ಯ, ಶ್ರೀ ಹೊಯ್ಸಳವೀರ ಸೋಮೇಶ್ವರ ದೇವರ ಹೆಸರು ಎಂಬ ಬಿರುದುಗಳನ್ನು, ಬದನವಾಳು ಗ್ರಾಮದ ಮೂಲಸ್ಥಾನೇಶ್ವರ ದೇವರಿಗೆ ಹಾಗೂ ದೊಂಬೇಶ್ವರ ದೇವರಿಗೆ ಅರಸನ ಪರವಾಗಿ ಮಾರಗಾವುಂಡನ ಮಗ ಶಂಕರಗಾವುಂಡನು ನಿತ್ಯ ನೈವೇದ್ಯಕ್ಕೆ ದೇವದಾನ ನೀಡಿದ ಉಲ್ಲೇಖಗಳಿವೆ.[98]

ಕ್ರಿ.ಶ.1239ರ ಶಾಸನವು ಸೋಮೇಶ್ವರನ ಶಾಸನವಾಗಿದ್ದು, ತಲಕಾಡಿನ ಕೀರ್ತಿನಾರಾಯಣ ದೇವಾಲಯದ ಅಧಿಷ್ಠಾನದಲ್ಲಿದ್ದು, ಈ ಶಾಸನದಲ್ಲಿ ಚೋಳರ ಮೇಲಿನ ವಿಜಯದ ನೆನಪಿಗಾಗಿ ವಿಷ್ಣುವರ್ಧನನು ನಿರ್ಮಿಸಿದ ಕೀರ್ತಿನಾರಾಯಣ ದೇವಾಲಯಕ್ಕೆ ಸೋಮೇಶ್ವರನು ಏಳು ಗದ್ಯಾಣ ಹೊನ್ನನ್ನು ಕೊಡುಗೆಯಾಗಿ ನೀಡಿರುವ ಉಲ್ಲೇಖಗಳಿದು, ಈ ಶಾಸನವು ಸಂಪೂರ್ಣವಾಗಿ ತಮಿಳು ಲಿಪಿ ಮತ್ತು ಭಾಷೆಯಲ್ಲಿ ರಚನೆಯಾಗಿದೆ.[99] ಸಂಸ್ಕೃತ ಭಾಷೆ ಹಾಗೂ ತಮಿಳು ಲಿಪಿಗಳಲ್ಲಿ ಉಲ್ಲೇಖಗಳನ್ನು ಹೊಂದಿರುವ ಸೋಮೇಶ್ವರನ ಕ್ರಿ.ಶ.1239-40ರ ಶಾಸನವು ತಿ.ನರಸೀಪುರ ತಾಲೂಕಿನ ಜೋಡಿಬಸವನಪುರ ಗ್ರಾಮದಲ್ಲಿ ದೊರೆತಿದ್ದು, ಈ ಶಾಸನದಲ್ಲಿ ಈತನ ಮಹಾಪ್ರಧಾನ ದಂಡನಾಯಕ (ದಂಡನಾಯಕನ ಹೆಸರು ತೃಟಿತ ಗೊಂಡಿದೆ.) ಈತನ ಆಜ್ಞೆಯ ಮೇರೆಗೆ ಮಹಾಬಲೇಶ್ವರ ದೇವಾಲಯವನ್ನು ನಿರ್ಮಿಸಿರುವದು ದೃಢಪಡುತ್ತದೆ.[100]

ನಂಜನಗೂಡಿನ ಕಲ್ಕುಂದ ಗ್ರಾಮದಲ್ಲಿ ದೊರೆತಿರುವ ತಮಿಳು ಲಿಪಿ ಹಾಗೂ ತಮಿಳು ಭಾಷೆಯ ಕ್ರಿ.ಶ.1241ರ ಶಾಸನವು ಕೇದಾರೇಶ್ವರ ದೇವಾಲಯಕ್ಕೆ ಸೋಮೇಶ್ವರನು ದಾನ ನೀಡಿದ ಉಲ್ಲೇಖವಿದೆ.[101]

ಮೈಸೂರು ತಾಲೂಕಿನ ಕೆ.ಹೆಮ್ಮನಹಳ್ಳಿಯಲ್ಲಿರುವ ಕ್ರಿ.ಶ.1242-43ರ ಶಾಸನದಲ್ಲಿ ಸೋಮೇಶ್ವರನ ಕಾಲದಲ್ಲಿ ಶಂಭುವಯ್ಯ ಎಂಬುವವನು ಹೊಯ್ಸಳ ವೀರಬಲ್ಲಾಳನ ಕಾಲದಲ್ಲಿ ನಿರ್ಮಾಣವಾದ ಶಂಕರೇಶ್ವರ ದೇವಾಲಯಕ್ಕೆ ಕಂಬಗಳ ಮಂಟಪವನ್ನು ಮಾಡಿಸಿ ಕೊಟ್ಟಿರುವುದು ತಿಳಿದುಬರುತ್ತದೆ.[102]

ತಿ.ನರಸೀಪುರದ ಬನ್ನೂರಿನಲ್ಲಿ ಇರುವ ರಾಮಸ್ವಾಮಿ ದೇವಾಲಯದ ಉತ್ತರ ದಿಕ್ಕಿನಲ್ಲಿರುವ ಕಲ್ಲಿನಲ್ಲಿ ತಮಿಳು ಭಾಷೆ ಮತ್ತು ತಮಿಳು ಲಿಪಿಯಲ್ಲಿರುವ ಸೋಮೇಶ್ವರನ ಕಲ್ಲಿನಲ್ಲಿ ಕ್ರಿ.ಶ.1246ರ ಶಾಸನವಿದೆ. ಈ ಶಾಸನದಲ್ಲಿ ಸೋಮವಾರದಂದು ಸೋಮೇಶ್ವರನ ದಂಡನಾಯಕ ವಲ್ಲಾಳಭಟ್ಟರ ಮಗ ಗೋಪಿನಾಥನ್ ಎಂಬುವವನು ಸೋಮೇಶ್ವರನ ಪರವಾಗಿ ಆಳ್ವಾರ್‌ಗಳ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದಾನೆ.[103]

ಹೆಚ್.ಡಿ.ಕೋಟೆಯ ಹಿರಿನಂದಿ ಗ್ರಾಮದ ಸೋಮೇಶ್ವರ ದೇವಸ್ಥಾನದ ಮುಂದಿರುವ ಶಾಸನದಲ್ಲಿ ಗಂಗರ 3ನೇರಾಚಮಲ್ಲನು ನಿರ್ಮಿಸಿದ ಸೋಮೇಶ್ವರ ದೇವಾಲಯಕ್ಕೆ ಕ್ರಿ.ಶ.1253ರಲ್ಲಿ ಸೋಮೇಶ್ವರನು ದಾನ ನೀಡಿದ ಉಲ್ಲೇಖವಾಗಿದೆ.[104]ಇದೇ ಹೆಚ್.ಡಿ.ಕೋಟೆಯ ಕೆ.ಬೆಳತ್ತೂರು ಗ್ರಾಮದ ಕ್ರಿ.ಶ.1255ರ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ಈ ಶಾಸನವನ್ನು ಕೆತ್ತಿಸಲಾಗಿದ್ದು, ಇದರಲ್ಲಿ ಸೋಮೇಶ್ವರನು ತಮಿಳುನಾಡಿನ ಕಣ್ಣಾನೂರಿನಿಂದ ಆಳ್ವಿಕೆ ನಡೆಸುತ್ತಿರುವುದು ತಿಳಿದುಬಂದು ಈತನ ದಂಡನಾಯಕ ಅಳಲದೇವನು ಮಲ್ಲಿಕಾರ್ಜುನಸ್ವಾಮಿ ದೇವಾಲಯಕ್ಕೆ ನೀಡಿದ ಉಲ್ಲೇಖವಿದೆ.[105]

**3ನೇ ನರಸಿಂಹ**(ಕ್ರಿ.ಶ.1253-92):-ಹೊಯ್ಸಳ ರಾಜ್ಯದ ಕರ್ನಾಟಕ ಭಾಗವನ್ನು ಆಳುತ್ತಿದ್ದ 3ನೆಯ ನರಸಿಂಹನ ಕಾಲದಲ್ಲಿ ಇವನಿಗೂ ಇವನ ಮಲತಮ್ಮನಾದ ವೀರರಾಮನಾಥನಿಗೂ ನಡೆದ ದಾಯಾದಿ ಕಲಹಗಳಷ್ಟೇ ಪ್ರಮುಖವಾಗಿ ಕಂಡುಬರುತ್ತವೆ. ಹಲವು ಬಾರಿ ಸೇವುಣ ರಾಮಚಂದ್ರ ಮತ್ತು ಮಹಾದೇವ ಹೊಯ್ಸಳ ರಾಜ್ಯವನ್ನು ಕಬಳಿಸಲು ಪ್ರಯತ್ನಿಸಿದರಾದರೂ ಅದನ್ನು ಸಾಧಿಸಲು ಅವಕಾಶ ಕೊಡದಿದ್ದುದಷ್ಟೇ ಈ ನರಸಿಂಹನ ಸಾಧನೆ. ವಿಕ್ರಮಪುರದಿಂದ ಹೊಯ್ಸಳ ರಾಜ್ಯದ ತಮಿಳು ಭಾಗಗಳನ್ನು ಆಳುತ್ತಿದ್ದ ವೀರರಾಮನಾಥ (ಕ್ರಿ.ಶ.1253-95) ತನ್ನ ಆಳ್ವಿಕೆಯ ಪ್ರಾರಂಭದಲ್ಲೇ ಮದುರೆಯ ಜಟಾವರ್ಮನ್ ಸುಂದರಪಾಂಡ್ಯನಿಂದ ಪರಾಜಿತನಾಗಿ ತನ್ನ ರಾಜ್ಯದ ಹೆಚ್ಚು ಪ್ರದೇಶಗಳನ್ನು ಕಳೆದುಕೊಂಡು ಹೊಸೂರು ಬಳಿಯ ಕುಂದಾಣಿಯನ್ನು ರಾಜಧಾನಿಯಾಗಿ ಮಾಡಿಕೊಂಡು ತನ್ನ ಸಹೋದರ ನರಸಿಂಹನಿಗೆ ಸೇರಿದ ಪ್ರದೇಶಗಳನ್ನು ಅನೇಕ ವೇಳೆ ಮುತ್ತುವುದಷ್ಟೇ ಅವನು ಜೀವನ ಪರ್ಯಂತ ನಡೆಸಿದ ಕೆಲಸವಾಗಿದೆ.[106]

ಮೈಸೂರು ಜಿಲ್ಲೆಯಲ್ಲಿ ದೊರೆತಿರುವ 3ನೇ ನರಸಿಂಹನ ಪ್ರಾಚೀನ ಶಾಸನವೆಂದರೆ ಕೆ.ಆರ್.ನಗರ ತಾಲೂಕಿನ ದೆಗ್ಗನಹಳ್ಳಿ ಗ್ರಾಮದಲ್ಲಿ ದೊರೆತಿರುವ ಕ್ರಿ.ಶ.1259ರ ಶಾಸನವಾಗಿದೆ. ಈ ಶಾಸನದಲ್ಲಿ ದೆಗ್ಗನಹಳ್ಳಿ ಮಹಾಜನತೆಗೋಸ್ಕರ 3ನೇನರಸಿಂಹನ ಬಸವೇಶ್ವರ ದೇವಾಲಯವನ್ನು ನಿರ್ಮಿಸಿ ಕೊಟ್ಟಿದ್ದ ಬಗ್ಗೆ ತಿಳಿಸುತ್ತದೆ.[107]

3ನೇನರಸಿಂಹನ ಮತ್ತೊಂದು ಶಾಸನ ನರಸೀಪುರ ತಾಲೂಕಿನ ಮೂಗೂರಿನಲ್ಲಿ ದೊರೆತ್ತಿದ್ದು, ಕ್ರಿ.ಶ.1261ರಲ್ಲಿ 3ನೇನರಸಿಂಹನ ಆಳ್ವಿಕೆಯಲ್ಲಿ ಈತನ ಸುಂಕದ ಅಧಿಕಾರಿಯಾದ ಹೆಗಡೆ ರಾಚಣ್ಣನ ಮಗ ಶಂಕರಣ್ಣನು ತಿಬ್ಬಾದೇವಿ ದೇವಾಲಯಕ್ಕೆ ದಾನ ನೀಡಿದ ಪ್ರಸ್ತಾಪವಿದೆ.[108] ನರಸೀಪುರ ತಾಲೂಕಿನ ಸೋಮನಾಥಪುರದ ಕೇಶವದೇವಾಲಯವನ್ನು ನಿರ್ಮಿಸಿದ ಕ್ರಿ.ಶ.1268ರ ಶಾಸನವಿದ್ದು, ಈ ಶಾಸನದಲ್ಲಿ ಪ್ರಮುಖವಾಗಿ ದೇವಾಲಯದ ನಿರ್ಮಾಣದ ಶಿಲ್ಪಿಗಳಾದ ನಂಜಯ್ಯ, ಬಲಯ್ಯ, ಬರ್ಮಯ್ಯ, ಮಲ್ಲಿತಮ್ಮ, ಲೋಹಿತಾ ಎಳೆಮಸಯ್ಯ, ಮರನ ಮಸಡಿತಮ್ಮ, ಚೌಡಯ್ಯ, ನಭನ, ಮಲ್ಲಿ, ಮುಂತಾದ ಶಿಲ್ಪಿಗಳ ಹೆಸರುಗಳಿದ್ದು, ಹೊಯ್ಸಳರ ಕಾಲದ ಶಿಲ್ಪಿಗಳ ಹೆಸರುಗಳನ್ನು ತಿಳಿಸುವ ಮಹತ್ವ ಪೂರ್ಣವಾದ ಶಾಸನವಾಗಿದೆ. ಈ ಶಾಸನದಿಂದ ವಿಷ್ಣುವರ್ಧನ ಕಾಲದಲ್ಲಿ ನಿರ್ಮಿವಾದ ಪಂಚನಾರಾಯಣ ದೇವಾಲಯಗಳ ಪಟ್ಟಿಗೆ ಈ ದೇವಾಲಯ ಸೇರುವುದಿಲ್ಲ ಎಂಬುದು ಖಚಿತವಾಗಿರುತ್ತದೆ.[109]

ಕ್ರಿ.ಶ.1269-70ರ ಶಾಸನವು ಸೋಮನಾಥಪುರ ಕೇಶವ ದೇವಾಲಯದ ಹೊರಗಿನ ಮೈದಾನದ ತುಂಡು ಕಲ್ಲಿನಲ್ಲಿದೆ. ಹೊಯ್ಸಳ ಚಕ್ರವರ್ತಿ 3ನೇನರಸಿಂಹನು ಸೋಮನಾಥಪುರದ ಆಚಾರ್ಯರ ಅಡಕೆಯ ತೋಟಕ್ಕೆ ಕಾಲುವೆಗಳನ್ನು ನಿರ್ಮಿಸಿಕೊಟ್ಟ ಉಲ್ಲೇಖಗಳಿವೆ.[110]ತಲಕಾಡು ಕೀರ್ತಿನಾರಾಯಣ ದೇವಾಲಯಕ್ಕೆ 3ನೇನರಸಿಂಹನು ಕ್ರಿ.ಶ.1270ರಲ್ಲಿ ಭೂಮಿಯನ್ನು ದಾನ ನೀಡಿದ ಉಲ್ಲೇಖಗಳಿವೆ.[111]

ತಿ.ನರಸೀಪುರದಲ್ಲಿರುವ ಬೆಟ್ಟಹಳ್ಳಿಯ ಮಲ್ಲಿಕಾರ್ಜುನ ದೇವರಿಗೆ 3ನೇ ನರಸಿಂಹನು ದೇವದಾನವಾಗಿ ನೀಡಿರುವ ಉಲ್ಲೇಖಗಳನ್ನು ಹೊಂದಿರುವ ಕ್ರಿ.ಶ.1279ರ ತಮಿಳು ಲಿಪಿ ಮತ್ತು ತಮಿಳು ಭಾಷೆಯ ಶಾಸನವಿದೆ.[112]

ಸೋಮನಾಥಪುರದ ಕೇಶವ ದೇವಾಲಯವನ್ನು 3ನೇನರಸಿಂಹನು ನಿರ್ಮಿಸಿದ ಉಲ್ಲೇಖಗಳನ್ನು ಹೊಂದಿರುವ ಕ್ರಿ.ಶ.1276ರ ಈ ಶಾಸನದಿಂದ ತಿಳಿದು ಬಂದಿರುತ್ತದೆ.[113]

3ನೇ ನರಸಿಂಹನ ಕ್ರಿ.ಶ. 1277ರ ಶಾಸನವು ಮಲೆಯೂರಿನಲ್ಲಿ ದೊರೆತಿದ್ದು, ಈ ಶಾಸನದಲ್ಲಿ ಇತರ ಬಿರುದಾವಳಿಗಳೆಲ್ಲವು ಉಲ್ಲೇಖಗೊಂಡಿದ್ದು, ಇಲ್ಲಿನ ಸೋಮನಾಥ ದೇವರಿಗೆ 3ನೇ ನರಸಿಂಹನು ದೇವದಾನ ನೀಡಿದ ಉಲ್ಲೇಖವಿದ್ದು, ಈ ಶಾಸನವನ್ನು ಕೆತ್ತಿಸಿದವನು ಈತನ ದಂಡನಾಯಕನಾದ ಮಾಚಿದೇವ ಎಂಬುದನ್ನು ತಿಳಿಸುತ್ತದೆ.[114]

ನಂಜನಗೂಡಿನ ದಾಸನೂರು ಗ್ರಾಮದಲ್ಲಿರುವ ವಿಶ್ವನಾಥ ದೇವರಿಗೆ ನರಸಿಂಹನು ಭೂಮಿಯನ್ನು ದಾನಬಿಟ್ಟ ಉಲ್ಲೇಖಗಳನ್ನು ಹೊಂದಿರುವ ಕ್ರಿ.ಶ.1278ರ ಶಾಸನವಿದೆ.

ಕ್ರಿ.ಶ.1278ರಲ್ಲೇ ಕೆತ್ತಿರುವ ನರಸಿಂಹನ ಮತ್ತೊಂದು ಶಾಸನವು ತಿ.ನರಸೀಪುರ ತಾಲೂಕಿನ ಆಲಗೂಡು ಗ್ರಾಮದ ಕರಿಬೊಮ್ಮಪ್ಪನ ಗುಡಿಯನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ.[115]

ತಿ.ನರಸೀಪುರದ ಮೂಗೂರಿನಲ್ಲಿ 3ನೇ ನರಸಿಂಹನ ಆಳ್ವಿಕೆಯ ಕ್ರಿ.ಶ.1279ರಲ್ಲಿ ಕೆತ್ತಿಸಿದ ಶಾಸನವಿದ್ದು, ಇದರಲ್ಲಿ ಗ್ರಾಮದ ಸಮಸ್ತ ಪ್ರಜೆಗಳು ಸೇರಿ ದೇಶನಾಥದೇವರನ್ನು ಪ್ರತಿಷ್ಠಾಪಿಸಿದ ಉಲ್ಲೇಖವಿದೆ.[116]

3ನೇನರಸಿಂಹನ ಕ್ರಿ.ಶ.1281ರ ಶಾಸನವು ಸೋಮನಾಥಪುರದ ಕೇಶವ ದೇವಾಲಯದಲ್ಲಿದ್ದು, ಈ ಶಾಸನದಲ್ಲಿ ವೈಷ್ಣವ ಆಚಾರ್ಯರುಗಳಿಗೆ ಉಂಬಳಿಯಾಗಿ 14 ಹಳ್ಳಿಗಳನ್ನು ದತ್ತಿಯಾಗಿ ಬಿಟ್ಟನೆಂದು ತಿಳಿದು ಬರುತ್ತದೆ.[117]

3ನೇ ನರಸಿಂಹನ ಕ್ರಿ.ಶ.1282ರ ಶಾಸನವು ನಂಜಗೂಡಿನ ದೊಡ್ಡಹೊಮ್ಮ ಗ್ರಾಮದಲ್ಲಿದ್ದು, ಸೋಮೇಶ್ವರ ದೇವರಿಗೆ ನಂದಾದೀವಿಗೆಗೆ ಗಾಣವನ್ನು ಕೊಡುಗೆಯಾಗಿ ನೀಡಿರುವುದನ್ನು ಕಾಣಬಹುದು.[118] ಇದೇ ನಂಜನಗೂಡಿನ ತಾಯೂರಿನಲ್ಲಿರುವ ವರದರಾಜಸ್ವಾಮಿ ದೇವಾಲಯದ ಉತ್ತರ ದಿಕ್ಕಿನ ಕಲ್ಲಿನಲ್ಲಿ 3ನೇನರಸಿಂಹನ ಕಾಲದ ಕ್ರಿ.ಶ.1285ರ ಶಾಸನವಿದ್ದು, ವರದರಾಜಸ್ವಾಮಿಗೆ ಪೆರುಮಾಳ ದಂಡನಾಯಕನು ದಾನ ನೀಡಿದ ಉಲ್ಲೇಖವಿದೆ.[119]ನಂಜನಗೂಡು ತಾಲೂಕಿನ ಸಣ್ಣಮಲ್ಲಿಪುರದ ಕ್ರಿ.ಶ.1286ರ ಶಾಸನದಲ್ಲಿ 3ನೇ ನರಸಿಂಹನು ತಗಡೂರಿನ ಮೂಲಸ್ಥಾನೇಶ್ವರ ದೇವಾಲಯಕ್ಕೆ ದಾನ ದತ್ತಿ ನೀಡಿದ್ದ ಉಲ್ಲೇಖವಿದೆ.[120]

ಕ್ರಿ,ಶ.1288ರ ಮತ್ತೊಂದು ಶಾಸನವು ನರಸೀಪುರದ ಕಾವೇರಿಪುರ ಮಾರಿಚವಾಡಿಯ ಉತ್ತರದ ವಾಯುವ್ಯ ದಿಕ್ಕಿನಲ್ಲಿದ್ದು, ಇಲ್ಲಿನ ಮಹಾಜನಗಳಿಗೆ ನರಸಿಂಹ ದೇವರು ಭೂಮಿಯನ್ನು ಕಾಣಿಕೆಯಾಗಿ ನೀಡಿದ ಉಲ್ಲೇಖವಿದೆ.[121]

ಮೈಸೂರು ಜಿಲ್ಲೆಯಲ್ಲಿ ಕಂಡುಬರುವ 3ನೇ ವೀರನರಸಿಂಹನ ಕಾಲದ ಕೊನೆಯ ಶಾಸನ ಕ್ರಿ.ಶ.1290ರಲ್ಲಿ ಬರೆಯಲ್ಪಟ್ಟಿದ್ದು, ಈ ಶಾಸನವು 3ನೇನರಸಿಂಹನು ತಿ.ನರಸೀಪುರ ತಾಲೂಕಿನ ತಡಿಮಾಲಂಗಿಯಲ್ಲಿ ಮಹಾಲಿಂಗೇಶ್ವರ ದೇವಾಲಯವನ್ನು ನಿರ್ಮಿಸಿದನೆಂದು ತಿಳಿಸುತ್ತದೆ. ಇದನ್ನು ಬರೆಸಿದವನು ಮಹಾದಂಡನಾಯಕನಾದ ಪೆರುಮಾಳದೇವ ಎಂದು ತಿಳಿದುಬರುತ್ತದೆ.[122]

**3ನೇ ಬಲ್ಲಾಳ**(ಕ್ರಿ.ಶ.1292-1343):-ರಾಮನಾಥ ಮತ್ತು ನರಸಿಂಹರ ಕಾಲದಲ್ಲಿ ತಮಿಳುನಾಡಿನ ಮೇಲೆ ಹೊಂದಿದ್ದ ಹೊಯ್ಸಳರ ಪ್ರಭುತ್ವಕ್ಕೆ ಚ್ಯುತಿ ಬಂದಿತು. 3ನೆಯ

ನರಸಿಂಹನ ಮಗ ಮೂರನೆಯ ಬಲ್ಲಾಳನ ಆಳ್ವಿಕೆಯ ಮೊದಲೆರಡು ದಶಕಗಳು ಆಶಾದಾಯಕವಾಗಿದ್ದವು. ಈತ ಪಟ್ಟಕ್ಕೆಬಂದ ಕೂಡಲೇ ದಾಯಾದಿ ಕಲಹದಿಂದ ಅಧೋಗತಿಗೆ ಇಳಿದಿದ್ದ ರಾಜ್ಯವನ್ನು ಸುಭದ್ರ ಸ್ಥಿತಿಗೆ ತರಲು ಯತ್ನಿಸಿದ. ಕ್ರಿ.ಶ.1301ರ ವೇಳೆಗೆ ರಾಮನಾಥನ ಆಡಳಿತದಲ್ಲಿ ಇದ್ದ ಪ್ರದೇಶಗಳನ್ನು ಪೂರ್ಣವಾಗಿ ವಶಪಡಿಸಿಕೊಂಡು ಹೋಳಾಗಿದ್ದ ರಾಜ್ಯವನ್ನು ಒಂದುಗೂಡಿಸಿದ. ಕ್ರಿ.ಶ.1302ರ ಹೊತ್ತಿಗೆ ಸೇವುಣರ ಮೇಲೂ ಯುದ್ಧ ಹೂಡಿ ರಾಜ್ಯದ ಉತ್ತರದ ಗಡಿಯನ್ನು ಭದ್ರಪಡಿಸಿ, ಹೊಯ್ಸಳ ರಾಜ್ಯದ ಹಿಂದಿನ ಪ್ರಭಾವೀ ಸ್ಥಿತಿಯನ್ನು ಸಾಧಿಸಿದ. ಆದರೆ ಬಲ್ಲಾಳನ ಕಾಲ ದಕ್ಷಿಣಭಾರತದ ಇತಿಹಾಸದಲ್ಲಿ ಸಂದಿಗ್ಧ ಕಾಲ. ಅತ್ತ ಉತ್ತರ ಭಾರತದಲ್ಲಿ ಮುಸಲ್ಮಾನ ಅರಸರು ಪ್ರಬಲರಾಗಿ ದಕ್ಷಿಣ ಭಾರತದ ಮೇಲೂ ಕಣ್ಣು ಹಾಯಿಸುವ ಸ್ಥಿತಿಗೇರಿದ್ದರು.

ಕ್ರಿ.ಶ.1310ರ ವೇಳೆಗೆ ಅಲ್ಲಾವುದ್ದೀನ್ ಖಿಲ್ಜಿಯ ಅಪ್ಪಣೆಯ ಮೇರೆಗೆ ಅವನ ದಂಡನಾಯಕನಾದ ಮಲ್ಲಿಕಾಫರ್ ದೇವಗಿರಿಯ ಸೇವುಣರನ್ನು ಸೋಲಿಸಿ ಕರ್ನಾಟಕ ಮತ್ತು ತಮಿಳುನಾಡುಗಳನ್ನು ಜಯಿಸಿ ಅಪರಿಮಿತ ಐಶ್ವರ್ಯವನ್ನು ದೋಚುವುದಕ್ಕಾಗಿ ದೋರಸಮುದ್ರದತ್ತ ಮುಂದುವರಿದ. ಇವನು ಹೊಯ್ಸಳ ರಾಜ್ಯದ ಗಡಿಗಳನ್ನು ಪ್ರವೇಶಿಸುತ್ತಿದ್ದ ಸಮಯದಲ್ಲಿ ಬಲ್ಲಾಳ ತಮಿಳುನಾಡಿನಲ್ಲಿ ತನ್ನ ಪ್ರಭಾವ ಸ್ಥಾಪಿಸುವ ಯತ್ನದಲ್ಲಿದ್ದ. ಹಲವು ಭಾಗಗಳು ಶತ್ರುಗಳ ಧಾಳಿಗೆ ಸಿಕ್ಕಿ ಪಾಳುಬಿದ್ದವು. ಬಲ್ಲಾಳ ಈ ವಿಷಮ ಪರಿಸ್ಥಿತಿಯಿಂದ ಪಾರಾಗಲು ಮಲ್ಲಿಕಾಫರನಿಗೆ ಕಪ್ಪ ಕಾಣಿಕೆಯನ್ನು ನೀಡಿ ಒಪ್ಪಂದ ಮಾಡಿಕೊಂಡ. ಮಹಮ್ಮದೀಯ ಧಾಳಿ ಕೇವಲ ಆಕಸ್ಮಿಕವೆಂದು ಭಾವಿಸಿದ್ದ ಬಲ್ಲಾಳ ಪುನಃ ಹಳೆಯ ರಾಜಕೀಯ ಅಂತರ್ಯುದ್ಧಗಳಲ್ಲಿ ತೊಡಗಿದ. ತಮಿಳುನಾಡಿನಲ್ಲಿ ಪಾಂಡ್ಯ ವಂಶದ ಈರ್ವರು ಅಧಿಕಾರಕ್ಕಾಗಿ ಕಚ್ಚಾಡುತ್ತಿದ್ದಾಗ ಒಬ್ಬನಿಗೆ ಬೆಂಬಲ ನೀಡಿ ಅವನಿಗೆ ರಾಜ್ಯ ದಕ್ಕಿಸಿಕೊಟ್ಟು, ಇದೇ ಸಂದರ್ಭದಲ್ಲಿ ತಿರುವಣ್ಣಾಮಲೈ ಮತ್ತು ಸುತ್ತಲಿನ ಪ್ರದೇಶಗಳನ್ನು ಹೊಯ್ಸಳ ರಾಜ್ಯಕ್ಕೆ ಸೇರಿಸಿಕೊಂಡ. ಆದರೆ ಮಹಮ್ಮದೀಯರ ಉತ್ಕರ್ಷವನ್ನು ಗಮಿನಿಸಿ ದಕ್ಷಿಣಭಾರತದ ತಮ್ಮ ಆಳ್ವಿಕೆಯನ್ನು ಅಂತರ್ಯುದ್ಧದಲ್ಲಿ ತೊಡಗಿ ಎಲ್ಲರೂ ಬಲಹೀನರಾಗುತ್ತಿದ್ದುದ್ದು ಮುಂದಿನ ರಾಜಕೀಯ ದುರಂತಕ್ಕೆ ದಾರಿಯಾಯಿತು. ಕ್ರಿ.ಶ.1325ರಲ್ಲಿ ಪುನಃ ಉತ್ತರದಿಂದ ಉಪದ್ರವ ತಲೆದೋರಿತು. ಆ ವೇಳೆಗೆ ದೆಹಲಿಯ ಸಾಮ್ರಾಟನಾಗಿದ್ದ ಮಹಮ್ಮದ್ ಬಿನ್ ತುಗಲಕ್ ದಖನ್ ಪ್ರಸ್ಥಭೂಮಿಯವರೆಗೂ ರಾಜ್ಯ ವಿಸ್ತರಿಸಿದ್ದ. ತನ್ನ ವಿರುದ್ಧ ದಂಗೆಯೆದ್ದ ಬಹಾವುದ್ದೀನ್‌ನನ್ನು ಸೆರೆಹಿಡಿಯಲು ಮಹಮ್ಮದ್ ಬಿನ್ ತುಗಲಕ್ ಕಳುಹಿಸಿದ್ದ ಸೈನ್ಯದಿಂದ ವಾರಂಗಲ್ ಮತ್ತು ಕಂಪಲಿಯ ರಾಜಮನೆತನಗಳು ನಿರ್ನಾಮವಾದವು. ಬಹಾವುದ್ದೀನನನ್ನು ಮಹಮ್ಮದ್ ಬಿನ್ ತುಗಲಕ್‌ನ ಸೈನ್ಯಕ್ಕೆ ಒಪ್ಪಿಸಿ ವೀರಬಲ್ಲಾಳ ಮಹಮದೀಯರ ಆಕ್ರಮಣದಿಂದ ತನ್ನ ರಾಜ್ಯವನ್ನು

ಪಾರುಮಾಡಿದ. ಅನಂತರ ಬಲ್ಲಾಳ ಮಹಮದೀಯ ರಾಜ್ಯಗಳ ನಿಜಶಕ್ತಿಯನ್ನು ಅರಿತಂತೆ ತೋರುತ್ತದೆ. ಮುಂದೆ ತನ್ನ ರಾಜ್ಯದ ಗಡಿಗಳಲ್ಲಿ ಉಪರಾಜಧಾನಿಗಳನ್ನು ಸ್ಥಾಪಿಸಿ ರಕ್ಷಣೆಗಾಗಿ ಸೈನ್ಯದ ತುಕಡಿಗಳನ್ನು ನೇಮಿಸಿದ. ಇವನು ಶಕ್ತಿಯುತನಾಗಿ ಪಶ್ಚಿಮ–ಪೂರ್ವ ಸಮುದ್ರ ಪರ್ಯಂತದ ರಾಜ್ಯವನ್ನು ಅನುಭವಿಸುತ್ತಿದ್ದರೂ ಉತ್ತರದಲ್ಲಿ ದೇವಗಿರಿಯಲ್ಲೂ, ದಕ್ಷಿಣದಲ್ಲಿ ಮಧುರೆಯಲ್ಲೂ ಮುಸಲ್ಮಾನ ರಾಜ್ಯಗಳು ನೆಲೆಗೊಂಡಿದ್ದವು. ಮುಂದೆ ದೊಡ್ಡ ಸಾಮ್ರಾಜ್ಯ ಸ್ಥಾಪನೆಗೆ ರಾಜಧಾನಿಯಾದ ವಿಜಯನಗರ ಅಥವಾ ಹಂಪಿಯಲ್ಲೂ ತನ್ನ ಬಲವನ್ನು ಸ್ಥಾಪಿಸಿದ. ಬಲ್ಲಾಳ ಉತ್ತರದಿಂದ ಬಂದ ಈ ಹೊಸ ರಾಜಕೀಯ ಶಕ್ತಿಯನ್ನು ಎದುರಿಸಲು ಇಲ್ಲಿ ಉಳಿದಿದ್ದ ಏಕೈಕ ರಾಜನಾಗಿದ್ದ. ಆದರೆ ಕಾಲಕ್ಕೆ ತಕ್ಕ ಹೊಸ ರಾಜನೀತಿಯನ್ನು ರೂಪಿಸಿಕೊಳ್ಳುವ ಇವನ ಕ್ರಮ ಬಹು ತಡವಾಗಿ ಹುಟ್ಟಿತು.

ಬಲ್ಲಾಳ ಅಪರಿಮಿತ ಸೈನ್ಯದೊಡನೆ ಕ್ರಿ.ಶ.1342ರಲ್ಲಿ ತಮಿಳುನಾಡಿಗೆ ಹೋದ. ಕೊಪ್ಪಂ ಕಣ್ಣಾನೂರಿನ ಬಳಿಯಲ್ಲಿ ಮಧುರೆಯ ಸುಲ್ತಾನನ ಸೈನ್ಯಕ್ಕೂ ಹೊಯ್ಸಳ ಸೈನ್ಯಕ್ಕೂ ಕದನ ನಡೆದು ಮಹಮದೀಯ ಸೈನ್ಯ ಸೋಲನ್ನು ಅನುಭವಿಸಿದರೂ ಶತ್ರುಗಳ ಕುತಂತ್ರದಿಂದ ಬಲ್ಲಾಳ ಅವರ ಸೆರೆಯಾಗಿ ಕೊನೆಗೆ ಬಲಿಯಾದ (ಕ್ರಿ.ಶ.1343) ಹೊಯ್ಸಳ ಸಾಮ್ರಾಜ್ಯ ಅಸ್ತಂಗತವಾಯಿತು. ಇವನ ಮಗ ವಿರೂಪಾಕ್ಷ ಪಟ್ಟವೇರಿದರೂ ತನ್ನ ದುರ್ಬಲತೆಯಿಂದಾಗಿ ಕೆಲವೇ ವರ್ಷಗಳಲ್ಲಿ ರಾಜಕೀಯದಿಂದ ಕಣ್ಮರೆಯಾದ. ಆದರೆ ಮೂರನೆಯ ಬಲ್ಲಾಳ ತನ್ನ ಆಳ್ವಿಕೆಯ ಕೊನೆಯ ಭಾಗದಲ್ಲಿ ದಕ್ಷಿಣದಲ್ಲಿ ಹಿಂದೂ ರಾಜ್ಯವನ್ನು ಸ್ಥಾಪಿಸಲು ಹೊಂದಿದ್ದ ಉದ್ದೇಶ ಬೀಜ ಬಲವಾಗಿ ಬೇರೂರಿದ್ದು, ಕ್ರಿ.ಶ.1336ರಲ್ಲಿ ಹುಟ್ಟಿದ ವಿಜಯನಗರ ಸಾಮ್ರಾಜ್ಯದಲ್ಲಿ ಫಲ ನೀಡಿತು.[123]

3ನೇ ಬಲ್ಲಾಳನ ಕಾಲದ ಮೈಸೂರಿನ ಜಿಲ್ಲೆಯಲ್ಲಿ ದೊರೆತಿರುವ ಪ್ರಾಚೀನ ಶಾಸನವೆಂದರೆ ಕ್ರಿ.ಶ.1292ರ ಶಾಸನವಾಗಿದೆ. ಈ ಶಾಸನದಲ್ಲಿ ನಂಜನಗೂಡಿನ ಹೆಮ್ಮರಗಾಲ ವೇಣುಗೋಪಾಸ್ವಾಮಿಯ ಪ್ರಾಕಾರದ ಬಳಿ ನಿಲ್ಲಿಸಿದ್ದು, ಈ ಶಾಸನದಲ್ಲಿ 3ನೇ ವೀರಬಲ್ಲಾಳನು ಆಜ್ಞೆಯ ಮೇರೆಗೆ ಆತನ ದಂಡನಾಯಕರಾದ ಗೋಪಿಯ ದಂಡನಾಯಕ, ಭೀಮೆಯದಂಡನಾಯಕ, ಪೆರುಮಾಳ ದಂಡನಾಯಕಗಳು ವೇಣುಗೋಪಾಲಸ್ವಾಮಿ ದೇವಾಲಯವನ್ನು ನಿರ್ಮಿಸಿದ ಉಲ್ಲೇಖವಿದೆ.[124]

ಈತನ ಕ್ರಿ.ಶ.1293ರ ಶಾಸನವು ಹೆಚ್.ಡಿ.ಕೋಟೆಯ ಕೆ.ಬೆಳತ್ತೂರಿನಲ್ಲಿದ್ದು, ಇಲ್ಲಿನ ಬಾಣೇಶ್ವರ ಗುಡಿಯ ನಿರ್ಮಾಣದ ಬಗ್ಗೆ ತಿಳಿಸುತ್ತದೆ.[125]3ನೇ ಬಲ್ಲಾಳ ಮತ್ತೊಂದು 1296ರ ಶಾಸನವು ದೊಡ್ಡಹೊಮ್ಮದ ಹೊಲವೊಂದರಲ್ಲಿ ದೊರೆತಿದ್ದು, ಇದರಲ್ಲಿ ಹಾರುವಗಾವುಂಡನ

ಮಗ ಸೋಮಣ್ಣನು ಯುದ್ಧದಲ್ಲಿ ಹೋರಾಡಿ ಸ್ವರ್ಗಸ್ಥನಾದ ವಿವರಗಳಿವೆ.[126] 3ನೇಬಲ್ಲಾಳನು ನಂಜನಗೂಡಿನ ಹೆಡತಲೆ ದೇವಾಲಯದಲ್ಲಿ ಬೊಮ್ಮದೇವರ ಗುಡಿಯನ್ನು ನಿರ್ಮಿಸಿದನೆಂದು ನಂಜನಗೂಡಿನ ಕ್ರಿ.ಶ.1297–98ರ ಶಾಸನದಿಂದ ತಿಳಿದುಬರುತ್ತದೆ.[127] ಕ್ರಿ.ಶ.1300ರ ಶಾಸನವು 3ನೇ ನರಸಿಂಹನು ಸೋಮನಾಥಪುರದಲ್ಲಿ ಕೇಶವ ದೇವಾಲಯದ ಪೂಜಾ ಕೈಂಕರ್ಯಕ್ಕೆ 3ನೇಬಲ್ಲಾಳನು ದಾನ ನೀಡಿರುವ ಉಲ್ಲೇಖವಿದೆ.[128] ತಿ.ನರಸೀಪುರದಲ್ಲಿರುವ ಜೋಡಿ ಬಸವನಪುರದ ಮಹಾಬಲೇಶ್ವರ ದೇವಾಲಯದ ಅಧಿಷ್ಠಾನದಲ್ಲಿ ತಮಿಳು ಲಿಪಿ ಮತ್ತು ತಮಿಳು ಭಾಷೆಯಲ್ಲಿ ಕೆತ್ತಲ್ಪಟ್ಟಿರುವ ಕ್ರಿ.ಶ.1301–1302ರ 3ನೇಬಲ್ಲಾಳನ ಶಾಸನವಿದ್ದು, ಈ ದೇವಾಲಯಕ್ಕೆ ನಾಲ್ಕು ಗದ್ಯಾಣಗಳನ್ನು ಕೊಡುಗೆ ನೀಡಿದವೆಂದು ತಿಳಿದುಬರುತ್ತದೆ.[129] ತಿ.ನರಸೀಪುರದ ಮತ್ತೊಂದು ಶಾಸನವು ಕುರುಬೂರು ಗ್ರಾಮದಲ್ಲಿ ದೊರೆತಿದ್ದು, ಕ್ರಿ.ಶ.1303ರಲ್ಲಿ 3ನೇಬಲ್ಲಾಳನು ಹೆಗ್ಗೇಶ್ವರ ದೇವರ ನಂದಾದೀವಿಗೆಗೆ ದಾನವನ್ನು ದಾನ ನೀಡಿದ ಉಲ್ಲೇಖವಿದೆ.[130]

ಈತನ ಮತ್ತೊಂದು ಕ್ರಿ.ಶ.1309 ಶಾಸನದಲ್ಲಿ ತಿ.ನರಸೀಪುರದ ಹಿರಿಯೂರಿನ ಜಲಂಧರೇಶ್ವರ ದೇವಾಲಯವನ್ನು 3ನೇಬಲ್ಲಾಳನು ನಿರ್ಮಿಸಿರುವ ಉಲ್ಲೇಖಗಳಿದ್ದು, ಶಾಸನವನ್ನು ಬರೆದ ಮಲ್ಲಪ್ಪ ಹಾಗೂ ಕೆತ್ತಿದ ಹೂವಿಯೋಜನ ಮಗ ಕಂಭ ಎಂಬ ಉಲ್ಲೇಖ ದೊರೆತಿದ್ದು, ಹೊಯ್ಸಳ ಶಿಲ್ಪಿಯಾದ ಕಂಭನು ಹೂವಿಯೋಜನ ಮಗನೇ ಆಗಿದ್ದಾನೆ. ಈ ತಂದೆ ಮಕ್ಕಳಿಬ್ಬರು ಹೊಯ್ಸಳರ ಶಿಲ್ಪಿಗಳಾಗಿದ್ದರೆಂದು ಈ ಶಾಸನನದಿಂದ ತಿಳಿದುಬರುತ್ತದೆ.[131]

ಹೊಯ್ಸಳರ ರಾಜ 3ನೇಬಲ್ಲಾಳನ ಕಾಲದಲ್ಲಿ ಆತನ ಮಹಾದಂಡನಾಯಕರಾದ ಮೊದವದಂಡನಾಯಕ ಪೆರುಮಾಳ ದಂಡನಾಯಕರು ನಂಜನಗೂಡು ತಾಲೂಕಿನ ಹೆಡತಲೆ ಗ್ರಾಮದಲ್ಲಿ ಚನ್ನಿಗರಾಯ ದೇವಾಲಯವನ್ನು ನಿರ್ಮಿಸಿದನೆಂದು ಕ್ರಿ.ಶ.1314ರ ಶಾಸನದಲ್ಲಿ ಉಲ್ಲೇಖಗಳಿವೆ.[132]

ಹೆಚ್.ಡಿ.ಕೋಟೆಯ ಬಸಪ್ಪಹಳ್ಳಿಯ ಹೊಲವೊಂದರಲ್ಲಿ 3ನೇ ಬಲ್ಲಳನ ಕ್ರಿ.ಶ.1327ರ ಶಾಸನವಿದ್ದು. ಇದರಲ್ಲಿ ಹೆಗ್ಗಡದೇವನ ಮಗನಾದ ಪೆರುಮಾಳದೇವನು ಇಲ್ಲಿನ ಬ್ರಾಹ್ಮಣರಿಗೆ ಅಗ್ರಹಾರವನ್ನು ನಿರ್ಮಿಸಿಕೊಟ್ಟ ಉಲ್ಲೇಖಗಳಿವೆ.[133]

ನಂಜಗೂಡಿನ ಹುಲ್ಲಹಳ್ಳಿಯಲ್ಲಿ ದೊರೆತಿರುವ ಕ್ರಿ.ಶ.1332ರ ಶಾಸನವು ಹುಲ್ಲಹಳ್ಳಿಯ ಅಲ್ಲಾಳನಾಥ ದೇವರಿಗೆ ದಾನಬಿಟ್ಟ ಉಲ್ಲೇಖಗಳಿದ್ದು, ಇದರಲ್ಲಿ ದಾನ ಬಿಟ್ಟವನ ಹೆಸರು ಸ್ವಸ್ತಿಪುರವರಾಧಿಶ್ವರ ಎಂದು ಉಲ್ಲೇಖಗೊಂಡಿದ್ದು, ಬಹುಶಃ ಇದು ವೀರ ಬಲ್ಲಾಳನ ಕುರಿತು ಹೇಳುವಂತಹದ್ದೇ ಆಗಿದೆ.[134]

ಪಿರಿಯಾಪಟ್ಟಣದ ಹಲಗನಹಳ್ಳಿಯಲ್ಲಿ ದೊರೆತಿರುವ 3ನೇಬಲ್ಲಾಳನ ಕ್ರಿ.ಶ.1338ರ ಶಾಸನದಲ್ಲಿ ಹಲಗನಹಳ್ಳಿಯನ್ನು ಅಲ್ಲಾಳಪುರವೆಂದು ನಮೂದಿಸಿದ್ದು, ವೀರಭದ್ರ ದೇವರಿಗೆ ನಾಲ್ಕು ಸೀಮೆಯ ಭೂಮಿಯನ್ನು ದಾನವಾಗಿ ನೀಡಿದ ಉಲ್ಲೇಖವಿದೆ.[135]

3ನೇ ಬಲ್ಲಾಳನಿಗೆ ಸೇರಿದ ಕ್ರಿ.ಶ.13 ಮತ್ತು 14ನೇ ಶತಮಾನಕ್ಕೆ ಸೇರಿದ ಶಾಸನವು ಕೆ.ಆರ್.ನಗರ ತಾಲೂಕಿನ ತಿಪ್ಪೂರಿನಲ್ಲಿದ್ದು, 3ನೇ ಬಲ್ಲಾಳನು ದಾನ ನೀಡಿದ ಶಾಸನವೆಂಬುದು ತಿಳಿದುಬಂದಿದ್ದು ಉಳಿದವು ತೃಟಿತಗೊಂಡಿವೆ.[136] ಮೈಸೂರು ಜಿಲ್ಲೆಯಲ್ಲಿ ದೊರೆತಿರುವ ಈ ಮೇಲಿನ ಎಲ್ಲಾ ಶಾಸನಗಳು ಹೊಯ್ಸಳರ ಇತಿಹಾಸವನ್ನು ತಿಳಿಸುವ ಮಹತ್ವದ ಆಕರಗಳಾಗಿದ್ದು, ಮೈಸೂರು ಜಿಲ್ಲೆಯಲ್ಲಿ ಹೊಯ್ಸಳರ ಆಳ್ವಿಕೆಯನ್ನು ದೃಢಪಡಿಸುತ್ತವೆ.

## ಹೊಯ್ಸಳರ ವಂಶಾವಳಿ




ಉದಯಾದಿತ್ಯ\ಕುಂಟ ವಿನಯಾದಿತ್ಯ 1
(ಕ್ರಿ.ಶ.1006-20)
ಬಲ್ಲಾಳ 1
ವಿಷ್ಣುವರ್ಧನ
ಉದಯಾದಿತ್ಯ 2
(ಸು.ಕ್ರಿ.ಶ.1100-1108)
(ಸು. ಕ್ರಿ.ಶ.1108-52)
ಬಲ್ಲಾಳದೇವ
ನರಸಿಂಹ 1
ವಿಜಯನಾರಾಯಣ
(ಕ್ರಿ.ಶ.1142-73)
ಬಲ್ಲಾಳ 2
(ಕ್ರಿ.ಶ.1173-1220)
ನರಸಿಂಹ 2
(ಕ್ರಿ.ಶ.1220-35)
ಸೋಮೇಶ್ವರ
(ಸು.ಕ್ರಿ.ಶ.1235-53)
3ನೇ ನರಸಿಂಹ
ರಾಮನಾಥ
(ಸು. ಕ್ರಿ.ಶ.1253-92)
(ಸು. ಕ್ರಿ.ಶ.1253-95)
3ನೇಬಲ್ಲಾಳ
ನಾಲ್ಕನೇವಿರೂಪಾಕ್ಷಬಲ್ಲಾಳ
(ಸು.ಕ್ರಿ.ಶ.1292-1343)
(ಸು.ಕ್ರಿ.ಶ.1343-46)

## ಅಡಿ ಟಿಪ್ಪಣಿಗಳು

1. ಕನ್ನಡ ವಿಷಯ ವಿಶ್ವಕೋಶ, ಸಂಪುಟ.13 ಪು.ಸಂ.483
2. ಸೂರ್ಯನಾಥ್ ಯು ಕಾಮತ್, ಮೈ..ಜಿ.ಗ್ಯಾ. 1988, ಪು.ಸಂ.8
3. ಅಂತರ್ಜಾಲ, ಮೈಸೂರು ವಿಕಿಪಿಡಿಯಾ
4. ಅದೇ.
5. ಮೈ.ತಾ.ಗ್ಯಾ. 2011, ಪು.ಸಂ.
6. ಅಂತರ್ಜಾಲ, ಮೈಸೂರು ವಿಕಿಪಿಡಿಯಾ
7. ಕನ್ನಡ ವಿಷಯ ವಿಶ್ವಕೋಶ, ಸಂಪುಟ.13, ಪು.ಸಂ.483
8. ಸೂರ್ಯನಾಥ್ ಯು ಕಾಮತ್, ಮೈ.ಜಿ.ಗ್ಯಾ. 1988, ಪು.ಸಂ.8
9. ಕನ್ನಡ ವಿಷಯ ವಿಶ್ವಕೋಶ, ಸಂಪುಟ.13, ಪು.ಸಂ.483
10. ಪೂರ್ವೋಕ್ತ. ಪು.ಸಂ.483
11. ಮೈಸೂರು ಪರಂಪರೆ ಮಾಲಿಕೆ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ. ಪು.ಸಂ.1
12. ಮೈಸೂರು ದರ್ಶನ. ಸಂ.1. ಪು.ಸಂ.1
13. ಪೂರ್ವೋಕ್ತ. ಪು.ಸಂ.1
14. ಸೂರ್ಯನಾಥ್ ಯು ಕಾಮತ್, ಮೈ.ಜಿ.ಗ್ಯಾ. 1988, ಪು.ಸಂ.02
15. ಪೂರ್ವೋಕ್ತ. ಪು.ಸಂ.2
16. ಹೆ.ಕೋ.ತಾ.ಗ್ಯಾ. 2011, ಪು.ಸಂ.160
17. ಎ.ಕ.ಸಂ.03 ಹೆ.ಕೋ.ತಾ. ಶಾ.ಸಂ.73.74.76 ಪು.ಸಂ.472-474
18. ಅದೇ, ಶಾ.ಸಂ.123, ಪು.ಸಂ.514-515
19. ಹೆ.ಕೋ.ತಾ.ಗ್ಯಾ. 2011 ಪು.ಸಂ.10
20. ಹು.ಣ.ತಾ.ಗ್ಯಾ., 2010, ಪು.ಸಂ.02.
21. ಅದೇ,
22. ಎ.ಕ.ಸಂ.4, ಹು.ಣ. ಶಾ.ಸಂ.24, ಪು.ಸಂ.496
23. ಪಿ.ಪ.ತಾ.ಗ್ಯಾ.2010, ಪು.ಸಂ.178
24. ಎ.ಕ.ಸಂ.4, ಪಿ.ಪ. ಶಾ.ಸಂ.1, ಪು.ಸಂ.509-510
25. ನ.ಗೂ.ತಾ.ಗ್ಯಾ.2011, ಪು.ಸಂ.10

26. ಅದೇ. ಪು.ಸಂ.187

27. ಕೃ.ನ.ತಾ.ಗ್ಯಾ.2010, ಪು.ಸಂ.1

28. ಅದೇ. ಪು.ಸಂ.13

29. ತಿ.ನ.ತಾ.ಗ್ಯಾ.2011, ಪು.ಸಂ.3

30. ಅದೇ. ಪು.ಸಂ.4

31. ಕೆ.ಬಿ.ಶಿವತಾರಕ್, ಕರ್ನಾಟಕ ಪುರಾತತ್ವ ನೆಲೆಗಳು, 2001, ಪ್ರಸಾರಾಂಗ, ಕನ್ನಡ.ವಿ.ವಿ., ಹಂಪಿ,-ಪು.ಸಂ.3,4

32. ಶೇಷಾದ್ರಿ ಎಂ.- ರಿಪೋರ್ಟ ಅನ್ ದ ಎಕ್ಸಕವೇಷನ್ಸ್ ಅಟ್ ನರಸೀಪುರ, 1971, ಪು.ಸಂ.571

33. ಇಂಡಿಯನ್ ಆಂಟಿಕ್ವೆರಿ ರಿಪೋರ್ಟ್ಸ್, 1993-94, ಪು.ಸಂ.66-67

34. ಹನುಮಂತರಾವ್ ಎಂ. ಅಂಡ್ ನಾಗರಾಜು ಎಸ್.-ಎಕ್ಸಕವೇಷನ್ಸ್ ಅಟ್ ಹೆಮ್ಮಿಗೆ ಮೈಸೂರು, 1974, ಪು.ಸಂ.16

35. ಪೂರ್ವೋಕ್ತ, 1974-75, ಪು.ಸಂ.20-21

36. ಅದೇ. 1963, ಪು.ಸಂ.26, 34

37. ಶೇಷಾದ್ರಿ ಎಂ.-ರಿಪೋರ್ಟ ಅನ್ ದ ಜಡಿಗೇನಹಳ್ಳಿ ಮೆಗಾಲಿಥಿಕ್ ಎಕ್ಸಕವೇಷನ್ಸ್, ಬೆಂಗಳೂರು, 1970, ಪು.ಸಂ.03

38. ಇಂಡಿಯನ್ ಆಂಟಿಕ್ವೆರಿ ರಿಪೋರ್ಟ್ಸ್, 1963-64, ಪು.ಸಂ.26

39. ಅದೇ.

40. ಅದೇ. ಪು.ಸಂ.26, 34

41. ದೇವರಾಜು ಡಿ.ವಿ.-ಹೆಗ್ಗಡಹಳ್ಳಿ, ಎ ರಿಪೋರ್ಟ್ಸ್ ಅನ್ ಮೆಗಾಲಿಥಿಕ್ ಎಕ್ಸಕವೇಷನ್ಸ್, 1995, ಪು.ಸಂ.575

42. ಎಂ.ಎ.ಆರ್. 1947-50, ಪು.ಸಂ.51

43. ಇಂಡಿಯನ್ ಆಂಟಿಕ್ವೆರಿ ರಿಪೋರ್ಟ್ಸ್, 1990-91, ಪು.ಸಂ.31

44. ಪಿ.ಪಂ.ತಾ.ಗ್ಯಾ. 2011, ಪು.ಸಂ.13

45. ಅದೇ, ಪು.ಸಂ.12

46. ಫೂಟ್ ಆರ್. ಬಿ.-ಇಂಡಿಯನ್ ಪ್ರೀಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಆಂಟಿಕ್ವುಟೀಸ್, ಮದ್ರಾಸ್, 1916, ಪು.ಸಂ.72

47. ರಂಗರಾಜು ಎನ್.ಎಸ್.-ರಿಸೆಂಟ್ ಆರ್ಕಿಯೋಲಾಜಿಕಲ್ ಎಕ್ಸ್‌ಪ್ಲೊರೆಷನ್ ಇನ್ ಕರ್ನಾಟಕ, ಮೈಸೂರು, ಪು.ಸಂ.7-15

48. ಇಂಡಿಯನ್ ಆಂಟಿಕ್ವೆರಿ ರಿಪೋರ್ಟ್ಸ್, 1990-91, ಪು.ಸಂ.31

49. ಅದೇ.

50. ಎ.ಕ.ಸಂ.11, ಶಾ.ಸಂ.14,15, ಪು.ಸಂ.10-11

51. ಎ.ಕ.ಸಂ.11, ಶಾ.ಸಂ.15, ಪು.ಸಂ.11

52. ಎ.ಕ.ಸಂ.11, ಶಾ.ಸಂ.16, ಪು.ಸಂ.11

53. ವಿಲಿಯಂ ಕೋಹಿಲೊ-ದಿ ಹೊಯ್ಸಳವಂಶ, ಪು.ಸಂ.257

54. ಎ.ಕ.ಸಂ.12, ಶಾ.ಸಂ.14,16,28,66,74,106,252, ಪು.ಸಂ.1,3,9,7

55. ವಿಲಿಯಂ ಕೋಹಿಲೊ – ದಿ ಹೊಯ್ಸಳವಂಶ, ಪು.ಸಂ.257

56. ಎ.ಕ.ಸಂ.12, ಶಾ.ಸಂ.28, ಪು.ಸಂ.45

57. ಎ.ಕ.ಸಂ.11 ಶಾ.ಸಂ.14,15, ಪು.ಸಂ.10-11

58. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, 2009, ಪು.ಸಂ.1142

59. ಪಾರ್ಥಸಾರಥಿ ಟಿ.ಎ.ಚಿಕ್ಕಮಗಳೂರು ಜಿಲ್ಲಾದರ್ಶನ, ಪು.ಸಂ.30

60. ವಿಲಿಯಂ ಕೋಹಿಲೊ –ದಿ ಹೊಯ್ಸಳವಂಶ, ಪು.ಸಂ.259

61. ಎಂ.ಎ.ಆರ್. 1937, ಪು.ಸಂ.31

62. ಎ.ಕ.ಸಂ.07,ಚಿ.ಮಾ. ಶಾ.ಸಂ.169, ಪು.ಸಂ.104

63. ವಿಲಿಯಂ ಕೋಹಿಲೊ-ದಿ ಹೊಯ್ಸಳವಂಶ, ಪು.ಸಂ.85, ಮತ್ತು ಎ. ಕ. ಪು.ಸಂ.104

64. ಎ.ಕ.ಸಂ.11, ಶಾ.ಸಂ.220, ಪು.ಸಂ.149

65. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, 2009, ಪು.ಸಂ.1142

66. ಎ.ಕ.ಸಂ.5, ಮೈ. ಶಾ.ಸಂ.130 ಪು.ಸಂ.273

67. ಎ.ಕ.ಸಂ.4, ಚಾ.ನ. ಶಾ.ಸಂ.2, ಪು.ಸಂ.4

68. ಎ.ಕ.ಸಂ.5, ಕೃ.ನ., ಶಾ.ಸಂ.118, ಪು.ಸಂ.142

69. ಎ.ಕ.ಸಂ.5, ತಿ.ನ. ಶಾ.ಸಂ.118, ಪು.ಸಂ.557

70. ಎ.ಕ.ಸಂ.5, ಮೈ., ಶಾ.ಸಂ.207, ಪು.ಸಂ.311

71. ಎ.ಕ.ಸಂ.3, ನ.ಗೂ. ಶಾ.ಸಂ.283, ಪು.ಸಂ.359

72. ಎ.ಕ.ಸಂ.5, ಕೃ.ನ., ಶಾ.ಸಂ.111, ಪು.ಸಂ.110

73. ಎ.ಕ.ಸಂ.5, ತಿ.ನ. ಶಾ.ಸಂ.69, ಪು.ಸಂ.460

74. ಎ.ಕ.ಸಂ.5, ಕೃ.ನ., ಶಾ.ಸಂ.09, ಪು.ಸಂ 8

75. ಎ.ಕ.ಸಂ.4, ಚಾ.ನ., ಶಾ.ಸಂ.115, ಪು.ಸಂ.67

76. ಪಾರ್ಥಸಾರಥಿ ಟಿ.ಎ.ಮಂಡ್ಯ ಜಿಲ್ಲಾ ಗೆಜೆಟಿಯರ್, ಪು.ಸಂ.51

77. ಎ.ಕ.ಸಂ.3, ನ.ಗೂ. ಶಾ.ಸಂ.322, ಪು.ಸಂ.387

78. ಎ.ಕ.ಸಂ.3, ಗು.ಪೆ., ಶಾ.ಸಂ.215, ಪು.ಸಂ.155

79. ಎ.ಕ.ಸಂ.3, ನ.ಗೂ. ಶಾ.ಸಂ.327, ಪು.ಸಂ.390

80. ಎ.ಕ.ಸಂ.3, ನ.ಗೂ. ಶಾ.ಸಂ.235, ಪು.ಸಂ.323

81. ಎ.ಕ.ಸಂ.3, ನ.ಗೂ. ಶಾ.ಸಂ.191, ಪು.ಸಂ.289

82. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ ಪ್ರಸಾರಾಂಗ, 2009, ಪು.ಸಂ.1142

83. ಎ.ಕ.ಸಂ.5, ಮೈ. ಶಾ.ಸಂ.224, ಪು.ಸಂ.221

84. ಎ.ಕ.ಸಂ.5, ಮೈ. ಶಾ.ಸಂ.215, ಪು.ಸಂ.317

85. ಎ.ಕ.ಸಂ.5, ಕೃ.ನ. ಶಾ.ಸಂ.07, ಪು.ಸಂ.7

86. ಎ.ಕ.ಸಂ.5, ತಿ.ನ. ಶಾ.ಸಂ.226, ಪು.ಸಂ.664

87. ಎ.ಕ.ಸಂ.5, ತಿ.ನ. ಶಾ.ಸಂ.84, ಪು.ಸಂ.470

88. ಎ.ಕ.ಸಂ.5, ತಿ.ನ. ಶಾ.ಸಂ.40, ಪು.ಸಂ.440

89. ಎ.ಕ.ಸಂ.5, ಮೈ. ಶಾ.ಸಂ.114, ಪು.ಸಂ.316

90. ಎ.ಕ.ಸಂ.5, ತಿ.ನ. ಶಾ.ಸಂ.236, ಪು.ಸಂ.617

91. ಎ.ಕ.ಸಂ.3, ನ.ಗೂ, ಶಾ.ಸಂ.156, ಪು.ಸಂ.270

92. ಎ.ಕ.ಸಂ.5, ತಿ.ನ. ಶಾ.ಸಂ.21, ಪು.ಸಂ.462

93. ಎ.ಕ.ಸಂ.5, ಮೈ, ಶಾ.ಸಂ.132, ಪು.ಸಂ.274

94. ಎ.ಕ.ಸಂ.5, ತಿ.ನ. ಶಾ.ಸಂ.139, ಪು.ಸಂ.277

95. ಎ.ಕ.ಸಂ.5, ಹೆ.ಕೋ. ಶಾ.ಸಂ.81,83, ಪು.ಸಂ.64-65

96. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ ಪ್ರಸಾರಾಂಗ, 2009 ಪು.ಸಂ.1142

97. ಅದೇ.

98. ಎ.ಕ.ಸಂ.3, ನ.ಗೂ, ಶಾ.ಸಂ.274, ಪು.ಸಂ.249

99. ಎ.ಕ.ಸಂ.5, ತಿ.ನ., ಶಾ.ಸಂ.149, ಪು.ಸಂ.556

100. ಎ.ಕ.ಸಂ.5, ತಿ.ನ. ಶಾ.ಸಂ.36, ಪು.ಸಂ.429

101. ಎ.ಕ.ಸಂ.3, ನ.ಗೂ, ಶಾ.ಸಂ.256, ಪು.ಸಂ.336

102. ಎ.ಕ.ಸಂ.5, ಮೈ, ಶಾ.ಸಂ.217, ಪು.ಸಂ.319

103. ಎ.ಕ.ಸಂ.5, ತಿ.ನ., ಶಾ.ಸಂ.54, ಪು.ಸಂ.450

104. ಎ.ಕ.ಸಂ.3, ಹೆ.ಕೋ. ಶಾ.ಸಂ.22, ಪು.ಸಂ.445

105. ಎ.ಕ.ಸಂ.3, ಹೆ.ಕೋ., ಶಾ.ಸಂ.48, ಪು.ಸಂ. 459

106. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ ಪ್ರಸಾರಾಂಗ, 2009, ಪು.ಸಂ.1142

107. ಎ.ಕ.ಸಂ.5, ಕೃ.ನ. ಶಾ.ಸಂ.106, ಪು.ಸಂ.106

108. ಎ.ಕ.ಸಂ.5, ತಿ.ನ., ಶಾ.ಸಂ.271, ಪು.ಸಂ.649

109. ಎ.ಕ.ಸಂ.5, ತಿ.ನ. ಶಾ.ಸಂ.93, ಪು.ಸಂ.486

110. ಎ.ಕ.ಸಂ.5, ತಿ.ನ. ಶಾ.ಸಂ.92, ಪು.ಸಂ.485

111. ಎ.ಕ.ಸಂ.5, ತಿ.ನ. ಶಾ.ಸಂ.154, ಪು.ಸಂ.561

112. ಎ.ಕ.ಸಂ.5, ತಿ.ನ. ಶಾ.ಸಂ.267, ಪು.ಸಂ.647

113. ಎ.ಕ.ಸಂ.5, ತಿ.ನ. ಶಾ.ಸಂ.88, ಪು.ಸಂ.475

114. ಎ.ಕ.ಸಂ.3, ಹೆ.ಕೋ. ಶಾ.ಸಂ.30, ಪು.ಸಂ.449

115. ಎ.ಕ.ಸಂ.3, ನ.ಗೂ, ಶಾ.ಸಂ.290, ಪು.ಸಂ.364

116. ಎ.ಕ.ಸಂ.5, ತಿ.ನ. ಶಾ.ಸಂ.267, ಪು.ಸಂ.647

117. ಎ.ಕ.ಸಂ.5, ತಿ.ನ. ಶಾ.ಸಂ.91, ಪು.ಸಂ.484

118. ಎ.ಕ.ಸಂ.3, ನ.ಗೂ, ಶಾ.ಸಂ.295, ಪು.ಸಂ. 367

119. ಎ.ಕ.ಸಂ.3, ನ.ಗೂ, ಶಾ.ಸಂ.207, ಪು.ಸಂ.298

120. ಎ.ಕ.ಸಂ.03, ನ.ಗೂ, ಶಾ.ಸಂ.257, ಪು.ಸಂ.337

121. ಎ.ಕ.ಸಂ.05, ತಿ.ನ. ಶಾ.ಸಂ.316, ಪು.ಸಂ.668

122. ಎ.ಕ.ಸಂ.05, ತಿ.ನ. ಶಾ.ಸಂ.07, ಪು.ಸಂ.326

123. ಇತಿಹಾಸ ಮತ್ತು ಪುರಾತತ್ವ, ಕನ್ನಡ ವಿಷಯ ವಿಶ್ವಕೋಶ ಪ್ರಸಾರಾಂಗ, 2009, ಪು.ಸಂ.1142

124. ಎ.ಕ.ಸಂ.3, ನ.ಗೂ, ಶಾ.ಸಂ.329, ಪು.ಸಂ.392

125. ಎ.ಕ.ಸಂ.3, ಹೆ.ಕೋ, ಶಾ.ಸಂ.57, ಪು.ಸಂ.462

126. ಎ.ಕ.ಸಂ.3, ನ.ಗೂ, ಶಾ.ಸಂ.296, ಪು.ಸಂ.368

127. ಎ.ಕ.ಸಂ.3, ನ.ಗೂ, ಶಾ.ಸಂ.242, ಪು.ಸಂ.328

128. ಎ.ಕ.ಸಂ.5, ತಿ.ನ., ಶಾ.ಸಂ.89, ಪು.ಸಂ.481

129. ಎ.ಕ.ಸಂ.5, ತಿ.ನ. ಶಾ.ಸಂ.37, ಪು.ಸಂ.431

130. ಎ.ಕ.ಸಂ.05, ತಿ.ನ. ಶಾ.ಸಂ.287, ಪು.ಸಂ.656

131. ಎ.ಕ.ಸಂ.5, ತಿ.ನ. ಶಾ.ಸಂ.126, ಪು.ಸಂ.542

132. ಎ.ಕ.ಸಂ.3, ನ.ಗೂ, ಶಾ.ಸಂ.347, ಪು.ಸಂ.402

133. ಎ.ಕ.ಸಂ.3, ಹೆ.ಕೋ. ಶಾ.ಸಂ.47, ಪು.ಸಂ.457

134. ಎ.ಕ.ಸಂ.3, ನ.ಗೂ, ಶಾ.ಸಂ.138, ಪು.ಸಂ.261

135. ಎ.ಕ.ಸಂ.03, ಪಿ.ಪಂ, ಶಾ.ಸಂ.19, ಪು.ಸಂ.518

136. ಎ.ಕ.ಸಂ.5, ಕೃ.ನ. ಶಾ.ಸಂ.108, ಪು.ಸಂ.107

# ಅಧ್ಯಾಯ–3

# ಹೊಯ್ಸಳರ ಕಾಲದ ದೇವಾಲಯಗಳ ಪ್ರಮುಖ ಲಕ್ಷಣಗಳು

**ದೇವಾಲಯಗಳ ಹಿನ್ನೆಲೆ:–** ದಕ್ಷಿಣ ಭಾರತದಲ್ಲಿ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಅಧ್ಯಯನ ಮಾಡಿ ನೋಡುವುದಾದರೆ ಅದರಲ್ಲೂ ಕರ್ನಾಟಕದ ದೇವಾಲಯಗಳ ಪ್ರಾಚೀನತೆಯನ್ನು ಸೂಕ್ಷ್ಮವಾಗಿ ಗಮನಹರಿಸಿ ನೋಡಿದಾಗ ನಮಗೆ ಕ್ರಿಸ್ತಶಕದ ಪ್ರಾರಂಭದ ಶತಮಾನಗಳಲ್ಲಿ ಕನ್ನಡನಾಡಿನಲ್ಲಿ ದೇವಾಲಯಗಳು ಇದ್ದವೆಂಬುದಕ್ಕೆ ಪ್ರಾಚ್ಯವಸ್ತು, ಅವಶೇಷಗಳು ಅಲ್ಲದೇ ಲಭ್ಯವಾಗಿರುವ ಶಾಸನಾಧಾರಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಕನ್ನಡ ನಾಡಿನ ಗುಲ್ಬರ್ಗಾ ಜಿಲ್ಲೆಯ ಸನ್ನತಿಯು ಕ್ರಿ.ಶ.2ನೇ ಶತಮಾನದ ವೇಳೆಗಾಗಲೇ ಬೌದ್ಧಧರ್ಮದ ಬಹುಮುಖ್ಯ ನೆಲೆಯಾಗಿತ್ತು. ಅದಕ್ಕೆ ಸಾಕ್ಷಿಯಾಗಿ ಸ್ತೂಪ ಮತ್ತು ಇಟ್ಟಿಗೆಯ ಕಟ್ಟಡಗಳ ಅವಶೇಷಗಳು ಲಭ್ಯವಾಗಿವೆ.[1] ಅಲ್ಲದೇ ಇಲ್ಲಿ ಶಿಲ್ಪಾಲಂಕೃತ ಶಿಲಾಶಾಸನಗಳು, ಮೂರ್ತಿಶಿಲ್ಪಗಳ ಅವಶೇಷಗಳು ಅಪಾರ ಸಂಖ್ಯೆಯಲ್ಲಿ ದೊರೆತಿವೆ. ಅಲ್ಲದೇ ಇದಕ್ಕೆ ಪೂರಕವಾಗಿ ಬನವಾಸಿಯಲ್ಲಿ ದೊರೆತಿರುವ ಪ್ರಾಕೃತ ಭಾಷೆಯಲ್ಲಿರುವ ಎರಡು ಶಾಸನಗಳು ಇದಕ್ಕೆ ಸಾಕ್ಷಿಯಾಗಿವೆ.

ಒಂದನೇ ವಿನ್ಹಿ ಚುಟುಕುಲಾನಂದ ಶಾತಕರ್ಣಿಯ ಮಗಳಾದ ಶಿವಸ್ಕಂದ ನಾಗಶ್ರೀ ಎಂಬುವಳು ಮುಚಲಿಂಗನಾಗ ಪ್ರತಿಮೆ, ತಟಾಕ ಮತ್ತು ವಿಹಾರಗಳನ್ನು ನಿರ್ಮಾಣ ಮಾಡಿಸಿದಳೆಂದು ತಿಳಿದುಬರುತ್ತದೆ. ಕ್ರಿ.ಶ. ಸುಮಾರು 150ರಲ್ಲಿ ಬರೆಸಲಾದ ಕದಂಬರ ಪ್ರಾಕೃತ ಶಾಸನದಲ್ಲಿ[2] ಶಾತವಾಹನ ರಾಜನೋರ್ವನು ಮಟ್ಟಪಟ್ಟಿದೇವರಿಗೆ ದತ್ತಿಯನ್ನು ಬಿಟ್ಟುಕೊಟ್ಟ ವಿಷಯವನ್ನು ತಿಳಿಸುತ್ತದೆ. ಅಲ್ಲದೆ ಇದು ಮಹಾಮುನಿಗಳ ವಾಸಸ್ಥಾನವಾಗಿತ್ತೆಂದು ಉಲ್ಲೇಖಿತಗೊಂಡಿದೆ. ಗದಗ ಜಿಲ್ಲೆಯ ನರಗುಂದ ತಾಲೂಕಿನಲ್ಲಿರುವ ವಾಸನದಲ್ಲಿ ಶಾತವಾಹನ ದೊರೆಯಾದ ವಾಸಿಷ್ಟಪುತ್ರ ಶ್ರೀ ಪುಳುಮಾವಿಯು ಬರೆಸಲಾಗಿರುವ ಪ್ರಾಕೃತ ಶಾಸನವೊಂದು ಲಭ್ಯವಾಗಿದ್ದು (ಕ್ರಿ.ಶ.ಒಂದು ಅಥವಾ ಎರಡನೇ ಶತಮಾನ) ಅದರಲ್ಲಿ ಪುಳುಮಾವಿಯು ಚಂಡಶಿವ ದೇವಾಲಯವನ್ನು ನಿರ್ಮಾಣ ಮಾಡಿದ ಬಗ್ಗೆ ಉಲ್ಲೇಖವಿದೆ.[3] ಈ ದೇವಾಲಯವನ್ನು ಕರ್ನಾಟಕದಲ್ಲಿ ಇದುವರೆಗೆ ತಿಳಿದಿರುವ ಅತೀ ಪ್ರಾಚೀನ ಶೈವ ದೇವಾಲಯವೆಂದು ಉಲ್ಲೇಖವಾಗಿದೆ. ಇದರಂತೆಯೇ ಅಂಕೋಲಾದ ಸಮೀಪವಿರುವ ಬೊಳೆಯಲ್ಲಿ ದೊರೆತಿರುವ ಶಿವನ ಲಿಂಗವು ಮೂರು ಭಾಗಗಳಿಂದ ಕೂಡಿದ್ದು (ಬ್ರಹ್ಮ, ವಿಷ್ಣು, ಮಹೇಶ್ವರ) ಬ್ರಹ್ಮಸೂತ್ರವನ್ನು ಹೊಂದಿದೆ.[4] ಕ್ರಿ.ಶ.ಸುಮಾರು 450ರಲ್ಲಿ ಬರೆಸಲಾದ ತಾಳಗುಂದ ಶಾಸನವು ಪ್ರಣವೇಶ್ವರ ದೇವಾಲಯದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಶಾತವಾಹನರು ಈ ದೇವರನ್ನು

ಆರಾಧಿಸುತ್ತಿದ್ದರೆಂದು ಶಾಸನದಲ್ಲಿ ತಿಳಿಸಲಾಗಿದೆ. ಇದು ಕದಂಬ ಮೃಗೇಶವರ್ಮನ ಕಾಲದಲ್ಲಿಯೂ ಸಹ ರಾಜಗೌರವ ಪಡೆದಿತ್ತು.

ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ಬನವಾಸಿ ಕದಂಬರ (ಕ್ರಿ.ಶ.325–540) ದೇವಾಲಯಗಳು ಈಗ ಕಾಣಬರುವುದಿಲ್ಲವಾದರೂ ದೇವಾಲಯಗಳು ಇಲ್ಲಿ ನಿರ್ಮಾಣಗೊಂಡ ಬಗ್ಗೆ ಶಾಸನಗಳು ಸ್ಪಷ್ಟ ಮಾಹಿತಿಯನ್ನು ಒದಗಿಸುತ್ತವೆ. ಹಲಸಿಯ ತಾಮ್ರಶಾಸನಗಳು ಮೃಗೇಶವರ್ಮನು ಶ್ರೀವಿಜಯ ಶಿಲಾಶಿಲಕದಲ್ಲಿ ಜಿನಾಲಯವೊಂದನ್ನು ನಿರ್ಮಿಸಿದನೆಂದು ತಿಳಿಸುತ್ತದೆ.[5] ಶಿರಸಿಯ ತಾಮ್ರಪಟಗಳು ರವಿವರ್ಮನ ವೇದ್ಯನೀಲಕಂಠ ದೇಶಮಾತ್ಯನು ಬನವಾಸಿಯಲ್ಲಿ ಮಹಾದೇವಾಲಯವನ್ನು ನಿರ್ಮಿಸಿದನೆಂದು ಹೇಳುತ್ತವೆ.[6] ರವಿವರ್ಮನ ಗುಡ್ನಾಪುರ ಶಾಸನವೊಂದು ಮನ್ಮಥ ಜಿನಾಲಯವೊಂದರ ನಿರ್ಮಾಣವನ್ನು ತಿಳಿಸುತ್ತದೆ.[7] ಪಟ್ಟದಕಲ್ಲಿನ ಸುತ್ತಮುತ್ತ ಶೋಧನೆ ನಡೆಸಿ ಕದಂಬರ ಕಾಲದ ಕೆಲವು ದೇವಾಲಯಗಳ ಕಟ್ಟಡದ ಅವಶೇಷಗಳನ್ನು ಪ್ರೊ.ಅ.ಸುಂದರರವರು ಪತ್ತೆಹಚ್ಚಿದ್ದಾರೆ.[8] ಇದೇ ವೇಳೆಯಲ್ಲಿ ದಕ್ಷಿಣ ಕರ್ನಾಟಕದಲ್ಲಿ ರಾಜ್ಯವಾಳಿದ ಗಂಗರ ಕಾಲದ ಶಾಸನಗಳಲ್ಲಿಯೂ ಕೂಡ ಗಂಗರು ಕಟ್ಟಿಸಿದ ದೇವಾಲಯ ಮತ್ತು ಬಸದಿಗಳ ಉಲ್ಲೇಖಗಳಿವೆ. ಹರಿವರ್ಮನ ಕಾಲದ "ಮೂಲಸ್ಥಾನೇಶ್ವರ", ಅವನೀತ ಕಟ್ಟಿಸಿದ "ವಿನಿತೇಶ್ವರ", ಮಾಧವ ಅನವೀತರ ಕಾಲದ ಅರ್ಹದಾಯತನ, "ನೀತಿಮಾರ್ಗೇಶ್ವರ", "ಶಿವಮಾರೇಶ್ವರ", ಶಿವಮಾರನ ಬಸದಿಗಳನ್ನು ಉದಾಹರಣೆಯಾಗಿ ನೀಡಬಹುದು. ಇವುಗಳಲ್ಲಿ ಬಹಳಷ್ಟು ಶಿಥಿಲಗೊಂಡಿದ್ದು ಕೆಲವು ಜೀರ್ಣೋದ್ಧಾರವಾಗಿವೆ.[9]

ಬಾದಾಮಿ ಚಾಲುಕ್ಯರು ಕ್ರಿ.ಶ.6ನೇ ಶತಮಾನದಲ್ಲಿ ಗುಹಾಲಯಗಳನ್ನಲ್ಲದೇ ರಚನಾತ್ಮಕ ದೇವಾಲಯಗಳ ನಿರ್ಮಾಣವನ್ನು ಪ್ರಾರಂಭಿಸಿ ಚಾಲುಕ್ಯ ವಾಸ್ತುರಚನೆಗೆ ಕಾರಣರಾದರು. ಇವರ ಕಾಲದಲ್ಲಿ ಪ್ರಮುಖ ವಾಸ್ತುಶಿಲ್ಪ ಕೇಂದ್ರವಾದ ಐಹೊಳೆಯನ್ನು ದೇವಾಲಯ ನಗರವೆಂದೂ ಭಾರತೀಯ ದೇವಾಲಯಗಳ ವಾಸ್ತುಶಿಲ್ಪದ ತೊಟ್ಟಿಲು ಎಂದು ಕರೆಯಲಾಗಿದೆ.[10]

ಮೊದಲನೇ ಹಂತವು ಗುಹಾಂತರ ದೇವಾಲಯಗಳ ನಿರ್ಮಾಣವಾಗಿದ್ದು ಇದು ಬಾದಾಮಿ ಮತ್ತು ಐಹೊಳೆಯಲ್ಲಿ ಎರಡನೇ ಹಂತವು ನಿರ್ಮಿತ ವಾಸ್ತುಶಿಲ್ಪದ ಕಲೆಯು ಇಲ್ಲಿ ಶಿಲ್ಪಗಳ ಲಾಲಿತ್ಯ, ಗಾಂಭಿರ್ಯ ಮತ್ತು ನವ್ಯತೆಗಳು ಬೆಳಕಿಗೆ ಬಂದವು. ಐಹೊಳೆ ಪಟ್ಟದಕಲ್ಲು ಮತ್ತು ಆಂದ್ರಪ್ರದೇಶದ ಆಲಂಪುರಗಳಲ್ಲಿ ಇವುಗಳನ್ನು ನಾವು ವಿಶೇಷವಾಗಿ ಕಾಣಬಹುದಾಗಿದೆ.

ಬಾದಾಮಿ ಚಾಲುಕ್ಯರು ಪ್ರತಿಮಾ ಪೂಜೆಯನ್ನಲ್ಲದೆ ವೈದಿಕ ಮತದ ಯಜ್ಞಯಾಗಗಳ ಆಚರಣೆ ಮತ್ತು ಪ್ರತಿಮಾ ಪೂಜೆಯನ್ನಪ್ಪುವ ಪುರಾಣಗಳ ಆಸರೆ ಪಡೆದ ಅದೇ ವೈದಿಕ ಧರ್ಮದ ಪ್ರತಿಮೆಗಳ ಪ್ರತಿಷ್ಠೆ ಹಾಗೂ ಅವುಗಳಿಗೆ ದೇವಾಲಯ ನಿರ್ಮಾಣವಾದಂತಹ ಚಟುವಟಿಕೆಯ ಕಾರ್ಯಕ್ರಮಗಳು ಏಕಕಾಲದಲ್ಲಿಯೇ ನಡೆಯುತ್ತಾ ಸಮನ್ವಯತೆಯನ್ನು ಸಾಧಿಸುವ ಪ್ರಯತ್ನ ಮಾಡಿದರು. ಇದು ಕ್ರಿ.ಶ.578ರಲ್ಲಿ ಬರೆಸಲಾದ ಬಾದಾಮಿಯ ಗುಹಾಶಾಸನದಿಂದ ನಮಗೆ ಸ್ಪಷ್ಟವಾಗಿ ತಿಳಿದು ಬರುತ್ತದೆ.[11] ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳಲ್ಲಿರುವ ದೇವಾಲಯಗಳ ರಚನೆಗಳನ್ನು ವಿಶ್ಲೇಷಿಸಿ ದೇವಾಲಯಗಳು ಬೆಳೆದು ಬಂದ ದಾರಿಯನ್ನು ಗುರ್ತಿಸಲು ಹಲವಾರು ಪ್ರಯತ್ನಗಳು ಇದುವರೆಗೂ ನಡೆಯುತ್ತಲೇ ಇವೆ. ಐಹೊಳೆಯ ಲಾಡಖಾನ್ ದೇವಾಲಯ ಗೌಡರಗುಡಿ ಕೊಂತಿಗುಡಿಗಳನ್ನು ಆರಂಭಿಕ ದೇವಾಲಯಗಳೆಂದು ಗುರ್ತಿಸಲಾಗಿದೆ. ಇವುಗಳ ಪ್ರಾಚೀನತೆಯ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಐಹೊಳೆಯಲ್ಲಿ ಕಂಡುಬರುವಷ್ಟು ದೇವಾಲಯಗಳ ವೈವಿಧ್ಯತೆ ಬೇರೆ ಯಾವುದೇ ಸ್ಥಳಗಳಲ್ಲೂ ಕಂಡುಬರುವುದಿಯೀ ಕಾಲದಲ್ಲಿ ಸಾಂದಾರ ಹಾಗೂ ನಿರಾಂದರ ಎರಡು ರೀತಿಯ ದೇವಾಲಯಗಳು ನಿರ್ಮಾಣಗೊಂಡವು. ಬಾದಾಮಿ ಚಾಲುಕ್ಯರು ಅವರ ಕಾಲದ ಶಿಲ್ಪಗಳು ರೇಖಾ ನಾಗರ, ಕದಂಬ ನಾಗರ ಮತ್ತು ದ್ರಾವಿಡ ಶಿಖರಗಳನ್ನು ತಮ್ಮ ದೇವಾಲಯಗಳಲ್ಲಿ ಅಳವಡಿಸಿಕೊಂಡರು. ಐಹೊಳೆ, ಪಟ್ಟದಕಲ್ಲು, ಬಾದಾಮಿ ಇವುಗಳು ಶಾತವಾಹನರ ಕಾಲದಿಂದ ಕಲ್ಯಾಣ ಚಾಲುಕ್ಯರ ಕಾಲದವರೆಗೂ ನಿರಂತರವಾಗಿ ದೇವಾಲಯಗಳ ನಿರ್ಮಾಣದ ಕೇಂದ್ರಗಳಾಗಿರುವುದಕ್ಕೆ ಶಾಸನಗಳು ಮತ್ತು ಇದುವರೆಗೂ ಉಳಿದಿರುವ ದೇವಾಲಯದ ಅವಶೇಷಗಳು ಸಾಕ್ಷಿಯಾಗಿವೆ.

ಬಾದಾಮಿ ಚಾಲುಕ್ಯರಿಂದ ಕರ್ನಾಟಕದ ವಾಸ್ತುಶಿಲ್ಪ ರಚನೆಗೆ ನಿರ್ದಿಷ್ಟವಾದ ನೆಲೆಯೊಂದು ದೊರಕಿದಂತಾಯಿತು. ಇವರ ವಾಸ್ತುಶಿಲ್ಪ ಕ್ರಮವನ್ನು ಅನುಸರಿಸಿ ಮುಂದೆ ಬಂದಂತಹ ರಾಷ್ಟ್ರಕೂಟರು ಕಲ್ಯಾಣದ ಚಾಲುಕ್ಯರು, ಹೊಯ್ಸಳರು ಹಾಗೂ ವಿಜಯನಗರ ಸಾಮ್ರಾಜ್ಯದ ಅರಸರು ಕರ್ನಾಟಕದಲ್ಲಿರುವ ವಾಸ್ತುಶಿಲ್ಪಕ್ಕೆ ತಮ್ಮದೆಯಾದ ಕೊಡುಗೆಯನ್ನು ನೀಡಿ ಕೃತಾರ್ಥರಾಗಿದ್ದಾರೆ.

**ವಾಸ್ತುಶಿಲ್ಪ**:-ಶಿಲ್ಪ ಎನ್ನುವುದು ಮೊದಲು ಬಹಳ ವಿಶಾಲವಾದಂತಹ ಅರ್ಥವನ್ನು ಪಡೆದಿತ್ತು. ಅದು ಪ್ರಸಿದ್ಧವಾದ ಅರವತ್ತನಾಲ್ಕು ಕಲೆಗಳಿಗೆಲ್ಲ ಶಿಲ್ಪ ಎನ್ನುವ ಹೆಸರೇ ಅನ್ವಯವಾಗುತ್ತಿತ್ತು.[12] ವಾಸ್ತುಶಿಲ್ಪ ಅದರಲ್ಲಿನ ಒಂದು ಭಾಗವೆಂದು ಹೇಳಬಹುದು. ಮಯಮತ ಗ್ರಂಥವು ವಾಸ್ತುವಿಷಯದ ಕುರಿತು ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ 'ವಸ್ತು' ಎಂದು

ಹಾಗೂ ವಸ್ತುವನ್ನು ಆಶ್ರಯಿಸಿದ್ದು "ವಾಸ್ತು" ಎಂದು ಹೇಳಿದೆ. ಮುಂದೆ ಪ್ರಸಾದ, ಹರ್ಮ್ಯ, ಸೌದ ಇತ್ಯಾದಿಗಳು ವಸ್ತುವನ್ನು ಆಶ್ರಯಿಸಿದ್ದು, ವಾಸ್ತು ಎಂದೆನಿಸಿಕೊಳ್ಳುತ್ತದೆ.[13] ಈ ನಮ್ಮ ಭೂಮಿಯನ್ನು ಒಂದು ವಾಸ್ತು ಎಂದು ಪರಿಗಣಿಸಿ ಅದರ ಮೇಲೆ ನಿರ್ಮಿಸಲಾದ, ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳು, ಮಠಗಳು ಸಹ ವಾಸ್ತುಗಳೆಂದು ಗರುಡ ಪುರಾಣದಲ್ಲಿಯೂ ಹೇಳಲಾಗಿದೆ.[14]

ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳು ಪ್ರಾಚೀನ ಶಾಸ್ತ್ರಗಳಲ್ಲಿ ಒಂದೆಂದು ಪರಿಗಣಿತವಾಗಿದೆ. ಈ ಗ್ರಂಥಗಳನ್ನು ಶಿಲ್ಪಶಾಸ್ತ್ರಗ್ರಂಥಗಳೆಂದು ಕರೆಯಲಾಗಿದೆ.[15] ಶಿಲ್ಪಶಾಸ್ತ್ರವನ್ನು ಒಂದು ಉಪಪಂಥವೆಂದೂ ಹೇಳಲಾಗುತ್ತಿದೆ. ಋಗ್ವೇದಕ್ಕೆ ಆಯುರ್ವೇದವು, ಯಜುರ್ವೇದಕ್ಕೆ ಧನುರ್ವೇದವು, ಸಾಮವೇದಕ್ಕೆ ಗಾಂಧರ್ವವೇದವು ಉಪವೇದಗಳಿದ್ದಂತೆ ಅಥರ್ವಣವೇದಕ್ಕೆ ಸ್ಥಾಪತ್ಯವೇದವು ಉಪವೇದವಾಗಿದೆ.[16] ಸುಮಾರು 6-7ನೇ ಶತಮಾನದ ವರಾಹ ಮಿಹಿರ್‌ನ ಬೃಹತ್ಸಂಹಿತೆ ಎಂಬ ಗ್ರಂಥವು ವಾಸ್ತುಶಿಲ್ಪಾಚಾರ್ಯರೆನಿಸಿದ ಮಯ, ಗಾರ್ಗಿ, ವಿಶ್ವಕರ್ಮ ರೂಪಿಸಿದ ಪ್ರಮಾಣ ವಾಕ್ಯಗಳನ್ನು ಒಳಗೊಂಡ ಗ್ರಂಥಗಳಾಗಿವೆ. ಕ್ರಿ.ಶ.7ನೇ ಶತಮಾನದವುಗಳೆನ್ನಲಾದ ಹಯಶೀರ್ಷ, ಪಂಚರಾತ್ರ, ತಂತ್ರ ಸಾಹಿತ್ಯವು ಪುರಾಣದ ಸಾಹಿತ್ಯಗಳಾದ ವಿಷ್ಣುಧರ್ಮೋತ್ರ, ಮತ್ಸ್ಯ, ಗರುಡ, ಪುರಾಣಗಳು, ಸುಪ್ರಭೇಧಾಗಮ, ಕಾಮಿಕಾಗಮ, ಕಾರಣಾಗಮ, ರೌರವಾಗಮ, ಅಜಿತಾಗಮ, ವೈಖಾನಸಾಗಮ ಮುಂತಾದ ಆಗಮ ಗ್ರಂಥಗಳು ವಾಸ್ತುಶಿಲ್ಪಶಾಸ್ತ್ರದ ವಿಷಯಗಳನ್ನು ಒಳಗೊಂಡಿವೆ.

ಪ್ರತ್ಯೇಕವಾಗಿ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತಹ ಆಧಾರ ಗ್ರಂಥಗಳನ್ನು ಮತ್ತು ಔತ್ತರೇಯ ಗ್ರಂಥಗಳೆಂದು ವಿಭಾಗಿಸಲಾಗಿದೆ. ಕ್ರಿ.ಶ.11ನೇ ಶತಮಾನದ ಭುವನಪ್ರದೀಪನ ಅಪರಾಜಿತ ಪೃಚ್ಛಾ ಕ್ರಿ.ಶ.ಸು.10-11ನೇ ಶತಮಾನದಲ್ಲಾದ ಭೋಜನ ಸಮರಾಂಗಣ ಸೂತ್ರಧಾರ, ಮತ್ಸ್ಯಪುರಾಣಕ್ಕೂ ಮೊದಲಿನ ಕಾಲವೆನ್ನಲಾದ ವಿಶ್ವಕರ್ಮನ, ವಿಶ್ವಕರ್ಮ ಪ್ರಕಾಶ, ಕ್ರಿ.ಶ.10ನೇ ಶತಮಾನದ ಮಂಡನನ ರೂಪಮಂಡನಾ ಗ್ರಂಥಗಳು ಔತ್ತರೇಯ ಗ್ರಂಥಗಳು ಅದರಂತೆ ಕ್ರಿ.ಶ.9ನೇ ಶತಮಾನದ ಮಯಮತ, ಕ್ರಿ.ಶ.5ನೇ ಶತಮಾನದ ಮಾನಸಾರ ಕ್ರಿ.ಶ.15ನೇ ಶತಮಾನದ ತಂತ್ರಸಮುಚ್ಚಯ, ಕಾಶ್ಯಪಶಿಲ್ಪ, ವಿಮಾನಾರ್ಚನ ಕಲ್ಪ, ಪದ್ಮ ಸಂಹಿತಾ, ಪ್ರಯೋಗ ಮಂಜರಿಲ ಕ್ರಿಶ.16ನೇ ಶತಮಾನದ ವಾಸ್ತುವಿದ್ಯಾ, ಶ್ರೀಕುಮಾರನ ಶಿಲ್ಪರತ್ನ ಮುಂತಾದ ಗ್ರಂಥಗಳು ದಕ್ಷಿಣಾತ್ಯ ಗ್ರಂಥಗಳೆಂದು ವಿದ್ವಾಂಸರು ಗುರುತಿಸಿದ್ದಾರೆ.

**ದೇವಾಲಯದ ವಾಸ್ತು:–** ತಮಗಾಗಿ ನಿರ್ಮಿಸಿಕೊಂಡ ಮನೆ ಗೃಹವಾಸ್ತು ಶಿಲ್ಪವೆನಿಸಿಕೊಂಡರೆ ದೇವರಿಗಾಗಿ ಕಟ್ಟಿದ ಆಲಯವು "ದೇವಾಲಯದ ವಾಸ್ತುಶಿಲ್ಪ" ಎನಿಸಿಕೊಂಡರು. ದೇವಾಲಯಗಳನ್ನು ನಿರ್ಮಾಣ ಮಾಡುವ ಮುನ್ನ ಅದಕ್ಕೆ ಉತ್ತಮವಾದಂತಹ ಸ್ಥಳವನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಸಾಮಾನ್ಯವಾಗಿ ಎಲ್ಲಾ ಶಿಲ್ಪಶಾಸ್ತ್ರಗಳಲ್ಲಿ ಭೂಪರೀಕ್ಷೆ ಎಂಬ ಶೀರ್ಷಿಕೆಯ ಪ್ರತ್ಯೇಕ ಅಧ್ಯಾಯವು ಪ್ರಾರಂಭದಲ್ಲಿಯೇ ಇರುತ್ತದೆ. ಇದರ ಬಗ್ಗೆ ವಿಸ್ತಾರವಾದಂತಹ ವಿವರಣೆಗಳು ದೊರೆಯುತ್ತವೆ. ಶತಪಥ ಬ್ರಾಹ್ಮಣದಲ್ಲಿ ಭೂಮಿ ಆಯ್ಕೆಯ ಬಗ್ಗೆ ಬಹಳಷ್ಟು ಮಹತ್ವವಾದಂತಹ ಅಂಶಗಳನ್ನು ಹೇಳಲಾಗಿದೆ.[17] ಈ ಸ್ಥಳದ ಆಯ್ಕೆಯ ತರುವಾಯ ಕಟ್ಟಡದ ತಲನಕ್ಷೆಯನ್ನು ತಯಾರಿಸಲಾಗುತ್ತದೆ. ಇದೇ ವಾಸ್ತುಪುರುಷ ಮಂಡಲ, ಭಾರತೀಯ ಕಟ್ಟಡ ರಚನಾ ವಿನ್ಯಾಸದ ಮೂಲ ಸ್ವರೂಪವು ಚಚೌಕಾಕೃತಿ ಇದೇ ಅದರ ಮುಖ್ಯ ರೂಪ ಇದನ್ನು ತ್ರಿಕೋನ, ಷಟ್ಕೋನ, ಅಷ್ಟಕೋನ, ವೃತ್ತವಾಗಿಯೂ ಪರಿವರ್ತಿಸಬಹುದು. ವೇದಗಳ ಕಾಲದಲ್ಲಿ ಯಜ್ಞಕುಂಡಗಳು ಚೌಕಾಕಾರ ಹಾಗೂ ಇತರ ಜ್ಯಾಮಿತಿಯ ಆಕಾರಗಳಲ್ಲಿ ಇರುತ್ತಿದ್ದವು. ಅದೇ ರೀತಿಯಾಗಿ ಯಜ್ಞವೇದಿಗಳು ಮಾತ್ರ ಚೌಕಾಕಾರದಲ್ಲಿಯೇ ಇರುತ್ತಿದ್ದವು. ಇದರ ಬಗ್ಗೆ ಪ್ರೊ.ಸ್ಟೆಲ್ಲಾ ಕ್ರಮ್ರಿಶ್ ಅವರು,[18] ಯಜ್ಞ ಮತ್ತು ದೇವಾಲಯಗಳ ಶಿಲ್ಪಗಳ ಮೂಲಭೂತ ಸಂಕೇತವಾಗಿ ಚೌಕವಿದೆ. ಬೌದ್ಧಾಯನನು ಮೊದಲು ರಥಚಕ್ರ ಚಿತಿಯನ್ನು ನಿರ್ಮಾಣ ಮಾಡುವುದರ ಬಗ್ಗೆ ಹೇಳಿರುವುದನ್ನು ವ್ಯಾಖ್ಯಾನಕಾರನು ವಿಸ್ತರಿಸುತ್ತಾ ಮೊದಲಿಗೆ ನಾಲ್ಕು ಇಟ್ಟಿಗೆಗಳಿಂದ ಸಣ್ಣಚಭಕವನ್ನು ಅಗ್ನಿಕ್ಷೇತ್ರದ ಮಧ್ಯೆ ನಿರ್ಮಿಸುವುದನ್ನು ಹೇಳುತ್ತಾನೆ. ಇದನ್ನೇ ಹಿಗ್ಗಿಸಿ ಹದಿನಾರು ಇಟ್ಟಿಗೆಗಳನ್ನು ಬಳಸುವ ಕ್ರಮವನ್ನು ಹೇಳುತ್ತಾನೆ. ವಾಸ್ತುಶಾಸ್ತ್ರದಲ್ಲಿ ಈ ರೀತಿಯಾಗಿ 1, 2, 3, 4 ಮುಂತಾಗಿ ಚೌಕಗಳು ಇರುವಂತೆ ಅನುಕ್ರಮ ಶ್ರೇಣಿಯಲ್ಲಿ ವಾಸ್ತುಮಂಡಲದ ಚೌಕಗಳ ಸಂಖ್ಯೆ ಏರುತ್ತಾ ಸಾಗುತ್ತದೆ. ಇವುಗಳಲ್ಲಿ 64 ಚೌಕಗಳ ವಾಸ್ತುಮಂಡಲವು ಬಹುಶ್ರೇಷ್ಠ ಎಂದು ಪರಿಗಣಿತವಾಗಿದೆ. ಇದು ವೇದಿ ನಿರ್ಮಾಣದ 64 ಇಟ್ಟಿಗೆಗಳೊಂದಿಗೆ ಸಂಬಂಧ ಇರಿಸಿಕೊಂಡು ಪಾವನವೆಂದು ಗ್ರಹಿಸಲಾಗಿದೆ ಎಂದು ಹೇಳಿದ್ದಾರೆ. ವಾಸ್ತುಪುರುಷ ಮಂಡಲವು ವಾಸ್ತುಪುರುಷನ ರೂಪ ಹಾಗೂ ಯಂತ್ರವಾಸ್ತು ಪುರುಷನನ್ನು ಮಾನವಾಕಾರದಲ್ಲಿ ಚಿತ್ರಿಸಲಾಗಿದೆ. 64 ಚೌಕಗಳ ಮಂಡಲದಲ್ಲಿ ಈತನ ಶಿರಸ್ಸು ಪೂರ್ವಾಭಿಮುಖವಾಗಿದ್ದು ಪಾದಗಳು ಪಶ್ಚಿಮಕ್ಕಿರುತ್ತವೆ. ಈತನ ಅಂಗಗಳ ಮೇಲೆ 44 ದೇವತೆಗಳಿರುತ್ತಾರೆ. ಹೊರ ಅಂಚಿನ ಭಾಗದಲ್ಲಿ ವಾಸ್ತುಮಂಡಲದ ಪರಿಧಿಯಲ್ಲಿ 32 ದೇವತೆಗಳು ಮತ್ತು ಮಧ್ಯಭಾಗದ ಸುತ್ತಲೂ ಒಳಅಂಚಿನಲ್ಲಿ 12 ದೇವತೆಗಳು, 32 ದೇವತೆಗಳನ್ನು ಪ್ರಾಕಾರ ದೇವತೆಗಳೆಂದು ಕರೆಯಲಾಗಿದೆ.[19] ದೇವಾಲಯಗಳನ್ನು ನಿರ್ಮಾಣ ಮಾಡಲು ಮಣ್ಣು, ಇಟ್ಟಿಗೆ, ಮರ ಮತ್ತು ಶಿಲೆಗಳೇ

ಪ್ರಧಾನವಾದ ವಸ್ತುಗಳು. ಮಹಾನಿರ್ಮಾಣ ತಂತ್ರವು ಶಿಲೆಗಳಿಂದ ನಿರ್ಮಿಸಿದ ಕಟ್ಟಡವು ಹೆಚ್ಚು ಶ್ರೇಯಸ್ಕರ ಎಂದು ಹೇಳಲಾಗಿದೆ. ಇಟ್ಟಿಗೆಯಿಂದ ನಿರ್ಮಿಸಿದ ಕಟ್ಟಡವು ಮರದ ನಿರ್ಮಾಣಕ್ಕಿಂತ ನೂರು ಪಟ್ಟು ಉತ್ತಮವಾದರೆ ಶಿಲಾನಿರ್ಮಿತಿಗಳು ಹತ್ತುಸಾವಿರದಷ್ಟು ಶ್ರೇಯಸ್ಕರ ಎಂದು ವಿವರಿಸಲಾಗಿದೆ.[20] ಶಾಸ್ತ್ರಗ್ರಂಥಗಳು ಈ ಪ್ರಧಾನ ವಸ್ತುಗಳ ಬಗ್ಗೆ ಸಾಕಷ್ಟು ವಿವರಣೆಯನ್ನು ನೀಡುತ್ತವೆ. ನೆಲದಲ್ಲಿರುವ ಮಣ್ಣನ್ನು ಹೊರತೆಗೆದು ಅದನ್ನು ಬಲವರ್ಧನೆಗೊಳಿಸಲು ಹಲವು ಮಾರ್ಗಗಳನ್ನು ಶತಪಥ ಬ್ರಾಹ್ಮಣದಲ್ಲಿ ಬೌದ್ಧಾಯನ ಕಲ್ಪ ಸೂತ್ರದಲ್ಲಿ ಅಪರಾಜಿತ-ಪೃಚ್ಛ ಮುಂತಾದ ಶಾಸ್ತ್ರಗ್ರಂಥಗಳು ಹೇಳುತ್ತವೆ.[21] ಇಟ್ಟಿಗೆಯನ್ನು ಸಂಸ್ಕೃತದಲ್ಲಿ ಇಷ್ಟಕ ಎನ್ನುತ್ತಾರೆ, ಇದರ ಪ್ರಯೋಗವು ಯಜುರ್ವೇದದಲ್ಲಿಯೇ ಇದೆ. ಇಷ್ಟಕಗಳನ್ನು ತಯಾರಿಸುವ ಕ್ರಮವನ್ನು ಶಿಲ್ಪರತ್ನದಲ್ಲಿ ಹೇಳಿದೆ. ಕಲ್ಪಸೂತ್ರದಲ್ಲಿ ಶೌತ್ರಸೂತ್ರ, ಗೃಹಸೂತ್ರ, ಧರ್ಮಸೂತ್ರ ಮತ್ತು ಕಲ್ಪ ಸೂತ್ರಗಳೆಂಬ ನಾಲ್ಕು ಭಾಗಗಳಿವೆ. ಶೌತ್ರಸೂತ್ರ ವಿವರಿಸುವ ಯಜ್ಞವೇದಿ-ಕುಂಡಗಳ ನಿರ್ಮಾಣ ಮತ್ತು ಯಜ್ಞಸಿದ್ಧಿಗೆ ಬೇಕಾಗಿರುವ ಇಟ್ಟಿಗೆ ಮತ್ತಿತರ ಪರಿಕರಣಗಳನ್ನು ತಯಾರಿಸುವ ಕ್ರಮವನ್ನು ಕಲ್ಪಸೂತ್ರ ವಿವರಣೆ ನೀಡುತ್ತದೆ.[22] ಇದೇ ರೀತಿ ಮರದ ಬಗ್ಗೆ ಸಾಕಷ್ಟು ವಿವರಣೆಯನ್ನು ನೀಡುವ ಶಾಸ್ತ್ರಗ್ರಂಥಗಳು ಮರವನ್ನು ವಯೋಮಾನ, ದೋಷಗಳು ಮತ್ತು ಲಿಂಗ ಇವುಗಳ ಆಧಾರದಿಂದ ವರ್ಗೀಕರಿಸಿದೆ. ಹಾಗೆಯೇ ಶಿಲೆಗಳ ಸ್ವೀಕಾರ ನಿರಾಕರಣೆಯನ್ನು ಅವುಗಳ ಬಣ್ಣ, ಲಿಂಗ ಮತ್ತು ವಯೋಮಾನಗಳ ಆಧಾರಗಳಿಂದ ತೀರ್ಮಾನಿಸಬಹುದಾಗಿದೆ.[23]

**ಪ್ರಸಾದ-ವಿಮಾನ:-** ದೇವಾಲಯಗಳನ್ನು ಪ್ರಸಾದ ಅಥವಾ ವಿಮಾನ ಎಂದು ಕರೆಯಲಾಗಿದೆ ತನ್ನ ಸೌಂದರ್ಯದಿಂದ ದೇವರನ್ನು ಮನುಷ್ಯರನ್ನು ಆಹ್ಲಾದಗೊಳಿಸುತ್ತದೆ ಎಂಬ ಕಾರಣದಿಂದ ಅದನ್ನು ಪ್ರಸಾದವೆನ್ನಲಾಗಿದೆ. ಪ್ರಸಾದ ಎಂಬ ಮಾತು ದೇವರ ಮೂರ್ತಿ ಇರಬೇಕಾದ ಚೌಕಾಕಾರದ ನಾಲ್ಕು ದಪ್ಪನಾದ ಗೋಡೆಗಳ ನಡುವಣ ಕಿರಿದಾದ ಗರ್ಭಗೃಹ, ಅದರ ಕೆಳಗಿನ ಅಧಿಷ್ಠಾನ ಅಥವಾ ಉಪಪೀಠ ಹಾಗೂ ಶಿಖರಕ್ಕೆ ಆಸರೆಯಾಗಿರುವಂಥ ಮೇಲು ಕಟ್ಟಡವನ್ನೊಳಗೊಂಡ ಭಾಗಕ್ಕೆ ಅನ್ವಯಿಸುತ್ತದೆ. ಈ ರೀತಿ ಸಮಗ್ರ ಪಾದವು ಒಂದು ಭಿತ್ತಿಯನ್ನು ಸೂಚಿಸುವಂತೆ ಇದೆ. ಪ್ರಸಾದ, ಸದ್ಮ, ಸದನಮ್ ಎಂಬ ಹೆಸರುಗಳು ಸಾಧನಮ್ ವೇದಿಯನ್ನು ಒಟ್ಟುಗೂಡಿಸುವಿಕೆ ಎಂಬ ಮೂಲ ಶಬ್ದದಿಂದಲೇ ಬಂದಿರುವಂತಹವುಗಳು.[24] ವಿಮಾನ ಎಂಬುದಕ್ಕೂ ದೇವಾಲಯವೆಂಬ ಅರ್ಥವಿದೆ. "ಮಾನ" ಎಂದರೆ ಅಳತೆಗೋಲು "ಮಾ" ಎಂಬುದಕ್ಕೆ ಒಂದು ವಸ್ತುವಿಗೆ ರೂಪ ಕೊಡುವುದು ಎಂಬ ಅರ್ಥವಿದೆ. ಅದ್ಯಂತವಾಗಿ ಪ್ರಮಾಣಬದ್ಧವಾಗಿ ಅಳೆದು ಶಾಸ್ತ್ರೋಕ್ತವಾಗಿ ಕಟ್ಟಿ ಅದರಲ್ಲಿ ದೇವರನ್ನು ನೆಲೆಗೊಳಿಸಿದ ಆಲಯ ಇಲ್ಲೂ ಇದು ಗರ್ಭಗೃಹಕ್ಕೆ ಮಾತ್ರ ಅನ್ವಯವಾಗುವಂತಹದ್ದು.[25]

**ದೇವಾಲಯದ ಪ್ರಭೇದಗಳು:-** ವಿಮಾನಗಳ ಆಕೃತಿಯನ್ನು ಅವಲಂಭಿಸಿ ದೇವಾಲಯಗಳ ಪ್ರಭೇದಗಳನ್ನು ವಿಂಗಡಿಸಲಾಗಿದೆ. ಶಾಸ್ತ್ರಗ್ರಂಥಗಳು ದೇವಾಲಯಗಳ ಹಲವಾರು ಮಾದರಿಗಳನ್ನು ಹೆಸರಿಸಿವೆ. ಅವುಗಳಲ್ಲಿ ಇಪ್ಪತ್ತು ಮಾದರಿಗಳು ಪ್ರಮುಖವಾಗಿವೆ. ಮೇರು, ಮಂದಾರ, ಕೈಲಾಸ, ವಿಮಾನಚ್ಛಂಧ, ನಂದನ, ಸಮುದ್ರ, ಪದ್ಮ, ಗರುಡ, ನಂದಿವರ್ಧನ, ಗಜ, ಗೃಹರಾಜ, ವೃಷ್ಟಹಂಸ, ಕುಂಭ, ಸರ್ವತೋಭಂದ್ರ, ಮೃಗರಾಜ, ವರ್ತುಲ, ಚತುರ್ರಸ, ಷೋಡಶಾಸ್ತ್ರ ಮತ್ತು ಅಷ್ಟಾಸ್ತ್ರ ಇವುಗಳಲ್ಲಿ ಮೊದಲು ಮೂರು ದೇವಾಲಯಗಳಾದ ಮೇರು, ಮಂದಾರ, ಕೈಲಾಸಗಳು, ಹೆಸರುಗಳು ಪೃಥ್ವಿಯ ಅಕ್ಷರೇಖೆಯ ಮೇಲಿರುವ ಮೇರು ಪರ್ವತ, ವಿಷ್ಣುವಿನ ವಾಸಸ್ಥಾನವಾದ ಮಂದಾರ, ಕೈಲಾಸವು ಶಿವನ ಸ್ಥಳ. ಈ ಮಾದರಿಗಳಲ್ಲಿ ಹಲವು ಅಂತಸ್ತುಗಳು (ಭೂಮಿಗಳು) ಇರುತ್ತವೆ.[26] ವಿಮಾನಗಳಲ್ಲಿ ಐದು ವಿಧಗಳನ್ನು ಗುರ್ತಿಸಲಾಗಿದೆ. ವೈರಾಜ, ಪುಷ್ಪಕ, ಕೈಲಾಸ, ಮಣಿಕ ಮತ್ತು ತ್ರಿವಿಷ್ಟಕ ವಿಮಾನ ಎಂಬುದಕ್ಕೆ ರಥ ಎಂಬ ಅರ್ಥವೂ ಇದೆ. ಇವುಗಳನ್ನು ಕ್ರಮವಾಗಿ ಬ್ರಹ್ಮ, ಕುಬೇರ, ಶಿವ, ವರುಣ ಹಾಗೂ ಇಂದ್ರರು ಬಳಸಿದ ರಥಗಳು ಇವುಗಳ ಆಕಾರವೂ ಕ್ರಮವಾಗಿ ಚೌಕ, ಆಯತ, ಅಂಡಾವೃತ ಹಾಗೂ ಅಷ್ಠಕೋನ ಆಕಾರ ಹೊಂದಿವೆ. ಇವುಗಳನ್ನು ವಾದ್ಯಪ್ರಸಾದಗಳೆಂದೂ ಕರೆಯಲ್ಪಟ್ಟಿವೆ.[27]

ದೇವಾಲಯಗಳನ್ನು ವಿಭಾಗಿಸುವಲ್ಲಿ ಶಿಖರವನ್ನು ಮುಖ್ಯವಾಗಿ ಪರಿಗಣಿಸಿ ಶಾಸ್ತ್ರಗ್ರಂಥಗಳು ಭಿನ್ನ ಭಿನ್ನ ಪದ್ಧತಿಗಳನ್ನು ಸೂಚಿಸುತ್ತವೆ. ಸಮರಾಂಗಣ ಸೂತ್ರಧಾರ, ಕಾಮಿಕಾಗಮ ಸ್ವಪ್ರಭೇದಾಗಮಗಳು ದೇವಾಲಯಗಳ ಶೈಲಿಗಳನ್ನು ಆಧರಿಸಿ ನಾಗರ, ದ್ರಾವಿಡ, ಹಾಗೂ ವೇಸರ ಎಂದು ವರ್ಗೀಕರಿಸಲಾಗಿದೆ.[28] ಕುತೂಹಲಕಾರಿ ಅಂಶವೆಂದರೆ 10-12ನೇ ಶತಮಾನಗಳ ಕೆಲವು ಶಾಸನಗಳಲ್ಲಿಯೂ ನಾಗರ, ದ್ರಾವಿಡ, ವೇಸರ ಮುಂತಾದ ಶೈಲಿಗಳ ಪ್ರಸ್ತಾಪವನ್ನು ಕಾಣುತ್ತೇವೆ.[29]

ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ ದೇವಾಲಯಗಳ ವರ್ಗೀಕರಣವನ್ನು ಭೌಗೋಳಿಕವಾಗಿಯೂ ಮಾಡಲಾಗಿದೆ. ಹಿಮಾಲಯ ಮತ್ತು ವಿಂದ್ಯಪರ್ವತಗಳ ನಡುವಿನ ಪ್ರದೇಶಗಳಲ್ಲಿ ಕಂಡುಬರುವ ದೇವಾಲಯಗಳು ನಾಗರ ಮಾದರಿ ಎಂದು ವಿಂಧ್ಯಾ ಪರ್ವತದಿಂದ ಕೃಷ್ಣನದಿ ತೀರದವರೆಗೆ ಬಳಕೆಯಲ್ಲಿರುವುದು ವೇಸರ ಹಾಗೂ ಕೃಷ್ಣ ನದಿಯಿಂದ ಕನ್ಯಾಕುಮಾರಿಯವರೆಗೆ ದ್ರಾವಿಡ ಮಾದರಿಯ ದೇವಾಲಯಗಳೆಂದೂ ಈ ಭೌಗೋಳಿಕ ವರ್ಗೀಕರಣವನ್ನು ಕ್ರಮವಾಗಿ ಸಾತ್ವಿಕ, ರಾಜಸ, ತಾಮಸ ವಲಯಗಳೆಂದೂ ಹೇಳಲಾಗಿದೆ. ಕಾಶ್ಯಪ ಶಿಲ್ಪಗ್ರಂಥದಲ್ಲಿನ ಈ ಕೆಳಗಿನ ಶ್ಲೋಕವನ್ನು ಗಮನಿಸಬಹುದು.[30]

ಹಿಮಾದ್ರಿ ವಿಂಧ್ಯಯೋರಂತರ್ಗತಾ ಸಾತ್ವಾದಸ್ಯಂಧರಾ

ವಿದ್ಯಾದಿ ಕೃಷ್ಣವೇಣ್ಯಂತಾ ರಾಜಸಂಖ್ಯಾ ಮಹೀಮತಾ

ಕೃಷ್ಣವೇಣ್ಯಾದಿ ಕನ್ಯಾಂತಂ ತಾಮಸಂ ಭೂತಸಂ ಭೂತಲಂ ಭವೇತ್

ನಾಗರಂ ಸತ್ವಿಕೇ ದೇಶೀ ತಾಮಸೇ ವೇಸರಾಲಯೌ

ರಾಜಸ್ಯೆ ದ್ರಾವಿಡ್ಯೆರ್ಹರ್ಮ್ಯಂ ಕ್ರಮತ್ ಪುಂಡಶಿಯೋಷಿತಃ

ಈ ಆಲಯಗಳಿಗೆ ಕ್ರಮವಾಗಿ ವಿಷ್ಣು, ಮಹೇಶ್ವರ, ಬ್ರಹ್ಮಾದಿ ದೇವತೆಗಳನ್ನು ಹರ್ಮ್ಯ ದೇವತೆಗಳೆಂದು ಹೆಸರಿಸಿವೆ.[31]

ದೇವಾಲಯಗಳ ರಚನಾ ವಿನ್ಯಾಸದ ಮೇಲಿಂದ ನಾಗರವು ಮೂಲದಿಂದ ಸ್ತೂಪಿಯವರೆಗೂ ಆಯತಾಸ್ರವಾಗಿದ್ದು ವೇಸರವು ವೃತ್ತಾಕಾರವಾಗಿಯೂ ದ್ರಾವಿಡವು ಅಷ್ಟಸ್ರ ಅಥವಾ ಷಡಸ್ರವಾಗಿದೆ.

ಉದಾಹರಣೆಗೆ ಸುಪ್ರಭೇದಾಗಮದಲ್ಲಿನ ಈ ಕೆಳಗಿನ ಶಲೋಕವನ್ನು ಗಮನಿಸಬಹುದು.[32]

ನಾಗರಂ ದ್ರಾವಿಡಂ ವೆಸರಂ ಚತ್ರಿಧಾ ಮತಮ್

ಕಂಠಾದಾರಭ್ಯ ವೃತ್ತಂ ಯದ್ ವೇಸರ ಇತಿ ಶೃತಮ್॥

ಗ್ರೀವಮಾರಭ್ಯಂ ಬೌಷ್ಟಂಶಂ ವಿಮಾನಂ ದ್ರಾವಿಡಾಖ್ಯಕಮ್

ಸರ್ವಂ ಚತುರಶ್ರಂ ಯತ್ಪ್ರಾಸಾದಂ ನಾಗರಾಂತ್ವಿದಮ್॥

**ನಾಗರಶೈಲಿ:–** ಮೇಲೆ ಹೇಳಿದ “ಸುಪ್ರಭೇದಾಗಮ” ಗ್ರಂಥದ ವಿವರದಂತೆ ತುಸು ಭಿನ್ನರೀತಿಯಲ್ಲಿ ಉಳಿದ ಗ್ರಂಥಗಳು ವಿವರಿಸುತ್ತವೆ.

ಆಸ್ತೂಪೀ ಕರ್ಣಮಾರಭ್ಯ ಚರುರಶ್ರಂ ಪ್ರಕಲ್ಪಿತಂ

ಧಾಮಾಯತಾಶ್ರಮಥವಾ ನಾಗರಂ ತುದದಾಹೃತಂ

ಎಂದು ಪದ್ಮ ಸಂಹಿತೆಯು ಕರ್ಣದಿಂದ (ಮಸ್ತಕದ ಮೇಲ್ಭಾಗ) ಸ್ತೂಪಿಯವರೆಗೆ ಚತುರಶ್ರ ಅಥವಾ ಆಯತಾಶ್ರಕಾರವಾಗಿರುವುದು ನಾಗರಶೈಲಿ ಎಂದಿದೆ. ಕಾಶ್ಯಪಶಿಲ್ಪ ಗ್ರಂಥವು ಜನ್ಮಾದಿ ಸ್ತೂಪಿ ಪರ್ಯಂತಂ ಯುಗಾಶ್ರಂ ನಾಗರಂ ಭವೇತ್ ಎಂದು ಜನ್ಮದಿಂದ ಸ್ತೂಪಿಯವರೆಗೆ ಚತುರಶ್ರವಿದ್ದರೆ ಅದು ನಾಗರ ಶೈಲಿ ಎಂದು ವಿವರಿಸುತ್ತದೆ.

**ದ್ರಾವಿಡ ಶೈಲಿ**:- ಮಾನಸಾರ ಗ್ರಂಥವು ದ್ರಾವಿಡ ಶೈಲಿಯ ಬಗ್ಗೆ ಸವಿಸ್ತಾರವಾಗಿ ವಿವರಿಸಿದೆ.

ಮೂಲಗ್ರಾತ್ ಸ್ತಯಾಪಿ ಪರ್ಯಂತಂ ಚತುಷ್ಟಾಶ್ರಕಂ ವಾ ಷಡಶ್ರಕಂ

ತದಗ್ರಂ ಚಾಯತಂ ವಾಪಿ ಗ್ರೀವಸ್ಯಾಧೋ ಯುಗಂಶ್ರಕಂ

ಪೂರ್ವವತ್ ಊರ್ಧ್ವದೇಶಂ ಸ್ಯಾತ್ ದ್ರಾವಿಡಂ ಪರಿಕೀರ್ತಿತಂ

ಮೂಲದಿಂದ ಸ್ತೂಪಿಯವರೆಗೆ ಎಂಟು ಅಥವಾ ಆರು ಕೋನವುಳ್ಳದ್ದಾಗಿದ್ದು, ಅಥವಾ ಕೆಳಗೆ ಆರು ಅಥವಾ ಎಂಟು ಕೋನಗಳು ಮೇಲ್ಗಡೆ ಆಯಾತಾಕಾರ ಅಥವಾ ಚತುಶ್ರವಾಗಿದ್ದು ಅಥವಾ ಗ್ರೀವದಿಂದ ಕೆಳಗೆ ಚತುರಶ್ರವಾಗಿದ್ದು ಕಂಠದಿಂದ ಮೇಲಕ್ಕೆ ಆರು ಅಥವಾ ಎಂಟು ಕೋನವುಳ್ಳದ್ದು ದ್ರಾವಿಡ ಶೈಲಿ ಎಂದು ವಿವರಿಸಿದೆ. "ಸುಪ್ರಭೇದಾಗಮ" ಮತ್ತು "ಕೌಶ್ಯಪಶಿಲ್ಪ" ಗ್ರಂಥಗಳು.

ಗ್ರೀವಮಾರಭ್ಯ ಅಷ್ಟಾಶ್ರಂ ವಿಮಾನಂ ದಾವಿಳ್ಹಾಖ್ಯಕಂ ಕಂಠದಿಂದ ಆರಂಭಗೊಂಡ ಎಂಟು ಕೋನಗಳ ರಚನೆಯು ದ್ರಾವಿಡ ಶೈಲಿ ಎಂದು ಗುರುತಿಸುತ್ತದೆ.

**ವೇಸರ ಶೈಲಿ**:-"ಕಾಶ್ಯಪ ಶಿಲ್ಪ" ಗ್ರಂಥವು ವೃತ್ತಗ್ರೀವ ಶಿರೋಪೀತಂ ವೇಸರಂ ಹರ್ಮ್ಯಮೀರಿತಂ

ಕಂಠ ಹಾಗೂ ಶಿರೋಭಾಗವು ವೃತ್ತಾಕಾರವಿದ್ದಲ್ಲಿ ಅದು ವೇಸರ ಶೈಲಿ ಎಂದಿದೆ. "ಸುಪ್ರಭೇದಾಗಮ" ಗ್ರಂಥವು ಇದನ್ನೇ ಅನುಮೋದಿಸಿದೆ. ಗರ್ಭಗೃಹವು ವೃತ್ತಾಕಾರವಿದ್ದರೆ ವೇಸರವೆಂದೇ "ಕಾಶ್ಯಪಶಿಲ್ಪ" ಗ್ರಂಥವು ಗುರ್ತಿಸುತ್ತದೆ. "ಮಾನಸಾರ" ಗ್ರಂಥದ ಪ್ರಕಾರ ಮೂಲ ಅಥವಾ ಕೆಳಭಾಗದಲ್ಲಿ ವೃತ್ತಾಕಾರ ಅಥವಾ ವೃತ್ತಾಯತ ಕಂಠದಿಂದ ಮೇಲಕ್ಕೆ ಚತುರಶ್ರ ರಚನೆಯೂ ವೇಸರವೆಂದು ಗುರುತಿಸುತ್ತದೆ. ವೃತ್ತಾಕಾರದ ಮೂಲದೊಂದಿಗೆ ಲಾಳಾಕಾರದ ಮೇಲ್ಭಾಗದ ರಚನೆಯು ವೇಸರವೆನಿಸುತ್ತದೆ.

ವೇಸರವೆಂಬುದನ್ನು ದಕ್ಷಿಣಾತ್ಯ ಗ್ರಂಥಗಳು ಮಾತ್ರ ಉಲ್ಲೇಖಿಸುತ್ತವೆ. ಕಾಮಿಕಾಗಮವು "ವೇಸರ"ವನ್ನು ವಿಸ್ತಾರವಾಗಿ ವಿವರಿಸುತ್ತದೆ. ಸ್ಟೆಲ್ಲಾ ಕ್ರಮಿಶ್ ಅವರು ಈ ಬಗ್ಗೆ ಕಾಮಿಕಾಗಮದ ಸರವನ್ನು ಸಂಗ್ರಹಿಸಿ ವೇಸರವನ್ನು "ಹೇಸರಗತ್ತೆ" ಗಂಗರ ಮತ್ತು ದ್ರಾವಿಡರ ಮಿಶ್ರರೂಪ ಎಂದು ಹೇಳಿದ್ದಾರೆ.[33] ವೇಸರವೆಂಬುದಕ್ಕೆ ಸಂಕರ ಎಂಬ ಅರ್ಥವನ್ನೂ ಕಾಮಿಕಾಗಮವು ಹೇಳುತ್ತದೆ.[34] ಎಂ.ಎನ್.ಪ್ರಭಾಕರ ಅವರು ಈ ವೇಸರ ಶೈಲಿಯನ್ನು ಔತರೇಯ ದ್ರಾವಿಡ ಶೈಲಿ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[35]

ಮೇಲುಕಟ್ಟಡ ಅಥವಾ ಶಿಖರದ ವಿವಿಧ ಮಾದರಿಗಳ ಹಿನ್ನೆಲೆಯಲ್ಲಿ ಕಂಡುಬರುವ ಇತರ ಪ್ರಭೇದಗಳೆಂದರೆ ರೇಖಾನಾಗರ, ಲತಿನ, ವಿಮಾನನಾಗರ, ಕಳಿಂಗ, ವರಾಟ, ಭೂಮಿಜ ಮುಂತಾದವು ಶಿಖರಕ್ಕೆ ಅನ್ವಯಿಸಿ ಈ ಪ್ರಭೇದಗಳು ಉತ್ತರ ಭಾರತಕ್ಕೆ ಅನ್ವಯಿಸುತ್ತವೆ ಎಂದು ಹೇಳಿದರೂ ಇವು ಭಾರತದ ಇತರ ಕಡೆಗಳಲ್ಲೂ ಕಂಡು ಬಂದು ಸ್ಥಳೀಯ ಪ್ರಭೇದಗಳಾಗಿ ಬೆಳೆದು ಬಂದಿದೆ. ಭೂಮಿಜ ಶೈಲಿಯು ಮಾಳ್ವ ದೇಶಕ್ಕೆ ಸೇರಿದ್ದು. ಅದು ಅಲ್ಲಿ ಆರಂಭಗೊಂಡಿತು ಎನ್ನಲಾದರೂ ಅದಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆತಿದ್ದು ಮಾಳ್ವದ ಪರಮಾರರುಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದ ಯಾದವರಿಂದ ಅವರು ಈ ಶೈಲಿಯನ್ನು ತಮ್ಮ ಪ್ರದೇಶದಲ್ಲಿ ಸ್ವೀಕರಿಸಿ ವಿಶೇಷವಾಗಿ ಬಳಸಿದರೆಂದು ವಿದ್ವಾಂಸರು ಗುರುತಿಸಿದ್ದಾರೆ.[36] ಸಮರಾಂಗಣ ಸೂತ್ರಧಾರ ಕಾಮಿಕಾಗಮ ಮತ್ತು ಅಪರಾಜಿತಪಚ್ಚದಲ್ಲಿ ವಾರಾಟವನ್ನು ವಿವರಿಸಲಾಗಿದೆ. ಸಮರಾಂಗಣ ಸೂತ್ರಧಾರದಲ್ಲಿ ವೇಸರಕ್ಕೆ ಬದಲು ವಾರಾಟ ಎಂಬ ಹೆಸರಿದೆ. ಈ ಎಲ್ಲ ಶಿಖರ ಮಾದರಿಯ ಜೊತೆಗೆ ಕದಂಭನಾಗರ ಶಿಖರ ರಚನೆಯನ್ನು ಕರ್ನಾಟಕದಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಕದಂಬ ನಾಗರ ಶಿಖರವನ್ನು ವಿದ್ವಾಂಸರ "ಫಾಂಸನಾ ಶಿಖರ" ಎಂದು ಗುರುತಿಸಿದ್ದಾರೆ.[37] ಈ ಶೈಲಿಯು ಕದಂಬರ ರಚನೆಯಲ್ಲಿ ಕಂಡುಬರುತ್ತಿದ್ದರೂ ಕಲ್ಯಾಣ ಚಾಲುಕ್ಯರ ದೇವಾಲಯಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಈ ರಚನೆಯಲ್ಲಿ ದೇವಾಲಯದ ಮೇಲುಕಟ್ಟಡವು ಕಂಠ, ಕಪೋತಗಳಿಂದ ಕೂಡಿದ್ದು ಹಂತಹಂತವಾಗಿ ಚಿಕ್ಕದಾಗುತ್ತಾ ಮೇಲೇರುತ್ತದೆ. ಅಂತ್ಯದಲ್ಲಿ ಗ್ರೀವ, ಶಿಖರ, ಸ್ತೂಪಿ ಭಾಗಗಳಿರುತ್ತವೆ.

**ದೇವಾಲಯದ ಪ್ರಮುಖ ಅಂಗಗಳು**:– ದೇವಾಲಯದ ಊರ್ಧ್ವಮುಖ ರಚನೆಯಲ್ಲಿ ಆರು ಅಂಗಗಳನ್ನು ಗುರುತಿಸಲಾಗಿದೆ. ಹೀಗೆ ಆರು ಅಂಗಗಳನ್ನು ಹೊಂದಿರುವಂತಹ ದೇವಾಲಯಗಳು ಷಡ್ವರ್ಗ ದೇವಾಲಯ ಎಂದೆನಿಸಿಕೊಳ್ಳುತ್ತದೆ.[38] ಸಾಮಾನ್ಯವಾಗಿ ದೇವಾಲಯದ ಎತ್ತರವು ಅದರ ಅಗಲದ ಎರಡರಷ್ಟು ಪ್ರಮಾಣದಲ್ಲಿ ಇರುತ್ತದೆ ಈ ಎತ್ತರವನ್ನು ಎಂಟು ಭಾಗಗಳಾಗಿ ಮಾಡಿದರೆ ಅದರಲ್ಲಿ ಒಂದು ಭಾಗ ಅಧಿಷ್ಠಾನಕ್ಕೆ ಎಡರು ಭಾಗ ಭಿತ್ತಿ ಪ್ರಸ್ತರ ಮತ್ತು ಗ್ರೀವಕ್ಕೆ ಒಂದೊಂದು ಭಾಗ ಶಿಖರಕ್ಕೆ ಎರಡು ಭಾಗ ಮತ್ತು ಸ್ತೂಪಿಗೆ ಒಂದು ಭಾಗ ಎಂದು ಷಡ್ವರ್ಗಗಳಾಗಿ ವಿವರಿಸಲಾಗಿದೆ.[39]

**ಉಪಪೀಠ**:– ಷಡ್ವರ್ಗದ ದೇವಾಲಯದ ಮೊದಲ ಅಂಗವಾದ ಅಧಿಷ್ಠಾನದ ಕೆಳಗೆ ಉಪಪೀಠವಿರುತ್ತದೆ. ಇದು ಐಚ್ಛಿಕವಾದ ಭಾಗ, ಕಡ್ಡಾಯವಾಗಿ ಇರಲೇಬೇಕೆಂಬ ನಿಯಮವಿಲ್ಲ. ಆದರೆ ದೇವಾಲಯದ ಉನ್ನತಿ, ಶೋಭೆ ಮತ್ತು ಹೆಚ್ಚಿನ ರಕ್ಷಣೆಗಾಗಿ ಇದನ್ನು ಅಳವಡಿಸಿಕೊಳ್ಳಲಾಗದೇ. ಅದಿಷ್ಠಾನ ಭಾಗದಲ್ಲಿ ಇರುವಂತೆ ಜನ್ಮನ್, ಕಂಪ, ಪದ್ಮ, ಕಂದರ,

ಕಪೋತ, ಆಲಿಂಗ, ಆಂತರಿತ, ಪ್ರತಿ, ವಾಜನ, ಪಟ್ಟಿಕಾ ಎಂಬ ಅಂಗಗಳು ಇರುತ್ತವೆ. ಉಪಪೀಠವನ್ನು ಅದು ಹೊಂದಿದ ಅಂಗಗಳ ಸಂಖ್ಯೆಯ ಮೇಲಿಂದಲೂ ಮತ್ತು ಅದು ಯಾವ ಯಾವ ಅಂಗಗಳನ್ನು ಹೊಂದಿದೆ ಎಂಬ ಆಧಾರದಿಂದಲೂ ವಿಂಗಡಿಸಲಾಗಿದೆ. ಉದಾ:– ಪಂಚಾಂಗ, ಷಡ್ಯಂಗ, ಅಷ್ಟಾಂಗ ಮತ್ತು ವೇದಿಭದ್ರ, ಮಂಜಭದ್ರ ಇತ್ಯಾದಿ.

**ಅಧಿಷ್ಠಾನ**:– ಷಡ್ವರ್ಗ ಕ್ರಮದಲ್ಲಿ ಅಧಿಷ್ಠಾನವು ಮೊದಲ ಭಾಗವಾಗಿದ್ದರಿಂದ ಶಾಸ್ತ್ರ ಗ್ರಂಥಗಳು ಈ ಭಾಗವನ್ನು ಅದ್ಯಂಗ ಎಂದು ಕರೆದಿದೆ. ಮಸೂರಕ, ವಾಸ್ತ್ಯಾಧಾರ, ಧರಾತಲ, ತಲ, ಕುಟ್ಟಿಮ ಇವುಗಳು ಅಧಿಷ್ಠಾನದ ಸಮಾನ ಪದಗಳು. ಅಧಿಷ್ಠಾನ, ಜಗತಿ, ಖರ, ಕುಂಭ, ಪದ್ಮ, ಕುಮುದ, ಗಳ, ಕಂಪ, ಆಲಿಂಗ, ಅಂತರಿತ, ಪ್ರತಿ, ವಾಜನ, ಕಪೋತ, ಮತ್ತು ಪಟ್ಟಿಕಾ ಭಾಗಗಳನ್ನು ಹೊಂದಿರುತ್ತವೆ. ಶಾಸ್ತ್ರಗ್ರಂಥಗಳು ಅಧಿಷ್ಠಾನವನ್ನು ಕುಮುದ ಅಂಗದ ಆಧಾರದ ಮೇಲಿಂದ ಪಾದಬಂಧ, ಪ್ರತಿಬಂಧ ಎಂದು ವಿಂಗಡಿಸಿದೆ. ಅಧಿಷ್ಠಾನದಲ್ಲಿ ಕುಮುದ ಅಂಗವೇ ಇರದಿದ್ದಲ್ಲಿ ಅದು ಮಂಚಕ ರೀತಿ ಎಂದು ಸೂಚಿಸಿವೆ. ಅಧಿಷ್ಠಾನ ಭಾಗವು ನಾಸಿಗಳಿಂದ ಬಳ್ಳಿ, ವ್ಯಾಳ, ಕುಬ್ಜ, ಕಮಲದ ದಳಗಳಿಂದ ಅಲಂಕೃತಗೊಂಡಿರಬಹುದು. ಕಟ್ಟಡದ ರಕ್ಷಣಾ ದೃಷ್ಟಿಯಿಂದ ಅಧಿಷ್ಠಾನದ ಭದ್ರತೆ ಬಹಳ ಮುಖ್ಯ. ಅಧಿಷ್ಠಾನವು ಒಂದರಿಂದ ಐದು ಅಡಿ ಎತ್ತರವಾಗಿ ಇರುತ್ತದೆ.

**ಭಿತ್ತಿ**:– ಅಧಿಷ್ಠಾನದ ಮೇಲಿನ ಭಾಗವೇ ಭಿತ್ತಿ. ಷಡ್ವರ್ಗ ಕ್ರಮದಲ್ಲಿ ಇದು ಎರಡನೆಯದು. ಇಲ್ಲಿ ದೇವಾಲಯದ ಮೇಲ್ಕಟ್ಟಡದ ಭಾಗವನ್ನು ಹೊರಲೆಂದು ನಿಶ್ಚಿತ ಅಂತರದಲ್ಲಿ ಕುಡ್ಯಸ್ತಂಭಗಳನ್ನು ಇಡಲಾಗಿರುತ್ತದೆ. ಅಧಿಷ್ಠಾನದ ರಚನೆಯನ್ನು ಅನುಸರಿಸಿ ದೇವಾಲಯದ ಭಿತ್ತಿಯು ರಚನೆಗೊಂಡಿರುತ್ತದೆ. ಅಧಿಷ್ಠಾನವು ಮುಂಚಾಚಿದಂತೆ ಒಳಸರಿದಂತೆ ನಿರ್ಮಾಣ ಮಾಡಲಾಗಿರುತ್ತದೆ. ಭಿತ್ತಿಯು ಅದನ್ನೇ ಅನುಸರಿಸುತ್ತದೆ. ಭಿತ್ತಿಯಲ್ಲಿ ಮುಂಚಾಚಿದ ಈ ಭಾಗವನ್ನು ಭದ್ರ, ಕರ್ಣ, ಪ್ರತಿಭದ್ರ, ಪ್ರತಿಕರ್ಣ, ಸುಭದ್ರ, ಉಪಭದ್ರ ಎಂದು ಹೆಸರಿಸಲಾಗಿದೆ. ಭಿತ್ತಿಯ ರಕ್ಷಣೆಗಾಗಿ ನಿರ್ಮಾಣಗೊಂಡಿದ್ದರೂ ಇಲ್ಲಿ ಅನೇಕ ರೀತಿಯ ಅಲಂಕರಣಗಳನ್ನು ಕಾಣುತ್ತೇವೆ. ಶಿಲ್ಪಿಗೆ ತನ್ನ ಕೈಚಳಕವನ್ನು ತೋರಿಸಲು ಭಿತ್ತಿಯಲ್ಲಿ ಬಹಳಷ್ಟು ಅವಕಾಶವಿದೆ. ಇಲ್ಲಿರುವ ವೇದಿ ವೇದಿಕಾ, ಕುಡ್ಯಸ್ತಂಭ ಕೋಷ್ಠ, ವಾತಾಯನ, ತೋರಣ, ಕುಂಭಲತಾ, ಸ್ತಂಭ ಶಿಖರದಂತಹ ಅಲಂಕರಣಗಳನ್ನು ಕಾಣುತ್ತೇವೆ. ಸಾಮಾನ್ಯವಾಗಿ ಭಿತ್ತಿಯ ಭದ್ರ ಭಾಗದಲ್ಲಿ ಕೋಷ್ಠಗಳಿರುತ್ತವೆ.

**ಪ್ರಸ್ತರ**:– ಇದು ಷಡ್ವರ್ಗ ಕ್ರಮದಲ್ಲಿ ಮೂರನೆಯ ಭಾಗವಾಗಿದೆ. ಮಂಚ, ಪ್ರಚ್ಛಾದನ, ಲೂಪಾ ಇವು ಪ್ರಸ್ತರದ ಸಾಮಾನ್ಯ ಪದಗಳು. ಇದನ್ನು ಮೇಲು ಪಾಯ ಎಂದು ಕರೆಯಬಹುದಾಗಿದೆ.

ಪ್ರಸ್ತರದಲ್ಲಿ ಉತ್ತರ, ವಾಜನ, ವಲ್ಲಭಿ, ಕಪೋತ, ಆಲಿಂಗ, ಅಂತರಿತ, ಪ್ರತಿ ಮತ್ತು ವಾಜನ ಎಂಬ ಉಪಅಂಗಗಳು ಇರುತ್ತವೆ. ವಲ್ಲಭಿ ಭಾಗದಲ್ಲಿ ಮಕರ, ಭ್ರಮರ, ಭೂತಗಣ, ಯಕ್ಷ, ವಿದ್ಯಾಧಕ ಚಿತ್ರಗಳನ್ನು ಬಿಡಿಸಿರುತ್ತದೆ. ಕಪೋತದಲ್ಲಿ ಕ್ಷುದ್ರನಾಸಿಗಳ ಅಲಂಕರಣವೂ ಇರುತ್ತದೆ.

**ಗ್ರೀವ**:– ಷಡ್ವರ್ಗ ಕ್ರಮದಲ್ಲಿ ಗ್ರೀವವು ನಾಲ್ಕನೆಯದು. ಇದನ್ನು ಕಂದರ, ಕಂಠ ಎಂದೂ ಸಹ ಸಾಮಾನ್ಯವಾಗಿ ಕರೆಯಲಾಗಿದೆ. ಇದು ಪ್ರಸ್ತರ ಮತ್ತು ಶಿಖರದ ನಡುವಿನ ಭಾಗವಾಗಿದ್ದು ಕುತ್ತಿಗೆಯಂತೆ ಒಳಸರಿದಿರುತ್ತದೆ. ಗ್ರೀವವು ತನ್ನ ಮೇಲಿನ ಅಂಗವಾದ ಶಿಖರದ ಆಕಾರದಲ್ಲಿಯೇ ಇರುತ್ತದೆ. ಈ ಭಾಗದಲ್ಲಿ ಗ್ರೀವ ಕೋಷ್ಟಗಳಿದ್ದು ಅವುಗಳಲ್ಲಿ ಗ್ರೀವ ದೇವತೆಗಳ ಉಬ್ಬು ಶಿಲ್ಪಗಳಿರುತ್ತವೆ. ಶಿಲ್ಪಶಾಸ್ತ್ರ ಗ್ರಂಥಗಳು ಹೇಳುವಂತೆ ಗ್ರೀವಾಧಾರದ ಮೇಲೆ ಗರ್ಭಗೃಹದಲ್ಲಿರುವ ದೇವರಿಗೆ ಸಂಬಂಧಿಸಿದ ವಾಹನವನ್ನು ಬಿಡಿಸಲಾಗಿರುತ್ತದೆ.

**ಶಿಖರ**:– ಶಿಖರವು ಷಡ್ವರ್ಗ ಕ್ರಮದಲ್ಲಿ ಐದನೆಯ ಭಾಗ. ಇದು ಇಡೀ ದೇವಾಲಯಕ್ಕೆ ಶೋಭಾಯಮಾನವಾಗಿ ಕಂಗೊಳಿಸುತ್ತದೆ. ದೇವಾಲಯದ ತಳವಿನ್ಯಾಸವನ್ನೇ ಅನುಸರಿಸಿ ಶಿಖರವು ಇರಬೇಕೆಂಬ ನಿಯಮವಿಲ್ಲ. ದೇವಾಲಯದ ತಳವಿನ್ಯಾಸವು ಚೌಕಾಕಾರವಾಗಿದ್ದರೂ ಶಿಖರವು ನಾಲ್ಕು ಮುಖ, ಎಂಟು ಮುಖ ಅಥವಾ ವೃತ್ತಾಕಾರದಲ್ಲಿಯೂ ರಚನೆಗೊಂಡಿರಬಹುದು. ಶಿಖರದ ಆಕಾರದ ಮೇಲಿಂದ ಕ್ರಮವಾಗಿ ಬ್ರಹ್ಮಖಂದ, ವಿಷ್ಣುಖಂದ, ರುದ್ರಖಂದ ಎಂದು ವರ್ಗೀಕರಿಸಲಾಗಿದೆ. ಶಿಖರವು ಯಾವ ಆಕರಾದಲ್ಲಿದ್ದರೂ ಅದು ನಾಸಿಗಳಿಂದ ಅಲಂಕೃತಗೊಂಡಿರುತ್ತದೆ.

**ಸ್ತೂಪಿ**:– ಷಡ್ವರ್ಗ ಕ್ರಮದಲ್ಲಿ ಆರನೆಯ ಹಾಗೂ ಕೊನೆಯ ಭಾಗವೇ ಸ್ತೂಪಿ. ಇದನ್ನು ಕಳಸ, ಘಟ, ಕುಂಭ ಎಂದೂ ಕರೆಯಲಾಗುತ್ತದೆ. ಸ್ತೂಪಿಯಲ್ಲಿ ಘಟ, ಗಳ ಮತ್ತು ಮುಕುಲ ಎಂಬವುಗಳನ್ನು ಶಿಖರದ ಮೇಲ್ಭಾದಲ್ಲಿರುವ ಮಹಾಪದ್ಮದ ಮಧ್ಯದಲ್ಲಿ ಇರಿಸಲಾಗಿರುತ್ತದೆ. ಸ್ತೂಪಿಯ ಪ್ರತಿ ಕೃತಿಯು ಗರ್ಭಗೃಹದ ಅಸ್ತಿಭಾರದಲ್ಲಿ ಇರುತ್ತದೆ.

**ತಲಗಳು**:– ಏಕತಲ ವಿಮಾನವು ಷಡ್ವರ್ಗಗಳನ್ನು ಹೊಂದಿದೆ. ಅಲ್ಪವಿಮಾನ ಎಂದೆನಿಸಿಕೊಳ್ಳುತ್ತದೆ. ಷಡ್ವರ್ಗ ದೇವಾಲಯಗಳನ್ನು ಏಕತಲ ಮಾತ್ರವಲ್ಲ ಹಲವು ತಲಗಳನ್ನು ಒಳಗೊಂಡಂತೆಯೂ ರಚಿಸಲಾಗಿದೆ. ಏಕತಲದ ಮೇಲೆ (ಗ್ರೀವ, ಪಸ್ರಸ್ತರ ಭಾಗಗಳ ಮಧ್ಯ) ಇನ್ನೊಂದು ಹರ್ಮ್ಯ–ಸಣ್ಣಗೋಪುರ ಮತ್ತು ಪ್ರಸ್ತರಗಳನ್ನು ಸೇರಿಸಿದ ಇನ್ನೊಂದು ಕಟ್ಟಡವನ್ನೇರಿಸಿದಾಗ ಅದು ದ್ವಿತಲವೆನಿಸಿಕೊಳ್ಳುತ್ತದೆ. ಇದೇ ರೀತಿ ಒಂದರ ಮೇಲೆ ಒಂದರಂತೆ ಹನ್ನೆರಡು ಅಂತಸ್ತುಗಳವರೆಗೂ ಏರಿಸಿಕೊಂಡು ಹೋಗಬಹುದು. ಪ್ರತಿ ತಲದಲ್ಲೂ ಅಂಗ–

ಪ್ರತ್ಯಂಗಗಳಿರುತ್ತವೆ. ಕೂಟ, ಪಂಜರ ಶಾಲಾಗಳೆಂಬ ಸಣ್ಣ ಗಾತ್ರದ ದೇವಾಲಯಗಳ ಸ್ತರವಿರುತ್ತದೆ. ಇದಕ್ಕೆ 'ಹಾರ' ಎಂದು ಹೆಸರು. ಪ್ರತಿಯೊಂದು ತಲಕ್ಕೂ ಪ್ರಸ್ತರವಿರುತ್ತದೆ. ಇದು 'ತಲಪ್ರಸ್ತರ' ಈ ರೀತಿ ಮುಖ್ಯ ಪ್ರಸ್ತರ ಮತ್ತು ಗ್ರೀವದ ನಡುವೆ ಸೇರಿಸುತ್ತಾ ಹೋಗುವ ತಲಗಳ ಸಂಖ್ಯೆ ಮೇಲಿಂದ ದೇವಾಲಯಗಳನ್ನು ವರ್ಗೀಕರಿಸಲಾಗಿದೆ. ಎರಡರಿಂದ ನಾಲ್ಕು ತಲಗಳನ್ನು ಹೊಂದಿದ ದೇವಾಲಯಗಳು "ಜತಿವಿಮಾನ" ಎಂದೂ ಐದರಿಂದ ಹನ್ನೆರಡು ತಲಗಳನ್ನು ಹೊಂದಿದ ದೇವಾಲಯಗಳು "ಮುಖ್ಯ ವಿಮಾನ"ಗಳೆಂದೂ ಗುರುತಿಸಿಕೊಳ್ಳಲಾಗಿದೆ.

**ಗರ್ಭಗೃಹ-ಅಂತರಾಳ**:- ಯಾವುದೇ ದೇವಾಲಯ ಎಷ್ಟೇ ದೊಡ್ಡದಾಗಿರಲಿ, ಎಷ್ಟೇ ಅಲಂಕೃತ ಮಂಟಪಗಳನ್ನು, ಉಪಗುಡಿಗಳನ್ನು ಹೊಂದಿದ್ದರೂ ಸಹ ಗರ್ಭಗೃಹವೇ ಮೂಲ ಮುಖ್ಯ ಭಾಗ. ಗರ್ಭಗೃಹಕ್ಕೆ ಗರ್ಭಗೇಹ, ಮದ್ಯಕೋಷ್ಠ, ನಾಲಿಗೇಹ, ದೇವತಾಮಂಟಪ, ಪ್ರಸಾದ, ಮೂಲ ಪ್ರಸಾದ ಎಂಬ ಸಮಾನ ಪದಗಳಿವೆ. ಗರ್ಭಗೃಹದ ಆಕಾರವು ಅಲ್ಲಿ ಪ್ರತಿಷ್ಠಾಪಿಸಲಾಗಿರುವ ಮೂಲವಿಗ್ರಹದ ಮೇಲಿಂದ ಚೌಕಾಕಾರ, ಆಯತಾಕಾರವಾಗಿ ರೂಪುಗೊಳ್ಳುತ್ತದೆ. ಸಾಮಾನ್ಯವಾಗಿ ಶಿವಾಲಯಗಳು ಚೌಕಾಕಾರವಾಗಿರುತ್ತವೆ. ಅನಂತಶಯನ, ಸಪ್ತಮಾತೃಕೆ, ತ್ರಿಮೂರ್ತಿಗಳನ್ನು ಒಂದೇ ಗರ್ಭಗೃಹದಲ್ಲಿ ಇರಿಸಿದ್ದರೆ ಮತ್ತು 24 ತೀರ್ಥಂಕರರಿಗಾಗಿ ಕಟ್ಟಲಾದ ಗರ್ಭಗೃಹಗಳು ಆಯತಾಕಾರದಲ್ಲಿ ಇರುತ್ತವೆ. ಕೆಲವು ದೇವಾಲಯಗಳು ಗಜಪೃಷ್ಠಾಕಾರದಲ್ಲಿಯೂ ಇವೆ. ಸಾಮಾನ್ಯವಾಗಿ ಚೌಕಾಕಾರದ ಗರ್ಭಗೃಹಗಳನ್ನೇ ಹೆಚ್ಚಾಗಿ ಕಾಣುತ್ತೇವೆ. ಗರ್ಭಗೃಹವು ಕತ್ತಲೆಯಿಂದ ಕೂಡಿದ್ದು ಇಲ್ಲಿ ಯಾವ ವಿಧವಾದ ಕಿಟಕಿಗಳೂ ಇರುವುದಿಲ್ಲ. ಮಧ್ಯಭಾಗದಲ್ಲಿ ದ್ವಾರ ಮಾತ್ರವಿರುತ್ತದೆ. ಸಾಮಾನ್ಯವಾಗಿ ಗರ್ಭಗೃಹ ಪೂರ್ವಾಭಿಮುಖವಾಗಿಯೇ ಇರುತ್ತವೆ. ಅಪರೂಪವಾಗಿ ಇತರ ದಿಕ್ಕುಗಳಲ್ಲಿಯೂ ಇರುವುದನ್ನು ಕಾಣುತ್ತೇವೆ. ದೇವಾಲಯದ ಪ್ರವೇಶ ದ್ವಾರವು ಯಾವ ದಿಕ್ಕಿಗೆ ಇದ್ದರೂ ಗರ್ಭಗೃಹ ಮೂಲಕ ಮಾಡಿದ ದಿಕ್ಕನ್ನೇ ಮುಖ್ಯವೆಂದು ಪರಿಗಣಿಸಲಾಗುತ್ತದೆ.

ಮತ್ತೆ ಕೆಲವು ದೇವಾಲಯಗಳಲ್ಲಿ ಗರ್ಭಗೃಹಕ್ಕೆ ಪ್ರದಕ್ಷಿಣಾ ಪಥವನ್ನು ಒಳಗೆ ಅಳವಡಿಸಲಾಗಿರುತ್ತದೆ. ಇವುಗಳನ್ನು 'ಸಾಂಧಾರ' ದೇವಾಲಯಗಳು ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಗರ್ಭಗೃಹವು ಅಂತರ್ಭಿತ್ತಿ ಮತ್ತು ಬಾಹ್ಯಭಿತ್ತಿ ಎಂಬ ಎರಡು ಭಿತ್ತಿಗಳನ್ನು ಹೊಂದಿರುತ್ತದೆ. ಮತ್ತೆ ಕೆಲವು ದೇವಾಲಯಗಳು ಧಾರ್ಮಿಕ ಹಿನ್ನೆಲೆಯ ಉದ್ದೇಶದಿಂದ ಒಂದಕ್ಕಿಂತ ಹೆಚ್ಚು ಗರ್ಭಗೃಹಗಳನ್ನು ಹೊಂದಿರುತ್ತವೆ. ಒಂದೇ ಅಧಿಷ್ಠಾನದ ಮೇಲೆ ಎರಡು ಗರ್ಭಗೃಹಗಳಿದ್ದರೆ ಅದನ್ನು ದ್ವಿಕೂಟ ದೇವಾಲಯವೆಂದೂ ಒಂದೇ ಅಧಿಷ್ಠಾನದ

ಮೇಲೆ ಮೂರು ಗರ್ಭಗೃಹಗಳಿದ್ದರೆ ತ್ರಿಕೂಟ ದೇವಾಲಯವೆಂದೂ ಇದೇ ರೀತಿ ಚತುಷ್ಕೂಟ ಮತ್ತು ಪಂಚಕೂಟ ದೇವಾಲಯಗಳನ್ನು ನಿರ್ಮಿಸಿರುವುದನ್ನು ನಾವು ಕಾಣುತ್ತೇವೆ.

ಗರ್ಭಗೃಹಕ್ಕೆ ಮುಂದೆ ಒಂದು ಮಂಟಪವನ್ನು ರಚಿಸಿ ಸೇರಿಸುವ ಭಾಗವು ಅಂರಾಳವಾಗಿರುತ್ತದೆ. ಸಾಮಾನ್ಯವಾಗಿ ದೇವಾಲಯದ ಮೇಲ್ಕಟ್ಟಡದಲ್ಲಿನ ಶುಖನಾಸವು ಈ ಅಂತರಾಳದ ಮೇಲೆ ಇರುವುದರಿಂದಾಗಿ ಇದನ್ನು ಶುಖನಾಸಿ (ಸುಖನಾಸಿ) ಎಂದೂ ಸಹ ಕರೆಯಲಾಗುತ್ತದೆ. ದೇವಾಲಯವು 'ಸಾಂಧಾರ' ವಾಗಿದ್ದಲ್ಲಿ ಗರ್ಭಗೃಹದ ಪ್ರದಕ್ಷಿಣೆಗಾಗಿ ಈ ಅಂತರಾಳದ ಇಕ್ಕೆಲಗಳಲ್ಲಿ ಬಾಗಿಲುಗಳು ಮುಕ್ತವಾಗಿರುತ್ತವೆ.

**ಇತರ ಭಾಗಗಳು**:- ದೇವಾಲಯಗಳ ನಿರ್ಮಾಣದ ಪ್ರಾರಂಭದ ಶತಮಾನಗಳಲ್ಲಿ ಗರ್ಭಗೃಹ ಹಾಗೂ ಅಂತರಾಳ ಮಾತ್ರವಿದ್ದು ದೇವಾಲಯ ಎನಿಸಿಕೊಂಡಿದ್ದವು. ಆಗಮ ಶಾಸ್ತ್ರಗಳು ಮತಸಂಸ್ಕಾರಗಳು ವಿಸ್ತರಿಸಿದಂತೆಲ್ಲಾ ದೇವಾಲಯಗಳು ವಿಸ್ತರಿಸಲ್ಪಟ್ಟವು. ಅರ್ಧಮಂಟಪ, ನವರಂಗ ಮಂಟಪ, ಮುಖಮಂಟಪ, ಅಗ್ರಮಂಟಪ, ಉತ್ಸವಮಂಟಪ, ಸ್ವಪ್ನಮಂಟಪ, ಅಲಂಕಾರ ಮಂಟಪ ಮುಂತಾದವು ನಿರ್ಮಾಣಗೊಂಡವು. ದಕ್ಷಿಣ ಭಾರತದ ದೇವಾಲಯಗಳಲ್ಲಿನ ಈ ಮಂಟಪಗಳು ಚಪ್ಪಟೆಯಾಕಾರದ ಮೇಲ್ಛಾವಣಿಯನ್ನು ಹೊಂದಿವೆ. ಗುಜರಾತ್, ಒರಿಸ್ಸಾ, ಮಧ್ಯಪ್ರದೇಶಗಳಲ್ಲಿಯ ದೇವಾಲಯಗಳಲ್ಲಿ ಈ ಮಂಟಪ ರಚನೆಗಳೂ ಸಹ ಗರ್ಭಗೃಹಕ್ಕೆ ಇರುವಂತೆ ಮೇಲು ಕಟ್ಟಡವನ್ನು ಹೊಂದಿವೆ. ಮಂಟಪಗಳು ಕಂಬಗಳ ಆಧಾರದ ಮೇಲೆ ನಿಂತಿರುತ್ತವೆ. ಮಂಟಪ ವಿಸ್ತಾರವಾದಂತೆಲ್ಲ ಕಂಬಗಳ ಸಂಖ್ಯೆಯೂ ಹೆಚ್ಚುತ್ತದೆ. ಶಿಲ್ಪಶಾಸ್ತ್ರ ಗ್ರಂಥಗಳು ಕಂಬಗಳ ಸಂಖ್ಯೆಯನ್ನು ಆಧರಿಸಿ ಹಿಮಜ, ನಿಕ್ಷದಜ, ವಿಜಯ, ಮಾಲ್ಯಜ, ಪಾರಿಯಾತ್ರ, ಗ್ರಂಥಮಾದನ ಮತ್ತು ಹೇಮಕೂಟಗಳೆಂಬ ಏಳು ಬಗೆಗಳನ್ನು ಗುರ್ತಿಸುತ್ತವೆ. ಈ ಮಂಟಪಗಳು ತೆರೆದ ಮುಚ್ಚಿದವೂ ಆಗಿರಬಹುದು. ಮಂಟಪದಲ್ಲಿ ದೇವಾಲಯದ ಉತ್ಸವಗಳಿಗೆ ಸಂಬಂಧಿಸಿದ ಸಭೆಯೋ, ಲಲಿತ ಕಲೆಗಳ ಕಾರ್ಯಕ್ರಮಗಳು ನಡೆಯುತ್ತಿದ್ದವು. ಇಂತಹ ಸಮಯಗಳಿಗೆ ಅನುಕೂಲವಾಗಲೆಂದು ಕಕ್ಷಾಸನಗಳನ್ನು ಸುತ್ತಲೂ ಅಳವಡಿಸಲಾಗಿದೆ. (ಉದಾ:- ಬೆಳವಾಡಿಯ ವೀರನಾರಾಯಣ ದೇವಾಲಯ) ದೇವಾಲಯ ಕೇವಲ ಪೂಜಾಗೃಹವಾಗಿರದೇ ಸಾಂಸ್ಕೃತಿಕ ಕೇಂದ್ರವಾಗಿಯೂ, ಧರ್ಮಪ್ರಸಾರದ ಕೇಂದ್ರವಾಗಿಯೂ ಮಾರ್ಪಟ್ಟು ದೇವಾಲಯದ ಪೂಜಾವಿಧಿಗಳಲ್ಲೂ ಹೊಸ ಹೊಸ ಉತ್ಸವಗಳನ್ನು ಅಳವಡಿಸಿಕೊಂಡವು. ಉತ್ಸವಕ್ಕೆ ಬಳಸಲಾಗುವ ವಾಹನಗಳನ್ನು ರಕ್ಷಿಸಲು ವಾಹನ ಮಂಟಪ, ಸಭೆ ಸಮಾರಂಭಗಳಿಗಾಗಿ ಸಭಾಮಂಟಪ, ಭೋಜನ ಶಾಲೆ, ಕಲ್ಯಾಣ ಮಂಟಪ ನೃತ್ಯಮಂಟಪ ಇತ್ಯಾದಿಗಳು ದೇವಾಲಯದ ಸುತ್ತಲೂ ರಚನೆಗೊಂಡವು. ಅಲ್ಲದೇ

ಪರಿವಾರ ದೇವತೆಗಳಗಾಗಿ ಸಣ್ಣ ದೇವಾಲಯಗಳು ನಿರ್ಮಾಣಗೊಂಡವು. ಜೊತೆಗೆ ದೇವಾಲಯದ ಎದುರಿಗೆ ಬಲಿಪೀಠ, ಧ್ವಜಸ್ತಂಭ, ದೀಪಸ್ತಂಭಗಳು ಇರುವಂತೆ ಮಾಡಲಾಯಿತು. ಇವೆಲ್ಲವುಗಳನ್ನು ಒಳಗೊಂಡಂತೆ ಸುತ್ತಲೂ ಪ್ರಾಕಾರದ ಗೋಡೆಗಳನ್ನು ಕಟ್ಟಲಾಯಿತು. ಆ ಪ್ರಾಕಾರಕ್ಕೊಂದು ಮಹಾದ್ವಾರ ಅದರ ಮೇಲೆ ಗೋಪುರ ತಲೆ ಎತ್ತಿದವು. ಹೀಗೆ ಒಂದು ಪ್ರಾಕಾರ ಮಾತ್ರವಲ್ಲದೆ ಹಲವು ಪ್ರಾಕಾರ ಹೊಂದಿದ ದೇವಾಲಯಗಳವೆ. ಒಂದೊಂದು ಪ್ರಾಕಾರವನ್ನು ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ. ಮೊದಲನೇ ಪ್ರಾಕಾರ "ಅಂತರ್ಮಂಡಲ", ಎರಡನೆಯದು "ಅಂತರ್ನಿ ಹಾರ", ಮೂರನೆಯದು "ಮಧ್ಯಮ ಹಾರ", ನಾಲ್ಕನೆಯದು ಪ್ರಾಕಾರ, ಐದನೇಯದು ಹಾಗೂ ಕೊನೆಯದು "ಮಹಾಮರ್ಯಾದಾ" ಅದರಂತೆ ಪ್ರತಿಯೊಂದು ಪ್ರಾಕಾರಕ್ಕೂ ಮಹಾದ್ವಾರ ಗೋಪುರಗಳರುತ್ತವೆ. ಆ ಗೋಪುಗಳನ್ನು ಕ್ರಮವಾಗಿ "ದ್ವಾರಶೋಭಾ", "ದ್ವಾರಶಾಲಾ", "ದ್ವಾರ ಪ್ರಸಾದ", "ದ್ವಾರ ಹರ್ಮ್ಯ" ಮತ್ತು ಕೊನೆಯದು "ಮಹಾಗೋಪುರ" ಎಂದು ಶಾಸ್ತ್ರ ಗ್ರಂಥಗಳಲ್ಲಿ ಗುರ್ತಿಸಿ ಹೇಳಲಾಗಿದೆ.

**ಕರ್ನಾಟಕದ ವಾಸ್ತುಶಿಲ್ಪ:-** ಕರ್ನಾಟಕದ ವಾಸ್ತುಶಿಲ್ಪವನ್ನು ವಿದ್ವಾಂಸರು ಪ್ರಧಾನವಾಗಿ ನಾಲ್ಕು ಘಟ್ಟಗಳಲ್ಲಿ ವಿಭಾಗಿಸಿದ್ದಾರೆ.

1) ಚಾಲುಕ್ಯ ಪೂರ್ವಯುಗ-ಕ್ರಿ.ಶ.ಸು.5ನೇ ಶತಮಾನದವರೆಗಿನ ಕಾಲ
2) ಚಾಲುಕ್ಯ ಯುಗ-ಕ್ರಿ.ಶ.6 ರಿಂದ 10ನೇ ಶತಮಾನದವರೆಗೆ
3) ಹೊಯ್ಸಳ ಯುಗ-ಕ್ರಿ.ಶ.11ನೇ ಶತಮಾನದಿಂದ 13ನೇ ಶತಮಾನದವರೆಗೆ
4) ವಿಜಯನಗರ ಕಾಲ- ಕ್ರಿ.ಶ.14ನೇ ಶತಮಾನದಿಂದ ಈಚಿನ ಕಾಲ.

ಮೊರೆಸ್‌ರವರು ಕರ್ನಾಟಕದಲ್ಲಿ ಚಾಲುಕ್ಯರಿಗಿಂತಲೂ ಹಿಂದೆ ನಿರ್ಮಾಣವಾದ ಪ್ರಾಚೀನ ದೇವಾಲಯಗಳೆಲ್ಲವೂ "ಕದಂಬಶೈಲಿ" ಎಂದು ಕರೆಯಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ.[40] ಕದಂಬರ ಶೈಲಿಯ ಅತಿ ಪ್ರಾಚೀನವಾದ ದೇವಾಲಯವೆಂದರೆ ಹಲಸಿಯ ಜೈನ ಬಸದಿ ಕದಂಬ ಶಾಂತಿವರ್ಮನ ಮಗ ಮೃಗೇಶವರ್ಮನು ಕ್ರಿ.ಶ.455-480ರಲ್ಲಿ ಇದನ್ನು ನಿರ್ಮಿಸಿದನೆಂದು ಹೇಳಲಾಗಿದೆ.[41] ಈ ಬಸದಿಯು ಗರ್ಭಗೃಹ ಮತ್ತು ಶುಕನಾಸಿಗಳನ್ನು ಮಾತ್ರ ಒಳಗೊಂಡಿರುವ ಸಾಧಾರಣ ಕಟ್ಟಡ, ಇದರ ಗೋಡೆಗಳು ದೊಡ್ಡ ಗಾತ್ರದ ಕಲ್ಲುಗಳಿಂದ ನಿರ್ಮಾಣಗೊಂಡಿವೆ. ಇಂತಹ ದೊಡ್ಡ ಕಲ್ಲುಗಳಿಂದ ಗೋಡೆಗಳನ್ನು ನಿರ್ಮಿಸುವ ಸಂಪ್ರದಾಯ ಬಾದಾಮಿಯ ಚಾಲಕ್ಯರ ಕಾಲದ ಕೊನೆಯವರೆಗೂ ಮುಂದುವರೆಯಿತು. ಇಲ್ಲಿಯ

ಗೋಡೆಗಳು ಅಲಂಕಾರ ರಹಿತವಾಗಿವೆ. ಶಿಥಿಲಾವಸ್ಥೆಯಲ್ಲಿರುವ ಈ ಬಸದಿ ಕದಂಬರ ಕಾಲದ ವಾಸ್ತುಶಿಲ್ಪ ಅಧ್ಯಯನ ದೃಷ್ಟಿಯಿಂದ ಮಹತ್ವದ್ದಾಗಿದೆ.[42]

ಉತ್ತರ ಭಾಗದಲ್ಲಿ ಗುಪ್ತ ಪೋಷಣೆಯಲ್ಲಿ ದೇವಾಲಯಗಳ ನಿರ್ಮಾಣ ನಡೆಯುತ್ತಿದ್ದ ಕಾಲದಲ್ಲಿಯೇ ದಕ್ಷಿಣದಲ್ಲಿ ಚಾಲುಕ್ಯರ ನೇತೃತ್ವದಲ್ಲಿ ಆ ಕಾರ್ಯ ಮುನ್ನಡೆಯಿತು. ಐಹೊಳೆ, ಬಾದಾಮಿ ಮತ್ತು ಪಟ್ಟದಕಲ್ಲುಗಳಲ್ಲಿ ನಿರ್ಮಿತವಾದ ದೇವಾಲಯಗಳು ಚಾಲುಕ್ಯ ಶೈಲಿಯ ವಿಕಾಸವನ್ನು ತೋರಿಸುತ್ತವೆ. ಅದರಲ್ಲಿಯೂ ಐಹೊಳೆಯಲ್ಲಿಯ ಚಾಲುಕ್ಯ ದೇವಾಲಯಗಳ ಪ್ರಾರಂಭದ ದೆಸೆಯನ್ನೂ ಮತ್ತು ದೇವಾಲಯಗಳ ನಿರ್ಮಾಣದಲ್ಲಿ ಅವರು ಮಾಡಿದ ವಿವಿಧ ಪ್ರಯೋಗಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಕೇವಲ ಒಂದು ಗರ್ಭಗೃಹದಿಂದ ಕೂಡಿರುವ ಗುಡಿಗಳಿಂದ ಹಿಡಿದು, ಸಂಕೀರ್ಣವಾದ ರಚನೆಯನ್ನೊಳಗೊಂಡ ದುರ್ಗಾ ದೇವಾಲಯದವರೆಗೂ ಹಲವು ಹಂತಗಳಲ್ಲಿ ಆ ಕಲೆಯ ಬೆಳವಣಿಗೆ ಕಂಡುಬರುತ್ತದೆ.[43] ಸಿಂದಗಿ ರಾಜಶೇಖರ ಅವರು ಬಾದಾಮಿ ಚಾಲುಕ್ಯರ ದೇವಾಲಯಗಳ ಅಧ್ಯಯನ ಮಾಡಿ ಐದು ಪ್ರಮುಖ ದೇವಾಲಯದ ತಲವಿನ್ಯಾಸಗಳನ್ನು ಗುರುತಿಸಿದ್ದಾರೆ.[44]

1) ಸಾದಾ ಮತ್ತು ಚಿಕ್ಕದಾಗಿದ್ದು ಮೂಲಭೂತ ಪೂಜೆಗೆ ಅವಶ್ಯಕವೆನಿಸಿದ ಭಾಗಗಳನ್ನು ಮಾತ್ರ ಹೊಂದಿದೆ.ಚೌಕ, ಗರ್ಭಗೃಹ, ಸಭಾಮಂಟಪ ಮತ್ತು ಚಿಕ್ಕ ಮುಖಮಂಟಪ

2) ಸಾಂಧಾರ ದೇವಾಲಯಗಳು

3) ದೇವಾಲಯವು ನಿರಾಧಾರವಾಗಿದ್ದು, ಇಲ್ಲಿ ಗರ್ಭಗುಡಿ ಅನೇಕ ಕಂಬಗಳುಳ್ಳ ಮಂಟಪದ ಹಿಂದಿನ ಗೋಡೆಗೆ ಹತ್ತಿಕೊಂಡು ಒಳಭಾಗದಲ್ಲಿರುತ್ತದೆ

4) ಗಜಪೃಷ್ಠಾಕಾರ ದೇವಾಲಯಗಳು

5) ತ್ರಿಕೂಟ ದೇವಾಲಯಗಳು

ಕರ್ನಾಟಕದಲ್ಲಿ ದೇವಾಲಯಗಳ ಪ್ರಾಚೀನತೆ ಶಾತವಾಹನರ ಕಾಲದಷ್ಟು ಹಿಂದೆ ಹೋದರೂ ದೇವಾಲಯಗಳಲ್ಲಿ ಅದರಲ್ಲೂ ತ್ರಿಕೂಟ ದೇವಾಲಯಗಳ ಬಗ್ಗೆ ಸ್ಪಷ್ಟತೆ ಲಭ್ಯವಾಗುವುದು ಬಾದಾಮಿ ಚಾಲುಕ್ಯರ ಕಾಲದಿಂದಲೇ.

ಮೊಟ್ಟಮೊದಲು ತ್ರಿಕೂಟ ದೇವಾಲಯಗಳನ್ನು ನಿರ್ಮಾಣ ಮಾಡಿದ ಕೀರ್ತಿಬಾದಾಮಿ ಚಾಲುಕ್ಯರಿಗೆ ಸಲ್ಲುತ್ತದೆ. ಈ ಕೀರ್ತಿಗೆ ಒಳಗಾದ ಬಾದಾಮಿಯ ಜಂಭುಲಿಂಗೇಶ್ವರ

ದೇವಾಲಯ ಇಲ್ಲಿ ಗಮನಿಸಬೇಕಾದ ಬಹಳ ಮುಖ್ಯವಾದಂತಹ ದೇವಾಲಯ. ಇದು ಕ್ರಿ.ಶ.699ರಲ್ಲಿ ನಿರ್ಮಾಣವಾಗಿದ್ದು ಚಾಲುಕ್ಯ ಶೈಲಿಯ ಪರಿಪೂರ್ಣತೆಯನ್ನು ಹೊಂದಿರುವುದರಿಂದ ಚಾಲುಕ್ಯ ಕಟ್ಟಡಗಳ ಕಾಲಾನುಕ್ರಮಣಿಕೆಯನ್ನು ರಚಿಸಲು ತುಂಬಾ ಸಹಾಯಕವಾಗಿದೆ.[45]

ದೇವಾಲಯದ ಮುಖಮಂಟಪದ ಕಂಬದ ಮೇಲಿನ ಶಾಸನವು ವಿನಯಾದಿತ್ಯನ ತಾಯಿ ವಿನಯವತಿಯು ಕ್ರಿ.ಶ.699ರಲ್ಲಿ ಈ ದೇವಾಲಯವನ್ನು ನಿರ್ಮಿಸಿದಳೆಂದು, ಈ ತ್ರಿಕೂಟ ದೇವಾಲಯವು ತ್ರೈಪುರುಷ ದೇವರ ಪ್ರತಿಷ್ಠಾಪನೆಗಾಗಿ ರಚಿಗೊಂಡಿತೆಂದೂ ತಿಳಿಸುತ್ತದೆ.[46] ದೇವಾಲಯವು ಆಯತಾಕಾರದ ಗೂಢಮಂಟಪವನ್ನು ಮೂರು ಗರ್ಭಗೃಹಗಳು ಹಂಚಿಕೊಂಡಂತೆ ನಿರ್ಮಾಣಗೊಂಡಿದೆ. ಮೂರು ಗರ್ಭಗೃಹಗಳು ದಕ್ಷಿಣ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿವೆ. ಗೂಢಮಂಟದ ಪೂರ್ವದಿಕ್ಕಿಗೆ ಆಯತಾಕಾರದ ಮುಖಮಂಟಪದ ರಚನೆ ಇದೆ. (ತಳವಿನ್ಯಾಸ–1) ದೇವಾಲಯದ ಅಧಿಷ್ಠಾನವು ಪ್ರತಿಬಂಧ ಮಾದರಿಗೆ ಸೇರಿದ್ದಾಗಿದ್ದು, ಉಪಾನ, ಖುರ, ಕುಂಭಕ, ಧಾರಾವೃತ್ತ, ಕುಮುದ, ಪ್ರತಿವಾಜನ ಮತ್ತು ಮಹಾವಾಜನದ ಮೇಲೆ ಸಣ್ಣ ಕಂಪಗಳೆಂಬ ಭಾಗಗಳನ್ನು ಒಳಗೊಂಡಿದೆ. ಪ್ರತಿವಾಜನದ ಮೇಲೆ ವ್ಯಾಳಗಳನ್ನು ಕಾಣಬಹುದು. ಬ್ರಹ್ಮ, ವಿಷ್ಣು, ಮಹೇಶ್ವರರಿಗಾಗಿ ಮೀಸಲಾದ ಮೂರೂ ಗರ್ಭಗೃಹಗಳು ಭಿತ್ತಿ ಭಾಗದಲ್ಲಿ ಮುಂಚಾಚಿದ ಭದ್ರ ಭಾಗವನ್ನು, ಗೂಡುಗಳನ್ನು, ಸೂರಸೇನೆ ರಚನೆಯನ್ನು ಹೊಂದಿವೆ. ಬ್ರಹ್ಮಕಾಂತ ಮಾದರಿಯ ಗೋಡೆಕಂಬಗಳು, ಗರ್ಭಗೃಹ ಮತ್ತು ಗೂಢಮಂಟಪದ ಭಿತ್ತಿಯಲ್ಲಿ ಕಂಡುಬರುತ್ತವೆ. ಪ್ರಸ್ತರ ಭಾಗದ ಕಪೋತದ ಕೆಳಗೆ ಹಂಸಮಾಲಾ, ಮೇಲಿನ ಭಾಗದಲ್ಲಿ ವ್ಯಾಳಮಾಲಾ ರಚನೆ ಇದೆ. ಕಪೋತದ ಮೇಲೆ ಕಪೋತನಾಸಿಗಳಿವೆ.

ಮುಖಮಂಟಪವು ಚೌಕಾಕಾರದ ರುಚಕ ಮಾದರಿಯ ಕಂಬಗಳನ್ನು ಅರ್ಧ ಪದರಗಳು, ಮಧ್ಯ ಪಟ್ಟಿಕೆ ಮತ್ತು ತರಂಗ ಬೋಧಿಗೆಗಳಿಂದ ಕೂಡಿವೆ. ಅಡ್ಡ ತೊಲೆಗಳ ಮೇಲೆ ವಿದ್ಯಾಧರ ಉಬ್ಬುಶಿಲ್ಪಗಳಿವೆ. ಈ ತೊಲೆಗಳು ಸಮತಲ ವಿತಾನಕ್ಕೆ ಆಧಾರವಾಗಿವೆ. ಎರಡು ವಿತಾನಗಳು ಅಲಂಕೃತವಾಗಿದ್ದು ಒಂದರಲ್ಲಿ ನಾಗ್ಥ ಇನ್ನೊಂದರಲ್ಲಿ ಕಮಲಗಳು ಹಾಗೂ ಯಕ್ಷರ ಉಬ್ಬುಶಿಲ್ಪಗಳಿವೆ.

ಗೂಢಮಂಟಪದ ಮಧ್ಯ ಕಂಬಗಳೂ ಸಹ ರುಚಕ ಮಾದರಿಯಲ್ಲಿದ್ದು ಇವು ಒಂದಕೊಂದು ಸಂಬಂಧ ಪಡೆಯುವಂತೆ ಕಮಲ ಪದಕರಿಂದ ಅಲಂಕೃತಗೊಂಡ ಉತ್ತರಾ ರಚನೆ ಇದೆ. ಇದರ ಒಳಭಾಗವು ಅಲ್ಪನಾಸಿ, ಹಂಸ, ಚಕ್ರವಾಕ, ಮಯೂರ, ಆನೆ

ಮುಂತಾದವುಗಳಿಂದ ಅಂಕೃತಗೊಂಡಿದೆ. ಮೂರು ಗರ್ಭಗೃಹಗಳ ಬಾಗಿಲುವಾಡಗಳು ಮಂಚಶಾಖೆಯಿಂದ ಕೂಡಿದ್ದು ಪಾದಫಲಕದಲ್ಲಿ ಗಂಗೆ ಯಮುನೆಯರು ಚಾಮರಧಾರಿಣಿಯರೊಂದಿಗೆ ಕೂಡಿರುವಂತೆ ಶಿಲ್ಪಗಳನ್ನು ಖಂಡರಿಸಲಾಗಿದೆ. ಬಾಗಿಲುವಾಡದ ಮೇಲೆ ಹಾರಗಳಲ್ಲಿ ಕಂಡುಬರುವ ಕೂಟ ಮತ್ತು ಶಾಲಾ ರಚನೆಗಳಿವೆ. ಅವುಗಳ ಕೆಳಗೆ ಮಿಥುನ ಶಿಲ್ಪಗಳಿವೆ.

ದೇವಾಲಯದ ಮೇಲಿನ ಕಟ್ಟಡವು ನಾಶವಾಗಿದೆ. ಉತ್ತರದಿಕ್ಕಿನ ಗರ್ಭಗೃಹದ ಮೇಲೆ ಹಾರದ ಭಾಗಗಳನ್ನು ಕಾಣಬಹುದು. ಬಾದಾಮಿ ಚಾಲುಕ್ಯರ ಕಾಲದಲ್ಲಿ ತ್ರೈಪುರುಷರಿಗಾಗಿ ಕಟ್ಟಡ ತ್ರಿಕೂಟ ಮಾದರಿಯ ದೇವಾಲಯ ಶೈಲಿಯನ್ನೇ ಕ್ರಿ.ಶ.11–12ನೇ ಶತಮಾನದಲ್ಲಿ ರಚನೆಗೊಂಡ ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳಲ್ಲೂ ಕಾಣುತ್ತೇವೆ. ಬಾದಾಮಿ ಚಾಲುಕ್ಯರ ನಂತರದ ಅರಸರಾದ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ತಮ್ಮ ತ್ರಿಕೂಟ ದೇವಾಲಯ ರಚನೆಯಲ್ಲಿ ಇದೇ ಮಾದರಿಯನ್ನು ಅನುಸರಿಸಿದರು. [47]

ಮಧ್ಯಕಾಲೀನ ಭಾರತೀಯ ವಾಸ್ತುಶಿಲ್ಪ ಕ್ಷೇತ್ರದಲ್ಲಿ ಕ್ರಿ.ಶ.11 ರಿಂದ 13ನೆಯ ಶತಮಾನದ ಕೊನೆಯವರೆಗೆ ಅಸ್ಥಿತ್ವದಲ್ಲಿದ್ದ ಹೊಯ್ಸಳ ಶೈಲಿ ನೋಡುಗರ ಮನಸನ್ನು ಸೆರೆ ಹಿಡಿಯುವ, ಮರೆಯಲಾಗದಂತ ದೃಶ್ಯಗಳನ್ನು ನಿರ್ಮಿಸಿ ತನ್ನ ಗುಣ ವಿಶಿಷ್ಟತೆಯಿಂದ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಭುವನೇಶ್ವರದ ರಾಜ–ರಾಣಿ ಮಂದಿರದ ಅದ್ಭುತ ರಮ್ಯತೆ ಖಜುರಾವೋದಲ್ಲಿರುವ "ಕಂದಾರಿಯ ಮಹದೇವ" ಮಂದಿರದಲ್ಲಿನ ಅಂತಃಸತ್ವ, ಎಲ್ಲೋರದ ಕೈಲಾಸನಾಥ ದೇವಾಲಯದ ಭವ್ಯತೆ ಇವೆಲ್ಲಾ ಗುಣಗಳನ್ನು ಹೊಯ್ಸಳ ವಾಸ್ತು ಮಂದಿರಗಳು ತಮ್ಮಲ್ಲಿ ಮೈಗೂಡಿಸಿಕೊಂಡು ವಾಸ್ತುಮೂರ್ತಿ ಶಿಲ್ಪಗಳ ಸಂಗಮ ಸಮ್ಮಿಲನ ಮಾಡಿರುವುದನ್ನು ಅವರ ದೇವಾಲಯಗಳಲ್ಲಿ ಕಾಣಬಹುದು.

ಹೊಯ್ಸಳ ವಾಸ್ತುಶೈಲಿಯನ್ನು ನಾಗರ ಮತ್ತು ದ್ರಾವಿಡ ಶೈಲಿಗಳ ಮಧ್ಯವರ್ತಿ ಎಂದು ಹೇಳಲಾಗಿದ್ದರೂ ನಾಗರ ಶೈಲಿಯ ಲಕ್ಷಣಗಳು ವಿರಳವಾಗಿದೆ. ಶಿಖರದ ಕೆಲವಂಶಗಳಲ್ಲಿ ಈ ಲಕ್ಷಣಗಳು ಎದ್ದು ಕಾಣುತ್ತವೆ. ಹೊಯ್ಸಳ ರಾಜ್ಯದ ಪರಿಸರದಲ್ಲಿದ್ದ ದಾಕ್ಷಿಣಾತ್ಯ ಶೈಲಿಯ ಪ್ರಭಾವ ಹೆಚ್ಚು ಸ್ಪಷ್ಟವಾಗಿದೆ. ಹೊಯ್ಸಳ ಶಿಲ್ಪಿಗಳು ವಾಸ್ತುಶಿಲ್ಪದ ಕ್ಷೇತ್ರದಲ್ಲಿ ನಾಗರ ಮತ್ತು ದ್ರಾವಿಡ ವಾಸ್ತು ಶೈಲಿಗಳೆರಡನ್ನೂ ಅಳವಡಿಸಿಕೊಂಡಿದ್ದರು. ಅದಕ್ಕೆ ತಮ್ಮ ಪ್ರತಿಭಾ ಶಕ್ತಿಯಿಂದ ಹೊರರೂಪವನ್ನು ಕೊಟ್ಟ ಶೈಲಿಯ ಸೊಬಗನ್ನು ದ್ವಿಗುಣಗೊಳಿಸಿದ್ದಾರೆ. ಇವರ ಶೈಲಿಯ ಉಗಮಕ್ಕೆ ಕಲ್ಯಾಣ ಚಾಲುಕ್ಯರ ಶೈಲಿಯ ಕಟ್ಟಡಗಳು ಸ್ಫೂರ್ತಿಯನ್ನು ಒದಗಿಸಿದವು. ಇವರ

ಶೈಲಿಯಲ್ಲಿನ ಅಂಶಗಳನ್ನು ಅಳವಡಿಸಿಕೊಂಡರೂ ಅಪೂರ್ವ ಪ್ರಯೋಗ ಪರವಾಗಿ ಹೊಸ ಪದ್ಧತಿಯೊಂದರ ದೃಷ್ಟಿಯಿಂದ ದಿಟ್ಟ ಹೆಜ್ಜೆಯನ್ನಿಟ್ಟರು. ಇಲ್ಲಿ ತಿಳಿಸಬೇಕಾಗಿರುವ ಮತ್ತೊಂದು ಮುಖ್ಯವಾದ ಅಂಶವೆಂದರೆ ಅನೇಕ ಕಲಾ ಇತಿಹಾಸಕಾರರು ಮತ್ತು ವಿದ್ವಾಂಸರು, ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳ ಶೈಲಿಗಳನ್ನು ಅವಿಭಾಜ್ಯವೆಂದು ಪರಗಣಿಸಿರುವುದು "ಫರ್ಗ್ಯೂಸನ್ ವಿನ್ಸೆಂಟ್ ಸ್ಮಿತ್" ಅವರು ಈ ಶೈಲಿಯು ಬಿಜಾಪುರ ಜಿಲ್ಲೆಯ ಬಾದಾಮಿ, ಐಹೊಳೆ, ಪಟ್ಟದಕಲ್ಲಿನಲ್ಲಿ ಉಗಮವಾಯಿತೆಂದೂ ಸುಧೀರ್ಘ ವಿಕಾಸದ ಕೊನೆಯ ನಿದರ್ಶನಗಳನ್ನು ಹೊಯ್ಸಳ ರಾಜ್ಯದಲ್ಲಿ ಕ್ರಿ.ಶ.12–13ನೆಯ ಶತಮಾನಗಳಲ್ಲಿ ಕಾಣಬಹುದೆಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಮೊದಲಿಗೆ ಕಲ್ಯಾಣ ಚಾಲುಕ್ಯ ಸಾಮಂತರಾಗಿದ್ದ ಹೊಯ್ಸಳರು ಕ್ರಿ.ಶ.11ನೇ ಶತಮಾನದ ಪೂರ್ವಾರ್ಧದಲ್ಲಿ ಸ್ವತಂತ್ರರಾಗಿ ನಂತರ ಚಾಲುಕ್ಯ ಹೊಯ್ಸಳ ವಾಸ್ತುಶಿಲ್ಪಗಳಿಗೆ ಉತ್ತರಾಧಿಕಾರಿಗಳಾಗಿ ಆ ಸಂಸ್ಕೃತಿ ಪರಂಪರೆಗಳನ್ನು ಮೈಗೂಡಿಸಿಕೊಂಡು ಸ್ವೀಕರಿಸಿದರು. ಅದರ ಫಲವಾಗಿ ಈ ಎರಡೂ ಶೈಲಿಯಲ್ಲಿ ಹಲವಾರು ಹೋಲಿಕೆಗಳು ಎದ್ದುಕಾಣುತ್ತವೆ. ಅವುಗಳೆಂದರೆ:

1. ಕಲ್ಯಾಣ ಚಾಲುಕ್ಯರು ಮತ್ತು ಹೊಯ್ಸಳರು ಇಬ್ಬರೂ ಕೂಡ ತಮ್ಮ ದೇವಾಲಯ ಮತ್ತು ಶಿಲ್ಪಗಳ ಕೆತ್ತನೆಗೆ "ಕ್ಲೋರೈಟ್ಟಿಕ್ಸ್ ಸಿಸ್ಟ್" ಅಥವಾ ಬಳಪದ ಕಲ್ಲನ್ನು ಉಪಯೋಗಿಸಿರುವುದು.
2. ಎರಡೂ ಶೈಲಿಯಲ್ಲಿ ದೇವಾಲಯಗಳ ಕಂಬಗಳ ತಿರುಗಣೆ ಯಂತ್ರ (ಲೇತ್)ದಿಂದ ತಯಾರಿಸಿರುವುದು.
3. ಎರಡೂ ಶೈಲಿಯಲ್ಲಿ ದೇವಾಲಯಗಳ ಬಾಗಿಲುವಾಡಗಳನ್ನು ಸುಂದರವಾಗಿ ಅಲಂಕರಣದ ಕೆತ್ತನೆಯನ್ನು ಮಾಡಲಾಗಿದೆ.
4. ದೇವಾಲಯಗಳ ಒಳಭಾಗಕ್ಕೆ ಸಾಕಷ್ಟು ಗಾಳಿ ಬೆಳಕಿಗಾಗಿ ಜಾಲಾಂದ್ರಗಳನ್ನು ಸೇರಿಸಿ ಗೋಡೆಗಳನ್ನು ನಿರ್ಮಿಸಿರುವುದು.
5. ಮದನಿಕಾ ಅಥವಾ ಸಾಲಭಂಜಿಕ ವಿಗ್ರಹಗಳನ್ನು ಎರಡು ಶೈಲಿಯಲ್ಲಿ ಉಪಯೋಗಿಸಿರುವುದು.

ಹೊಯ್ಸಳರ ಕಾಲದಲ್ಲಿ ಶಿಲ್ಪಗಳು ತಮ್ಮ ವಾಸ್ತುರಚನೆಗಾಗಿ ತಮ್ಮ ಪ್ರಾಂತ್ಯದಲ್ಲಿ ಲಭ್ಯವಾಗುತ್ತಿದ್ದಂತಹ "ನಸುಹಸಿರು" ಅಥವಾ ಕಪ್ಪುನೀಲಿ ಛಾಯೆಯುಳ್ಳ ಬಳಪದ ಕಲ್ಲನ್ನು ತಮ್ಮ ದೇವಾಲಯಗಳಿಗೆ ಉಪಯೋಗಿಸಿಕೊಂಡರು. ಈ ಕಲ್ಲಿನ ವೈಶಿಷ್ಟ್ಯವೆಂದರೆ ಹೊಸದಾಗಿ ಗಣಿಯಿಂದ ಕತ್ತರಿಸಿ ಹೊರ ತೆಗೆದಾಗ ಅದು ಬಹಳ ಮೃದುವಾಗಿದ್ದು ಬಿಸಿಲು ಗಾಳಿಗಳ

ಪ್ರಭಾವದಿಂದ ತನ್ನೊಳಗೆ ಅಡಗಿಸಿಕೊಂಡಿದ್ದ ತೇವಾಂಶವನ್ನು ಕಳೆದುಕೊಂಡು ಗಟ್ಟಿಯಾಗುತ್ತದೆ. ಆದ್ದರಿಂದ ಈ ಕಲ್ಲಿನಲ್ಲಿ ಬಹಳ ನಯವಾದ ಮತ್ತು ಸೂಕ್ಷ್ಮವಾದ ಕೆತ್ತನೆಗಳನ್ನು ಮಾಡಲು ಸುಲಭವಾಗುತ್ತಿತ್ತು. ಹೊಯ್ಸಳ ದೇವಾಲಯಗಳು ವಾಸ್ತು ನಿರ್ಮಾಣಗಳೆನ್ನುವುದಕ್ಕಿಂತ ಪ್ರಯೋಗಾತ್ಮಕವಾದ ಕಲಾಮಂದಿರಗಳಾಗಿದೆ. ಈ ದೇವಾಲಯಗಳು ಮೂರ್ತಿಶಿಲ್ಪಗಳು ವಾಸ್ತುನಿರ್ಮಾಣವೇ ಹೊರತು ವಾಸ್ತು ಶಿಲ್ಪಗಳಿಂದ ನಿರ್ಮಾಣವಾದ ಕಟ್ಟಡಗಳಲ್ಲವೆಂದು ಹೇಳಬಹುದು.

ಈ ಮೇಲಿನ ಎಲ್ಲಾ ವಿಷಯಗಳಿಂದ ನಮಗೆ ತಿಳಿದುಬರುವ ಅಂಶವೆಂದರೆ ಹೊಯ್ಸಳರ ದೇವಾಲಯಗಳು ದ್ರಾವಿಡ ಶೈಲಿಯ ತಳಹದಿಯ ಮೇಲೆ ಆಧಾರಿತವಾಗಿದ್ದರೂ ಹೊಯ್ಸಳ ವಾಸ್ತುಶಿಲ್ಪಗಳ ಕೈಗಳಲ್ಲಿ ಅವು ತನ್ನದೇ ಆದಂತಹ ವೈಶಿಷ್ಟ್ಯಗಳನ್ನು ಪಡೆದುಕೊಂಡವು. ದ್ರಾವಿಡ ವಾಸ್ತುಲಕ್ಷಣಗಳನ್ನು ತಮ್ಮ ಭಾವನೆಗಳಿಗೆ ಸರಿಹೊಂದುವಂತೆ ಮಾರ್ಪಡಿಸಿಕೊಂಡು ಈ ಶಿಲ್ಪಿಗಳು ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಈ ಭಾವನೆಗಳು ಮತ್ತು ತತ್ಫಲವಾದ ಮಾರ್ಪಾಡುಗಳು ವಾಸ್ತುಶಿಲ್ಪಿಯ ದೃಷ್ಟಿಕೋನಕ್ಕೆ ಸರಿಹೊಂದುವಂತಹವು. ಬೇಲೂರು, ಹಳೇಬೀಡಿನ ದೇವಾಲಯಗಳ ಬಾಗಿಲುಗಳ ಮೇಲಿನ ಮಕರ ತೋರಣದಲ್ಲಿ ಕಾಣುವ ಸೂಕ್ಷ್ಮವಾದ ಕೆತ್ತನೆ ಅಕ್ಕಸಾಲಿಗರ ಕುಸುರಿ ಕೆಲಸವನ್ನು ಮೀರಿಸುವಂತಹದ್ದಾಗಿದೆ.

ಹೊಯ್ಸಳರ ಶೈಲಿಗೆ ಸೇರಿಸಬಹುದಾದ ಸುಮಾರು 100ಕ್ಕೂ ಹೆಚ್ಚು ದೇವಾಲಯಗಳನ್ನು ಗರ್ಭಗೃಹಗಳ ಸಂಖ್ಯೆಗೆ ಅನುಗುಣವಾಗಿ ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ ಮತ್ತು ಪಂಚಕೂಟ ದೇವಾಲಯಗಳೆಂದು ವಿಂಗಡಿಸಬಹುದಾಗಿದೆ.

**ಏಕಕೂಟ**:-ಯಾವ ದೇವಾಲಯಗಳು ಒಂದೇ ಒಂದು ಗರ್ಭಗುಡಿಯನ್ನು ಹೊಂದಿರುತ್ತವೆಯೋ ಅಂತಹ ದೇವಾಲಯಗಳನ್ನು 'ಏಕಕೂಟ' ದೇವಾಲಯವೆಂದು ಕರೆಯುತ್ತಾರೆ. ಹೊಯ್ಸಳರ ದೇವಾಲಯಗಳಲ್ಲಿ ಬಹಳಷ್ಟು ಸಂಖ್ಯೆಯ ದೇವಾಲಯಗಳು ಏಕಕೂಟಗಳಾಗಿವೆ. ಉದಾ:- ಬೇಲೂರಿನ ಚನ್ನಕೇಶವ, ಹಾರ್ನಹಳ್ಳಿಯ ಸೋಮೇಶ್ವರ, ತಲಕಾಡಿನ ಕೀರ್ತಿನಾರಾಯಣ, ಅರಳುಗುಪ್ಪೆಯ ಕೇಶವ ದೇವಾಲಯ, ಅರಸೀಕರೆಯ ಈಶ್ವರ ದೇವಾಲಯ ಇತ್ಯಾದಿ.

**ದ್ವಿಕೂಟ**:- ಯಾವುದೇ ದೇವಾಲಯ ಎರಡು ಗರ್ಭಹೃಹಗಳನ್ನು ಹೊಂದಿರುತ್ತದೆಯೋ ಅಂತಹ ದೇವಾಲಯಗಳನ್ನು 'ದ್ವಿಕೂಟ' ದೇವಾಲಯಗಳೆಂದು ಕರೆಯುತ್ತಾರೆ. ಇವುಗಳ ಸಂಖ್ಯೆ ಹೊಯ್ಸಳರ ಕಾಲದಲ್ಲಿ ಬಹಳ ಕಡಿಮೆ. ಇವರ ಕಾಲದಲ್ಲಿ ನಿರ್ಮಿಸಲಾದ ದ್ವಿಕೂಟ

ದೇವಾಲಯಗಳೆಂದರೆ ಉದಾ:–ಹಳೇಬೀಡಿನ ಹೊಯ್ಸಳೇಶ್ವರ, ಆನೆಕೊಂಡದ ಈಶ್ವರ, ಕಲ್ಲೆಕೇರಿಯ ಬಲ್ಲಾಳೇಶ್ವರ ಮತ್ತು ಬೆಳ್ಳೂರಿನ ಗಣೇಶ ದೇವಾಲಯಗಳು.

**ತ್ರಿಕೂಟ:**– ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಈ ರೀತಿಯ ತ್ರಿಕೂಟ ದೇವಾಲಯಗಳನ್ನು ಮೊಟ್ಟ ಮೊದಲ ಬಾರಿಗೆ ನಿರ್ಮಾಣ ಮಾಡಲಾಯಿತಾದರೂ ತ್ರಿಕೂಟ ದೇವಾಲಯಗಳು ಹೆಚ್ಚು ಜನಪ್ರಿಯವಾಗ ತೊಡಗಿದವು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಹೊಯ್ಸಳರ ಕಾಲ ತ್ರಿಕೂಟ ದೇವಾಲಯಗಳ ಪರ್ವಕಾಲವೆಂದು ಹೇಳಬಹುದಾಗಿದೆ. ಶೈವರು, ವೈಷ್ಣವರು ಮತ್ತು ಜೈನರು ಅನೇಕ ತ್ರಿಕೂಟ ದೇವಾಲಯಗಳನ್ನು ಮತ್ತು ಬಸದಿಗಳನ್ನು ನಿರ್ಮಿಸಿದರು. ಇಂದು ಅನೇಕ ಸುಪ್ರಸಿದ್ಧ ತ್ರಿಕೂಟ ದೇವಾಲಯಗಳು ಇವರ ಕಾಲದಲ್ಲಿ ಅಸ್ಥಿತ್ವಕ್ಕೆ ಬರಲು ಕಾರಣವಾಯಿತು.

ಈ ರೀತಿಯ ದೇವಾಲಯಗಳಲ್ಲಿ ಮೂರು ಗರ್ಭಗೃಹ ಮೂರು ಸುಖನಾಸಿ ಮತ್ತು ಈ ಮೂರು ಸುಖನಾಸಿಗಳಿಗೆ ಹೊಂದಿಕೊಂಡಂತೆ ಒಂದೇ ನವರಂಗವಿರುವುದರಿಂದ ಮಧ್ಯದ ಗರ್ಭಗೃಹದ ಎದುರು ನವರಂಗದಲ್ಲಿ ಪ್ರವೇಶದ್ವಾರವನ್ನು ಇಡಲಾಗಿರುತ್ತದೆ. ಇದರ ಪ್ರಕಾರ ಎರಡು ಗರ್ಭಗೃಹಗಳು ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಎದುರುಬದುರಾಗಿ ಇನ್ನೊಂದು ಗರ್ಭಗೃಹ ಅಂದರೆ ಮುಖ್ಯ ಗರ್ಭಗೃಹ ಪೂರ್ವಕ್ಕೆ ಮುಖ ಮಾಡಿಕೊಂಡಿರುತ್ತದೆ. ಹೀಗಾಗಿ ದೇವಾಲಯದ ನವರಂಗವನ್ನು ಪ್ರವೇಶಿಸಲು ಒಂದೇ ಒಂದು ದ್ವಾರವಿರುತ್ತದೆ. ಉದಾ:– ಸೋಮನಾಥಪುರದ ಸೋಮೇಶ್ವರ, ಹಾರ್ನಹಳ್ಳಿಯ ಕೇಶವ ದೇವಾಲಯ, ಚಟಚಟ್ಟನಹಳ್ಳಿಯ ಚಟ್ಟೇಶ್ವರ ದೇವಾಲಯ, ಬೆಳವಾಡಿಯ ವೀರನಾರಾಯಣ, ಜಾವಗಲ್ಲಿನ ಲಕ್ಷ್ಮೀನರಸಿಂಹ ಇತ್ಯಾದಿ.

ಕೆಲವು ದೇವಾಲಯಗಳು ತ್ರಿಕೂಟ ದೇವಾಲಯಗಳಾಗಿದ್ದರೂ ಅವುಗಳ ತಳವಿನ್ಯಾಸ ಬೇರೆ ತ್ರಿಕೂಟ ದೇವಾಲಯಗಳ ತಳವಿನ್ಯಾಸಕ್ಕಿಂತ ಭಿನ್ನವಾಗಿರುತ್ತವೆ. ಉದಾ:– ಅಘಾಲಯದ ಮಲ್ಲೇಶ್ವರ ದೇವಾಲಯ, ಗೊರೂರಿನ ತ್ರಿಕೂಟೇಶ್ವರ ದೇವಾಲಯಗಳು, ಮಲ್ಲೇಶ್ವರ ದೇವಾಲಯದಲ್ಲಿ ಮೂರು ಗರ್ಭಗೃಹಗಳು ಒಂದೇ ಸಾಲಿನಲ್ಲಿದ್ದು ಇದರ ನವರಂಗ ಸುಮಾರು 100 ಅಡಿಗಳ ಉದ್ದ ಮತ್ತು 25 ಅಡಿ ಅಗಲವಾಗಿದೆ. ನವರಂಗಕ್ಕೆ ಹೊಂದಿಕೊಂಡಂತೆ ಚಿಕ್ಕ ಮಂಟಪವಿದೆ. ತ್ರಿಕೂಟೇಶ್ವರ ದೇವಾಲಯದಲ್ಲಿಯೂ ಸಹ ಗರ್ಭಗೃಹಗಳು ಒಂದೇ ಸಾಲಿನಲ್ಲಿ ನಿರ್ಮಿಸಿರುವುದನ್ನು ಕಾಣಬಹುದಾಗಿದೆ.

ವೈಷ್ಣವ ತ್ರಿಕೂಟ ದೇವಾಲಯಗಳನ್ನು ಸಾಮಾನ್ಯವಾಗಿ ದಕ್ಷಿಣದ ಗರ್ಭಗೃಹದಲ್ಲಿ ವೇಣುಗೋಪಾಲ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದರೆ, ಉಳಿದ ಎರಡು ಗರ್ಭಗೃಹಗಳಲ್ಲಿ ಇತರ

ವೈಷ್ಣವ ದೇವತೆಗಳ್ನನು ಉದಾ:– ಉತ್ತರದಲ್ಲಿ ಲಕ್ಷ್ಮೀನರಸಿಂಹ, ಪಶ್ಚಿಮದಲ್ಲಿ ಕೇಶವ ಮೂರ್ತಿಗಳಲ್ಲಿ ಪ್ರತಿಷ್ಠಾಪಿಸಲಾಗಿರುತ್ತದೆ. ಉದಾ:– ಸೋಮನಾಥಪುರದ ಕೇಶವ ದೇವಾಲಯದಲ್ಲಿ ವೇಣುಗೋಪಾಲನನ್ನು ದಕ್ಷಿಣ ಗರ್ಭಗೃಹದಲ್ಲಿ ಪ್ರತಿಷ್ಠಾಪನೆ ಮಾಡಿ ಇತರ ಎರಡು ಗರ್ಭಗೃಹಗಳಲ್ಲಿ ಕೇಶವ ಮತ್ತು ಜನಾರ್ಧನ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ.

ಅಲ್ಲದೇ ಶೈವ ಮತ್ತು ವೈಷ್ಣವ ಮಿಶ್ರಿತ ತ್ರಿಕೂಟ ದೇವಾಲಯಗಳ್ಲಲಿ ಶೈವ ಮತ್ತು ವೈಷ್ಣವ ದೇವತೆಗಳನ್ನು ಸ್ಥಾಪಿಸುತ್ತಿದ್ದರು. ಅಂತಹ ಸಮಯದಲ್ಲಿ ಒಂದರಲ್ಲಿ ವೈಷ್ಣವ ದೇವತೆ ಇದ್ದರೆ ಇನ್ನೆರಡು ಗರ್ಭಗೃಹಗಳಲ್ಲಿ ಶೈವ ದೇವತೆಗಳನ್ನು ಪ್ರತಿಷ್ಠೆ ಮಾಡುತ್ತಿದ್ದರು. ಉದಾ:– ಬಂದಳಿಕೆಯ ದೇವಾಲಯದ ಒಂದು ಗರ್ಭಗೃಹದಲ್ಲಿ ಶಿವಲಿಂಗವಿದ್ದರೆ ಇತರ ಎರಡರಲ್ಲಿ ವೈಷ್ಣವ ದೇವತೆಗಳನ್ನು ಪ್ರತಿಷ್ಠಾಪಿಸಲಾಗಿದೆ.

ಹಿಂದೂ ದೇವತೆಗಳಂತೆ ಜೈನರೂ ಸಹ ಅನೇಕ ತ್ರಿಕೂಟ ಬಸದಿಗಳ್ನನು ನಿರ್ಮಿಸಿದರು. ಉದಾ:–ಹೊಯ್ಸಳ ಕಾಲದ ತ್ರಿಕೂಟ ಬಸದಿಗಳನ್ನು ಶ್ರವಣಬೆಳಗೊಳದ ಇಂದ್ರಗಿರಿ ಬೆಟ್ಟದಲ್ಲಿರುವ ಒದೆಗಲ್ ಬಸದಿ, ಪ್ರಸಿದ್ಧಿಯಾಗಿದ್ದು ಇದನ್ನು ತ್ರಿಕೂಟ ಬಸದಿ ಎಂದು ಕರೆಯುತ್ತಾರೆ. ಮರ್ಕೂಲಿಯ ಆದಿನಾಥ ಬಸದಿ, ಚಿಕ್ಕಹನಸೋಗೆಯ ಮತ್ತು ತ್ರಿಕೂಟ ಬಸದಿ ಈ ಬಸದಿಗಳನ್ನು ಬೆಣಚುಕಲ್ಲಿನಲ್ಲಿ ನಿರ್ಮಿಸಲಾಗಿದೆ. ಇವುಗಳಲ್ಲಿ ಮುಖ್ಯ ಗರ್ಭಗೃಹದಲ್ಲಿ ಆದಿನಾಥನ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾರೆ. ಉಳಿದ ಎರಡು ಗರ್ಭಗೃಹಗಳಲ್ಲಿ ಪಾರ್ಶ್ವನಾಥ ಮತ್ತು ಶಾಂತಿನಾಥನ ಮೂರ್ತಿಗಳನ್ನು ಪ್ರತಿಷ್ಠಾಪಿಸಿರುತ್ತಾರೆ. ಇವುಗಳಲ್ಲಿ ಮೂರು ಗರ್ಭಗೃಹ ಮೂರು ಸುಖನಾಸಿ ಮತ್ತು ಒಂದು ನವರಂಗ, ಮುಖ್ಯ ದ್ವಾರದ ಮುಂದರೆ ಮುಖಮಂಟಪಗಳಿರುತ್ತವೆ.

**ಚತುಷ್ಕೂಟ**:– ಹೊಯ್ಸಳರ ಕಾಲದಲ್ಲಿ ನಿರ್ಮಿಸಲಾದ ಒಂದೇ ಒಂದು ಚತುಷ್ಕೂಟ ದೇವಾಲಯವೆಂದರೆ ಸುಪ್ರಸಿದ್ಧ ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಾಲಯ, ಇಲ್ಲಿ ನಾಲ್ಕು ಮುಖ್ಯ ದಿಕ್ಕುಗಳಿಗೆ ಮುಖಮಾಡಿಕೊಂಡಿರುವ ನಾಲ್ಕು ಗರ್ಭಗೃಹಗಳು ಅದಕ್ಕೆ ಹೊಂದಿಕೊಂಡಂತೆ ನಾಲ್ಕು ಸುಖನಾಸಿಗಳು ಮತ್ತು ಒಂದೇ ನವರಂಗವಿರುವುದು ಕಂಡು ಬರುತ್ತದೆ. ಈ ಎಲ್ಲಾ ಗರ್ಭಗೃಹಗಳ ಮೇಲೆ ಕದಂಬ ನಾಗರ ಶೈಲಿಯ ಶಿಖರಗಳಿವೆ. ಈ ದೇವಾಲಯದ ಗರ್ಭಗೃಹಗಳಲ್ಲಿ ಕಾಳಿ, ಲಿಂಗ ಮತ್ತು ವಿಷ್ಣುವಿನ ವಿಗ್ರಹಗಳಿವೆ. ಪೂರ್ವದ ಗರ್ಭಗೃಹವೇ ಮುಖ್ಯವಾದ ಗರ್ಭಗೃಹವಾಗಿದ್ದು ಇದರಲ್ಲಿ ಲಕ್ಷ್ಮೀದೇವಿಯ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಪಶ್ಚಿಮದ ಗರ್ಭಗೃಹದಲ್ಲಿ ಭೂತನಾಥನೆಂದು ಕರೆಯಲ್ಪಡುವ ಶಿವಲಿಂಗವಿದ್ದು ದಕ್ಷಿಣದ ಗರ್ಭಗೃಹದಲ್ಲಿ ಮೇಲೆ ವಿಷ್ಣುವಿನ ವಿಗ್ರಹವಿದ್ದು ಪಶ್ಚಿಮದಲ್ಲಿ

ಮಂಟಪಮೊಂದರ ಮೂಲಕ ಪ್ರವೇಶವಿದೆ. ಪೂರ್ವದಲ್ಲಿದ್ದ ಇಂತಹ ಮಂಟಪ ಈಗ ಹಾಳಾಗಿದೆ.

**ಪಂಚಕೂಟಗಳು**:- ಹೊಯ್ಸಳರ ಕಾಲದಲ್ಲಿ ಅನೇಕ ಪಂಚಕೂಟ ದೇವಾಲಯಗಳು ಅಸ್ಥಿತ್ವಕ್ಕೆ ಬಂದವೆಂದು ಶಾಸನಗಳ ಮೂಲಕ ಮತ್ತು ಅವಶೇಷಗಳ ಮೂಲಕ ತಿಳಿದುಬರುತ್ತದೆ. ಈ ವಿಧದ ದೇವಾಲಯದಲ್ಲಿ ಐದು ಗರ್ಭಗೃಹಗಳಿರುತ್ತವೆ. ಇಂತಹ ದೇವಾಲಯಗಳನ್ನು ಗೋವಿಂದನಹಳ್ಳಿ, ಸೋಮನಾಥಪುರ, ನಾಗಮಂಗಲ, ಹಳೇಬೀಡು, ಕೂಡೂರು, ಬೊಗ್ಗವಳ್ಳಿ, ಬಾಳಗಂಜಿ, ಚಿತ್ರದುರ್ಗ ಇನ್ನು ಮುಂತಾದ ಸ್ಥಳಗಳಲ್ಲಿ ನಿರ್ಮಿಸಲಾಗಿದೆ. ಇವುಗಳಲ್ಲಿ ಗೋವಿಂದನಹಳ್ಳಿ ಮತ್ತು ಸೋಮನಾಥಪುರದ ಪಂಚಕೂಟಗಳ ಬಗ್ಗೆ ನಮಗೆ ಕೆಲವು ಮಾಹಿತಿಗಳು ದೊರೆಯುತ್ತವೆ.

ಸೋಮನಾಥಪುರದ ಪಂಚಕೂಟ ದೇವಾಲಯವು ಬೆಣಚುಕಲ್ಲಿನಲ್ಲಿ ನಿರ್ಮಿತ ವಾಗಿದುದಾಗಿದೆ. ಈ ದೇವಾಲಯವು ಐದು ಗರ್ಭಗೃಹಗಳು ಮತ್ತು ಶಿಖರಗಳು ಒಂದೇ ಸಾಲಿನಲ್ಲಿವೆ. ಪಂಚಲಿಂಗೇಶ್ವರ ದೇವಾಲಯವೆಂದು ಕರೆಯಲ್ಪಡುತ್ತಿರುವ ಈ ದೇವಾಲಯವನ್ನು ಕ್ರಿ.ಶ.೧೩೬೮ರಲ್ಲಿ ಸೋಮನಾಥ ದಂಡನಾಯಕನು ಕಟ್ಟಿಸಿದನೆಂದು ಹೇಳಲಾಗಿದೆ.

ಈ ದೇವಾಲಯದಲ್ಲಿ ಗರ್ಭಗೃಹಗಳು ಒಂದೇ ಸಾಲಿನಲ್ಲಿದ್ದು ಗರ್ಭಗುಡಿಗಳ ಮೇಲೆ ಶಿಖರಗಳನ್ನು ಮಾಡಲಾಗಿದೆ. ಈ ದೇವಾಲಯದಲ್ಲಿ ಶಿಲ್ಪಿಯಲ್ಲಿ ತಮ್ಮನ್ನು ಕೆಲವು ಮೂರ್ತಿಗಳನ್ನು ಸಿದ್ಧಪಡಿಸಿರುವುದರಿಂದ ಈ ದೇವಾಲಯವನ್ನು ಸೋಮನಾಥಪುರದ ಕೇಶವ ದೇವಾಲಯದ ಆಚೀಚೆ ನಿರ್ಮಾಣ ಮಾಡಿದಂತೆ ಕಂಡುಬರುತ್ತದೆ ಎಂದು ಹೇಳಲಾಗಿದೆ.

ಹೊಯ್ಸಳರ ಕಾಲದಲ್ಲಿ ನೂರಾರು ದೇವಾಲಯಗಳು ನಿರ್ಮಾಣಗೊಂಡಿವೆ. ಇವುಗಳಲ್ಲಿ ಜೈನ, ವೈಷ್ಣವ ಮತ್ತು ಶೈವ ಧರ್ಮದ ಪಂಥಕ್ಕೆ ಸೇರಿದವುಗಳಾಗಿವೆ. ಇವುಗಳೆಲ್ಲವೂ ಅರಸರ ಪೋಷಣೆಯಿಂದ ರಾಣಿಯರು, ಮಂತ್ರಿಗಳು, ದಂಡನಾಯಕರು, ವರ್ತಕರು, ಶ್ರೀಮಂತ ವರ್ಗದವರು ಇನ್ನು ಮುಂತಾದವರ ಪೋಷಣೆಯಲ್ಲಿ ನಿರ್ಮಿಸಲ್ಪಟ್ಟ ದೇವಾಲಯಗಳು, ಇವು ಹೊಯ್ಸಳ ರಾಜ್ಯದ ಹಳ್ಳಿ ಹಳ್ಳಿಗಳಲ್ಲಿ, ಪಟ್ಟಣಗಳಲ್ಲಿ, ನಗರಗಳಲ್ಲಿ, ಪ್ರಾಂತೀಯ ರಾಜಧಾನಿಗಳಲ್ಲಿ ಹೇರಳವಾಗಿ ಕಂಡುಬರುತ್ತವೆ. ಈ ಮೇಲೆ ತಿಳಿಸಲಾಗಿರುವ ಹೊಯ್ಸಳರ ದೇವಾಲಯಗಳು ವಿಶಿಷ್ಟವಾದ ವೇಸರ ಶೈಲಿಯಲ್ಲಿ ಕಲ್ಯಾಣ ಚಾಲುಕ್ಯರ ಶೈಲಿಯಿಂದ ಪ್ರೇರೇಪಿತವಾದ ವೈಭವೀಕೃತ ದ್ರಾವಿಡ ಶೈಲಿಯಲ್ಲಿ ಮತ್ತು ಸರಳ ರೀತಿಯ ದ್ರಾವಿಡ ಶೈಲಿಯಲ್ಲಿ ಕಾಣಬರುತ್ತದೆ. ಸರಳ ಮತ್ತು ಸಾಮಾನ್ಯ ಪುಟ್ಟ ದೇವಾಲಯಗಳಿಂದ ಹಿಡಿದು ಬೃಹದಾಕಾರವಾದ ಹಳೇಬೀಡಿನ

ಹೊಯ್ಸಳೇಶ್ವರ, ಬೇಲೂರಿನ ಚನ್ನಕೇಶವ, ಸೋಮನಾಥಪುರದ ಕೇಶವ ದೇವಾಲಯಗಳ ಗಾತ್ರದವರೆಗೂ ಇವುಗಳ ಪ್ರಮಾಣ ವಿಸ್ತರಿಸಿದೆ. ಇವುಗಳ ರಚನೆಯಲ್ಲಿ, ತಳವಿನ್ಯಾಸದಲ್ಲಿ, ಅಧಿಷ್ಠಾನದ ನಿರೂಪಣೆಯಲ್ಲಿ, ಭಿತ್ತಿಯ ಅಲಂಕರಣೆಯಲ್ಲಿ ಶಿಖರದ ವಿನ್ಯಾಸದಲ್ಲಿ ವೈವಿಧ್ಯತೆ ಕಂಡುಬರುತ್ತದೆ. ಈ ಲಕ್ಷಣಗಳು ಎಲ್ಲಾ ದೇವಾಲಯಗಳಲ್ಲೂ ಕಂಡುಬರುವಂತಹ ಸಾಮಾನ್ಯ ಲಕ್ಷಣಗಳು. ಇದರಿಂದಾಗಿ ಹೊಯ್ಸಳ ವಾಸ್ತು ಮತ್ತು ಶಿಲ್ಪದ ಲಕ್ಷಣಗಳನ್ನು ಸ್ಥೂಲವಾಗಿ ನೀಡುವ ಒಂದು ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**ಮಾಧ್ಯಮ**

ಮೊದಲೇ ತಿಳಿಸಿರುವಂತೆ ಹೊಯ್ಸಳರು ಅವರ ದೇವಾಲಯಗಳ ನಿರ್ಮಾಣಕ್ಕಾಗಿ ಎರಡು ಮುಖ್ಯವಾದ ಮಾಧ್ಯಮಗಳನ್ನು ಬಳಸಿದರು. ಅವುಗಳೆಂದರೆ, ಬಹು ಹೆಚ್ಚಾಗಿ ಬಳಸಲಾಗಿರುವಂತಹ ಬಳಪದ ಕಲ್ಲು ಮತ್ತು ಸ್ವಲ್ಪ ಕಡಿಮೆ ಪ್ರಮಾಣದಲ್ಲಿ ಬಳಸಲಾಗಿರುವ ಕಣಶಿಲೆ ಬಳಪದ ಕಲ್ಲು ಅಥವಾ ಆಂಗ್ಲ ಭಾಷೆಯಲ್ಲಿ 'ಸೂಪ್‌ಸ್ಟೋನ್' 'ಕ್ಲೋರೈಟಿಕ್ ಸಿಸ್ಟ್' ಎಂಬ ಕಲ್ಲು ಕರ್ನಾಟಕದಲ್ಲಿ ಹೇರಳವಾಗಿ ದೊರೆಯುತ್ತದೆ. ಕಲ್ಯಾಣ ಚಾಲುಕ್ಯರು ಹೊಯ್ಸಳರ ಕಾಲಕ್ಕೆ ಮೊದಲೇ ಸಾಕಷ್ಟು ಪ್ರಮಾಣದಲ್ಲಿ ಇದನ್ನು ಬಳಸಿರುವರು. ಹೀಗಾಗಿ ಹೊಯ್ಸಳರು ಸಹ ಈ ಶಿಲೆಯ ಕೆಲವು ವಿಶೇಷ ಗುಣಗಳ ಕಾರಣದಿಂದಾಗಿ ಈ ಕಲ್ಲಿನ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಂಡರು. ಈ ಕಲ್ಲನ್ನು ಗಣಿಯಿಂದ ಹೊರತೆಗೆದಾಗ ತೇವಾಂಶದಿಂದ ಕೂಡಿದ್ದು ಕಂದು ಹಸಿರು ತಿಳಿಗಪ್ಪು ಬಣ್ಣವನ್ನು ಹೊಂದಿರುತ್ತದೆ ಮತ್ತು ಮೃದುವಾಗಿದ್ದು ಇದರ ರಚನೆ ಬಹಳ ಸಣ್ಣ ಸಣ್ಣ ಕಣಗಳಿಂದ ಕೂಡಿರುತ್ತದೆ.[48] ಕಲ್ಲಿನಲ್ಲಿ ಯಾವುದೇ ರೀತಿಯ ಸಣ್ಣ ಪುಟ್ಟ ರಂಧ್ರಗಳಾಗಲಿ ಪೊಟರೆಗಳಾಗಲಿ ಇರುವುದಿಲ್ಲ. ಸತತವಾದ ಬಿಸಿಲು ಗಾಳಿಯ ಪ್ರಭಾವಕ್ಕೆ ತುತ್ತಾಗದೇ ಸಾಕಷ್ಟು ಉದ್ದವಾದ ದಪ್ಪನಾದ ತೊಲೆಗಳನ್ನೂ, ಚಪ್ಪಡಿಗಳನ್ನೂ, ಗಣಿಯಿಂದ ತೆಗೆಯಬಹುದಾಗಿದೆ. ಕಲ್ಲಿನ ಈ ಮೃದುತ್ವದಿಂದಾಗಿ ಸುತ್ತಿಗೆ ಉಳಿಗಳ ಸಹಾಯವಿಲ್ಲದೆ ಬಾಚಿ, ಕೊರೆಯುವ ಸಾಧನ, ಚೂಪಾದ ದಬ್ಬಳ– ಇತ್ಯಾದಿಗಳ ಸಹಾಯದಿಂದ ಬಹಳ ಸುಲಭವಾಗಿ ಕಲ್ಲನ್ನು ನಿರ್ದೇಶಿತ ಆಕಾರಕ್ಕೆ ತರಬಹುದಾಗಿದೆ. ಕಲ್ಲಿನ ಈ ಲಕ್ಷಣದಿಂದಾಗಿ ಅತಿ ಸುಲಭವಾಗಿ, ಶೀಘ್ರವಾಗಿ, ನಿರಾಯಾಸವಾಗಿ, ಮೂರ್ತಿಗಳನ್ನೂ, ಶಿಲ್ಪಗಳನ್ನೂ, ಇತರ ಸೂಕ್ಷ್ಮ ಕೆತ್ತನೆಗಳನ್ನು, ಗುಡಿಗಾರರ, ಅಕ್ಕಸಾಲಿಗರ, ಕೆಲಸ ಸೂಕ್ಷ್ಮ ಕೆತ್ತನೆಗೆ ಸರಿಸಮಾನವಾಗಿ ಕೆಲಸವನ್ನು ಮಾಡಲಾಗಿದೆ. ಇದರಿಂದಾಗಿ ಸುಂದರ ಸೂಕ್ಷ್ಮ ಕೆತ್ತನೆಗಳಿಂದ ವಿಪರೀತ ಅಲಂಕರಣಗಳಿಂದ ಹೊಯ್ಸಳ ದೇವಾಲಯಗಳು ಹೆಚ್ಚು ಆಕರ್ಷಕವೂ ವೈಭವೀಕೃತವೂ ಆಗಿರುವಂತೆ ನಿರ್ಮಿಸಲ್ಪಟ್ಟಿದೆ.

ಮೃದುವಾದ ಬಳಪದ ಕಲ್ಲಿನ ಮಾಧ್ಯಮ ಯಾವ ರೀತಿಯಲ್ಲಿ ದೇವಾಲಯದ ಭವ್ಯತೆಯನ್ನು ಹೆಚ್ಚಿಸುವಲ್ಲಿ ಸಹಾಯಕಾರಿಯಾಯಿತೋ ಅದೇ ರೀತಿಯಾಗಿ ದೇವಾಲಯಗಳ ವಾಸ್ತುವಿನ್ಯಾಸಗಳಲ್ಲಿ ಅನೇಕ ಬದಲಾವಣೆ ಮತ್ತು ಮಾರ್ಪಾಡುಗಳಗೂ ನಾಂದಿಯಾಯಿತು. ಬಳಪದ ಕಲ್ಲು ಮೃದುವಾಗಿರುವುದರಿಂದಾಗಿ ಕಣಶಿಲೆಯಲ್ಲಿ ತೆಗೆಯಬಹುದಾದಂತಹ ಉದ್ದವಾದ ಕಲ್ಲಿನ ತೊಲೆಗಳನ್ನಾಗಲಿ, ಚಪ್ಪಡಿಗಳನ್ನಾಗಲಿ ಇದರಲ್ಲಿ ಸುಲಭವಾಗಿ ತೆಗೆಯಲು ಬರುವುದಿಲ್ಲ. ಒಂದು ಪಕ್ಷ ಬಂದರೂ ಅವುಗಳು ಬಹಳ ಕಾಲ ಬಾಳಿಕೆ ಬರುವುದಿಲ್ಲ. ತೊಲೆಗಳು ಚಪ್ಪಡಿಗಳು ಅವುಗಳ ಭಾರಕ್ಕೆ ಮಧ್ಯದಲ್ಲಿ ಮುರಿಯುವ ಸಂಭವವುಂಟು ಇದರಿಂದಾಗಿ ಹೊಯ್ಸಳ ಶಿಲ್ಪಿಗಳು ಹೆಚ್ಚು ಉದ್ದವಿಲ್ಲದ ತೊಲೆ ಮತ್ತು ಚಪ್ಪಡಿಗಳನ್ನು ಬಳಸಬೇಕಾಯಿತು. ಇವುಗಳಿಂದ ಆದಂತಹ ಕೆಲವು ದುಷ್ಪರಿಣಾಮಗಳನ್ನು ಮುಂದೆ ಆಯಾ ಸ್ಥಳಗಳಲ್ಲಿ ಹೇಳಲಾಗುತ್ತದೆ.[49]

ದ್ವಿತೀಯ ಮಾಧ್ಯಮ ಕಣಶಿಲೆ ಅಥವಾ ಗ್ರಾನೈಟ್ ಇದನ್ನು ಹೊಯ್ಸಳರು ತಮ್ಮ ರಾಜ್ಯದ ಕೇಂದ್ರ ಭಾಗಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಮತ್ತು ಇವರು ಪರರಿಂದ ಗೆದ್ದುಕೊಂಡ ಪ್ರದೇಶದ ಎಲ್ಲಾ ಭಾಗಗಳಲ್ಲಿ ಹೆಚ್ಚು ಪ್ರಮಾಣದಲ್ಲಿ ಬಳಸಿರುವುದು ಕಾಣಬರುತ್ತದೆ. ಉದಾಹರಣೆಗೆ ಹೇಳುವುದಾದರೆ ಹೊಯ್ಸಳರು ಚೋಳರನ್ನು ಗಂಗವಾಡಿಯ ಪ್ರದೇಶದಿಂದ ಹೊಡೆದೋಡಿಸಿ ಆಗ್ನೇಯ ಭಾಗದ ತಲಕಾಡನ್ನು ಮತ್ತು ಅದರ ಸುತ್ತಮುತ್ತಲಿನ ಭಾಗಗಳನ್ನು ಆಕ್ರಮಿಸಿಕೊಂಡರು. ಇದರಿಂದಾಗಿ ತಲಕಾಡಿನಲ್ಲಿರುವ ಕೀರ್ತಿ ನಾರಾಯಣ ದೇವಾಲಯವನ್ನು ಕಣಶಿಲೆಯನ್ನು ಬಳಸಿ ಹೊಯ್ಸಳ ಶೈಲಿಯಲ್ಲಿ ನಿರ್ಮಿಸಿದರು. ಈ ರೀತಿಯ ಕಣಶಿಲೆಯ ಬಳಕೆಗೆ ನಿರ್ದಿಷ್ಟ ಕಾರಣಗಳೇನು ಎಂಬುದು ಇನ್ನೂ ಅನಿರ್ಧಾರಿತ. ಇದಕ್ಕೆ ಅನೇಕ ಕಾರಣಗಳನ್ನು ನಾವು ನೀಡಬಹುದು. ತಲಕಾಡಿನ ಭಾಗಗಳು ಚೋಳರ ವಶದಲ್ಲಿ ನೂರಕ್ಕೂ ಹೆಚ್ಚು ವರ್ಷಗಳ ಕಾಲ ಇತ್ತು. ಚೋಳರು ದೇವಾಲಯಗಳನ್ನು ಕಣಶಿಲೆಯನ್ನು ಉಪಯೋಗಿಸಿ ಕಟ್ಟುವ ಅಭ್ಯಾಸವನ್ನು ಹೊಂದಿದ್ದರು. ಚೋಳರ ಸಂಸ್ಕೃತಿಯಿಂದ ಪ್ರಭಾವಿತರಾದ ಈ ಭಾಗಗಳಲ್ಲಿ ಹೊಯ್ಸಳರು ಕಣಶಿಲೆಯನ್ನು ಉಪಯೋಗಿಸಿರುವುದಕ್ಕೆ ಕಾರಣ ಖಂಡಿತವಾಗಿಯೂ ಆ ಸ್ಥಳದಲ್ಲಿ ಬಳಪದ ಕಲ್ಲು ಲಭ್ಯವಾಗುತ್ತಿರಲಿಲ್ಲವೆಂದಲ್ಲ. ಪ್ರಾಯಶಃ ಚೋಳರ ಸಂಸ್ಕೃತಿಯಿಂದ ಪ್ರಭಾವಿತವಾದ ಆ ಸ್ಥಳಗಳಲ್ಲಿ ಅಲ್ಲಿಯ ಜನರ ಅಭಿರುಚಿಗೆ ತಕ್ಕಂತೆ ಚೋಳರು ಬಳಸುತ್ತಿದ್ದ ಮಾಧ್ಯಮದಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಿರಬಹುದು ಅಥವಾ ಸ್ಥಳೀಯವಾಗಿ ದೊರೆಯುತ್ತಿದ್ದ ಕಣಶಿಲೆಯ ಕೆತ್ತನೆಯಲ್ಲಿ ಈ ದೇವಾಲಯವನ್ನು ನಿರ್ಮಿಸಿರಬಹುದು. ಹಾಗೆಯೇ ದೇವಾಲಯವನ್ನು ಕಟ್ಟಿಸಿ ಹೊಯ್ಸಳ ಶೈಲಿಯ ನಿಜವಾದ ಛಾಯೆಯನ್ನು ಮೂಡಿಸಲು ನವರಂಗದ ನಾಲ್ಕು ಕಂಬಗಳನ್ನು ಮಾತ್ರ ಬಳಪದ ಕಲ್ಲಿನಿಂದ

ತಯಾರಿಸಿ ನಿಲ್ಲಿಸಿರಬಹುದು. ಆದ್ದರಿಂದ ಹೊಯ್ಸಳರು ತಮ್ಮ ದೇವಾಲಯಗಳಿಗೆ ಮುಖ್ಯವಾಗಿ ಬಳಪದ ಕಲ್ಲನ್ನು ಬಳಸಿದ್ದು, ಸ್ಥಳೀಯ ಜನರ ಸಂಸ್ಕೃತಿ, ಪರಂಪರೆ, ಅಭಿರುಚಿ ಮತ್ತು ಅಲ್ಲಿ ದೊರೆಯುವ ಶಿಲ್ಪಿಗಳ ಕೌಶಲ್ಯಕ್ಕೆ ಅನುಗುಣವಾಗಿ ಮಾಧ್ಯಮವನ್ನು ಅನುಸರಿಸುತ್ತಿದ್ದರು ಎಂಬ ಅಂಶವು ಇದರಿಂದ ನಮಗೆ ತಿಳಿದುಬರುತ್ತದೆ.

**ಜಗತಿ**

ಹೊಯ್ಸಳರು ದೇವಾಲಯಕ್ಕೆ ಭದ್ರವಾದ ಬುನಾದಿಯನ್ನು ಒದಗಿಸುವುದರ ಜೊತೆಗೆ ಗಂಭೀರವಾದ ನಿಲುವನ್ನೂ, ಎತ್ತರವನ್ನು ನೀಡುವುದಕ್ಕೆ ಸಹಕಾರಿಯಾಗಲೆಂದು ದೇವಾಲಯಗಳಿಗೆ ಜಗತಿಯನ್ನು ಅಥವಾ ಎತ್ತರವಾದ ಜಗತಿಯನ್ನು ನಿರ್ಮಿಸುವ ಪರಿಪಾಠವನ್ನು ಇವರು ಆರಂಭಿಸಿದರು. ಬಳಪದ ಕಲ್ಲಿನ ಉಪಯೋಗವು ಜಗತಿಯ ನಿರ್ಮಾಣಕ್ಕೆ ಕಾರಣವಾಯಿತು ಎಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.[50] ಏಕೆಂದರೆ ಬಳಪದ ಕಲ್ಲಿನ ಮೃದುತ್ವದಿಂದಾಗಿ ದೇವಾಲಯದ ಆಕೃತಿ ಚಿಕ್ಕದಾಗುತ್ತಿತ್ತು. ಇದರಿಂದಾಗಿ ಅದರ ಎತ್ತರವೂ ಕಡಿಮೆಯಾಗುತ್ತಿತ್ತು. ಈ ಅಂಶಗಳು ದೇವಾಲಯವನ್ನು ದೂರದಿಂದ ಕಾಣುವ ರೀತಿಯಲ್ಲಿ ಅಥವಾ ಆ ಪ್ರದೇಶದಲ್ಲಿ ಹೆಚ್ಚು ಪ್ರಧಾನವಾಗಿ ಕಾಣುವ ಸ್ಮಾರಕವನ್ನು ನಿರ್ಮಾಣ ಮಾಡುವಲ್ಲಿ ವಿಫಲವಾಯಿತು. ಇದರಿಂದಾಗಿ ದೇವಾಲಯವನ್ನು ಆ ಪ್ರದೇಶದಲ್ಲಿ ಪ್ರಧಾನ ಕಟ್ಟಡವನ್ನಾಗಿ ಮಾಡುವುದಕ್ಕೆ ಈ ಜಗತಿಯನ್ನು ಒದಗಿಸಿದರು ಎಂಬ ಅಭಿಪ್ರಾಯ ಪಡಲಾಗಿದೆ. ಏನೇ ಆದರೂ ದೇವಾಲಯಕ್ಕೆ ಜಗತಿಯನ್ನು ಒದಗಿಸುವುದು ಮತ್ತು ಅದರಿಂದಾಗಿ ಅದರ ಎತ್ತರವನ್ನು ಎತ್ತರಿಸುವುದು ಹೊಯ್ಸಳ ವಾಸ್ತುಶಿಲ್ಪದ ಒಂದು ವಿಶೇಷತೆ ಎನ್ನಬಹುದು.

ಈ ಜಗತಿಯು ಸುಮಾರು ಎರಡು ಅಡಿಗಳಿಂದ ಹಿಡಿದು ನಾಲ್ಕು, ಐದು, ಅಡಿಗಳ ಎತ್ತರದವರೆಗೂ ಇರುವುದು ಸಾಮಾನ್ಯವಾಗಿ ಕಂಡುಬರುವ ಲಕ್ಷಣ. ಜಗತಿಯ ಆಕಾರ ದೇವಾಲಯದ ಹೊರಗೋಡೆಯ ಹೊರ ಅಂಚಿನ ಆಕಾರಕ್ಕೆ ಸಮಾನಾಂತರವಾಗಿರುತ್ತದೆ ಮತ್ತು ದೇವಾಲಯದ ವಿಸ್ತೀರ್ಣಕ್ಕಿಂತ ಅನೇಕ ಅಡಿಗಳಷ್ಟು ಅಂದರೆ, ಸುಮಾರು ಐದರಿಂದ ಹತ್ತು ಹನ್ನೆರಡು ಅಡಿಗಳಷ್ಟು ಸುತ್ತಲೂ ಹೆಚ್ಚು ವಿಶಾಲವಾಗಿರುತ್ತದೆ. ಈ ರೀತಿಯಾಗಿ ಜಗತಿಯನ್ನು ದೇವಾಲಯದ ಸುತ್ತಲೂ ನಿರ್ಮಿಸುವುದರಿಂದ ದೇವಾಲಯಕ್ಕೆ ಒಂದು ಹೊರ ಪ್ರದಕ್ಷಿಣಾಪಥವನ್ನು ನಿರ್ಮಿಸಿದಂತಾಯಿತು. ಹೊಯ್ಸಳರ ದೇವಾಲಯಗಳೆಲ್ಲವೂ ನಿರಾಂಧರ ದೇವಾಲಯಗಳು. ಅಂದರೆ ಕಟ್ಟಡದ ಒಳಭಾಗದಲ್ಲಿ ಪ್ರದಕ್ಷಿಣಾಪಥವನ್ನು ಹೊಂದಿರದ ದೇವಾಲಯಗಳು. ಜಗತಿಯ ನಿರ್ಮಾಣದಿಂದ ವಿಶಾಲವಾದ ಗಾಳಿ ಬೆಳಕಿನಿಂದ ಕೂಡಿದ

ಎತ್ತರವಾದ ಒಂದು ಪ್ರದಕ್ಷಿಣಾಪಥವು ದೇವಾಲಯಕ್ಕೆ ನಿರ್ಮಾಣವಾದಂತೆ ಆಯಿತು. ಜಗತಿಯ ಮತ್ತೊಂದು ಉಪಯೋಗವೆಂದರೆ ದೇವಾಲಯಕ್ಕೆ ಭದ್ರ ಬುನಾದಿಯನ್ನು ಒದಗಿಸುವುದು. ಜಗತಿಯನ್ನು ಮೊದಲು ನಿರ್ಮಿಸಿ ಅದರ ಮೇಲೆ ಕಲ್ಲುಚಪ್ಪಡಿಗಳನ್ನು ಹಾಸಿ ಅದರ ಮೇಲೆ ಅನೇಕ ದಿಂಡುಗಳಿಂದ ಅಲಂಕೃತವಾದ ಅಧಿಷ್ಠಾನವನ್ನು ನಿರ್ಮಿಸಿರುವುದರಿಂದ ದೇವಾಲಯದ ಕಟ್ಟಡಕ್ಕೆ ಎತ್ತರವಾದ ನಿಲುವು ಭದ್ರವಾದ ಬುನಾದಿಯು ದೊರಕುವಂತಾಯಿತು.

ಈ ಭಾಗವನ್ನು ಸರಳವಾದ ರೀತಿಯಲ್ಲಿ ನಿರ್ಮಿಸದೆ ಅದರ ಪಾರ್ಶ್ವಗಳನ್ನು ವಿಭಿನ್ನ ಆಕಾರದ ದಿಂಡುಗಳಿಂದ ಅಲಂಕರಿಸುತ್ತಿದ್ದರು. ಮೂಲೆಗಳಲ್ಲಿ ಅಲಂಕಾರಕ್ಕಾಗಿ ಮತ್ತು ಹೆಚ್ಚಿನ ದೃಢತೆಗಾಗಿ ಬಲಿಷ್ಠವಾದ ದೊಡ್ಡ ಮೂಲೆಗಲ್ಲುಗಳನ್ನು ಕೂಡಿಸಿ ಅವುಗಳನ್ನು ಆನೆಯ ಶಿಲ್ಪದಂತೆ ರೂಪಿಸುತ್ತಿದ್ದರು. ಜಗತಿಯ ದಿಂಡುಗಳಲ್ಲಿ ವಾಸ್ತು ಅಲಂಕರಣಗಳನ್ನು ಬಿಟ್ಟರೆ ಶಿಲ್ಪಾಲಂಕರಣಗಳು ಕಾಣಬರುವುದಿಲ್ಲ. ಜಗತಿಗೆ ಅವಶ್ಯಕವಿದ್ದ ಕಡೆಗಳಲ್ಲಿ ಸೋಪಾನಗಳನ್ನು ನಿರ್ಮಿಸಿ ಸೋಪಾನಗಳಿಗೆ ಕಟಾಂಜನಗಳನ್ನು ಒದಗಿಸುತ್ತಿದ್ದರು. ಕಟಾಂಜನಗಳ ಹೊರಮುಖಗಳಲ್ಲಿ ಪುಟ್ಟದಾದ ಗುಡಿಗಳು ಮತ್ತು ಅವುಗಳ ಮೇಲ್ಭಾಗದಲ್ಲಿ ಅವುಗಳಿಗೆ ಹೊಂದುವ ವಿವಿಧ ರೀತಿಯ ಹೊಯ್ಸಳ ವಾಸ್ತುಶೈಲಿಯಲ್ಲಿ ಬಳಕೆಯಲ್ಲಿರುವಂತಹ ಶಿಖರಗಳನ್ನು ನಿರ್ಮಿಸುತ್ತಿದ್ದರು. ಸಾಮಾನ್ಯವಾಗಿ ಈಗ ಕಂಡುಬರುವ ಈ ರೀತಿಯ ಎಲ್ಲಾ ಚಿಕ್ಕ ಗುಡಿಗಳು ಖಾಲಿಯಾಗಿದ್ದು, ಅವುಗಳ ಮೂಲದೇವತೆಗಳು ಯಾವುದಾಗಿತ್ತು ಎಂದು ಸ್ಪಷ್ಟವಾಗಿ ಹೇಳುವುದಕ್ಕೆ ಆಗುವುದಿಲ್ಲ. ಜಗತಿಯು ಐದು ಅಡಿಗಳಷ್ಟು ಎತ್ತರವಾಗಿದ್ದರೂ ಮೇಲ್ಭಾಗದಲ್ಲಿ ಅವುಗಳ ಹೊರ ಅಂಚಿನಲ್ಲಿ ಯಾವುದೇ ವಿಧವಾದ ಕಟಾಂಜನ ಅಥವಾ ತಡೆಗಳನ್ನು ನಿರ್ಮಿಸುವ ಪರಿಪಾಠ ಹೊಯ್ಸಳ ಶೈಲಿಯಲ್ಲಿ ಇರಲಿಲ್ಲ. ಜಗತಿಯ ಮಧ್ಯಭಾಗದಲ್ಲಿ ದೇವಾಲಯವನ್ನು ನಿರ್ಮಿಸುತ್ತಿದ್ದರು. ಉಳಿದ ಭಾಗಗಳನ್ನು ಹಾಸು ಚಪ್ಪಡಿಗಳಿಂದ ಮುಚ್ಚುತ್ತಿದ್ದರು.

**ತಳ ವಿನ್ಯಾಸ**

ಹೊಯ್ಸಳ ಶಿಲ್ಪಗಳ ದೇವಾಲಯಗಳನ್ನು ಯಾವುದೇ ಧರ್ಮಭೇದವಿಲ್ಲದೆ ಎಲ್ಲಾ ದೇವಾಲಯಗಳಿಗೂ ಅನ್ವಯವಾಗುವಂತೆ ವಿಶೇಷ ರೀತಿಯ ಹೊಸ ತಳವಿನ್ಯಾಸವನ್ನು ದೇವಾಲಯಗಳಿಗೆ ರೂಪಿಸಿದರು. ಹೊಯ್ಸಳ ದೇವಾಲಯಗಳಲ್ಲಿ ಒಂದರಿಂದ ಹಿಡಿದು ಐದು ಗರ್ಭಗೃಹಗಳಿರುವುದನ್ನು ನಾವು ಕಾಣುತ್ತೇವೆ. ಪ್ರತಿಯೊಂದು ಗರ್ಭಗೃಹದ ಮೇಲೂ ಒಂದೊಂದು ವಿಮಾನಗಳನ್ನು ನಿರ್ಮಿಸುತ್ತಿದ್ದರು. ಇದರಿಂದಾಗಿ ನಾವು ದೇವಾಲಯಗಳನ್ನು ಗರ್ಭಗೃಹಗಳ ಸಂಖ್ಯೆಗೆ ಅನುಗುಣವಾಗಿ 'ಏಕಕೂಟ', 'ದ್ವಿಕೂಟ', 'ತ್ರಿಕೂಟ' 'ಚತುಷ್ಕೂಟ'

ಮತ್ತು 'ಪಂಚಕೂಟ' ದೇವಾಲಯಗಳೆಂದು ವಿಭಾಗಿಸುತ್ತೇವೆ. ಸಾಧಾರಣವಾಗಿ ಎಲ್ಲಾ ದೇವಾಲಯಗಳಲ್ಲಿ ಗರ್ಭಗೃಹ ಅದರ ಮುಂದೆ ಸುಖನಾಸಿ ಮತ್ತು ಅದಕ್ಕೆ ಹೊಂದಿಕೊಂಡಂತೆ ನವರಂಗ ಮತ್ತು ನವರಂಗಕ್ಕೆ ಇರುವ ಹೊರದ್ವಾರಗಳಿಗೆ ಅನುಗುಣವಾಗಿ ಒಂದೊಂದು ಮುಖಮಂಟಪ ಇವುಗಳು ಕಾಣಬರುತ್ತವೆ. ಇದು ಏಕಕೂಟ ದೇವಾಲಯದ ಲಕ್ಷಣ. ಗರ್ಭಗೃಹ ಯಾವಾಗಲೂ ನಿಯಮದಂತೆ ಚೌಕಟ್ಟಾಗಿರುತ್ತವೆ. ಆದರೆ ಈ ನಿಯಮಕ್ಕೆ ಅಪವಾದಗಳು ಇಲ್ಲದಿಲ್ಲ. ಉದಾಹರಣೆಗೆ ಶ್ರವಣಬೆಳಗೊಳದ ಭಂಡಾರಿ ಬಸದಿಯಲ್ಲಿ ಆಯತಾಕಾರವಾದ ಗರ್ಭಗೃಹವಿದೆ. ಇದಕ್ಕೆ ಕಾರಣ ಒಂದೇ ಸಾಲಿನಲ್ಲಿ 24 ತೀರ್ಥಂಕರ ವಿಗ್ರಹಗಳನ್ನು ಪ್ರತಿಷ್ಠಾಪಿಸಿರುವುದು. ವೃತ್ತಾಕಾರದ ತಳವಿನ್ಯಾಸ ಗರ್ಭಗೃಹಗಳಿಗೂ ಅರ್ಧವೃತ್ತಾಕಾರದ ಗರ್ಭಗೃಹಗಳಾಗಲಿ ಹೊಯ್ಸಳ ಶೈಲಿಯಲ್ಲಿ ಕಂಡುಬರುವುದಿಲ್ಲ. ಗರ್ಭಗೃಹಗಳಿಗೆ ಸಾಮಾನ್ಯವಾಗಿ ಒಂದೇ ಬಾಗಿಲು (ಭಂಡಾರಿ ಬಸದಿಯನ್ನು ಬಿಟ್ಟು) ಮೇಲೆ ಹೇಳಿದಂತೆ ಹೊಯ್ಸಳ ದೇವಾಲಯಗಳೆಲ್ಲವೂ ನಿರಾಂಧರ ದೇವಾಲಯಗಳು ಪ್ರತ್ಯೇಕವಾದ ಒಳ ಪ್ರದಕ್ಷಿಣಾ ಪಥಗಳು ಇವುಗಳಲ್ಲಿ ಕಾಣಬರುವುದಿಲ್ಲ. ಈ ನಿಯಮಕ್ಕೆ ಇರುವ ಒಂದೇ ಒಂದು ಅಪವಾದವೆಂದರೆ ಶ್ರವಣ ಬೆಳಗೊಳದ ಚಿಕ್ಕಬೆಟ್ಟದ ಮೇಲೆ ನಿರ್ಮಿಸಲಾಗಿರುವ ಕತ್ತಲೆಯ ಬಸದಿ (ಇದು ದ್ರಾವಿಡ ಶೈಲಿಯ ದೇವಾಲಯ).

ಗರ್ಭಗೃಹಗಳ ಮುಂದೆ ಸಾಮಾನ್ಯವಾಗಿ ಗರ್ಭಗೃಹದ ವಿಸ್ತೀರ್ಣವನ್ನು ಹೊಂದಿದ ಹೆಚ್ಚು ಕಡಿಮೆ ಚೌಕಕಾರದ ಸುಖನಾಸಿಗಳಿರುತ್ತವೆ. ಸುಖನಾಸಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ನಾಲ್ಕರಿಂದ ಹಿಡಿದು ಅನೇಕ ಕಂಬಗಳು ಕಂಡುಬರುವುದುಂಟು. ಹೊಯ್ಸಳರ ದೇವಾಲಯಗಳ ನವರಂಗ ಹೇಳಿಕೊಳ್ಳುವಷ್ಟೇನೂ ವಿಸ್ತಾರವಾಗಿರುವುದಿಲ್ಲ. ಆದರೂ ವಿಸ್ತೀರ್ಣಕ್ಕೆ ಹೋಲಿಸಿದರೆ ಕಂಬಗಳ ಸಂಖ್ಯೆ ಹೆಚ್ಚಾಗಿ ಕಾಣಬರುತ್ತವೆ.[51] ಮಾಧ್ಯಮವನ್ನು ಕುರಿತು ಹೇಳುವಾಗ ಒಂದಂಶವನ್ನು ನಾವು ಗಮನಿಸಿದ್ದೇವೆ. ಅಂದರೆ ಈ ಮಾಧ್ಯಮವು ದೇವಾಲಯದ ತಳವಿನ್ಯಾಸದ ನಿರೂಪಣೆಯಲ್ಲೂ ಪ್ರಭಾವವನ್ನು ಬೀರಿದೆ ಎಂದು ಹೇಳಲಾಗಿದೆ. ಹೊಯ್ಸಳ ದೇವಾಲಯಗಳಲ್ಲಿ ಈ ಮೃದು ಮಾಧ್ಯಮದ ಬಳಕೆಯಿಂದಾಗಿ ಅಗಲವಾದ ಹಜಾರದ ಛಾವಣಿಯನ್ನು ಉದ್ದವಾದ ತೊಲೆಗಳ ಮತ್ತು ಚಪ್ಪಡಿಗಳ ಸಹಾಯದಿಂದ ಕಡಿಮೆ ಸಂಖ್ಯೆ ಕಂಬಗಳ ಮೇಲೆ ಆಧರಿಸುವುದು ಸಮಂಜಸವಲ್ಲವೆಂದು ಅವರಿಗೆ ತೋರಿತು. ಅದಕ್ಕಾಗಿ ಸಣ್ಣ ಸಣ್ಣ ತೊಲೆಗಳನ್ನು ಚಪ್ಪಡಿಗಳನ್ನು ಬಳಸಿ ಹತ್ತಿರ ಹತ್ತಿರವಾಗಿ ಕಂಬಗಳನ್ನು ನಿಲ್ಲಿಸಿ ಅವುಗಳ ಆಧಾರದ ಮೇಲೆ ಮೇಲ್ಛಾವಣಿ ಭದ್ರವಾಗಿ ಕೂರುವಂತೆ ಮಾಡಿದರು. ಇದರಿಂದಾಗಿ ನವರಂಗದಲ್ಲಿ ಕಂಬಗಳ ಸಂಖ್ಯೆಗಳು ಜಾಸ್ತಿಯಾಯಿತಲ್ಲದೆ, ಈ ಅಂಶವು ಹೊಯ್ಸಳ ಶಿಲ್ಪಗಳಿಗೆ ತಮ್ಮ ಕುಶಲತೆಯನ್ನು ಪ್ರದರ್ಶಿಸಲು ವರವಾಗಿಯೂ ಪರಿಣಮಿಸಿತು. ಹೆಚ್ಚು ಹೆಚ್ಚು ಕಂಬದ

ದಿಂಡುಗಳಿಂದ, ತೊಲೆಗಳಿಂದ ಮತ್ತು ಛಾವಣಿಯ ಅಂಕಣಗಳಿಂದ ದೊರೆತ ಸ್ಥಳವನ್ನು ಅವರು ಕಲಾತ್ಮಕವಾಗಿ ಬಳಸಿಕೊಂಡು ಆಲೋಚನೆಗೆ ಎಟುಕದಂತಹ ರೀತಿಯಲ್ಲಿ ಅಲಂಕರಣಗಳನ್ನು ಮಾಡಿ ದೇವಾಲಯದ ಒಳಶೋಭೆಯನ್ನು ಹೆಚ್ಚಿಸಿದರು.

ನವರಂಗದ ದ್ವಾರದ ಮುಂದಿನ ಮುಖಮಂಟಪಗಳು ಸಾಧಾರಣವಾಗಿ ಚಿಕ್ಕ ಕಟ್ಟಡಗಳು ನಾಲ್ಕು ಕಂಬಗಳ ಆಸರೆಯ ಮೇಲೆ ಮಟ್ಟಸವಾದ ಮೇಲ್ಛಾವಣಿಯನ್ನು ಇವು ಹೊಂದಿರುತ್ತವೆ. ಇಕ್ಕೆಲಗಳಲ್ಲಿ ಕಟಾಂಜನಗಳು ಉದಾಹರಣೆಗಳು ಸಾಕಷ್ಟು ಇವೆ. ದ್ರಾವಿಡ ಸಂಪ್ರದಾಯದಂತೆ ನವರಂಗದ ಸುಖನಾಸದ ಗೋಡೆಗಳಿಗೆ ಕೋಷ್ಠಗಳನ್ನು ಮಾಡಿ ಅದರೊಳಗೆ ಜಾಲಾಂಧ್ರಗಳನ್ನು ಕೂಡಿಸುವ ಪದ್ಧತಿ ಈ ಹಿಂದೆ ಇರಲಿಲ್ಲ. ಬದಲಾಗಿ ನವರಂಗದ ಮುಂಭಾಗದ ಗೋಡೆಯನ್ನು ಸಾಮಾನ್ಯವಾಗಿ ತೆರನಾಗಿಡುವ ಅಥವಾ ಆ ಸ್ಥಳದಲ್ಲಿ ಅಗಲವಾದ ಜಾಲಾಂಧ್ರಗಳನ್ನು ಕೂಡಿಸುವ ಪದ್ಧತಿ ಇತ್ತು.

ಈ ಮೇಲೆ ಹೇಳಿದ ಲಕ್ಷಣಗಳೆಲ್ಲವೂ ಹೊಯ್ಸಳರ ಎಲ್ಲ ದೇವಾಲಯಗಳಿಗೂ ಅನ್ವಯಿಸುವಂತಹ ನಿಯಮಗಳು. ಒಂದಕ್ಕಿಂತ ಹೆಚ್ಚು ಗರ್ಭಗೃಹಗಳಿದ್ದಲ್ಲಿ ತಳವಿನ್ಯಾಸದ ಸ್ವರೂಪದಲ್ಲಿಯೂ ಸಹ ಸ್ವಲ್ಪ ವ್ಯತ್ಯಾಸ ಕಂಡುಬರುತ್ತದೆ. ದ್ವಿಕೂಟ ದೇವಾಲಯಗಳಲ್ಲಿ ಒಂದೇ ಸಾಲಿನಲ್ಲಿ ಎರಡು ಗರ್ಭಗೃಹಗಳು ಮತ್ತು ಎರಡಕ್ಕೂ ಸಮಾನವಾದ ಆಯತಾಕಾರದ ಒಂದು ನವರಂಗ ಮತ್ತು ನವರಂಗಕ್ಕೆ ಗರ್ಭಗೃಹದ ಎದುರಿನಲ್ಲಿ ಎರಡು ಬಾಗಿಲುಗಳು ಮತ್ತು ಎರಡು ಪಾರ್ಶ್ವಗಳಲ್ಲಿ ಒಂದೊಂದು ಬಾಗಿಲನ್ನು ಕಾಣುತ್ತೇವೆ. (ಉದಾಹರಣೆ ಹಳೇಬೀಡಿನಲ್ಲಿರುವ ಹೊಯ್ಸಳೇಶ್ವರ ದೇವಾಲಯ) ತ್ರಿಕೂಟ ದೇವಾಲಯಗಳಲ್ಲಿ ಆಯತಾಕಾರದ ನವರಂಗಕ್ಕೆ ಒಂದು ತುದಿಯಲ್ಲಿ ಪ್ರವೇಶದ್ವಾರವನ್ನಿಟ್ಟು ಉಳಿದ ಮೂರು ಮುಖಗಳಲ್ಲಿ ಒಂದೊಂದು ಗರ್ಭಗೃಹ, ಒಂದೊಂದು ಸುಖನಾಸಿಯನ್ನು ನಿರ್ಮಿಸಿರುತ್ತಾರೆ. ಉದಾಹರಣೆಗೆ ಸೋಮನಾಥಪುರದ ಕೇಶವ ದೇವಾಲಯ. ಚತುಷ್ಕೂಟ ದೇವಾಲಯದಲ್ಲಿ ಆಯತಾಕಾರದ ನಾಲ್ಕು ಮುಖಗಳಲ್ಲಿ ಒಂದೊಂದು ಗರ್ಭಗೃಹ ಮತ್ತು ಒಂದೊಂದು ಸುಖನಾಸಿ ಕಾಣಬರುತ್ತವೆ. ಆಯತಾಕಾರದ ಅಗಲದ ಭಾಗದಲ್ಲಿರುವ ಎರಡು ಗರ್ಭಗೃಹಗಳನ್ನು ಒಂದಂಚಿಗೆ ತಳ್ಳಿ ಉಳಿದ ಭಾಗದಲ್ಲಿ ಎರಡು ಪ್ರವೇಶ ದ್ವಾರಗಳನ್ನು ನಿರ್ಮಿಸುತ್ತಾರೆ. ಉದಾಹರಣೆಗೆ ದೊಡ್ಡಗದ್ದವಳ್ಳಿಯ ಲಕ್ಷ್ಮಿ ದೇವಾಲಯ. ಪಂಚಕೂಟ ದೇವಾಲಯಗಳಲ್ಲಿ ಒಂದೇ ಸಾಲಿನಲ್ಲಿ ಐದು ಗರ್ಭಗೃಹಗಳು, ಸುಖನಾಸಿಗಳು ಮತ್ತು ಅವುಗಳೆಲ್ಲವನ್ನೂ ಸೇರಿದಂತೆ ಸಮಾನವಾದ ಒಂದು ಆಯತಾಕಾರದ ನವರಂಗ ಕಂಡುಬರುತ್ತದೆ. ಗರ್ಭಗೃಹದ ಸಂಖ್ಯೆಗೆ ಅನುಗುಣವಾಗಿ ಅವುಗಳ ಎದುರಿನಲ್ಲಿ

ಒಂದೊಂದು ದ್ವಾರಗಳು ಇರಬೇಕೆಂಬ ನಿಯಮವೇನೂ ಕಾಣಬರುವುದಿಲ್ಲ. ಉದಾಹರಣೆಗೆ ಗೋವಿಂದನ ಹಳ್ಳಿಯ ಪಂಚಲಿಂಗೇಶ್ವರ ದೇವಾಲಯ.

ದೇವಾಲಯದ ತಳವಿನ್ಯಾಸವನ್ನು ವಿವರಿಸುವಾಗ ಭಿತ್ತಿಯ ಹೊರ ಅಂಚಿನ ಆಕೃತಿ ಬಹಳ ಮುಖ್ಯವಾದ ಒಂದು ಅಂಶ. ಏಕೆಂದರೆ ಹೊಯ್ಸಳರು ಈ ಭಾಗವನ್ನು ನಿರ್ಮಿಸುವಾಗ ವಿಶೇಷವಾದ ಕೆಲವು ಪದ್ಧತಿಗಳನ್ನು ಅನುಸರಿಸಿದರು. ಇದರಲ್ಲಿ ಮುಖ್ಯವಾದ ಅಂಶವೆಂದರೆ, ಗರ್ಭಗೃಹದ ಗೋಡೆಯ ಹೊರಭಾಗದ ಅಂಚನ್ನು ನಕ್ಷತ್ರಾಕಾರವಾಗಿ ನಿರ್ಮಿಸಿರುವುದು, ನಕ್ಷತ್ರಾಕಾರದ ತಳವಿನ್ಯಾಸ ಹೊಯ್ಸಳ ಶಿಲ್ಪ ಶೈಲಿಗೆ ಒಂದು ವಿಶೇಷ ಲಕ್ಷಣ. ನಕ್ಷತ್ರಾಕಾರದ ತಳವಿನ್ಯಾಸವನ್ನು ರೂಪಿಸುವ ಪದ್ಧತಿಯು ರಾಷ್ಟ್ರಕೂಟರ ಕಾಲದ್ದಲಿಯ ನಕ್ಷತ್ರಾಕೃತಿಯ ತಳವಿನ್ಯಾಸ ಪ್ರಾರಂಭವಾಯಿತು ಎಂಬುದರ ಬಗ್ಗೆ ನಮಗೆ ಮಾಡಹಿ ದೊರಕುತ್ತದೆ. ಈ ರೀತಿಯ ದೇವಾಲಯಗಳಲ್ಲಿ ಗರ್ಭಗುಡಿಯು ನಕ್ಷತ್ರಾಕೃತಿಯ ತಳವಿನ್ಯಾಸದಲ್ಲಿರುತ್ತದೆ. ಉದಾ:– ಕೊಣನೂರಿನ (ಧಾರವಾಡ ಜಿಲ್ಲೆ) ಪರಮೇಶ್ವರ ದೇವಾಲಯ ಮತ್ತು ಸವಡಿಯ ಬ್ರಹ್ಮೇಶ್ವರ ದೇವಾಲಯ.

ರಾಷ್ಟ್ರಕೂಟರ ತರುವಾಯ ಕನ್ನಡನಾಡಿನಲ್ಲಿ ಅಧಿಕಾರಕ್ಕೆ ಬಂದ ಕಲ್ಯಾಣ ಚಾಲುಕ್ಯರೂ ಸಹ ನಕ್ಷತ್ರಾಕರದ ತಳವಿನ್ಯಾಸವನ್ನು ರೂಢಿಸಿಕೊಂಡು ದೇವಾಲಯಗಳನ್ನು ನಿರ್ಮಿಸಿದರು ಎಂದು ಹೇಳಲಾಗಿದೆ. ಉದಾ:– ಡಂಬಳದ ದೊಡ್ಡ ಬಸಪ್ಪ ದೇವಾಲಯ.

ನಕ್ಷತ್ರಾಕಾರದ ತಳವಿನ್ಯಾಸವು ಹೊಯ್ಸಳರ ದೇವಾಲಯಗಳಲ್ಲಿ ಗರ್ಭಗೃಹ ಭಾಗಕ್ಕೆ ಮಾತ್ರ ಅನ್ವಯಿಸುವಂತಹದ್ದು. ಈ ರೀತಿಯ ತಳವಿನ್ಯಾಸವನ್ನು ಒಂದು ಸರಳ ವಿಧಾನದ ಮೂಲಕ ಹೊಯ್ಸಳರು ನಿರೂಪಿಸುತ್ತಿದ್ದರು ಎನ್ನಬಹುದು. ಅಂದರೆ ಒಂದು ಚೌಕಟ್ಟಾದ ಹಲಗೆಯನ್ನು ಒಂದು ಕೇಂದ್ರಬಿಂದುವಿನಲ್ಲಿ ಅಲ್ಲಾಡದಂತೆ ಕೂರಿಸಿ ಅದನ್ನು ಸ್ವಲ್ಪಸ್ವಲ್ಪವಾಗಿ ತಿರುಗಿಸುತ್ತಾ ಹೊರ ಅಂಚನ್ನು ಗುರುತಿಸುತ್ತಾ ಹೋದರೆ, ನಾಲ್ಕರಿಂದ ಗುಣಿಸಬಹುದಾದ ಎಷ್ಟು ಬೇಕೋ ಅಷ್ಟು ಮೂಲೆಗಳನ್ನು ಪಡೆಯಬಹುದು. ಈ ವಿಧಾನವನ್ನು ಅನುಸರಿಸಿ ಹೊಯ್ಸಳರು ನಕ್ಷತ್ರಾಕಾರದ ವಿನ್ಯಾಸವನ್ನು ರೂಪಿಸುತ್ತಿದ್ದರು. ಇದು ಗರ್ಭಗೃಹಕ್ಕೆ ಮಾತ್ರ ಅನ್ವಯಿಸುವಂತಹ ಹೊಯ್ಸಳ ಶೈಲಿಯ ವಿಶೇಷವಾದ ಲಕ್ಷಣ. ಈ ಲಕ್ಷಣ ಎಲ್ಲಾ ಹೊಯ್ಸಳ ದೇವಾಲಯಗಳಲ್ಲಿ ಕಂಡುಬರುತ್ತದೆ ಎಂದು ಹೇಳಲಾಗುವುದಿಲ್ಲ. ದೇವಾಲಯ ಪ್ರಮುಖವಾಗಿ ಹೊಯ್ಸಳ ಶೈಲಿಯನ್ನು ಹೊಂದಿದ್ದರೂ ಗರ್ಭಗೃಹದ ತಳವಿನ್ಯಾಸ ಎಷ್ಟೋ ಸಂದರ್ಭಗಳಲ್ಲಿ ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿರುವುದಿಲ್ಲ.

ನಕ್ಷತ್ರಾಕಾರದ ತಳವಿನ್ಯಾಸ ಗರ್ಭಗೃಹಕ್ಕೆ ಮಾತ್ರ ಮೀಸಲು ಎಂದು ಮೇಲೆ ಹೇಳಿದ್ದೇವೆ. ಆದರೆ ಇದಕ್ಕೆ ಒಂದು ಅಪವಾದ ಉಂಟು. ಅಂದರೆ ಅರಸೀಕೆರೆಯಲ್ಲಿರುವ ಈಶ್ವರ ದೇವಾಲಯದಲ್ಲಿ ನವರಂಗದ ಮುಂಭಾಗದಲ್ಲಿ ಪ್ರತ್ಯೇಕವಾಗಿರುವ ರಂಗಮಂಟಪ. ಇದು ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿದೆ.

ನಕ್ಷತ್ರಾಕಾರದ ತಳವಿನ್ಯಾಸ ದೇವಾಲಯದ ಭಿತ್ತಿಯ ಹೊರ ಅಂಚಿಗೆ ಮಾತ್ರ ಮೀಸಲಾಗಿರುತ್ತದೆ. ಇದರ ಪ್ರಭಾವ ಗರ್ಭಗೃಹದ ಅಥವಾ ಸುಖನಾಸಿಯ ಒಳಭಾಗದಲ್ಲಿ ಕಾಣಬರುವುದಿಲ್ಲ. ನಕ್ಷತ್ರಾಕಾರದ ತಳವಿನ್ಯಾಸದಿಂದಾಗಿ ದೇವಾಲಯದ ಭಿತ್ತಿಯ ಹೊರಸ್ವರೂಪ ದೂರದಿಂದ ನೋಡಿದಾಗ ವೃತ್ತಾಕಾರವಾಗಿ ಅಥವಾ (ಮುಂಭಾಗದಿಂದ ಸುಖನಾಸವಿರುವುದರಿಂದ ಹಿಂಭಾಗ) ಅರ್ಧ ವೃತ್ತಾಕಾರವಾಗಿ ಕಂಡುಬರುತ್ತದೆ. ಈ ಲಕ್ಷಣವು ಹೊಯ್ಸಳ ಶೈಲಿಯನ್ನು 'ವೇಸರ ಶೈಲಿ' ಎಂದು ಗುರುತಿಸುವಾಗ ಸಹಕಾರಿಯಾಗುತ್ತದೆ. ದೇವಾಲಯದ ಹೊರಭಿತ್ತಿಯ ಉಳಿದ ಭಾಗಗಳು ನೇರವಾಗಿ ಕಂಡುಬಂದರೂ ಇವುಗಳಲ್ಲಿ ಬಹಳ ಹಿನ್ ಸರಿತ ಮುನ್ ಸರಿತಗಳು ಕಾಣಬರುತ್ತವೆ. ಈ ಹಿನ್ಸರಿತ ಮುನ್ಸರಿತಗಳು ಹೊಯ್ಸಳರ ದೇವಾಲಯಗಳಲ್ಲಿ ಕಾಣಬರುವುದು ಒಂದು ಸಾಮಾನ್ಯ ಲಕ್ಷಣ. ಈ ಲಕ್ಷಣವು ಉದ್ದೇಶ ಪೂರ್ವಕವಾಗಿಯೇ ಹೊಯ್ಸಳ ಶಿಲ್ಪಿಗಳಿಂದ ನಿರೂಪಿಸಲ್ಪಟ್ಟಿದ್ದು, ಇದಕ್ಕೆ ಕಾರಣಗಳು ಅನೇಕವಿದೆ. ಮುಖ್ಯವಾದ ಕಾರಣವೆಂದರೆ, ಈ ರೀತಿಯ ಮುಂಬಣಿ ಹಿಂಬಣಿಗಳಿಂದಾಗಿ ಭಿತ್ತಿಯ ದೃಢತೆ ಹೆಚ್ಚುತ್ತದೆ. ಅನ್ನುವುದಂತೂ ನಿಸ್ಸಂದೇಹವಾದ ಮಾತು. ಜೊತೆಗೆ ಈ ಹಿಂಬಣಿ ಮುಂಬಣಿಗಳಿಂದಾಗಿ ಹೊರಭಿತ್ತಿಯ ವಿಸ್ತೀರ್ಣ ಇಮ್ಮಡಿಯಾಗುತ್ತದೆ. ಇದರಿಂದಾಗಿ ಶಿಲ್ಪಿಗಳಿಗೆ ಹೆಚ್ಚು ಹೆಚ್ಚು ಶಿಲ್ಪಗಳನ್ನು ಕಂಡರಿಸುವುದರ ಮೂಲಕ ತನ್ನಲ್ಲಿರುವ ಕೌಶಲ್ಯವನ್ನು ಪ್ರದರ್ಶಿಸುವ ಅವಕಾಶ ಇಮ್ಮಡಿಸುವುದೇ ಅಲ್ಲದೆ ದೇವಾಲಯದ ವೈಭವವನ್ನು, ಹೆಚ್ಚಿಸಲು ಅನುಕೂಲವಾಗುತ್ತದೆ.[52] ಕಲಾಭಿಜ್ಞತೆಯಿಂದ ನೋಡುವುದಾದರೆ, ಈ ಅಂಶ ಬಹಳ ಮಹತ್ವವಾದುದು. ಏಕೆಂದರೆ ಹಿಂಬಣಿ ಮುಂಬಣಿ ಗೋಡೆಗಳಲ್ಲಿ ಕಂಡರಿಸಲ್ಪಟ್ಟಿರುವಂತಹ ಶಿಲ್ಪಗಳು ನೆರಳು ಬೆಳಕಿನ ತೊಳಲಾಟಕ್ಕೆ ಒಳಗಾಗುತ್ತವೆ. ಇದರಿಂದಾಗಿ ಈ ಶಿಲ್ಪಗಳ ಸೌಂದರ್ಯ, ಹಾವ-ಭಾವ ಮುಂತಾದವುಗಳು ಶಿಲ್ಪಿಯ ಉದ್ದೇಶಕ್ಕೆ ಅನುಗುಣವಾಗಿ ಪ್ರತಿಬಿಂಬಿತವಾಗುತ್ತದೆ. ಈ ರಚನಾತ್ಮಕವಾದ ಒಂದು ಅಂಶ ಹೊಯ್ಸಳ ಶಿಲ್ಪಿಗಳಲ್ಲಿ ಇದ್ದುದರಿಂದ ಪ್ರಾಯಶಃ ಅವರು ಈ ರೀತಿಯ ಅನೇಕ ಹಿಂಬಣಿ ಮುಂಬಣಿಗಳನ್ನು ತಮ್ಮ ಉದ್ದೇಶಕ್ಕೆ ಅನುಗುಣವಾಗಿ ಉಪಯೋಗಿಸಿಕೊಂಡು ಶಿಲ್ಪಗಳನ್ನು ಕಂಡರಿಸಿದ್ದಾರೆ ಎನ್ನಬಹುದು.

ದೇವಾಲಯ ಕಟ್ಟಡದ ಹೊರ ಅಂಚಿಗೆ ಸಮಾನಾಂತರವಾಗಿ ಜಗತಿಯ ಹೊರ ಅಂಚನ್ನೂ ಸಹ ಅವರು ನಿರ್ಮಿಸುತ್ತಿದ್ದರು. ಇದರಿಂದಾಗಿ ಜಗತಿ ಮತ್ತು ಮುಖ್ಯ ಕಟ್ಟಡಗಳ ತಳವಿನ್ಯಾಸ ಹೊಯ್ಸಳ ದೇವಾಲಯಗಳಲ್ಲಿ ಒಂದೇ ರೀತಿ ಕಾಣಬರುತ್ತದೆ.

**ಅಧಿಷ್ಠಾನ**

ಹೊಯ್ಸಳ ದೇವಾಲಯಗಳಲ್ಲಿ ಪ್ರಮುಖವಾಗಿ ಎರಡು ವಿಭಿನ್ನ ಮಾದರಿಯ ಅಧಿಷ್ಠಾನಗಳನ್ನು ಕಾಣುತ್ತೇವೆ. ಮೊದಲನೆಯದು ಶುದ್ಧ ಹೊಯ್ಸಳ ಶೈಲಿಯ ಅಧಿಷ್ಠಾನ ಎರಡನೆಯದು ವೈಭವೀಕರಿಸಿದ ದ್ರಾವಿಡ ಶೈಲಿಯ ಅಧಿಷ್ಠಾನ. ಶುದ್ಧ ಹೊಯ್ಸಳ ಶೈಲಿಯ ಅಧಿಷ್ಠಾನದಲ್ಲಿ ಸಾಧಾರಣವಾಗಿ ಐದರಿಂದ ಹತ್ತರವರೆಗೂ ದಿಂಡುಗಳಿರುತ್ತವೆ. ದ್ರಾವಿಡ ಶೈಲಿಯಲ್ಲಿ ಅಧಿಷ್ಠಾನದ ದಿಂಡುಗಳು ಹೊರ ರೂಪವನ್ನು ವಿವಿಧ ಆಕಾರವಾಗಿ ರೂಪಿಸುವ ಪದ್ಧತಿಯನ್ನು ನಾವು ಗಮನಿಸುತ್ತೇವೆ. ಆದರೆ ಹೊಯ್ಸಳ ಶೈಲಿಯಲ್ಲಿ ಪ್ರತಿಯೊಂದು ದಿಂಡು ಚೌಕಟ್ಟಾಗಿದ್ದು ಮಟ್ಟಸವಾದ ಮುಖವನ್ನು ಹೊಂದಿರುತ್ತವೆ. ಪ್ರತಿಯೊಂದು ದಿಂಡುಗಳ ಮಧ್ಯದಲ್ಲಿ ಬಹಳ ಕಿರಿದಾದ ಅಂತರವಿರುತ್ತದೆ. ದಿಂಡುಗಳ ಮಟ್ಟಸವಾದ ಮುಖಭಾಗವನ್ನು ವಿವಿಧ ರೀತಿಯ ಸಾಲು ಶಿಲ್ಪಗಳಿಂದ ಅಲಂಕರಣದ ಕೆತ್ತನೆಯಿಂದ ಅಲಂಕರಿಸಿರುತ್ತಾರೆ. ಈ ಅಲಂಕರಣೆಯಲ್ಲಿ ಸಾಧಾರಣವಾಗಿ ಸ್ಥೂಲವಾದ ಒಂದು ನಿಯಮವನ್ನು ಹೊಯ್ಸಳ ಶಿಲ್ಪಿಗಳು ಪರಿಪಾಲಿಸಿರುವುದನ್ನು ಕಾಣುತ್ತೇವೆ. ಅದೇಂದರೆ ಅತ್ಯಂತ ಕೆಳಗಿನ ಸಾಲು ಆನೆಯ ಸಾಲಿನ ಶಿಲ್ಪಗಳನ್ನು ಹೊಂದಿರುತ್ತದೆ. ಒಂದೇ ಗಾತ್ರದ ಆನೆಗಳು ಕೆಲವು ಭಾರಿ ಸವಾರರ ಸಹಿತ ವಿವಿಧ ಭಂಗಿಗಳಲ್ಲಿ ವಿವಿಧ ರೀತಿಯಲ್ಲಿ ವಿವಿಧ ಭಾಗಗಳಲ್ಲಿ ಮುನ್ನಡೆಯುತ್ತಾ ಇರುವುದನ್ನು ಶಿಲ್ಪಿಯು ಅತ್ಯಂತ ಮನೋಜ್ಞವಾಗಿ ಕಲಾತ್ಮಕವಾಗಿ ಇಲ್ಲಿ ಚಿತ್ರಿಸಿರುತ್ತಾನೆ. ದೇವಾಲಯದ ಸುತ್ತಲೂ ಈ ಆನೆಗಳ ಶಿಲ್ಪವನ್ನು ನಾವು ಕಾಣಬಹುದಾಗಿದೆ. ಅತ್ಯಂತ ಕೆಳಗಿನ ಸ್ತರದಲ್ಲಿ ಆನೆಯ ಶಿಲ್ಪಗಳನ್ನು ಕೂಡಿಸಿರುವುದನ್ನು ಅನೇಕರು ಈ ಕೆತ್ತನೆ ದೇವಾಲಯಕ್ಕೆ ನೀಡಿರುವ ಭದ್ರತೆಯನ್ನು ಶಕ್ತಿಯನ್ನೂ ಸಂಕೇತಿಸುತ್ತದೆ ಎಂದು ಅಭಿಪ್ರಾಯಪಡುತ್ತಾರೆ.

ಎರಡನೇ ಸಾಲಿನಲ್ಲಿ ಇದೇ ಲಕ್ಷಣಗಳನ್ನು ಗುಣಮಟ್ಟವನ್ನು ಹೊಂದಿರುವ ಕುದುರೆ ಸಾಲುಗಳನ್ನು ನಾವು ಕಾಣಬಹುದು. ಕುದುರೆಯ ಸಾಲು ಚಲನೆಯನ್ನು ನಿರೂಪಿಸುತ್ತದೆ ಎಂಬುದಾಗಿ ಕೆಲವರ ಅಭಿಮತ. ಕೆಳಗಿನಿಂದ ಮೂರನೇ ಸಾಲಿನಲ್ಲಿ ಸಾಧಾರಣವಾಗಿ ಬಳ್ಳಿ, ಸುರುಳಿ, ಹಂಸ, ವ್ಯಾಳ ಇವುಗಳಲ್ಲಿ ಯಾವುದಾದರೊಂದು ಚಿತ್ರಗಳ ಪಟ್ಟಿಕೆ ಇರುತ್ತದೆ. ಇದರ ಮೇಲ್ಭಾಗದಲ್ಲಿರುವ ಶಿಲ್ಪಗಳ ಸಾಲು ಧಾರ್ಮಿಕ ಮಹತ್ವವುಳ್ಳದ್ದಾಗಿರುತ್ತದೆ. ಇದರಲ್ಲಿ ರಾಮಾಯಣ, ಮಹಾಭಾರತ, ಭಾಗವತ, ಪಂಚತಂತ್ರ ಮುಂತಾದವುಗಳಿಗೆ ಸಂಬಂಧಿಸಿದ

ಪೌರಾಣಿಕ ಕಥೆಗಳ ಮುಖ್ಯ ಘಟನಾವಳಿಗಳನ್ನು ಕಾಲಾನುಕ್ರಮವಾಗಿ ಕೆತ್ತನೆ ಮಾಡಿರುತ್ತಾರೆ. ಶಿಲ್ಪಿಗಳು ಕೆಳಗಿನಿಂದ ನಾಲ್ಕನೆಯ ಪಟ್ಟಿಕೆಯನ್ನು ಈ ಪೌರಾಣಿಕ ಘಟನೆಗಳನ್ನು ನಿರೂಪಿಸುವುದಕ್ಕೆ ಆರಿಸಿರುವುದರಲ್ಲಿ ಒಂದು ಪ್ರಮುಖವಾದಂತಹ ಉದ್ದೇಶವು ಇದೆ. ಏಕೆಂದರೆ, ಈ ಎತ್ತರದಲ್ಲಿರುವ ಶಿಲ್ಪಗಳನ್ನು ಎಲ್ಲರೂ ನಿರಾಯಾಸವಾಗಿ ನೋಡುವುದಕ್ಕೆ ಅನುಕೂಲವಾಗಿರುತ್ತದೆ. ಇದರಿಂದಾಗಿ ಎಲ್ಲಾ ಹೊಯ್ಸಳ ದೇವಾಲಯಗಳಲ್ಲಿ ಪೌರಾಣಿಕ ಚಿತ್ರಪಟ್ಟಿಕೆಗಳು ಸ್ವಲ್ಪ ಮೇಲಿನ ದಿಂಡುಗಳಲ್ಲೇ ಕಾಣಬರುತ್ತದೆ. ಈ ಶಿಲ್ಪ ಕಥೆಗಳು ಕೇವಲ ಪೌರಾಣಿಕ ಮಹತ್ವವನ್ನು ಮಾತ್ರ ಹೊಂದಿರದೆ, ಸಮಕಾಲೀನ ನಂಬಿಕೆಗಳ ಆಚಾರ, ವಿಚಾರಗಳ, ಧಾರ್ಮಿಕ ಪರಂಪರೆಯ ಮತ್ತು ಸಾಮಾಜಿಕವಾದ ಅನೇಕ ವಿಚಾರಗಳಿಗೆ ಕೈಗನ್ನಡಿಯಾಗಿ ನಿರೂಪಿತವಾಗಿದೆ. ಇಲ್ಲಿರುವ ಎಲ್ಲಾ ಶಿಲ್ಪಗಳು ಉಬ್ಬುಕೆತ್ತನೆಯಲ್ಲಿ ಇರುತ್ತವೆ. ಇದರ ಮೇಲ್ಭಾಗದ ಪಟ್ಟಿಕೆಗಳಲ್ಲಿ ದೇವಸ್ಥಾನದ ಅಧಿಷ್ಠಾನ ಎತ್ತರಕ್ಕನುಗುಣವಾಗಿ ಒಂದರಿಂದ ಮೂರು ಪಟ್ಟು ಶಿಲ್ಪಗಳು ಇದ್ದು, ಇವುಗಳಲ್ಲಿ ಬಳ್ಳಿ, ಸುರಳಿ, ವ್ಯಾಳ, ಹಂಸ ಇತ್ಯಾದಿಗಳ ಒಂದೊಂದು ಪಟ್ಟಿಕೆಗಳು ಕಂಡು ಬರುವುದುಂಟು ಅಥವಾ ಇವುಗಳಲ್ಲದೆ ಕೇವಲ ಸಿಂಹ, ಅಶ್ವ, ಪೌರಾಣಿಕ, ಬಳ್ಳಿ ಹಂಸ ಪಟ್ಟಿಕೆಗಳ ಅಧಿಷ್ಠಾನಗಳುಂಟು. ಒಟ್ಟಿನಲ್ಲಿ ಹೇಳುವುದಾದರೆ ಈ ಎಲ್ಲಾ ಮುಖ್ಯ ಪಟ್ಟಿಕೆಗಳನ್ನು ಕಟ್ಟಡಗಳ ವಿನ್ಯಾಸಕ್ಕೆ ಅನುಗುಣವಾಗಿ ಶಿಲ್ಪಿಗಳು ನಿರ್ಧರಿಸುತ್ತಿದ್ದರು. ಆದರೆ ಒಂದು ನಿಯಮ ಮಾತ್ರ ಅಂದರೆ ಕೆಳಗಡೆ ಆನೆ, ಕುದುರೆಗಳ ಸಾಲನ್ನು ಮತ್ತು ಕಣ್ಣಿಗೆ ನಿರಾಯಾಸವಾಗಿ ಕಾಣುವ ಭಾಗದಲ್ಲಿ ರಾಮಾಯಣ, ಮಹಾಭಾರತದ ಕಥೆಗಳನ್ನಾಧರಿಸಿ ಪೌರಾಣಿಕ ಪಟ್ಟಿಕೆಗಳನ್ನು ಇಡುವ ಪದ್ಧತಿಯನ್ನು ಮಾತ್ರ ಚಾಚು ತಪ್ಪದಂತೆ ಪಾಲಿಸುತ್ತಿದ್ದರು. ಸಾಮಾನ್ಯವಾಗಿ ಪ್ರತಿಯೊಂದು ಪಟ್ಟಿಕೆಗಳ ಎತ್ತರವೂ ಸುಮಾರು ೨೦ ರಿಂದ ೩೦ ಸೆಂ.ಮೀ. ಗಳವರೆಗೆ ಇರುತ್ತದೆ ಮತ್ತು ಎಲ್ಲಾ ಪಟ್ಟಿಕೆಗಳು ಒಂದೇ ರೀತಿಯಾಗಿ ಸಾಮಾನ್ಯವಾಗಿ ದೇವಾಲಯದ ಸುತ್ತಲೂ ಕಂಡುಬರುತ್ತವೆ.

ಎರಡನೇ ರೀತಿಯ ಅಧಿಷ್ಠಾನವು ಹೊಯ್ಸಳ ಶೈಲಿಯಲ್ಲಿ ಸಾಕಷ್ಟು ಕಂಡುಬರುತ್ತದೆ. ಇದು ದ್ರಾವಿಡ ರೀತಿಯ ಅಧಿಷ್ಠಾನವನ್ನು ಸಾಂಕೇತಿಕವಾಗಿ ಮತ್ತು ಹೆಚ್ಚು ವೈಭವೀಕೃತವಾಗಿ ನಿರೂಪಿಸುತ್ತದೆ. ದ್ರಾವಿಡ ರೀತಿಯ ಅಧಿಷ್ಠಾನದಲ್ಲಿ ಅತ್ಯಂತ ಕೆಳಗಿನಿಂದ ಮೇಲಕ್ಕೆ ನೋಡುವುದಾದರೆ ಉಪಾನ, ಜಗತಿ, ಕುಮುದ, ಕಂಠ, ಕಪೋತ ಮತ್ತು ಪ್ರತಿ, ಹಾರ, ಈ ರೀತಿಯ ದಿಂಡುಗಳು ನಮಗೆ ಕಂಡುಬರುತ್ತವೆ. ಹೊಯ್ಸಳ ದೇವಾಲಯಗಳಲ್ಲಿ ಈ ರೀತಿಯ ಅಧಿಷ್ಠಾನದ ದಿಂಡುಗಳನ್ನು ಸ್ವಲ್ಪ ವ್ಯತ್ಯಾಸ ಮಾಡಿ ಹೆಚ್ಚು ಅಲಂಕೃತವಾಗಿ ಕಂಡರಿಸಿರುವರು. ಉಪಾನ ಮತ್ತು ಜಗತಿಗಳನ್ನು ಹಾಗೆಯೇ ಉಳಿಸಿಕೊಂಡರು ಎನ್ನಬಹುದು. ಆದರೆ ಇವುಗಳ ಮೇಲಿನ ಕೆತ್ತನೆ ಸ್ವರೂಪ ಹೆಚ್ಚು ವಿವರಣಾತ್ಮಕವಾಗಿ ಕಾಣಬರುತ್ತದೆ. ಕುಮುದವನ್ನು ದುಂಡಾಗಿ

ನಿರೂಪಿಸಿದರೆ ಮೂರು ಮುಖ ಅಥವಾ ಅದೇ ಆಕಾರದ ತೆಳ್ಳಗೆ ಚೂಪಾಗಿರುವ ದಿಂಡನ್ನಾಗಿ ಮಾಡಿರುತ್ತಾರೆ. ಕಂಠದ ಭಾಗವು ಹೆಚ್ಚು ಎತ್ತರವಾಗಿರುವುದಿಲ್ಲ. ಕಪೋತದ ಭಾಗವು ದ್ರಾವಿಡ ಮಾದರಿಯಲ್ಲಿರುವುದಿಲ್ಲ. ಇದಕ್ಕೆ ಬದಲಾಗಿ ದಂತ ಪಂಕ್ತಿಯ ರೀತಿಯ ಕೆತ್ತನೆಗಳನ್ನು ಹೊಂದಿರುತ್ತದೆ. ಇಲ್ಲಿಯ ದಂತಗಳಲ್ಲಿ ಪ್ರತಿಯೊಂದು ಮಟ್ಟಸವಾಗಿರುತ್ತವೆ ಅಥವಾ ಸಣ್ಣ ಸಣ್ಣ ನೆಗೆಯುತ್ತಿರುವ ವ್ಯಾಳ, ಸಿಂಹಗಳ ಕೆತ್ತನೆಗಳನ್ನು ಹೊಂದಿರುತ್ತದೆ. ಈ ರೀತಿಯ ಕೆತ್ತನೆಗಳಲ್ಲಿ ಇತರ ವೈವಿಧ್ಯತೆಗಳೂ ಉಂಟು. ಸಾಮಾನ್ಯವಾಗಿ ಅದೇ ರೀತಿಯ ದಿಂಡು. ಈ ರೀತಿಯ ಅಧಿಷ್ಠಾನವನ್ನು ಸಾಧಾರಣವಾಗಿ ವೈಭವವಾಗಿ ನಿರ್ಮಿಸಲ್ಪಟ್ಟಿರುವಂತಹ ಹೊಯ್ಸಳ ದೇವಾಲಯಗಳಲ್ಲಿಯೂ ಸಹ ನಾವು ಕಾಣುತ್ತೇವೆ. ಈ ಮೇಲೆ ಹೇಳಲಾಗಿರುವ ಎರಡು ರೀತಿಯ ಅಧಿಷ್ಠಾನಗಳಲ್ಲದೆ ಸಾಧಾರಣ ದ್ರಾವಿಡ ರೀತಿಯ ಅಧಿಷ್ಠಾನಗಳು ಇತರೆ ಸಣ್ಣ ಪುಟ್ಟ ಅಥವಾ ಹೊಯ್ಸಳ ದೇವಾಲಯಗಳಲ್ಲಿ ಕಾಣಬರುತ್ತದೆ.

**ಭಿತ್ತಿ;–** ದೇವಾಲಯದ ಹೊರಗೋಡೆಯ ಒಂದು ಲಕ್ಷಣವನ್ನು ಅಂದರೆ ಅನೇಕ ಹಿಂಬೆಣಿ ಮತ್ತು ಮುಂಬೆಣಿಗಳನ್ನು ಹೊಂದಿರುವ ಲಕ್ಷಣಗಳನ್ನು ನಾವು ಈ ಹಿಂದೆ ವಿವರಿಸಿದ್ದೇವೆ. ಈ ಮಾದರಿಯ ಹಿಂಬೆಣಿ ಮುಂಬೆಣಿಗಳು ಎಲ್ಲಾ ದೇವಾಲಯಗಳಲ್ಲಿ ಇರಬೇಕೆಂಬ ನಿಯಮವೇನು ಇಲ್ಲ. ಕೆಲವು ಸಾಧಾರಣವಾದ ಹೊಯ್ಸಳ ದೇವಾಲಯಗಳಲ್ಲಿ ಮತ್ತು ಅನೇಕ ಪ್ರಮುಖ ಜೈನ ದೇವಾಲಯಗಳಲ್ಲಿ ನೇರವಾದ ಗೋಡೆಗಳು ಇರುವುದುಂಟು. ಈ ರೀತಿಯ ಲಕ್ಷಣಗಳನ್ನು ಹೊಂದಿರುವ ಗೋಡೆಗಳು ಸಹ ಮುಖ್ಯವಾಗಿ ದ್ರಾವಿಡ ಶೈಲಿಯ ಮೂಲವನ್ನೇ ಹೊಂದಿವೆ. ಸೂಕ್ಷ್ಮವಾಗಿ ಅವಲೋಕಿಸಿದಾಗ ಇವು ದ್ರಾವಿಡ ಶೈಲಿಯ ಗೋಡೆಗಳಿಗಿಂತೇನೂ ಭಿನ್ನವಲ್ಲ. ಆದರೆ ಇವುಗಳಲ್ಲಿ ಹೆಚ್ಚು ವಾಸ್ತು ಮತ್ತು ಶಿಲ್ಪಗಳ ಅಲಂಕರಣವಿರುವುದರಿಂದ ಸಾಧಾರಣ ನೋಟಕ್ಕೆ ಇವು ವಿಭಿನ್ನವಾಗಿ ಕಾಣುತ್ತವೆ. ಮಟ್ಟಸವಾದ ಗೋಡೆಯಲ್ಲಿ ಅಥವಾ ಹಿಂಬೆಣಿ ಮುಂಬೆಣಿಗಳನ್ನುಳ್ಳ ಗೋಡೆಯ ಮುಖ್ಯ ಭಾಗವನ್ನು ಹತ್ತಿರ ನಿಲ್ಲಿಸಿರುವ ಸ್ತಂಭಿಕೆಗಳಿಂದ ಅಲಂಕರಿಸಲಾಗಿರುತ್ತದೆ. ಈ ಸ್ತಂಭಿಕೆಗಳ ನಡುವೆ ಕೋಷ್ಠಗಳು ಮತ್ತು ಕೋಷ್ಠ ಶಿಖರಗಳು ಸಾಲಾಗಿ ಇರುತ್ತವೆ. ಪ್ರತಿಯೊಂದು ಕೋಷ್ಠವು ಬಹಳ ಇಕ್ಕಟ್ಟಾಗಿದ್ದು, ನೀಳವಾಗಿ ಎತ್ತರವಾಗಿರುತ್ತವೆ. ಕೋಷ್ಠ ಶಿಖರದ ತುದಿಗಳು ಭಿತ್ತಿಯ ಮೇಲೆ ತುದಿಯಲ್ಲಿ ಕಾಣುತ್ತವೆ.[53]

ಜೈನ ದೇವಾಲಯಗಳಲ್ಲಿ ಸಾಮಾನ್ಯವಾಗಿ ಭಿತ್ತಿಗಳಲ್ಲಿ ಶಿಲ್ಪಗಳಿರುವುದಿಲ್ಲ. ಆದರೆ ಹಿಂದೂ ದೇವಾಲಯಗಳಲ್ಲಿ ಪ್ರತಿಯೊಂದು ಕೋಷ್ಠದ ಮುಂದೆಯೂ ಅತಿ ಉಬ್ಬು ಕೆತ್ತನೆಯನ್ನು ಪಕ್ಕಪಕ್ಕದಲ್ಲಿ ಶಿಲ್ಪಗಳನ್ನು ಕೋಷ್ಠಗಳಿಂದ ಹೊರಗೆ ಚಾಚಿರುವಂತೆ ಕೆತ್ತನೆ ಮಾಡಿರುತ್ತಾರೆ. ಈ ಕೋಷ್ಠಗಳು ಸ್ತಂಭಿಕೆಗಳಷ್ಟೇ ಆಳವಾಗಿರುವುದರಿಂದ ಪ್ರತಿಯೊಂದು ಶಿಲ್ಪವು ಗೋಡೆಯ

ಮಟ್ಟದಿಂದ ಮುಂದಕ್ಕೆ ಚಾಚಿರುತ್ತದೆ. ಒಂದೊಂದು ಮುಖ್ಯ ಶಿಲ್ಪಗಳಿಗೂ ಇಕ್ಕೆಲಗಳಲ್ಲಿ ಅವರ ಅನುಚರರು, ಸೇವಕರು, ವಾಹನ ದೇವತೆಗಳು, ಇತ್ಯಾದಿಗಳ ಕೆತ್ತನೆಯನ್ನು ಕಾಣಬಹುದಾಗಿದೆ. ಕೋಷ್ಠಗಳು ಮತ್ತು ಕೋಷ್ಠ ಶಿಲ್ಪಗಳು ದ್ರಾವಿಡ ಶೈಲಿಯ ಲಕ್ಷಣ ಎಂಬುದು ತಿಳಿದಿರುವ ವಿಚಾರ. ಈ ಲಕ್ಷಣವನ್ನು ವೈಭವೀಕರಿಸಿ ಮತ್ತು ಉತ್ಪ್ರೇಕ್ಷಿಸಿ ಹೊಯ್ಸಳ ಶಿಲ್ಪಗಳು ಅತಿ ಹೆಚ್ಚು ಕೋಷ್ಠಗಳನ್ನು ಅತಿ ಉಬ್ಬುಶಿಲ್ಪಗಳನ್ನು ಅತ್ಯಂತ ಸೂಕ್ಷ್ಮವಾಗಿ ಕೆತ್ತನೆ ಮಾಡಿ ಇಡೀ ದೇವಾಲಯದ ವಾಸ್ತು ಅಲಂಕರಣವನ್ನೇ ಮಾಡಿದ್ದಾರೆ. ಇಷ್ಟಲ್ಲದೆ ಪ್ರತಿಯೊಂದು ಶಿಲ್ಪದ ತಲೆಯ ಮೇಲ್ಭಾಗದಲ್ಲಿ ಚೌತಿ ಚಂದ್ರಾಕೃತಿಯ ಲತಾಕುಂಜಗಳನ್ನು ಕೆತ್ತನೆ ಮಾಡಿ ಭಿತ್ತಿ ಶಿಲ್ಪಗಳಿಗೆ ಹೊಸ ಸ್ವರೂಪವನ್ನು ನೀಡಿದ್ದಾರೆ. ಈ ಲತಾಕುಂಜಗಳ ಮೇಲ್ಗಡೆ ಸಣ್ಣದಾದ ಒಂದು ಕಪೋತವಿರುತ್ತದೆ. ಇದು ಭಿತ್ತಿಯ ಮಧ್ಯಭಾಗದಲ್ಲಿ ದೇವಾಲಯದ ಸುತ್ತಲೂ ಒಂದೇ ಮಟ್ಟದಲ್ಲಿ ಕಾಣುವಂತಹ ಕಪೋತ, ಶಿಲ್ಪಗಳಿಗೆ ಮಾತ್ರ ಮಳೆ ಬಿಸಿಲಿನಿಂದ ಆಸರೆಯನ್ನು ಒದಗಿಸುವ ಕೆಲಸ ಇದರದ್ದಾಗಿದೆ. ಇದೂ ಸಹ ಖಂಡ ಭಾಗದಲ್ಲಿ ಉದ್ದ ಮಾಡಿದ ಇಂಗ್ಲೀಷ್ 'ಖ ಆಕಾರದಲ್ಲಿ ಇದ್ದು ಅತಿ ಸುಂದರ ಸೂಕ್ಷ್ಮ ಕೆತ್ತನೆಗಳಿಂದ ಕೂಡಿರುತ್ತದೆ.

ಈ ಕಪೋತದ ಮೇಲ್ಭಾಗದಲ್ಲಿ ಸಾಧಾರಣವಾಗಿ ಕೇವಲ ವಾಸ್ತು ಅಲಂಕರಣವನ್ನು ಹೊಂದಿರುವ ಭಿತ್ತಿ ಭಾಗವನ್ನು ನಾವು ಕಾಣುತ್ತೇವೆ. ಈ ಸ್ಥಳದಲ್ಲಿ ಕೆಳಗೋಡೆಯ ಸ್ತಂಭಿಕೆಗಳು ಕಪೋತದಿಂದ ಮೇಲಕ್ಕೆ ಚಿಮ್ಮಿ ಅವುಗಳ ಮೇಲ್ಗಡೆ ಸಾಲಾಗಿ ಹತ್ತಿರ ಹತ್ತಿರವಾಗಿ ಕೋಷ್ಠ ಶಿಖರಗಳಿರುತ್ತವೆ ಮತ್ತು ಅಲಂಕರಣೆಯ ದೃಷ್ಟಿಯಲ್ಲಿ ಭಿತ್ತಿಯ ಕೆಳಭಾಗದ ವೈಭವಕ್ಕೆ ವಿರುದ್ಧವಾಗಿ ಈ ಭಾಗ ಸರಳ ಸಾಧಾರಣವಾಗಿ ಕಾಣುತ್ತದೆ. ಭಿತ್ತಿಯ ಮೇಲ್ಭಾಗದಲ್ಲಿ ಮತ್ತೊಂದು ಎಳೆದ ಇಂಗ್ಲೀಷ್‌ನ 'ಖ ಅಕ್ಷರಾಕಾರದ ಕಪೋತವಿರುತ್ತದೆ.

ಶುದ್ಧ ಹೊಯ್ಸಳ ಶೈಲಿಯಲ್ಲಿ ಇರುವ ದೇವಾಲಯಗಳಲ್ಲಿ ಭಿತ್ತಿ ಶಿಲ್ಪಗಳು ವಿಪರೀತವಾಗಿ ಕಂಡುಬರುತ್ತವೆ. ಆದರೆ ಎಲ್ಲಾ ದೇವಾಲಯಗಳಲ್ಲೂ ಈ ರೀತಿಯ ಶಿಲ್ಪಗಳು ಇರಲೇಬೇಕೆಂಬ ನಿಯಮವೇನು ಇಲ್ಲ. ಜೈನ ದೇವಾಲಯಗಳಲ್ಲಿ ಒಂದೇ ಒಂದು ಅಪವಾದವನ್ನು ಬಿಟ್ಟರೆ, ಇನ್ನೆಲ್ಲ ಬಸದಿಗಳು ನಿರಾಲಂಕೃತವಾದ ಗೋಡೆಯನ್ನು ಹೊಂದಿರುವಂತಹವುಗಳು. ಹಿಂದೂ ದೇವಾಲಯಗಳಲ್ಲೂ ಸಹ ಈ ನಿಯಮ ಅನ್ವಯಿಸುವುದುಂಟು. ಭಿತ್ತಿ ಶಿಲ್ಪಗಳ ಗಾತ್ರದಲ್ಲಿ ಒಂದೇ ನಿಯಮವನ್ನು ಪಾಲಿಸಲಾಗಿಲ್ಲ. ಎರಡು ಅಡಿಯಿಂದ ಹಿಡಿದು ನಾಲ್ಕು ಅಡಿಗಳವರೆಗೂ ಈ ಶಿಲ್ಪಗಳ ಎತ್ತರದಲ್ಲಿ ವ್ಯತ್ಯಾಸವಿರುತ್ತದೆ. ಮಧ್ಯದ ಕಪೋತವು ಸಹ ಇರಬಹುದು ಅಥವಾ ಇಲ್ಲದಿರಲೂಬಹುದು. ಈ ರೀತಿಯಲ್ಲಿ ಹೊಯ್ಸಳ ಶಿಲ್ಪಗಳು ಭಿತ್ತಿಯ ನಿರೂಪಣೆಯಲ್ಲಿ ಅನೇಕ

ಮಾರ್ಪಾಡುಗಳನ್ನು ಅವಶ್ಯಕತೆಗೆ ಅನುಗುಣವಾಗಿ ಮಾಡಿಕೊಂಡಿರುವುದನ್ನು ನಾವು ಕಾಣಬಹುದು.

**ಹಾರ**:- ದ್ರಾವಿಡ ವಾಸ್ತುಶೈಲಿಯಲ್ಲಿ ಕಾಣಬರುವಂತಹ ಶಾಲಾ, ಕೂಟ, ಪಂಜರ ರೀತಿಯ ಸಣ್ಣ ಸಣ್ಣ ಮಂಟಪಗಳ ಹಾರವನ್ನು ಹೊಂದಿರುವ ಕೈಪಿಡಿ ಗೋಡೆ ಹೊಯ್ಸಳ ಶೈಲಿಯಲ್ಲಿ ಕಂಡು ಬರುವುದಿಲ್ಲ. ಬದಲಾಗಿ ಅಲಂಕಾರಿಕ ದಿಂಡುಗಳು, ಅಲಂಕೃತ ಅಥವಾ ನಿರಾಲಂಕೃತವಾದಂತೆ ಪಂಕ್ತಿ ಮತ್ತು ಮಧ್ಯೆ ಮಧ್ಯೆ ವೈಭವೀಕರಿಸಿದ ತಾವರೆ ಮೊಗ್ಗಿನಾಕಾರದ ಕೂಡುಗಳು ತುದಿಯಲ್ಲಿ ಕೀರ್ತಿಮುಖಗಳು ಮತ್ತು ಕೂಡುಗಳಲ್ಲಿ ಸಣ್ಣ ಸಣ್ಣ ಶಿಲ್ಪಗಳು ಇತ್ಯಾದಿಗಳನ್ನು ಹೊಂದಿರುವ ಹಾರವನ್ನು ಅಥವಾ ಕೈಪಿಡಿ ಗೋಡೆಯನ್ನು ಶುದ್ಧ ಹೊಯ್ಸಳ ಶೈಲಿಯಲ್ಲಿ ನಾವು ಕಾಣುತ್ತೇವೆ.

**ವಿಮಾನ**:- ಶುದ್ಧ ಹೊಯ್ಸಳ ಶೈಲಿಯ ವಿಮಾನವನ್ನು 'ವೇಸರ ಶೈಲಿ'ಯ ವಿಮಾನವೆಂದು ನಾವು ಗುರುತಿಸುತ್ತೇವೆ. ಸಂಸ್ಕೃತದಲ್ಲಿ ವೇಸರ ಎಂದರೆ 'ಹೇಸರ-ಗತ್ತೆ' ಇದೊಂದು ಮಿಶ್ರತಳಿ ಹಾಗೆಯೇ ವೇಸರ ಶೈಲಿ ಎಂಬುದು ಒಂದು 'ಸಮ್ಮಿಶ್ರ ಶೈಲಿ' ನಾಗರ ಮತ್ತು ದ್ರಾವಿಡ ವಾಸ್ತು ಶೈಲಿಗಳ ಲಕ್ಷಣಗಳನ್ನು ಮೈಗೂಡಿಸಿಕೊಂಡು ಬೆಳೆದು ಬಂದಂತಹ ಒಂದು ಪ್ರತ್ಯೇಕ ಶೈಲಿ ಶುದ್ಧ ಹೊಯ್ಸಳ ದೇವಾಲಯದ ವಿಮಾನ ಭಾಗದಲ್ಲಿ ಈ ಲಕ್ಷಣಗಳನ್ನು ನಾವು ಕಾಣುತ್ತೇವೆ. ನಾಗರ ಶೈಲಿಯ ದೇವಾಲಯಗಳಲ್ಲಿ ದೇವಾಲಯದ ವಿಮಾನದ ತಳವಿನ್ಯಾಸದಲ್ಲಿ ಹತ್ತಿರ ಹತ್ತಿರವಾದ ಅನೇಕ 'ಪಗಗಳು' ಕಾಣಬರುತ್ತವೆ. ಪಗಗಳು ಎಂದರೆ ಹಿಂಬಣಿ ಮತ್ತು ಮುಂಬೆಣಿಗಳು. ಈ ಪಗಗಳು ಅದೇ ಆಕಾರದಲ್ಲಿ ಲಂಬ ದಿಂಡಿನಂತೆ ವಿಮಾನ ತುದಿಯವರೆವಿಗೂ ಇರುತ್ತದೆ. ಶಿಖರದ ಯಾವುದೇ ಭಾಗದ ಖಂಡ ನೋಟವನ್ನು ನೋಡಿದಾಗ ತಳವಿನ್ಯಾಸದ ಎಲ್ಲಾ ಕೋನಗಳು ಇಲ್ಲಿ ಕಾಣುತ್ತವೆ. ಮೇಲೆ ಹೋಗುತ್ತಾ ಈ ಎಲ್ಲಾ ದಿಂಡುಗಳೂ ಕ್ರಮವಾಗಿ ಒಳಕ್ಕೆ ಬಾಗುತ್ತವೆ. ನೇರವಾದ, ಎತ್ತರವಾದ ಈ ಸಮನಾಂತರ ದಿಂಡುಗಳಿಂದಾಗಿ ನಾಗರ ವಿಮಾನಗಳಲ್ಲಿ ಉದ್ದುದ್ದ ದಿಂಡಿನ ಪ್ರಾಬಲ್ಯ, ಪ್ರಭಾವ ಹೆಚ್ಚು ಪ್ರಧಾನವಾಗಿ ಕಾಣುತ್ತದೆ ಮತ್ತು ಸಣ್ಣ ಸಣ್ಣ ಅಡ್ಡ ದಿಂಡುಗಳು ಗೌಣವಾಗುತ್ತದೆ.[54]

ಈ ಮೇಲೆ ಹೇಳಲಾದ ಲಕ್ಷಣಗಳು ಹೊಯ್ಸಳ ಶೈಲಿಯ ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿರುವ, ವಿಮಾನಗಳಲ್ಲಿ ಮಾತ್ರ ಕಾಣಬರುತ್ತವೆ. ನಕ್ಷತ್ರಾಕಾರದ ತಳವಿನ್ಯಾಸದ ಎಲ್ಲಾ ಮೂಲೆಗಳು ಅದೇ ಆಕಾರದಲ್ಲಿ ನೇರವಾಗಿ ಮೇಲೇರಿ ಕ್ರಮೇಣವಾಗಿ ಒಳಕ್ಕೆ ಬಾಗುತ್ತದೆ. ಇದರಿಂದಾಗಿ ಹೊಯ್ಸಳ ವಿಮಾನಗಳು ಅರ್ಧ ಮುಚ್ಚಿದ ಛತ್ರಿಯಾಕಾರದಲ್ಲಿ ಕಾಣುತ್ತವೆ. ಇದು ನಾಗರ ಶೈಲಿಯ ಲಕ್ಷಣವಾದರೆ, ದ್ರಾವಿಡ ಶೈಲಿಯ ಲಕ್ಷಣಗಳನ್ನು

ಗಮನಿಸಿದಾಗ ವಿಮಾನವು ಅನೇಕ ಹಂತಗಳನ್ನು ಹೊಂದಿರಬೇಕು. ಪ್ರತಿಯೊಂದು ಹಂತವು ಅದರ ಕೆಳಗಿನ ಹಂತದ ಸಂಕ್ಷಿಪ್ತ ಪ್ರತಿರೂಪವಾಗಿರಬೇಕೆಂಬ ಲಕ್ಷಣಗಳು ಹೊಯ್ಸಳ ವಿಮಾನಗಳಲ್ಲಿ ಕಾಣಬರುತ್ತವೆ. ವಿಮಾನವು ನಕ್ಷತ್ರಾಕಾರದ ತಳವಿನ್ಯಾಸದಲ್ಲೇ ಹಂತಹಂತವಾಗಿ ಮೇಲೇರುತ್ತವೆ. ಹಂತಗಳು ಬಹಳ ಕಿರಿದಾಗಿರುತ್ತದೆ. ಪ್ರತಿಯೊಂದು ಹಂತವು ಅದರ ಕೆಳಗಿನ ಹಂತದ ಸಂಕ್ಷಿಪ್ತ ಪ್ರತಿರೂಪವಾಗಿರುತ್ತದೆ ಮತ್ತು ವಿಮಾನದ ಮುಂದೆ ಸಣ್ಣದಾದ ಸುಖನಾಸವೂ ಇರುತ್ತದೆ. ಇವುಗಳಿಂದಾಗಿ ದ್ರಾವಿಡ ಶೈಲಿಯ ವಿಮಾನದ ಲಕ್ಷಣಗಳು ಹೊಯ್ಸಳ ಶೈಲಿಯಲ್ಲಿ ನಿರೂಪಿತವಾದವುಗಳಾಗಿವೆ.

ವಿಮಾನದ ತುದಿಯಲ್ಲಿರುವ ಶಿಖರವು ನಾಗರಶೈಲಿಯ ಅಮಲಕದಂತೆ ಚಪ್ಪಟೆಯಾಗಿಯೂ ಇರುವುದಿಲ್ಲ ಮತ್ತು ದ್ರಾವಿಡ ಶೈಲಿಯ ಎತ್ತರವಾದ ಮೇಲೆ ಗೊಮ್ಮಟಾಕಾರವಾಗಿರುವ ಶಿಖರವು ಆಗಿರುವುದಿಲ್ಲ. ಇವುಗಳೆರಡಕ್ಕೂ ಮಧ್ಯದಲ್ಲಿರುವಂತೆ, ಅಗಲವಾದ ಮಗುಚಿದ ಕಮಲದ ಆಕಾರದಲ್ಲಿ ಇರುತ್ತದೆ. ಇದರ ಮೇಲ್ಭಾಗದಲ್ಲಿ ಸ್ತೂಫಿಯನ್ನು ಕಾಣುತ್ತೇವೆ.

ಈ ಎರಡೂ ಶೈಲಿಯ ಲಕ್ಷಣಗಳ ಸಮ್ಮಿಶ್ರಣದಿಂದಾಗಿ ಹೊಯ್ಸಳ ಶೈಲಿಯನ್ನು ವೇಸರ ಶೈಲಿ ಎಂದು ಕರೆಯುತ್ತಾರೆ. ಆದರೆ ವೇಸರ ಶೈಲಿಗೆ ಇರಬೇಕಾದ ಶಾಸ್ತ್ರೋಕ್ತವಾದ ಮತ್ತೊಂದು ಮುಖ್ಯವಾದ ಲಕ್ಷಣವೆಂದರೆ ಇದು ಗಜಪುಷ್ಠಾಕಾರವಾಗಿರಬೇಕು (ಗಜಪೃಷ್ಠಾವತ್) ದೇವಾಲಯದ ಹಿಂಭಾಗವು ಆನೆಯ ಹಿಂಭಾಗದಂತೆ ಅರ್ಧ ವರ್ತುಲಾಕಾರದ ತಳವಿನ್ಯಾಸವನ್ನು ಮತ್ತು ಏರುವಿನ್ಯಾಸವು ಹಿಂಭಾಗದಲ್ಲಿ ಅರ್ಧ ಕಮಾನಿನಾಕಾರವಾಗಿಯೂ ಇದ್ದು, ಆನೆಯ ಹಿಂಭಾಗದಂತೆ ಕಾಣಬೇಕು. ಇದು ಶಾಸ್ತ್ರೋಕ್ತವಾದ ನಿಯಮ, ಹೊಯ್ಸಳರ ದೇವಾಲಯಗಳ ತಳವಿನ್ಯಾಸವು ಅನೇಕ ಮೂಲೆಗಳು ನಕ್ಷತ್ರಾಕಾರದ ರೀತಿ ಇರುವುದರಿಂದ ತಳವಿನ್ಯಾಸದ ಹಿಂಭಾಗದ ವಲಯವು ಅರ್ಧ ವೃತ್ತಾಕಾರವಾಗಿಯೇ ಕಾಣಬರುತ್ತದೆ. ಏರುವಿನ್ಯಾಸದಲ್ಲಿ ನಕ್ಷತ್ರಾಕಾರದ ತಳವಿನ್ಯಾಸವು ಅದೇ ರೀತಿಯಾಗಿ ಮುಂದುವರೆದು ಶಿಖರದ ಎಲ್ಲಾ ಮೂಲೆಗಳು ಒಳಕ್ಕೆ ಬಾಗಿರುವುದರಿಂದ ಏರುವಿನ್ಯಾಸದಲ್ಲಿ ಅರ್ಧ ಕಮಾನಿನ ಆಕೃತಿ ಕಂಡುಬಂದು ಶುದ್ಧ ಹೊಯ್ಸಳ ದೇವಾಲಯಗಳ ಹಿಂಭಾಗ ಗಜಪೃಷ್ಠಾಕಾರವಾಗಿ ಕಾಣುತ್ತವೆ. ಈ ಎಲ್ಲಾ ಲಕ್ಷಣಗಳಿಂದಾಗಿ ಹೊಯ್ಸಳ ದೇವಾಲಯದ ಶೈಲಿಯನ್ನು ವೇಸರ ಶೈಲಿ ಎಂದು ನಾವು ಪ್ರತ್ಯೇಕವಾಗಿ ಗುರುತಿಸುತ್ತೇವೆ.

**ದ್ವಾರಬಂಧಗಳು**

ಹೊಯ್ಸಳ ದೇವಾಲಯಗಳಲ್ಲಿ ಕಂಡುಬರುವ ದ್ವಾರಬಂಧಗಳು ದೇವಾಲಯದ ಆಕರ್ಷಕ ಭಾಗಗಳಲ್ಲಿ ಒಂದಾಗಿದೆ. ದ್ವಾರಬಂಧ ಶಾಖೆಗಳು ಎಷ್ಟಿರಬೇಕೆಂಬ ನಿಯಮವೇನು ಇಲ್ಲ. ಆದರೆ ಅವುಗಳ ಸಂಖ್ಯೆ ಎಷ್ಟೇ ಇರಲಿ ಒಂದೊಂದು ಶಾಖೆಯು ಅದರ ಅತ್ಯಂತ ಸೂಕ್ಷ್ಮ ಕೆತ್ತನೆ ವಿವರಗಳಿಗೆ ಅಲಂಕರಣಗಳಿಗೆ ಮತ್ತು ವೈವಿಧ್ಯಕ್ಕೆ ಗಮನಾರ್ಹವಾದುದು. ಒಂದೊಂದು ಪಟ್ಟಿಯನ್ನು ಅತ್ಯಂತ ಸೂಕ್ಷ್ಮವಾಗಿ ಬಿಡಿಸಿ ಸಣ್ಣ ಕಡ್ಡಿ ಅಥವಾ ದಾರವನ್ನು ಹಿಂಭಾಗದಲ್ಲಿ ಸರಿಸಲು ಸಾಧ್ಯವಾಗುವ ರೀತಿಯಲ್ಲಿ ಬಿಡಿಸಿರುತ್ತಾರೆ. ಈ ಅಂಶ ಆ ಕಾಲದ ಶಿಲ್ಪಿಗಳ ಸೂಕ್ಷ್ಮ ಕೆತ್ತನೆಯ ಚಾತುರ್ಯ ಅವರು ಬಳಸುತ್ತಿದ್ದಂತಹ ಸೂಕ್ಷ್ಮ ಉಪಕರಣಗಳು ಮತ್ತು ಇಷ್ಟು ವಿವರವಾಗಿ ಕೆಲಸ ಮಾಡಲು ಅವರಿಗೆ ಇದ್ದಂತಹ ಸಹನೆ ಇವೆಲ್ಲವನ್ನೂ ನಿರೂಪಿಸುತ್ತವೆ. ದ್ವಾರಬಂಧದಲ್ಲಿ ಸಾಮಾನ್ಯವಾಗಿ ಬಳ್ಳಿಸುರುಳಿಗಳ ಚಿತ್ರಗಳು, ಕಮಲ ಪುಷ್ಪದ ದಳಗಳು, ಪಟ್ಟಿಕೆಗಳು, ನೃತ್ಯಗಾರರ, ಕಲಾವಿದರ ಪಟ್ಟಿಕೆಗಳು, ಜ್ಯಾಮಿತಿಕ ಚಿಹ್ನೆಗಳು, ಮಣಿಸರಗಳು, ಸರಪಳಿಗಳು, ದೇವದೇವತೆಗಳ ವಿಗ್ರಹಗಳು (ಶಿಲ್ಪಗಳು) ಇತ್ಯಾದಿಯಾಗಿ ಅನೇಕ, ಕಂಡರಣೆಕಗಳು ಸಾಧ್ಯವಾದ ಎಲ್ಲಾ ರೀತಿಯ ವಿಷಯಗಳ ವಿಶ್ವಕೋಶವೆ ಕಾಣಬರುತ್ತವೆ. ದ್ವಾರಬಂಧದ ಬುಡದಲ್ಲಿ ಅಥವಾ  ಮುಂಭಾಗದಲ್ಲಿ ವಿವಿಧ ಗಾತ್ರದ ದ್ವಾರಪಾಲಕರು, ಸ್ತ್ರೀ–ಪುರುಷರ ಶಿಲ್ಪಗಳು ದಾನಿಗಳ ಶಿಲ್ಪಗಳು, ಸೇವಕರ ಶಿಲ್ಪಗಳು ಇತ್ಯಾದಿಯಾಗಿ ಕಂಡರಿಸಲ್ಪಟ್ಟಿರುತ್ತವೆ. ದ್ವಾರದ ಮೇಲಿನ ತೊಲೆಯಲ್ಲಿ ದೇವಾಲಯದ ಪಂಥಕ್ಕೆ ಅನುಗುಣವಾಗಿ ಲಲಾಟಬಿಂಬದಲ್ಲಿ ಮತ್ತು ಅದರ ಮೇಲ್ಗಡೆ ಶಿಲ್ಪಗಳನ್ನು ಕೆತ್ತಿರುತ್ತಾರೆ. ನಟರಾಜನ ಶಿಲ್ಪ, ಗಜಲಕ್ಷ್ಮಿಯ ಶಿಲ್ಪ, ಜೈನ ಶಿಲ್ಪಗಳು, ಗಣಪತಿ, ನರಸಿಂಹ, ಲಕ್ಷ್ಮಿನರಸಿಂಹ, ವೇಣುಗೋಪಾಲ, ನಂದಿ ಇನ್ನೂ ಮುಂತಾದ ವಿವಿಧ ಶಿಲ್ಪಗಳನ್ನು ಇಲ್ಲಿ ಕಾಣಬಹುದು. ಕೆಲವು ಸಂದರ್ಭಗಳಲ್ಲಿ ಕೆಲವು ವಾಸ್ತುಶಿಲ್ಪದ ಚೌಕಟ್ಟಿನ ಪ್ರತಿಕೃತಿಗಳು ಇಲ್ಲಿ ಕಂಡುಬರುತ್ತವೆ. ಹೊಯ್ಸಳ ಶಿಲ್ಪಗಳು ದ್ವಾರಬಂಧದ ಕೆಲಸದಲ್ಲಿ ಅತ್ಯಂತ ಚಾಕಚಕ್ಯತೆ ಕಲಾಪ್ರೌಢಿಮೆಯನ್ನು ಪ್ರದರ್ಶನ ಮಾಡಿ ಇವುಗಳನ್ನು ಅತ್ಯಂತ ಆಕರ್ಷಕವಾದ ಭಾಗವನ್ನಾಗಿ ಮಾಡಿದ್ದಾರೆ.[55]

**ಕಂಬಗಳು**

ಹೊಯ್ಸಳರ ಕಾಲದಲ್ಲಿ ತಯಾರಿಸಲಾದ ಕಂಬಗಳು ಅವುಗಳ ಆಕೃತಿಗೆ ಮತ್ತು ಕೆತ್ತನೆಯ ಕೆಲಸಕ್ಕೆ ಹೆಸರುವಾಸಿಯಾಗಿವೆ. ಇವುಗಳ ನಿರೂಪಣೆಯಲ್ಲಿ ಕುಶಲ ಕೆಲಸ ಮಾತ್ರವಲ್ಲದೆ ಮೊಟ್ಟಮೊದಲ ಬಾರಿಗೆ ಕಡತ ಯಂತ್ರಗಳನ್ನು ಸಹ ಬಳಸಲಾಗಿದೆ ಎಂದು ಅಭಿಪ್ರಾಯಪಡಲಾಗಿದೆ. ಕಂಬಗಳ ಬಳಕೆಗೂ ಸಹ ಹೊಯ್ಸಳರು ಬಳಪದ ಕಲ್ಲನ್ನು ಬಳಸಿದರು.

ಈ ಕಲ್ಲು ಬಹಳ ಮೃದುವಾದ ಕಲ್ಲಾಗಿದ್ದು, ಮೃದು ಹಾಗೂ ಸೂಕ್ಷ್ಮ ಕಣಗಳಿಂದ ಕೂಡಿದ್ದಾಗಿದೆ ಎಂದು ಈ ಮೊದಲೇ ವಿವರಿಸಲಾಗಿದೆ. ಕಲ್ಲಿನ ಈ ವಿಶೇಷ ಗುಣದ ಲಾಭ ಪಡೆದ ಹೊಯ್ಸಳ ಶಿಲ್ಪಿಗಳು ಇದನ್ನು ಅತ್ಯಂತ ಕೌಶಲ್ಯಭರಿತವಾಗಿ ಬಳಸಿಕೊಂಡರು. ಗಣಿಯಿಂದ ಹೊಸದಾಗಿ ತೆಗೆದಂತಹ ಈ ಕಲ್ಲು ದಿಂಡುಗಳನ್ನು ಬೇಕಾದ ಸ್ಥಳದಲ್ಲಿ ದುಂಡಾಗಿ ಮಾಡಿ ಇಂದಿನ ಲೇತ್ ಮಾದರಿಯ ಯಂತ್ರವೊಂದಕ್ಕೆ ಭದ್ರವಾಗಿ ಕೂಡಿಸಿ ಅದು ಜೋರಾಗಿ ಕಡಗೋಲಿನಂತೆ ತಿರುಗುವಂತೆ ವ್ಯವಸ್ಥೆ ಮಾಡಿ ತಿರುಗುತ್ತಿರುವ ಆ ಕಲ್ಲುದಿಂಡಿಗೆ ಎದುರಾಗಿ ಚೂಪಾದ ಉಳಿಯನ್ನು ಹಿಡಿದು ಬೇಕಾದ ಆಕೃತಿಗೆ ದಿಂಡನ್ನು ಪರಿವರ್ತಿಸುತ್ತಿದ್ದರು. ಕಲ್ಲು ಬಹಳ ಮೃದುವಾದುದರಿಂದ ಮರದ ರೀತಿಯಲ್ಲಿ ಕಲ್ಲನ್ನು ಕೊರೆಯುವುದಕ್ಕೆ ಅವರಿಗೆ ಅನುಕೂಲವಾಯಿತು.

ಈ ರೀತಿಯ ತಂತ್ರ ವಿಧಾನದಿಂದ ಅತ್ಯಂತ ಕಿರಿದಾದ ದಿಂಡುಗಳಿಂದ ಪಟ್ಟಿಗಳನ್ನು, ಗಾಡಿಗಳನ್ನು ಸಮಾನಾಂತರವಾಗಿ, ಶಿಖರವಾಗಿ, ಸೂಕ್ಷ್ಮವಾಗಿ ಮತ್ತು ನಿರ್ದಿಷ್ಟವಾಗಿ ಅವರಿಗೆ ಕೊರೆಯಲು ಸಾಧ್ಯವಾಯಿತು. ಚಾಕುವಿನಂತೆ ಚೂಪಾಗಿ ಹೊರಕ್ಕೆ ಚಾಚಿಕೊಂಡಿರುವ ದಿಂಡುಗಳು, ವಿವಿಧಾಕಾರದ ದೊಡ್ಡದಾದ ಮತ್ತು ಸಣ್ಣ ಸೂಕ್ಷ್ಮವಾದ ದಿಂಡುಗಳು ಮತ್ತು ಹೊಯ್ಸಳ ಶೈಲಿಯ ಕಂಬಗಳಲ್ಲೇ ಅತ್ಯಂತ ಹೆಚ್ಚಾಗಿ ಪ್ರಧಾನವಾಗಿ ಕಾಣುವ ಘಂಟಾಕಾರದ ಮಧ್ಯಭಾಗ ಇವೆಲ್ಲವನ್ನೂ ಬಹಳ ನಾಜೂಕಾಗಿ ಕೆತ್ತನೆ ಮಾಡುವ ಕಲೆಯನ್ನು ಅವರು ರೂಢಿಸಿಕೊಂಡಿದ್ದರು. ಈ ರೀತಿಯ ತಿರುಗಣೆ ಯಂತ್ರದಿಂದಾಗಿ ಹೊಯ್ಸಳ ಕಂಬದ ದಿಂಡುಗಳಿಗೆ ಕನ್ನಡಿಯಂತೆ ಹೊಳೆಯುವ ಹೊಳಪನ್ನು ಸಹ ನೀಡಲು ಅವರಿಗೆ ಸಾಧ್ಯವಾಯಿತು. ಹಳೇಬೀಡಿನ ಪಕ್ಕದಲ್ಲಿರುವ ಬಸ್ತಿಹಳ್ಳಿಯ ಪಾರ್ಶ್ವನಾಥ ಬಸದಿಯಲ್ಲಿ ಕಂಡುಬರುವ ಎತ್ತರವಾದ ಕಂಬಗಳು ಹೊಯ್ಸಳರ ಕಾಲದ ಕಂಬಗಳಾಗಿದ್ದು, ವಿಶೇಷ ಹೊಳಪಿಗೆ ಪ್ರಸಿದ್ಧವಾದವುಗಳಾಗಿವೆ.

ಹೊಯ್ಸಳ ಕಂಬಗಳಲ್ಲಿ ಸಾಮಾನ್ಯವಾಗಿ ಕಾಣುವ ಭಾಗಗಳೆಂದರೆ, ಚೌಕಾಕಾರದ ಸಣ್ಣದಾದ ಸಾಲಂಕೃತವಾದ ಪೀಠ. ಇದು ಬೇರೆ ಕಲ್ಲಿನಿಂದ ಮಾಡಿರುವಂತಹದ್ದು. ಇದರ ಮೇಲ್ಭಾಗದಲ್ಲಿ ಎತ್ತರವಾದ ದಿಂಡನ್ನು ನಿಲ್ಲಿಸಿರುತ್ತಾರೆ. ಈ ದಿಂಡು ಕೆಳಭಾಗದಲ್ಲಿ ಚೌಕಕಾರವಾಗಿರುತ್ತದೆ. ಈ ಸ್ಥಳದಲ್ಲಿಯೂ ಸಹ ಅನೇಕ ಶಿಲ್ಪ ಅಥವಾ ಅಲಂಕಾರಿಕ ಕೆತ್ತನೆಗಳು ಕಂಡುಬರುವುದುಂಟು. ಈ ಚೌಕಟ್ಟಿನ ಮೇಲ್ಭಾಗದಲ್ಲಿರುವ ದಿಂಡು ಉರುಳೆಯಾಕಾರವಾಗಿ ಕಂಡುಬರುತ್ತದೆ. ಈ ಭಾಗದ ಕೆಳಗಡೆ ಬಹಳ ಸೂಕ್ಷ್ಮವಾದ ಪಟ್ಟಿಕೆಗಳು, ಹಗ್ಗದ ರೀತಿಯ ದಿಂಡುಗಳು, ಚಾಕುವಿನ ರೀತಿಯ ದಿಂಡುಗಳು, ಮಧ್ಯಮಧ್ಯ ಆಳವಾಗಿ ಕೊರೆದ ಗಾಡಿಗಳು

ಹಾಗೂ ಇನ್ನಿತರ ವಿವಿಧಾಕಾರದ ದಿಂಡುಗಳು ಅಲಂಕಾರಿಕ ಕೆತ್ತನೆಗಳು ಕಾಣಬರುತ್ತವೆ. ದಿಂಡಿನ ಮಧ್ಯಭಾಗದಲ್ಲಿ ಸಾಮಾನ್ಯವಾಗಿ ಎಲ್ಲಾ ಹೊಯ್ಸಳ ಕಂಬಗಳು ಘಂಟೆಯಾಕಾರವಾಗಿರುತ್ತವೆ. ಈ ಘಂಟಾಕೃತಿಯ ಭಾಗದಲ್ಲಿ ಎಲೆ, ಬಳ್ಳಿ, ಪಟ್ಟಿ, ಮಣಿಸರ, ಸರಪಣಿ ಇತ್ಯಾದಿಗಳ ಕೆತ್ತನೆಗಳು ಕಾಣಬರುವುದುಂಟು. ಘಂಟಾಕಾರದ ಮೇಲ್ಭಾಗದಲ್ಲಿ ಮತ್ತೆ ದಿಂಡು ಅದೇ ರೀತಿ ಅಂದರೆ ಗಂಟೆಯ ಕೆಳಭಾಗದ ರೀತಿಯಲ್ಲಿರುವಂತೆಯೇ ಮುಂದುವರೆಯುತ್ತದೆ.

ದಿಂಡಿನ ಮೇಲ್ಭಾಗದಲ್ಲಿ ಬೋಧಿಗೆಯನ್ನು ಕೂಡಿಸಿರುತ್ತಾರೆ. ಈ ಬೋಧಿಗೆಯ ಸ್ವರೂಪ ವಿವಿಧಾಕಾರವಾಗಿರುತ್ತದೆ. ಸುತ್ತಲೂ ಚಪ್ಪಟೆಯ ಮುಖವುಳ್ಳ ವೃತ್ತಾಕಾರದ ಬೋಧಿಗೆ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತದೆ. ಈ ಚಪ್ಪಟೆಯಾಕಾರದ ಭಾಗದಲ್ಲಿ ಬಳ್ಳಿ, ಸುರುಳಿ, ಮಣಿಸರ ಇತ್ಯಾದಿ ಕೆತ್ತನೆಗಳು ಕಂಡುಬರುವುದು ಸಾಮಾನ್ಯ. ಕೆಲವು ಸಂದರ್ಭಗಳಲ್ಲಿ ಮೇಲಿನ ಬ್ರಾಕೆಟ್ ಶಿಲ್ಪಗಳು ಅಥವಾ ಮಧನಿಕಾ ವಿಗ್ರಹಗಳನ್ನು ಕೂಡಿಸಲು ಅನುಕೂಲವಾಗಲೆಂದು ಈ ಬೋಧಿಗೆಗಳ ನಾಲ್ಕು ದಿಕ್ಕುಗಳಲ್ಲಿ ಒಂದೊಂದು ಗೂಟದ ರೀತಿಯಲ್ಲಿ ಮುಂಬೆಣಿಗಳು ಕಾಣಬರುತ್ತವೆ. ಈ ರೀತಿಯ ಸಾಮಾನ್ಯವಾದ ಬೋದಿಗೆಯನ್ನು ಬಿಟ್ಟರೆ ಚೂಪಾದ ಅಥವಾ ಸ್ವಲ್ಪ ಚಪ್ಪಟೆಯಾದ ತುದಿಯನ್ನು ಹೊಂದಿರುವ ದಿಂಬಿನಾಕಾರದ ಬೋಧಿಗೆಗಳು ಕಾಣಬರುವುದು ಸಾಮಾನ್ಯ. ಕೆಲವು ಸಂದರ್ಭಗಳಲ್ಲಿ ಕೆಳಗಿನ ದಿಂಡಿನಾಕಾರಕ್ಕೆ ಅನುಗುಣವಾಗಿ ಬೋಧಿಗೆಗಳಿಗೂ ಹಲವು ಮೂಲೆಗಳು ಇರುವುದುಂಟು.

ಈ ಮೇಲೆ ಹೇಳಲಾಗಿರುವ ಕಂಬಗಳ ವಿವರಣೆಗಳು ಹೊಯ್ಸಳ ಶೈಲಿಯಲ್ಲಿ ಸಾಮಾನ್ಯವಾಗಿ ಎಲ್ಲಾ ಕಡೆ ದೊರೆಯುವಂತಹ ಕಂಬಗಳ ರೂಪರೇಷೆಗಳು ಕೆಲವು ಹೊಯ್ಸಳ ದೇವಾಲಯಗಳಲ್ಲಿ ಕಂಡುಬರುತ್ತವೆ. ಉದಾಹರಣೆಗೆ ಬೇಲೂರಿನಲ್ಲಿರುವ ಚನ್ನಕೇಶವ ದೇವಾಲಯದ ಕಂಬಗಳ ದಿಂಡಿನ ನಿರೂಪಣೆಯಲ್ಲಿ ಪ್ರಭೇದಗಳು ಕಂಡುಬರುತ್ತವೆ. ಬೇಲೂರಿನ ಚನ್ನಕೇಶವ ದೇವಾಲಯದಲ್ಲಿ 42 ಕಂಬಗಳಿದ್ದು, ಮಧ್ಯದ ನಾಲ್ಕು ಕಂಬಗಳನ್ನು ಬಿಟ್ಟರೆ ಉಳಿದೆಲ್ಲವೂ ಒಂದಕ್ಕಿಂತ ಒಂದು ವಿಭಿನ್ನ ರೀತಿಯದ್ದಾಗಿದೆ. ಈ ಕಂಬಗಳ ದಿಂಡಿನ ಖಂಡ ಭಾಗಗಳು ಅನೇಕ ಕೋನಗಳನ್ನು, ಮುಖಗಳನ್ನು ಹೊಂದಿದ್ದು, ಇವುಗಳನ್ನು ತಿರುಗಣಿ ಯಂತ್ರದ ಮೇಲೆ ರಚಿಸಲು ಸಾಧ್ಯವಾಗುವುದಿಲ್ಲ. ಇವೆಲ್ಲವನ್ನು ಶಿಲ್ಪಗಳು ತಮ್ಮ ಕಲಾಕೌಶಲ್ಯದಿಂದಲೇ ಅತ್ಯಂತ ಆಕರ್ಷಕವಾಗಿ ನಿರೂಪಿಸಿದ್ದಾರೆ. ಈ ಕಂಬಗಳ ಉಳಿದ ಎಲ್ಲಾ ಭಾಗಗಳು ಸಹ ಇತರೆ ಸಾಮಾನ್ಯ ಕಂಬಗಳಲ್ಲಿ ದೊರೆಯುವಂತಹವೇ ಆಗಿರುತ್ತವೆ.

**ಭುವನೇಶ್ವರಿಗಳು**

ಇವರ ಕಾಲದ ದೇವಾಲಯಗಳ ಮತ್ತೊಂದು ಆಕರ್ಷಕವಾದ ಭಾಗವೆಂದರೆ ಭುವನೇಶ್ವರಿಗಳು. ಭುವನೇಶ್ವರಿಗಳು ಎಂದರೆ ಛಾವಣಿಯ ಅಲಂಕರಣಗಳು ಗುಮ್ಮಟಾಕಾರದ ಟೊಳ್ಳು ಭಾಗಗಳು ಹೊಯ್ಸಳ ದೇವಾಲಯಗಳಲ್ಲಿ ಈ ರೀತಿಯಾದ ಭುವನೇಶ್ವರಿಗಳ ನಿರ್ಮಾಣಕ್ಕೆ ಅವರು ಬಳಸಿದ ಮಾಧ್ಯಮವೂ ಒಂದು ಕಾರಣವಾಗಿದೆ. ಹೊಯ್ಸಳರ ವಾಸ್ತುವಿನ ಮಾಧ್ಯಮದ ಬಗೆಗೆ ಹೇಳುವಾಗ ಈ ಮೃದುಮಾಧ್ಯಮ ವಾಸ್ತುನಿರ್ಮಾಣದಲ್ಲಿ ಕೆಲವು ಬದಲಾವಣೆಗಳಗೆ ಕಾರಣವಾಯಿತು ಎಂದು ಹೇಳಿದ್ದೇವೆ. ಅವುಗಳಲ್ಲಿ ಭುವನೇಶ್ವರಿಯ ನಿರ್ಮಾಣವೂ ಒಂದು. ಕಟ್ಟಡದ ಮಾಧ್ಯಮ ಮೃದುವಾಗಿದ್ದುದರಿಂದ ಉದ್ದವಾದ ಚಪ್ಪಡಿಗಳು ತೊಲೆಗಳ ಉಪಯೋಗ ಅವರಿಗೆ ಸೂಕ್ತವೆನಿಸಲಿಲ್ಲ. ಇದರಿಂದಾಗಿ ಶಿಲ್ಪಿಗಳು ಚಿಕ್ಕದಾದ ಕಲ್ಲಿನ ತೊಲೆಗಳ ಸಹಾಯದಿಂದಲೆ ವಿಶಾಲವಾದ ಅಂಕಣವನ್ನು ಮುಚ್ಚುವ ವಿಧಾನವನ್ನು ಅನುಸರಿಸಿದರು. ಈ ವಿಧಾನ ಹಿಂದೂ ದೇವಾಲಯದ ವಾಸ್ತುವಿಗೆ ಹೊರತೇನೂ ಆಗಿರಲಿಲ್ಲ. ಹೊಯ್ಸಳರು ಈ ಭಾಗವನ್ನು ಬಳಸಿಕೊಂಡ ರೀತಿ ವಿಶಿಷ್ಟವಾದುದು.

ದೇವಾಲಯದ ಛಾವಣಿಯ ತೊಲೆಗಳನ್ನು ಕೂರಿಸಿದ ಮೇಲೆ ನಿರ್ಮಾಣವಾಗುವ ಅಂಕಣಗಳು ಸಾಕಷ್ಟು ವಿಶಾಲವಾಗಿರುತ್ತಿದ್ದವು. ಇವುಗಳನ್ನು ಮುಚ್ಚಲು ಸಣ್ಣ ಸಣ್ಣ ತೊಲೆಗಳ ಚೌಕಾಕಾರದ ಅಂಕಣಗಳ ಮೇಲೆ ಮೂಲೆ ಮೂಲೆಯಾಗಿ ಕೂಡಿಸುತ್ತಿದ್ದರು. ಇದರಿಂದಾಗಿ ಅಂಕಣದ ಸ್ವಲ್ಪ ಭಾಗ ಮುಚ್ಚುತ್ತಿತ್ತು. ಇದೇ ರೀತಿಯಾಗಿ ಸ್ವಲ್ಪ ಸ್ವಲ್ಪವಾಗಿ ಮುಚ್ಚುತ್ತಾ ಬಂದಾಗ ಅಂಕಣದ ಒಳಭಾಗ ಟೊಳ್ಳಾಗಿ ಮೇಲ್ಭಾಗ ಉಬ್ಬುತ್ತಿತ್ತು. ಈ ಉಬ್ಬಿದ ಮೇಲ್ಭಾಗವನ್ನು ಇಟ್ಟಿಗೆ ಗಾರೆಗಳಿಂದ ನಯಮಾಡಿ ಗುಮ್ಮಟಾಕಾರವಾಗಿ ನೀರು ಸೋರದಂತೆ ನಿರ್ಮಿಸುತ್ತಿದ್ದರು. ಒಳಭಾಗದ ಅನೇಕ ಸ್ತರಗಳಲ್ಲಿ ಮೂಲೆಮೂಲೆಯಾಗಿ ಕೂಡಿಸಲ್ಪಟ್ಟ ತೊಲೆಗಳ ಮುಖಭಾಗವನ್ನು ಸುಂದರ ಸೂಕ್ಷ್ಮವಾದ ಅಲಂಕರಣಗಳಿಂದ ಅಲಂಕರಿಸುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಮೂಲೆಮೂಲೆಯಾಗಿ ಕಾಣುವ ಈ ಎಲ್ಲಾ ತೊಲೆಗಳನ್ನು ನೀಟಾಗಿ ಸವರಿ ಇಡೀ ಒಳಭಾಗ ಗುಮ್ಮಟಾಕಾರವಾಗಿ ಅಥವಾ ಇಷ್ಟವಾದ ರೀತಿಯಲ್ಲಿ ಕಾಣುವಂತೆ ಅಲಂಕರಿಸುತ್ತಿದ್ದರು. ಹೀಗಾಗಿ ಛಾವಣಿಯಲ್ಲಿ ಕಾಣುವ ಎಲ್ಲಾ ಅಲಂಕರಣಗಳು ದೇವಾಲಯದ ಆಕರ್ಷಕ ಭಾಗಗಳಾಗಿ ನಿರೂಪಿತಗೊಂಡವು.[56]

ಇವುಗಳಲ್ಲಿ ಅತ್ಯಂತ ವಿಶಾಲವಾದ ಭುವನೇಶ್ವರಿ ಎಂದರೆ ಅರಸೀಕೆರೆಯ ಸಹಸ್ರಕೂಟ ಜಿನಾಲಯದ ನವರಂಗದ ಮಧ್ಯದ ಅಂಕಣದ ಮೇಲಿರುವ ಭುವನೇಶ್ವರಿ. ಇಡೀ ಭುವನೇಶ್ವರಿಯನ್ನು ಒಂದು ಮಗುಚಿದ ಕಮಲೋಪಾದಿಯಲ್ಲಿ ಅತ್ಯಂತ ಸುಂದರವಾಗಿ ಶಿಲ್ಪಿ

ನಿರೂಪಿಸಿದ್ದಾನೆ. ಇದರ ರಚನೆಯಲ್ಲಿ ಇರುವ ಕೌಶಲ್ಯ ಮತ್ತು ತಾಂತ್ರಿಕ ವಿಧಾನಗಳ ಅಳವಡಿಕೆ ಎಲ್ಲರೂ ಮೆಚ್ಚುವಂತಹದ್ದು.

ಅರಸೀಕೆರೆ ಈಶ್ವರ ದೇವಾಲಯವು ಇಮ್ಮಡಿ ನರಸಿಂಹನ ಕಾಲದಲ್ಲಿ ರಚಿತಗೊಂಡಿದ್ದು, ದೇವಾಲಯದ ಮುಂಭಾಗದಲ್ಲಿ ಸ್ವಲ್ಪ ಪ್ರತ್ಯೇಕವಾಗಿ ನಿರ್ಮಿಸಲಾಗಿರುವ ರಂಗಮಂಟಪ ವಿಶಾಲವಾದ ನಕ್ಷತ್ರಾಕಾರದ ತಳವಿನ್ಯಾಸವನ್ನು ಹೊಂದಿದೆ. ಮಂಟಪದ ಸುತ್ತಲೂ ತೆರನಾಗಿ ಕಕ್ಷಾಸನಗಳನ್ನು ರಚಿಸಲಾಗಿದ್ದು ಕಂಬಗಳ ಆಸರೆಯ ಮೇಲೆ ಮೇಲ್ಛಾವಣಿಯನ್ನು ಕೂರಿಸಲಾಗಿದೆ. ಇಡೀ ಮೇಲ್ಛಾವಣಿ ಬೃಹದಾಕಾರವಾದ ಗುಮ್ಮಟಾಕಾರದಲ್ಲಿದ್ದು, ಒಳಭಾಗದಲ್ಲಿ ಸಂಪೂರ್ಣವಾಗಿ ಅಡ್ಡ ಮತ್ತು ಉದ್ದ ತೊಲೆಗಳ ಒಂದು ಚೌಕಟ್ಟೇ ನಿರ್ಮಿತವಾಗಿದೆ. ಇದೂ ಸಹ ಭುವನೇಶ್ವರಿ ರಚನೆಗೆ ಒಂದು ಉತ್ತಮ ಉದಾಹರಣೆ. ಇಷ್ಟೊಂದು ದೊಡ್ಡದಾದ ಭುವನೇಶ್ವರಿಗಳು ಅಥವಾ ಗೊಮ್ಮಟಾಕಾರದ ಮೇಲ್ಛಾವಣಿಗಳು ಹೊಯ್ಸಳ ರಾಜ್ಯದಲ್ಲೆಲ್ಲಾ ದೊರೆಯದಿರುವುದು ಅರಸೀಕೆರೆಯಲ್ಲಿ ಮಾತ್ರ ಕಾಣಬರುವುದರಿಂದ, ಇಲ್ಲಿಯ ವಾಸ್ತುಶಿಲ್ಪಗಳ ಪರಂಪರೆಯಲ್ಲಿ ಮಹತ್ವ ಅಥವಾ ವೈಶಿಷ್ಟವಿತ್ತೆಂದು ಕಂಡುಬರುತ್ತದೆ.

**ಶಿಲ್ಪಗಳು**

ಹೊಯ್ಸಳರ ಕಾಲದಲ್ಲಿ ರಚಿತವಾದ ಶಿಲ್ಪಗಳು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಅಲಂಕರಣ ಸೂಕ್ಷ್ಮವಾದ ಕೆತ್ತನೆಗಳು ಮತ್ತು ನಮೂನೆಗಳಿಂದಾಗಿ ಭಾರತೀಯ ಕಲಾಪರಂಪರೆಯಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿರುವುದಲ್ಲದೆ, ವಿಶ್ವವಿಖ್ಯಾತವೂ ಆಗಿದೆ. ಈ ರೀತಿಯ ಶಿಲ್ಪ ರಚನೆ ಮತ್ತು ಕಲೆಯ ಪರಿಪೂರ್ಣತೆಗೆ ಮುಖ್ಯ ಕಾರಣವೇನೆಂದರೆ ಹೊಯ್ಸಳರು ಬಳಸಿದ ಬಳಪದ ಕಲ್ಲು ಮತ್ತು ಅದರ ಸೂಕ್ಷ್ಮ ಕಣಗಳ ರಚನೆ, ಮೃದು ಸ್ವಭಾವದಿಂದಾಗಿ ಈ ಕಲ್ಲಿನಲ್ಲಿ ತಮಗೆ ಇಷ್ಟ ಬಂದ ರೀತಿಯಲ್ಲಿ ಶಿಲ್ಪಗಳು ಮೂರ್ತಿಶಿಲ್ಪಗಳನ್ನು ಹಾಗೆಯೇ ವಾಸ್ತು ಚೌಕಟ್ಟಿನ ಇತರ ಭಾಗಗಳನ್ನು ಅಲಂಕರಿಸಿದರು. ಇದರಿಂದಾಗಿ ಹೊಯ್ಸಳ ದೇವಾಲಯದ ಪ್ರತಿಯೊಂದು ಭಾಗವು ಅತ್ಯಂತ ಆಕರ್ಷಕವಾಗಿ, ನುಣುಪಾದ ಸೂಕ್ಷ್ಮವಾದ ಕುಸುರಿ ಕೆತ್ತನೆಗಳು ಹಾಗೂ ಇನ್ನಿತರ ಅಲಂಕರಣಗಳಿಂದ ಕಂಗೊಳಿಸುವಂತಾಯಿತು. ಈ ದೇವಾಲಯದ ಅಲಂಕರಣದ ಸಿರಿಯ ಸೊಬಗನ್ನು, ವೈಭವವನ್ನು, ವೀಕ್ಷಿಸಿದ ಜೇಮ್ಸ್ ಫರ್ಗ್ಯೂಸನ್, ಬೆಂಜಮಿನ್ ರೋಲೆಂಡ್, ಪರ್ಸಿ ಬ್ರೌನ್, ಕುಮಾರಸ್ವಾಮಿ ಮೊದಲಾದ ಅನೇಕ ಪಾಶ್ಚಿಮಾತ್ಯ ವಿದ್ವಾಂಸರುಗಳು ಹೊಯ್ಸಳ ಪರಂಪರೆಯಲ್ಲಿ 'ಬಡಗಿಯ ಚಾತುರ್ಯವು ಅಕ್ಕಸಾಲಿಗನ ಕೌಶಲ್ಯವು' ದಂತ ಅಥವಾ ಗಂಧದ ಗುಡಿಗಾರರ ಸೂಕ್ಷ್ಮ ಕೆತ್ತನೆಯು ಸೇರಿಕೊಂಡಿದೆ' ಎಂಬುದಾಗಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಈ ಲಕ್ಷಣಗಳಿಂದಾಗಿ

ಹೊಯ್ಸಳ ದೇವಾಲಯಗಳನ್ನು ವಾಸ್ತು ನಿರ್ಮಾಣಗಳೆಂದು ಕರೆಯದೆ ಇವು ಒಂದು ಅತ್ಯಂತ ವೈಭವೀಕೃತವಾದ ಶಿಲ್ಪವೆಂದು ಶ್ಲಾಘಿಸಿದ್ದಾರೆ.[57]

ಹೊಯ್ಸಳ ಶಿಲ್ಪಗಳು ಅವುಗಳ ಬೃಹತ್ ಪ್ರಮಾಣಗಳಿಗೇನೂ ಹೆಸರುವಾಸಿಯಾಗಿರಲಿಲ್ಲ. ಅಂದ ಮಾತ್ರಕ್ಕೆ ಬೃಹತ್ತಾದ ಹೊಯ್ಸಳ ಶಿಲ್ಪಗಳು ಇಲ್ಲವೆಂದಲ್ಲ, ಅನೇಕ ಕಡೆಗಳಲ್ಲಿ ಬೃಹತ್ತಾದ ಹೊಯ್ಸಳ ಶಿಲ್ಪಗಳು ನಮಗೆ ಕಂಡುಬರುತ್ತದೆ. ಉದಾಹರಣೆಗೆ ಬೇಲೂರಿನ ಚನ್ನಕೇಶವನ ವಿಗ್ರಹ, ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ಮುಂದಿರುವ ದ್ವಾರಪಾಲಕರ ವಿಗ್ರಹಗಳು ಅದೇ ದೇವಾಲಯದ ಮುಖಮಂಟಪದಲ್ಲಿರುವ ನಂದಿ ವಿಗ್ರಹಗಳನ್ನು ಕಾಣುತ್ತೇವೆ. ಆದರೆ ಸಾಧಾರಣವಾಗಿ ಹೆಚ್ಚಿನ ಸಂಖ್ಯೆಯಲ್ಲಿ ದೊರೆಯತಕ್ಕಂತಹ ಹೊಯ್ಸಳ ಶಿಲ್ಪಗಳು ಸುಮಾರು ಎರಡೂವರೆ ಅಡಿಯಿಂದ ನಾಲ್ಕು ಅಡಿಗಳವರೆಗೆ ಸರಾಸರಿ ಎತ್ತರವನ್ನು ಹೊಂದಿರುತ್ತವೆ. ಇದರಿಂದಾಗಿ ಇವುಗಳು ನೋಡುವುದಕ್ಕೆ ಸ್ವಲ್ಪ ಕುಳ್ಳಾಗಿಯೇ ಕಾಣಬರುತ್ತವೆ. ಕುಳ್ಳಾದ ದೇಹ, ದೃಢವಾದ ಕೈಕಾಲುಗಳು, ದುಂಡಾದ ಅಥವಾ ಸ್ವಲ್ಪ ಚೌಕಾಕಾರದ ಮುಖ, ಅಗಲವಾದ ಕಣ್ಣುಗಳು, ಬಿಲ್ಲಿನಾಕಾರದ ಉಬ್ಬು, ಸ್ವಲ್ಪ ದಪ್ಪ ತುಟಿ, ಮಂದಸ್ಮಿತ, ಉಬ್ಬಿದ ಕೆನ್ನೆಗಳು ಗುಂಗುರು ಕೂದಲುಗಳು, ಸ್ತ್ರೀಯರ ಶಿಲ್ಪವಾದಲ್ಲಿ ತುಂಬಿದ ಸ್ತನಗಳು ಇವೆಲ್ಲವೂ ಈ ಶಿಲ್ಪಗಳ ಕೆಲವು ಸಾಮಾನ್ಯ ಲಕ್ಷಣಗಳು. ಈ ಲಕ್ಷಣಗಳಿಗೆ ಅಪವಾದವಿಲ್ಲವೆಂದಲ್ಲ. ಈ ರೀತಿಯ ದೈಹಿಕ ಲಕ್ಷಣಗಳನ್ನುಳ್ಳ ಶಿಲ್ಪವನ್ನು ಆಸನದ ಮೇಲೆ ಕುಳಿತಿರುವ, ನಿಂತಿರುವ, ನರ್ತಿಸುತ್ತಿರುವ, ಸಂಹರಿಸುತ್ತಿರುವ ಭಂಗಿಯಲ್ಲಿ ಸಾಮಾನ್ಯವಾಗಿ ದೇವಾಲಯದ ಭಿತ್ತಿಗಳ ಮೇಲೆ ಸಾಲಾಗಿ ಅಕ್ಕಪಕ್ಕದಲ್ಲೇ ಕಂಡರಿಸಿರುತ್ತಾರೆ. ಈ ಶಿಲ್ಪಗಳಿಗೆ ಸಹಚರರು, ಅನುಚರರು, ವಾಹನಗಳು, ಪರಿವಾರ ದೇವತೆಗಳು ಇತ್ಯಾದಿ ಸಣ್ಣ ಸಣ್ಣ ಶಿಲ್ಪಗಳು ಇಕ್ಕೆಲಗಳಲ್ಲಿ ಕಂಡುಬರುತ್ತವೆ. ಇವುಗಳು ಯಾವುದೇ ರೀತಿಯ ಶಿಲ್ಪವಾಗಿರಲೀ ಅಲಂಕರಣಗಳನ್ನು ಮಾತ್ರ ವಿಪರೀತವೆನಿಸುವ ರೀತಿಯಲ್ಲಿ ಕೆತ್ತಿರುತ್ತಾರೆ. ಅಲಂಕರಣೆಯಲ್ಲಿ ಕಿರೀಟ, ಕರ್ಣಕುಂಡಲ, ಕಂಠೀಹಾರಗಳು, ಪದಕಗಳು, ಭುಜಸರಗಳು, ಕೇಯೂರಗಳು, ಬಳೆಗಳು, ಉಂಗುರಗಳು, ಯಜ್ಞೋಪವೀತ, ಹಾರ ಉದರಬಂಧ, ಕಟಿಬಂಧ, ಉತ್ತರೀಯ ಮೇಖಲ, ಕಾಲಬಳೆ, ಪಾದರಸ, ಕಾಲುಂಗುರಗಳು, ಪಾದರಕ್ಷೆ ಇತ್ಯಾದಿ ಇನ್ನೂ ಅನೇಕಾನೇಕ ರೀತಿಯ ಆಭರಣಗಳನ್ನು ಅತ್ಯಂತ ವಿಷದವಾಗಿ ಸೂಕ್ಷ್ಮವಾಗಿ ಹೆಚ್ಚಿನ ಪ್ರಮಾಣದಲ್ಲಿ ಕೆತ್ತನೆ ಮಾಡಿರುತ್ತಾರೆ. ಇದರಿಂದಾಗಿ ಶಿಲ್ಪಗಳ ವೈಭವ ಅನೇಕ ಪಟ್ಟು ಹೆಚ್ಚಾಗಿರುತ್ತದೆ. ಶಿಲ್ಪಗಳು ವಸ್ತ್ರಗಳನ್ನು ಹೊಂದಿದ್ದಲ್ಲಿ ಅವುಗಳ ಸುಂದರವಾದ, ಜೋಡಿಸಲ್ಪಟ್ಟ ಸೂಕ್ಷ್ಮ ನೆರಿಗೆಗಳು, ವಸ್ತ್ರಗಳ ಗಂಟುಗಳು, ವಸ್ತ್ರಗಳ ಮೇಲಿನ ಹೂವು ಇತ್ಯಾದಿ ಅಲಂಕರಣಗಳು ಇವೆಲ್ಲವೂ ಸಹ ಕಾಣುವಂತೆ ಅತ್ಯಂತ ಕುಶಲತೆಯಿಂದ ಕೆತ್ತನೆ ಮಾಡಿರುತ್ತಾರೆ. ಶಿಲ್ಪಗಳ ಮಣಿಮುಕುಟಗಳು ಅಥವಾ ಜಟಾಮುಕುಟಗಳು ಅಥವಾ

ಮುಕುಟ ರಹಿತವಾಗಿಯೂ ಕಾಣಬರುತ್ತವೆ. ಮಣಿಮುಕುಟವಾಗಿದ್ದಲ್ಲಿ ಬಹಳ ಸುಂದರವಾಗಿ ಸೂಕ್ಷ್ಮ ಕೆತ್ತನೆಗಳನ್ನು ಹೊಂದಿರುವ ವಿಶಿಷ್ಟ ಆಕರ್ಷಕ ಮತ್ತು ವಿಶಿಷ್ಟ ರೀತಿಯಲ್ಲಿ ಜೋಡಿಸಿ ಅಲಂಕರಿಸಿರುವುದನ್ನು ಕಾಣಬಹುದು. ಅವುಗಳು ಅಲಂಕಾರ ರಹಿತವಾಗಿದ್ದ ಪಕ್ಷದಲ್ಲಿ ವಿಶಾಲವಾಗಿ ಹರಡಿದ ಜಡೆ ಅಥವಾ ಸುಂದರವಾಗಿ ಶೃಂಗರಿಸಿದ ಕೇಶಾಲಂಕಾರಗಳು ಅಥವಾ ನೀಳವಾಗಿ ಇಳಬಿಟ್ಟಂತೆ ಕೇಶರಾಶಿಗಳು ಕಾಣಬರುತ್ತವೆ.[58]

ಮುಖ್ಯವಾಗಿ ಕೆತ್ತನೆ ಮಾಡಿರುವ ಆ ಶಿಲ್ಪಗಳ ಭಾಗಗಳೆಂದರೆ, ದೇವ, ದೇವತಾಶಿಲ್ಪಗಳು ಆಯುಧಗಳು, ಶಂಖ, ಚಕ್ರ, ಗಧ, ಪಾಶ, ಅಂಕುಶ, ತ್ರಿಶೂಲ, ಢಮರು, ಭರ್ಜಿ, ಬಿಲ್ಲು, ಬಾಣ, ಪರಶು, ಖಡ್ಗ, ಕೇತಕ, ಅಗ್ನಿ, ಹೀಗೆ ವಿವಿಧ ರೀತಿಯ ಆಯುಧಗಳು ಕಾಣಬರುತ್ತವೆ. ಆದರೆ ಈ ಆಯುಧಗಳೆಲ್ಲವೂ ಸಹ ಹೆಚ್ಚು ಅಲಂಕೃತವಾಗಿ ಹೆಚ್ಚು ವೈಭವೀಕೃತವಾಗಿ ಸುಂದರ ಸೂಕ್ಷ್ಮ ಕೆತ್ತನೆಗಳನ್ನು ಒಳಗೊಂಡಿದ್ದು, ಶಿಲ್ಪ ಸೌಂದರ್ಯ ವರ್ಧಿಸುವಲ್ಲಿ ಸಹಕಾರಿಯಾಗಿವೆ.

ಒಂದೇ ರೀತಿಯ ವಿಶೇಷ ಹಾಗೂ ವಿಪರೀತವಾದ ಅಲಂಕರಣಗಳಿಂದಾಗಿ ಹಾವ, ಭಾವ, ಭಂಗಿಗಳಿಂದಾಗಿ ಹೊಯ್ಸಳ ದೇವಾಲಯಗಳ ಭಿತ್ತಿಯ ಮೇಲಿನ ಶಿಲ್ಪಗಳು ಸಾಮಾನ್ಯವಾಗಿ ನೋಟಕ್ಕೆ ಒಂದೇ ರೀತಿಯವುಗಳಾಗಿ ಕಾಣುತ್ತವೆ. ಈ ಕಾರಣದಿಂದಾಗಿಯೇ ಅನೇಕ ಪಾಶ್ಚಿಮಾತ್ಯ ವಿದ್ವಾಂಸರುಗಳು ಹೊಯ್ಸಳ ಶಿಲ್ಪಗಳು ಒಂದೇ ರೀತಿಯ ಅಚ್ಚಿನಲ್ಲಿ ತೆಗೆದ ಅಥವಾ ಕಾರ್ಖಾನೆಯಲ್ಲಿ ರೂಪಿಸಿದಂತಹ ಒಂದೇ ಮಾದರಿಯ ಮೂರ್ತಿಗಳು, ಇವುಗಳಲ್ಲಿ ವೈವಿಧ್ಯತೆ ಇಲ್ಲ ಮತ್ತು ವೈಯಕ್ತಿಕ ಅಭಿರುಚಿ ಭಾವನೆ ಇವುಗಳಲ್ಲಿ ಇಲ್ಲ ಎಂದು ಟೀಕಿಸಿದ್ದಾರೆ. ಆದರೆ ಈ ಟೀಕೆ ಸರಿಯಲ್ಲ. ಹೊಯ್ಸಳ ಶಿಲ್ಪಗಳಲ್ಲಿ ಅನೇಕವು ಅವುಗಳ ಪೀಠದ ಮೇಲಿನ ತುಣುಕು ಶಾಸನಗಳಿಂದ ಅವುಗಳು ಬೇರೆ ಬೇರೆ ಶಿಲ್ಪಿಗಳ ಕೈಯಲ್ಲಿ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ರೂಪಗೊಂಡವುಗಳು ಎಂದು ತಿಳಿದುಬರುತ್ತದೆ. ಇವುಗಳ ಮುಖಭಾವದ ಸೂಕ್ಷ್ಮ ಅವಲೋಕನವು ಇವುಗಳೆಲ್ಲವೂ ಪ್ರತ್ಯೇಕವಾದ ಶಿಲ್ಪ ಲಕ್ಷಣಗಳನ್ನು ಹಾವ, ಭಾವ, ರಸಗಳನ್ನು ಹೊಂದಿವೆ ಎಂದು ಸ್ಪಷ್ಟೀಕರಿಸುತ್ತವೆ.[59]

ಹೊಯ್ಸಳರ ಕಾಲದ ಶಿಲ್ಪಗಳ ಬಗ್ಗೆ ಹೇಳಬಹುದಾದ ವಿಶೇಷ ಲಕ್ಷಣವೆಂದರೆ, ಅನೇಕ ಹೊಯ್ಸಳ ಶಿಲ್ಪಗಳು ಅವುಗಳ ಕೆಳಭಾಗದಲ್ಲಿ ಅವುಗಳನ್ನು ಕಡೆದ ರೂವಾರಿಗಳ ಹೆಸರುಗಳನ್ನು ಶಾಸನ ರೂಪದಲ್ಲಿ ಹೊಂದಿರುತ್ತವೆ. ಈ ಪದ್ಧತಿ ಮುಂಚಿನ ಕಲಾಶಿಲ್ಪ ಪರಂಪರೆಯಲ್ಲಿ ಕಾಣಬರುವುದಿಲ್ಲ ಹಾಗೂ ನಂತರದ ಕಾಲಗಳ ಶಿಲ್ಪಗಳಲ್ಲೂ ಕಾಣಬರುವುದಿಲ್ಲ.

**ಮದನಿಕಾ ಶಿಲ್ಪಗಳು**

ಇವರ ಕಾಲದ ದೇವಾಲಯಗಳ ಅತ್ಯಂತ ಆಕರ್ಷಕ ಶಿಲ್ಪಗಳೆಂದರೆ, ಮದನಿಕೆಯರ ಶಿಲ್ಪಗಳು. ಈ ಶಿಲ್ಪಗಳು ತಾಂತ್ರಿಕ ದೃಷ್ಟಿಯಿಂದ ನೋಡುವುದಾದರೆ, ಬ್ರಾಕೆಟ್ ಶಿಲ್ಪಗಳ ಒಂದು ಪರ್ಯಾಯ ಭಾಗವೆನ್ನಬಹುದು. ಬ್ರಾಕೆಟ್ ಶಿಲ್ಪಗಳಿಗೆ ವಾಸ್ತು ಚೌಕಟ್ಟಿನಲ್ಲಿ ಒಂದು ನಿರ್ಧಿಷ್ಟವಾದ ಉದ್ದೇಶ ಮತ್ತು ಕಾರ್ಯ ಉಂಟು. ಕಂಬದ ಮೇಲೆ ಕೂರಿಸಿರುವ ತೊಲೆಗಳಿಗೆ ಹೆಚ್ಚಿನ ಆಸರೆಯಾಗಿ ಬ್ರಾಕೆಟ್ ಅಥವಾ ಚಾಚುಪೀಠಗಳನ್ನು ಕೂರಿಸುತ್ತಿದ್ದರು. ಅದಕ್ಕಾಗಿ ಈ ಭಾಗವನ್ನು ಆಕರ್ಷಕ ಶಿಲ್ಪಗಳಿಂದಲೂ ಅಲಂಕರಿಸುತ್ತಿದ್ದರು. ಇದರಿಂದಾಗಿ ಇವುಗಳಿಗೆ 'ಬ್ರಾಕೆಟ್ ಶಿಲ್ಪ' ಗಳೆಂದು ಹೆಸರು ಬಂದಿದೆ. ಸಾಂಚಿಸ್ತೂಪದ ತೋರಣದಲ್ಲಿ ಬ್ರಾಕೆಟ್ ಶಿಲ್ಪಗಳುಂಟು. ಬಾದಾಮಿಯ ಮೂರನೆಯ ಗುಹಾಲಯದಲ್ಲಿ ಈ ರೀತಿಯ ಕೆತ್ತನೆಯ ಶಿಲ್ಪಗಳು ಕಂಡುಬರುತ್ತವೆ. ಹೊಯ್ಸಳ ರೂವಾರಿಗಳು ಈ ವಾಸ್ತು ಭಾಗವನ್ನು ತಮ್ಮ ಕುಶಲತೆಯಿಂದ ಒಂದು ಅತ್ಯಂತ ಆಕರ್ಷಕ ಭಾಗಗಳನ್ನಾಗಿ ನಿಯೋಜಿಸಿದರು.[60] ತಾಂತ್ರಿಕವಾಗಿ ನೋಡುವುದಾದರೆ ಈ ಬ್ರಾಕೆಟ್ ಶಿಲ್ಪಗಳು ಕಾರ್ಯರಹಿತವಾದದ್ದು. ಆದರೂ ಅವುಗಳಿರುವ ಸ್ಥಾನದಿಂದಾಗಿ ಇವುಗಳಿಗೆ ಬ್ರಾಕೆಟ್ ಶಿಲ್ಪಗಳೆಂದು ಹೆಸರು ಬಂದಿದೆ. ಹೊಯ್ಸಳ ವಾಸ್ತುವಿನಲ್ಲಿ ಕಾಣಬರುವ ಬ್ರಾಕೆಟ್ ಶಿಲ್ಪಗಳೆಲ್ಲವೂ ಎಲ್ಲೊ ಒಂದೆರಡನ್ನು ಬಿಟ್ಟರೆ ಇನ್ನುಳಿದವುಗಳೆಲ್ಲವೂ ನವ ಯೌವ್ವನವನ್ನು ಹೊರ ಸೂಸುತ್ತಿರುವ ಸ್ತ್ರೀಯರ ಶಿಲ್ಪಗಳು. ಇದರಿಂದಾಗಿ ಈ ಶಿಲಗಳಿಗೆ 'ಮದಿನಿಕಾ ಶಿಲ್ಪಗಳು' ಎಂಬ ವಿಶೇಷಣದಿಂದ ನಾವು ಕರೆಯುತ್ತೇವೆ.

ಪ್ರತಿಯೊಂದು ಮದನಿಕಾ ಶಿಲ್ಪಗಳು ದೇವಾಲಯದ ನವರಂಗದ ಮಧ್ಯದಲ್ಲಿರುವ ನಾಲ್ಕು ಕಂಬಗಳ ನಾಲ್ಕು ದಿಕ್ಕುಗಳಲ್ಲೂ ಅಥವಾ ನವರಂಗದ ಮಧ್ಯದ ಅಂಕಣಕ್ಕೆ ಎದುರಾಗಿರುವಂತೆ ಅಥವಾ ನವರಂಗದ ಇನ್ನಿತರ ಕಂಬಗಳ ಮೇಲೂ ಅಥವಾ ದೇವಾಲಯದ ಹೊರಗಡೆ ಮುಖ್ಯ ಕಪೋತದ ಕೆಳಭಾಗದಲ್ಲೂ ಕಾಣಬರುತ್ತವೆ. ವಾಸ್ತು ಚೌಕಟ್ಟಿನಲ್ಲಿ ಎತ್ತರ ಭಾಗದಲ್ಲಿ ಇವುಗಳನ್ನು 45 ಡಿಗ್ರಿ ಕೋನದಲ್ಲಿ ಕೂಡಿಸಿರುತ್ತಾರೆ. ಶಿಲ್ಪದ ಮೇಲಿನ ತುದಿ ಮತ್ತು ಕೆಳತುದಿಯಲ್ಲಿ ಸಣ್ಣ ಸಣ್ಣ ಗುಮ್ಮಟಗಳದ್ದು, ಅವುಗಳಿಗಾಗಿ ತೊಲೆಯಲ್ಲಿ ಮತ್ತು ಬೋಧಿಗೆಯಲ್ಲಿ ಮಾಡಲ್ಪಟ್ಟ ಗುಳಿಗಳಲ್ಲಿ ಭದ್ರವಾಗಿ ಕೂರಿಸಿರುತ್ತಾರೆ. [61]

ಮದನಿಕಾ ಶಿಲ್ಪಗಳಲ್ಲಿ ಬಹುಪಾಲು ಸುಂದರ ಸ್ತ್ರೀಯರ ಹಾವ, ಭಾವಗಳು, ಭಂಗಿಗಳು, ಭಾವನೆಗಳು ಅವರ ವಿವಿಧ ರೀತಿಯ ಕಾರ್ಯಚಟುವಟಿಕೆಗಳು, ಅಭಿರುಚಿಗಳು ಇವೆಲ್ಲವನ್ನು

ಶಿಲ್ಪಿ ಇಲ್ಲಿ ಸೆರೆ ಹಿಡಿದಿದ್ದಾನೆ. ಆಕರ್ಷಕವಾದ ಅಂಗಸೌಷ್ಟವ, ಕೆಲವು ಸಂದರ್ಭಗಳಲ್ಲಿ ನಗ್ನ ದೇಹ, ಇವು ಸಹ ಇವುಗಳಲ್ಲಿ ನಿರೂಪಿತವಾಗಿದೆ. ನಗ್ನತೆಯನ್ನು ನಿರೂಪಿಸುವುದರಲ್ಲೂ ಶಿಲ್ಪಿ ಅಶ್ಲೀಲತೆಗೆ ಅವಕಾಶವನ್ನು ಮಾಡಿಕೊಡದಿರುವುದು ಈ ಶಿಲ್ಪಗಳ ವೈಶಿಷ್ಟ್ಯ. ಪ್ರತಿಯೊಂದು ಶಿಲ್ಪವೂ ಹಿತಮಿತವಾದ ವಸ್ತ್ರ, ಆಕರ್ಷಕವಾದ ವಿವಿಧ ರೀತಿಯ ಆಭರಣಗಳು, ಕೇಶಾಲಂಕಾರಗಳು ಇವೆಲ್ಲದರಿಂದ ಅಲಂಕೃತವಾಗಿದೆ. ಜೊತೆಗೆ ಅವರ ಅನುಚರರು ಅಥವಾ ಸಹಚರರುಗಳೂ ಸಹ ಚಿಕ್ಕದಾಗಿ ಶಿಲ್ಪದ ಪಾರ್ಶ್ವಗಳಲ್ಲಿ ಕೊರೆಯಲ್ಪಟ್ಟಿರುತ್ತಾರೆ. ಪ್ರತಿಯೊಂದು ಶಿಲ್ಪಕ್ಕೂ ಚೌತಿಚಂದ್ರಾಕೃತಿಯ ಅಂದವಾದ ಲತಾಕುಂಜವಿರುತ್ತದೆ. ಹೀಗಾಗಿ ಒಂದೊಂದು ಶಿಲ್ಪವು ಒಂದೊಂದು ರೀತಿಯ ಅಪೂರ್ವ ಕಲಾಕೃತಿಗಳಾಗಿವೆ ಎಂಬುದರಲ್ಲಿ ಸಂದೇಹವಿಲ್ಲ. ನಾಟ್ಯಗಾರ್ತಿಯರು, ಅಲಂಕಾರ ಪ್ರಿಯಸ್ತ್ರೀಯರು ಪಕ್ಷಿಗಳೊಂದಿಗೆ ಸಂಭಾಷಣೆ ನಡೆಸುತ್ತಿರುವವರು, ಸಂಗೀತ ಪ್ರಿಯರು ಇನ್ನಿತರ ಕಾರ್ಯಚಟುವಟಿಕೆಯಲ್ಲಿ ತೊಡಗಿರುವ ಸ್ತ್ರೀಯರುಗಳು ಇತ್ಯಾದಿ ಈ ಶಿಲ್ಪಗಳ ಮುಖ್ಯ ವಸ್ತುವಾಗಿದೆ.

## ಅಡಿಟಿಪ್ಪಣಿಗಳು

1. ಅ.ಸುಂದರ–ಎಕ್ಸವೇಶನ್ ಆಫ್ ಸನ್ನತಿ, 1986–87, ಪುರಾತತ್ವ ಸಂ.17, ಇಂಡಿಯನ್ ಆರ್ಕಿಯಾಲಾಜಿಕಲ್ ಸೊಸೈಟಿ, ದೆಹಲಿ ಹಾಗೂ ಅ.ಸುಂದರ–ಸಮ್ ನೋಟವರ್ದಿ ಸ್ಕಲ್ಚರ್ಸ್ ಫ್ರಂ ಸನ್ನತಿ, ಇಂಡಿಯನ್ ಆರ್ಕಿಯಾಲಾಜಿಕಲ್ ಹೆರಿಟೇಜ್, ಆಗಮ ಕಲಾ ಪ್ರಕಾಶನ, ದೆಹಲಿ, 1990

2. ಇಂ.ಆಂ–ಸಂ. XIV–ಪು.ಸಂ.333

3. ಎ.ಕ. (ಹಳೆಯದು) ಸಂ. VIII, ಶಿಕಾ, ಪು.ಸಂ.263

4. ಕೆ.ಜಿ.ಕೃಷ್ಣನ್–ಉಚ್ಚಂಕಿತ ಸಂಸ್ಕೃತ ವಿದ್ಯಾ ಅರಣ್ಯ ಎಪಿಗ್ರಾಫ್ಸ್, ಸಂ.3 (ಪ್ರಾಕೃತ ಅಂಡ್ ಸಂಸ್ಕೃತ ಇನ್ಸ್‌ಕ್ರಿಪ್‌ಶನ್ಸ್, ಕ್ರಿ.ಪೂ.257 ಕಿರ.ಶ.320), ಶಾ.ಸಂ.177–376

5. ಅ.ಸುಂದರ–ಇಂಡಸ್ ಸರಸ್ವತಿ ಸಿವಿಲೈಝೇಶನ್ ಅರ್ಲಿ ಶೈವ ಕಲ್ಟ್, ಶ್ರೀ ಪುಷ್ಪಾಂಜಲಿ, ಸಿ.ಆರ್. ಶ್ರೀನಿವಾಸನ್, ಸಂಸ್ಕರಣ ಗ್ರಂಥ (ಸಂ), ಕೆ.ವಿ.ರಮೇಶ್ ಮತ್ತು ಇತರರು

6. ಎ.ಕ. (ಹಳೆಯ) ಸಂ. VIII, ಶಿಕಾ, 176

7. ಅ.ಸುಂದರ–ದ ಅರ್ಲಿ ಕದಂಬ ಟೆಂಪಲ್ ಆರ್ಕಿಟೆಕ್ಚರ್ ರೀಸೆಂಟ್ ನೋಟ್ಸ್, ಕ್ಯೂ.ಜೆ.ಎಂ.ಎಸ್., IXXV, ಪು.ಸಂ.265

8. ಬಾ.ರಾ.ಗೋಪಾಲ–ಕಾ.ಕ. ಇನ್ಸ್, (ಸಿಕೆಐ), ನಂ.23, ಪು.ಸಂ.81–87

9. ಅದೇ – ಬನವಾಸಿ ಕದಂಬರು, ಪು.ಸಂ.21

10. ಮೇಲಿನ ಟಿಪ್ಪಣಿ 39ರಂತೆ

11. ಡಾ.ಡಿ.ಜಿ.ಕುಲಕರ್ಣಿ–ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು, ಪು.ಸಂ.7, 2007–2008

12. ಪರಸಿ ಬ್ರೌನ್–ಇಂಡಿಯನ್ ಆರ್ಕಿಟೆಕ್ಚರ್ (ಬುದ್ಧಿಸ್ಟ್ ಅಂಡ್ ಹಿಂದೂ), ಪು.ಸಂ.52.

13. ಇಂ.ಆಂ., ಸಂ. III, ಪು.ಸಂ.305.

14. ಪಿ.ಕೆ.ಆಚಾರ್ಯ–ಇಂಡಿಯನ್ ಆರ್ಕಿಟೆಕ್ಚರ್ ಅಕಾರ್ಡಿಂಗ್ ಟು ಮಾನಸಾರ, ಪು.ಸಂ.4.

15. ಬ್ರೂನೋ ಡಗೆನ್ಸ್ (ಸಂ)–ಮಯಮತ, ಪು.ಸಂ. 35.

ಅಮರ್ತ್ಯಾಶ್ಚೈವ ಮರ್ತ್ಯಾಶ್ಚ ಯತ್ರ ಯತ್ರ

ವಸಂತಿ ಹೀ ತದ್ದಸ್ತು ಇತಿಮತಂ

ಪ್ರಾಸಾದಾದೀನಿ ವಾಸ್ತುನಿ ವಸ್ತುತ್ವಾದ್ ವಸ್ತುಸಂಶ್ರಯತ್ ಎಂದು ಮಯಮತದಲ್ಲಿ

ಹೇಳಲಾಗಿದೆ.

16. ಗರುಡ ಪುರಾಣ, ಅಧ್ಯಾಯ-46

ಅವಾಸವಾಸ ವೇಶ್ಮಾದೌಪುರೆ ಗ್ರಾಮೇ ವಣಿಕ್ವಥೇ

ಪ್ರಾಸಾದಾರಾಮದುರ್ಗೇಷು ದೇವಾಲಯ ಮಠೇಷುಚ ಎಂದು ಗರುಡ ಪುರಾಣದಲ್ಲಿ ಹೇಳಲಾಗಿದೆ.

17. ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಕೋಶದ ಮುನ್ನುಡಿಯಲ್ಲಿ ವಿದ್ವಾಂಸರಾ ಪಿ.ಕೆ.ಆಚಾರ್ಯ ಅವರು "ವಾಸ್ತುಶಾಸ್ತ್ರ" ಹಾಗೂ "ಶಿಲ್ಪಶಾಸ್ತ್ರ" ಪದಗಳನ್ನು ಪರ್ಯಾಯ ಪದಗಳೆಂಬಂತೆ ಬಳಸಿದ್ದಾರೆ

18. ಜಿ.ಜ್ಞಾನಾನಂದ, ಪೂರ್ವೋಕ್ತ, ಸಂ.1, ಪು.ಸಂ.5

19. ಸ್ಟೆಲ್ಲಾ ಕ್ರಮ್ರಿಶ್-ದ ಹಿಂದೂ ಟೆಂಪಲ್ಸ್, ಸಂ.1, ಪು.ಸಂ.25

20. ಅದೇ-, ಪು.ಸಂ. 29-39

21. ಬಾ.ರಾ. ಗೋಪಾಲ-ಕರ್ನಾಟಕ ಕಲೆಗಳ ವಾಸ್ತು, ಪು.ಸಂ.23
22. ಡಿ.ಎಸ್.ಶುಕ್ಲಾ-ವಾಸ್ತುಶಾಸ್ತ್ರ:ಹಿಂದೂ ಸೈನ್ಸ್ ಆಫ್ ಆರ್ಕಿಟೆಕ್ಚರ್, ಸಂ.1, ಪು.ಸಂ.460
23. ಸ್ಟೆಲ್ಲಾ ಕ್ರಮ್ರಿಶ್-ಪೂರ್ವೋಕ್ತ, ಪು.ಸಂ.48.
24. ಡಾ.ಡಿ.ಜಿ.ಕುಲಕರ್ಣಿ-ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು, ಪು.ಸಂ.9
25. ಜಿ.ಜ್ಞಾನಾನಂದ-ಪೂರ್ವೋಕ್ತ, ಪು.ಸಂ. 299
26. ಡಿ.ಎನ್.ಶುಕ್ಲಾ-ಪೂರ್ವೋಕ್ತ, ಪು.ಸಂ.400
27. ಅದೇ-ಪು.ಸಂ.166.

28. ಸ್ಟೆಲ್ಲಾ ಕ್ರಮ್ರಿಶ್-ಪೂರ್ವೋಕ್ತ, ಪು.ಸಂ.161

29. ಡಾ.ಡಿ.ಜಿ.ಕುಲಕರ್ಣಿ-ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು, ಪು.ಸಂ.10, 2007-2008

30. ಎಂ.ಎ.ಢಾಕೆ-ದ ಇಂಡಿಯನ್ ಟೆಂಪಲ್ಸ್ ಫಾರ್ಮ (ಇನ್ ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್ ಅಂಡ್ ಆರ್ಕಿಟೆಕ್ಚರ್, ಪು.ಸಂ.1-7

ಹೊಳಲು ಗ್ರಾಮದ ಶಾಸನವು (ಎ.ಕ.ಸಂ.VII (ಹಳೆಯ) ಸೊರಬ ಶಾ.ಸಂ.275)

ಸ್ವಸ್ತಿ ಸಮಸ್ತ ಸಿವ ಪಾದ ಶೇಖರ ಕಲಿಯುಗ ವಿಶ್ವಕರ್ಮ ಚೌಷಷ್ಠಿ ಕಲಾ ವಿದ್ಯಾ

ಪ್ರವೀನ ಚೌಷಷ್ಠ ಪ್ರಸಾದ ವಿಶಾರದ ನಾಗರ ಕಳಿಂಗ ದ್ರಾವಿಲ ವೇಸರ

ಚರ್ತುಜಾತಿ ಛಾಕ್ರ ಒಮ್ಮೋಜನು ಬೂ (ಒಕೊ) ಕೋಜನ ಪುತ್ರನು ಶ್ರೀಕಾರನಾಮ

ಕಂಬಗಳ ಮಾಡಿದನ್ ಎಂದು.

ಸೋಗೆಯ ಪಿಂದೋಜನ ಶಿಷ್ಯ ಬಮ್ಮೋಜನನ್ನು, ನಾಗರ, ಕಳಿಂಗ, ದ್ರಾವಿಡ, ವೇಸರ ಚತುರ್ಜಾತಿ ಪ್ರಾಸಾದ ವಿನಿರ್ಮ್ಮಿತವೆಂದೂ, ಚೌಷಷ್ಠಿ ಪ್ರಾಸಾದ

ವಿಶಾರದನೆಂದೂ ವರ್ಣಿಸಿದೆ. ದೊಡ್ಡಗದ್ದವಳ್ಳಿ ಶಾಸನದಲ್ಲಿ ವಿಮಾನ, ಸರ್ವತೋಭದ್ರ, ವೃಷಭ, ನಳನೀಕ, ಉತ್ತುಂಗ, ವೈರಾಜ, ಗರುಡ, ವರ್ಧಮಾನ, ಶಂಖ, ವೃತ್ತ, ಪುಷ್ಪಕ ಮತ್ತು ಗೃಹರಾಜವೆಂಬ ಭಿನ್ನ ಶೈಲಿಗಳ ಉಲ್ಲೇಖವಿದೆ. ಕುಪ್ಪಟೂರಿನ ಶಾಸನದಲ್ಲಿ ದ್ರಾವಿಡ, ಭೂಮಿಜ ಹಾಗೂ ನಾಗರಗಳೆಂಬ ಶೈಲಿಗಳ ಪ್ರಸ್ತಾಪವಿದೆ.

31. ಡಿ.ಕೃಷ್ಣರಾಯ ಮತ್ತು ವಿ.ಜಿ.ಆಷ್ಟೆ–ಕಾಶ್ಯಪ ಶಿಲ್ಪ, ಪು.ಸಂ.54

32. ಅದೇ

33. ಸ್ಟೆಲ್ಲಾ ಕ್ರಮ್ರಿಶ್–ಪೂರ್ವೋಕ್ತ, ಪು.ಸಂ.280

34. ಅದೇ, ಪು.ಸಂ.291

35. ಎಂ.ಎ.ಢಾಕೆ–ಪೂರ್ವೋಕ್ತ, ಪು.ಸಂ.21

36. ಎಂ.ಎನ್.ಪ್ರಭಾಕರ–ದೇವಾಲಯ ವಾಸ್ತು ಚಂದಿಕೆ, ಪು.ಸಂ.39

37. ಎಂ.ಎ.ಢಾಕೆ–ಪೂರ್ವೋಕ್ತ, ಪು.ಸಂ. 18

38. ಅದೇ. ಪು.ಸಂ.39

39. ಸ್ಟೆಲ್ಲಾ ಕ್ರಮ್ರಿಶ್–ಪೂರ್ವೋಕ್ತ, ಸಂ.2, ಪು.ಸಂ.356

40. ಅದೇ

41. ಜಿ.ಎಂ. ಮೊರೇಸ್–ಕದಂಬ ಕುಲ, ಪು.ಸಂ.38

42. ಇಂ.ಆಂ., ಸಂ.VI , ಪು.ಸಂ.24–25

43. ಹಲಸಿಯು (ಪಲಾಶಿಕಾ) ಕದಂಬರ ಇನ್ನೊಂದು ರಾಜಧಾನಿ, ಕಾಕುಸ್ಥವರ್ಮನ ಕಾಲದಿಂದಲೂ ಇಲ್ಲಿ ಯಾಪನೀಯ ಪಂಥದ ಜೈನರು ಪ್ರಬಲರಾಗಿದ್ದರು. ಮೃಗೇಶವರ್ಮನು ಈ ಬಸದಿಯನ್ನು ತನ್ನ ತಂದೆ ಶಾಂತಿವರ್ಮನ ಪರೋಕ್ಷ ವಿನಯಕ್ಕಾಗಿ ಕಟ್ಟಿಸಿದನು. ಅಲ್ಲದೇ ಅಲ್ಲಿರುವ ಅರ್ಚಕರಿಗೂ, ಜೈನ ಸನ್ಯಾಸಿಗಳಿಗೂ ಭೂಮಿಯನ್ನು ದಾನವಾಗಿ ಕೊಟ್ಟಿರುವರು.

44. ಕೆ.ವಿ.ಸೌಂದರರಾಜನ್-ಅರ್ಲಿ ಟೆಂಪಲ್ ಆರ್ಕಿಟೆಕ್ಚರ್ ಇನ್ ಕರ್ನಾಟಕ ಅಂಡ್ ಇಟ್ಸ್ ರೆಮಿಫಿಕೇಶನ್, ಪು.ಸಂ. 7

45. ಸಿಂಧಗಿ ರಾಜಶೇಖರ-ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಪು.ಸಂ. 20.

46. ಮೈಕಲ್ ಡಬ್ಲ್ಯೂ ಮೆಯಿಸ್ಟರ್ ಮತ್ತು ಎಂ.ಎ.ಢಾಕೆ (ಸಂ)-ಎನ್ಸಾಯ್ ಕ್ಲೋಪೀಡಿಯಾ ಅಷ್ಟರ ದ್ರಾವಿಡ ದೇಶ, ಪು.ಸಂ.54.

47. ಕ.ಇನ್ಸ್., ಸಂ.1, ಶಾ.ಸಂ.3

48. ಮೂರು ಗರ್ಭಗೃಹಗಳು ಒಂದೇ ದಿಕ್ಕಿನಲ್ಲಿ ಮುಖ ಮಾಡಿ, ಒಂದು ನವರಂಗವನ್ನು ಹಂಚಿಕೊಂಡಂತೆ ಇರುವ ತ್ರಿಕೂಟ ದೇವಾಲಯಗಳನ್ನು ಕಾಣಬಹುದು. ಆದರೆ ಮುಖಮಂಟಪವನ್ನು ಹಂಚಿಕೊಂಡಂತೆ ಬಹು ಅಪರೂಪ. ಇಲ್ಲಿ ದೇಗಾವೆಯ ಕಂದನಾರಾಯಣ ದೇವಾಲಯವನ್ನು ಉದಾಹರಿಸಬಹುದು.

49. ಎಸ್.ಕೆ.ರಾಮಚಂದ್ರ ರಾವ್-ಭಾರತದ ದೇವಾಲಯಗಳ ನೆಲೆ-ಹಿನ್ನೆಲೆ, ಬೆಂಗಳೂರು-1980

50. ಟಿ.ಎಸ್, ರಾಜಗೋಪಾಲ್-ಬೇಲೂರು, ಬೆಂಗಳೂರು-1972, ಹಳೆಬೀಡು-1973, ಸೋಮನಾಥಪುರ-1973

51. ಎಸ್.ರಘುನಾಥ ಭಟ್-ಹೊಯ್ಸಳ ವಾಸ್ತುಶಿಲ್ಪ ಪರಿಚಯ, ಬೆಂಗಳೂರು-1979

52. ಎಸ್.ಶ್ರೀಕಂಠಶಾಸ್ತ್ರಿ- ಹೊಯ್ಸಳ ವಾಶ್ತುಶಿಲ್ಪ, ಮೈಸೂರು-1965

53. ಪಿ.ಆರ್.ಶ್ರೀನಿವಾಸನ್-ದಕ್ಷಿಣ ಭಾರತದ ದೇವಾಲಯಗಳು, ಮೈಸೂರು-1959

54. ಬಿ.ವೆಂಕೋಬರಾವ್-ಮೈಸೂರು ದೇಶದ ವಾಸ್ತುಶಿಲ್ಪ, ಬೆಂಗಳೂರು-1928

55. P.K.Acharya- Indian Architecture according to manasara silpasastra, madras-1927

56. T.Dayanand Patel., Kesava Temple Somanathapura A Cultural Study, Delhi-1990

57. J.D.M.Derett-The Hoysalas, A medival Indian Royal Family, Oxford-1957

58. Kelleson collier- Hoysala Artists their Identity, Mysore-1989

59. S.Setter - Hoysala Sculptures in National Museum Copenhagen, 1975

60. B.Sheik Ali-The Hoysala Dynasty, Mysore-1972

61. William Coelho-The Hoysala Vamsa, Bombay-1950

## ಅಧ್ಯಾಯ–4

## ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ

ಪ್ರಾಚೀನ ಕಾಲದಿಂದಲೂ ಭಾರತ ದೇಶ ಹಿಂದೂ, ಬೌದ್ಧ, ಜೈನ, ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳಿಗೆ ಸಂಬಂಧಿಸಿದ ದೇವಾಲಯಗಳು ಭಾರತದಾದ್ಯಂತ ಕಂಡುಬರುತ್ತದೆ. ಉತ್ತರದಲ್ಲಿ ಹಿಮಾಲಯ ಪರ್ವತದಿಂದ ಹಿಡಿದು ದಕ್ಷಿಣದಲ್ಲಿ ರಾಮೇಶ್ವರದವರೆವಿಗೂ ಸಣ್ಣ ಪ್ರಮಾಣದಿಂದ ಹಿಡಿದು ಬೃಹತ್ ಗಾತ್ರದ ದೇವಾಲಯ, ಜಿನಾಲಯ, ಚೈತ್ಯಾಲಯ, ಮಂದಿರ ಹಾಗೂ ಚರ್ಚ್‌ಗಳು ನಿರ್ಮಾಣಗೊಂಡಿರುವವು. ಅದರಲ್ಲು ದಕ್ಷಿಣಭಾರತವಂತು ಕಲೆ ಮತ್ತು ವಾಸ್ತುಶಿಲ್ಪದ ತಾಣವಾಗಿದೆ. ಇಲ್ಲಿ ಆಳ್ವಿಕೆ ನಡೆಸಿದ ವಿವಿಧ ರಾಜ ಮನೆತನಗಳ ಕಾಲದಲ್ಲಿ ಹಲವಾರು ಪ್ರಾಚೀನ ನೆಲೆಗಳಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಿರುವುದನ್ನು ಕಾಣಬಹುದು. ದಕ್ಷಿಣ ಭಾರತದಲ್ಲಿ ವಿಶೇಷವಾಗಿ ದ್ರಾವಿಡ ಮತ್ತು ವೇಸರ ಶೈಲಿಯ ಮಾದರಿಯ ದೇವಾಲಯಗಳು ನಿರ್ಮಾಣಗೊಂಡಿವೆ. ಈ ಹಿನ್ನಲೆಯಲ್ಲಿ ನನ್ನ ಸಂಶೋಧನಾ ವ್ಯಾಪ್ತಿಗೆ ಒಳಪಡುವ ಮೈಸೂರು ಜಿಲ್ಲೆಯಲ್ಲಿ ಕಂಡುಬರುವ ಹೊಯ್ಸಳರ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪವನ್ನು ಶೈವ, ವೈಷ್ಣವ ದೇವಾಲಯಗಳು ಹಾಗೂ ಜೈನ ಬಸದಿಗಳು ಎಂಬ ವಿಭಾಗ ಮಾಡಿಕೊಂಡು ಪ್ರತ್ಯೇಕವಾಗಿ ಈ ಕೆಳಕಂಡಂತೆ ವಿವರಣೆ ನೀಡಿದ್ದೇನೆ.

### ಶೈವ ದೇವಾಲಯಗಳು

ಭಾರತೀಯ ಸಂಸ್ಕೃತಿಯಲ್ಲಿ ಶಿವನಿಗೆ ತನ್ನದೇ ಆದ ಪೂಜಾ ಮಹತ್ವವಿದೆ. ಹರಪ್ಪ ಸಂಸ್ಕೃತಿಯಲ್ಲಿ ಶೈವ ಸಂಸ್ಕೃತಿಯು ಮೊದಲ ಬಾರಿಗೆ ಕಂಡುಬರುತ್ತದೆ. ಭಾರತದ ಅತೀ ಪ್ರಾಚೀನ ಸಂಸ್ಕೃತಿಯ ಹುಟ್ಟು ಮತ್ತು ಅದರ ಬೆಳವಣಿಗೆಯೊಂದಿಗೆ ಶೈವ ಸಂಸ್ಕೃತಿಯು ಬೆಸೆದು ಬಂದಿರುವುದನ್ನು ನಾವು ಸಾಕ್ಷಾಧಾರಗಳಿಂದ ಕಾಣಬಹುದಾಗಿದೆ. ಸಿಂಧೂ ಸಂಸ್ಕೃತಿಯಲ್ಲಿ ಶಿವೋಪಾಸನೆ ಇದ್ದುದಕ್ಕೆ ಹಲವಾರು ಮುದ್ರೆಗಳ ಮೇಲಿರುವ ಚಿನ್ಹೆಗಳೇ ಸಾಕ್ಷಿಯಾಗಿವೆ.[1] ಶೈವಧರ್ಮಕ್ಕೆ ಸಂಬಂಧಿಸಿದಂತೆ ಅಥರ್ವಶಿರಸ್ ಉಪನಿಷತ್‌ನಲ್ಲಿ ಶಿವನ ಕೃಪೆಗೆ ಪಾತ್ರರಾಗಿ ಸಾಕ್ಷಾತ್ಕಾರವನ್ನು ಹೊಂದುವ ಶಿವ ಭಕ್ತನು ತಾನು ಪಾಲಿಸಬೇಕಾದ ನಿಯಮ ನಿಷ್ಠೆಗಳನ್ನು ತಿಳಿಸಿದೆ. ಶಿವನಿಗೆ ಭಸ್ಮವೇ ಅಗ್ನಿ, ಭಸ್ಮವೇ ವರುಣ, ಭಸ್ಮವೇ ಭೂಮಿ, ಆತ್ಮ, ಮನಸ್ಸು, ಕಣ್ಣುಗಳು ಇತ್ಯಾದಿಗಳೆಲ್ಲವು ಭಸ್ಮವೇ ಎಂಬ ಪದಗಳನ್ನು ಉಚ್ಛರಿಸುತ್ತಾ ದೇಹಕ್ಕೆ ಭಸ್ಮಧಾರಣ ಮಾಡಬೇಕು ಪಶುವಿನ ಪಾಶವನ್ನು ಕತ್ತರಿಸಿ ಹಾಕಲು ಸಮರ್ಥವಾಧ ವ್ರತವೇ ಪಾಶಪಥ ವ್ರತ ಎಂದು ಹೇಳಲಾಗಿದೆ.[2] ಬಾದಾಮಿ ಚಾಲುಕ್ಯರಿಂದ ಪ್ರೇರಣೆ ಹೊಂದಿದ ರಾಷ್ಟ್ರಕೂಟರು,

ಚೋಳರು, ಪಾಂಡ್ಯರು, ಪಲ್ಲವರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರು ಮುಂತಾದ ಪ್ರಾಚೀನ ಅರಸು ಮನೆತನಗಳು ಶೈವ ಪಂಥಕ್ಕೆ ತಮ್ಮದೇ ಆದ ಪ್ರೋತ್ಸಾಹವನ್ನು ನೀಡಿದರು.[3] ಆಗಮಗಳಲ್ಲಿ ಶಿವ ಕ್ರಿ.ಪೂ.200 ಕ್ರಿ.ಶ.1200, ಶಿವನ ನೂರೆಂಟು ಸಾಹಿತ್ಯಕ ವಿವರಣೆಗಳನ್ನು ನಮ್ಮ ಸ್ಥಪತಿ ಶ್ರೇಷ್ಠರು ತಮ್ಮ ಚಾಣದ ಮೂಲಕ ಸಾಕಾರಗೊಳಿಸಿದ್ದಾರೆ. ದೇವಾಲಯ ನಿರ್ಮಾಣ, ಶಿಲ್ಪರಚನೆಯ ನಿರ್ದಿಷ್ಟ ಸೂತ್ರಗಳು ಮತ್ತು ದೇವತಾ ಪೂಜಾವಿಧಾನಗಳು ಮುಂತಾಗಿ ಶಾಸ್ತ್ರೀಯ ಏಕರೂಪತೆಯನ್ನೊಳಗೊಂಡು ಆಗಮಗಳು ಎಂಬ ಮತ್ತೊಂದು ಸಾಹಿತ್ಯ ಪ್ರಭೇದವು ರೂಪುತಳೆಯಿತು. ಶೈವಾಗಮ, ವೈಷ್ಣವಾಗಮ ಮತ್ತು ಶಾಕ್ತಾಗಮಗಳೆಂಬ ಮೂರು ಪ್ರಕಾರಗಳು ಆಗಮಗಳಲ್ಲಿ ಕಂಡುಬಂದು ಅವುಗಳಲ್ಲಿ ಶೈವಾಗಮವು ಅತ್ಯಂತ ಪ್ರಾಚೀನ ಆಗಮವಾಗಿದೆ.[4] ವೇದಕಾಲದಲ್ಲಾಗಲೀ, ಸೈಂಧವ ಸಂಸ್ಕೃತಿಯ ಕಾಲದಲ್ಲಾಗಲೀ ದೇವಾಲಯಗಳು ನಿರ್ಮಾಣವಾಗಿರಲಿಲ್ಲ. ಸೈಂಧವ ಸಂಸ್ಕೃತಿಯ ಅವಶೇಷಗಳಲ್ಲಿ ಸಣ್ಣ ಸಣ್ಣ ಸುಣ್ಣದಕಲ್ಲಿನ, ಜೇಡಿಮಣ್ಣಿನ ವಿಗ್ರಹಗಳು ದೊರೆತಿದ್ದು, ಇವು ಅಂದಿನ ಜನರು ಮನೆ ಮನೆಯಲ್ಲೂ ಮಾಡುತ್ತಿದ್ದ ಪೂಜೆ, ಆರಾಧನೆಯ ಬಗೆಗೆ ಬೆಳಕು ಚೆಲ್ಲಿವೆ. ಇವುಗಳಲ್ಲಿ ಲಿಂಗದ ರೂಪವೂ, ಪಶುಪತಿಯ ಮುದ್ರೆಗಳೂ ದೊರೆತಿರುವುದು ಗಮನಾರ್ಹವಾಗಿದೆ. ವೇದಕಾಲದಲ್ಲಿ ಒಂದು ಗುಂಪಿನ ಜನ ವೇದೋಕ್ತ ಮಂತ್ರಗಳನ್ನು ಪಠಿಸುತ್ತಾ ಯಾಗ ಯಜ್ಞಗಳ ಪದ್ಧತಿಯನ್ನು ಅನುಸರಿಸಿದರೆ, ಹಲವರು ಇದನ್ನು ಬಿಟ್ಟು ಗೃಹಪೂಜೆಗಾಗಿ ಅವುಗಳ ಪ್ರತೀಕವಾಗಿರುವ ಸ್ಥಂಡಿಲ, ಯೂಪಗಳನ್ನು ಬಳಸುತ್ತಿದ್ದಿರಬೇಕು. ಯಾಗಯಜ್ಞಗಳನ್ನು ಮಾಡುತ್ತಿದ್ದ ವೇದೋಕ್ತ ಮಂತ್ರಗಳನ್ನು ಪಠಿಸಬಲ್ಲ ಜನರು ವರುಣ, ಇಂದ್ರ, ಅಗ್ನಿ ಮುಂತಾದ ದೇವರುಗಳಿಂದ ತಮ್ಮ ಸಂಕಷ್ಟಗಳನ್ನು ಪರಿಹರಿಸಿಕೊಂಡು, ಬೇಡಿಕೆಗಳನ್ನು ಪೂರೈಸಿಕೊಳ್ಳುತ್ತಿದ್ದರು. ಯಜ್ಞಗಳಲ್ಲಿ ಪಾಲ್ಗೊಳ್ಳುತ್ತಿದ್ದ ಜನರು(ಯಜ್ಞದಲ್ಲಿ ಹವಿಸ್ಸಿನ ಭಾಗವಿರದ) ರುದ್ರನು ಪ್ರಕೃತಿಯಿಂದಾಗುವ ಸಂಕಷ್ಟಗಳಿಗೆ ಕಾರಣನೆಂದು ತಿಳಿದು, ಅವನನ್ನು ಒಲಿಸಿಕೊಳ್ಳಲು ಸ್ಥಂಡಿಲ, ಯೂಪಗಳ ಆರಾಧನೆಯಲ್ಲಿ ತೊಡಗಿದರು. ಹೀಗೆ ಯೂಪ/ಸ್ಥಂಡಿಲಗಳು, ರುದ್ರನ ಸಂಕೇತವಾಗಿ ರುದ್ರನ ಸಂಕೇತವಾಗಿ ರೂಪುಗೊಂಡವು ನಂತರದ ಕಾಲದಲ್ಲಿ ಯೂಪವೇ ರುದ್ರನ/ಶಿವನ ಪ್ರತೀಕವಾಗಿ ಲಿಂಗವೆನ್ನಿಸಿತು. (ಇದರಂತೆ ರುದ್ರನನ್ನು ಋಗ್ವೇದದಲ್ಲಿ, ಸ್ಥಾನು, ಯೂಪ, ಸ್ತಂಭ ಮೊದಲಾದ ಪದಗಳಿಂದ ಕರೆಯಲಾಗಿದೆ) ನಂತರದಲ್ಲಿ ಲಿಂಗ (ಶಿವ/ರುದ್ರ)ವನ್ನು ಆರಾಧಿಸುವ ಜನರ ನಿರ್ದಿಷ್ಟವಾದ ಆಚಾರ ವಿಚಾರಗಳು, ತತ್ವ-ಸಿದ್ಧಾಂತಗಳು ರಚನೆಗೊಂಡು ಶೈವಧರ್ಮವೆನ್ನಿಸಿತು. ಇದನ್ನು ಅನುಸರಿಸುವವರು ಶೈವರೆನಿಸಿದರು. ಮುಂದೆ ಸಮಾಜದ ಬಹುಜನರ ಧರ್ಮವಾಗಿ ಶೈವಧರ್ಮವು ಅಂದಿನಿಂದ ಇಂದಿನವರೆಗೂ ಪ್ರಸಿದ್ಧ ಧರ್ಮವಾಗಿ ಉಳಿದಿದೆ.[5]ಹೀಗೆ ಮೇಲ್ಕಂಡ ಅಂಶಗಳಿಗೆ

ಸಂಬಂಧಿಸಿದಂತೆ ಶೈವ ಧರ್ಮವು ಮೈಸೂರು ಜಿಲ್ಲಾ ಪ್ರಾಂತ್ಯದಲ್ಲಿ ವ್ಯಾಪಕವಾಗಿ ಹರಡಿದ್ದು ಹೊಯ್ಸಳರ ಕಾಲದಲ್ಲಿ ಮೈಸೂರು ಜಿಲ್ಲೆಯಲ್ಲಿ ಹಲವಾರು ದೇವಾಲಯಗಳು ನಿರ್ಮಾಣವಾಗಿದ್ದು, ಶೈವ ಪಂಥವು ಉಚ್ಛ್ರಾಯ ಸ್ಥಿತಿಯಲ್ಲಿ ಬೆಳವಣಿಗೆ ಹೊಂದಿತ್ತು ಎಂಬುದು ನಮಗೆ ಮನವರಿಕೆಯಾಗುತ್ತದೆ.

**ಮಲ್ಲೇಶ್ವರ ದೇವಾಲಯ–ಮಳಲಿ**

ಮಳಲಿ ಕೃಷ್ಣರಾಜನಗರ ತಾಲೂಕಿಗೆ ಸೇರಿರುವ ಒಂದು ಗ್ರಾಮ. ಈ ಗ್ರಾಮದಲ್ಲಿ ಪ್ರಾಚೀನ ಮನೆತನವಾದ ಹೊಯ್ಸಳರ ಕಾಲದಲ್ಲಿ ಗ್ರಾಮದ ಉತ್ತರ ಭಾಗದಲ್ಲಿ ಮಲ್ಲೇಶ್ವರ ದೇವಾಲಯವನ್ನು ನಿರ್ಮಿಸಲಾಗಿದೆ.[6] ಪ್ರಸ್ತುತವಾಗಿ ಈ ದೇವಾಲಯ ಸಂಪೂರ್ಣವಾಗಿ ಹಾಳಾಗಿದ್ದು ಈಗ ಅದರ ಅವಶೇಷಗಳು ಮಾತ್ರ ಇಲ್ಲಿ ಕಂಡುಬರುತ್ತವೆ.**(ಚಿ.ಸಂ.1)** ಅವುಗಳಲ್ಲಿ ಶಿವಲಿಂಗ, ಅದರ ಮುಂದಿರುವ ನಂದಿ, ಮಹಿಷಾಸುರಮರ್ಧಿನಿ, ವೀರಭದ್ರನ ಶಿಲ್ಪ, ವಿಷ್ಣುವಿನ ಶಿಲ್ಪ, ಗಣಪತಿಯ ಶಿಲ್ಪಗಳು ಸಂಪೂರ್ಣವಾಗಿ ಭಗ್ನವಾಗಿದ್ದು, ದೇವಾಲಯದ ಒಂದು ಕೋಣೆಯಲ್ಲಿ ಬಿದ್ದಿದೆ.**(ಚಿ.ಸಂ.3)**

ಇದು ಹೊಯ್ಸಳರ ಕಾಲದ ನಿರ್ಮಾಣವಾಗಿದ್ದು ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪ ಕಂಡುಬರುತ್ತದೆ. ಈ ದೇವಾಲಯವು ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾಗಿದ್ದು, ಕ್ರಿ.ಶ.1137ರ ಶಾಸನವು ಮಳಲಿಯ ಮಂಟಪದ ನಿರ್ಮಾಣಕ್ಕೆಂದು ಭೂಮಿ ಖರೀದಿಸಿ ದಾನಬಿಟ್ಟ ಅಂಶವನ್ನು ತಿಳಿಸುತ್ತದೆ.[7] ಹಾಗೂ ಅಲ್ಲೇ ಇರುವ ಇನ್ನೊಂದು ಶಾಸನವು ಮಳಲಿಯ ಮಹಾದೇವನಿಗೆ ದತ್ತಿ ನೀಡಿದ ಅಂಶವನ್ನು ಉಲ್ಲೇಖಿಸುತ್ತದೆ.

**ಗರ್ಭಗೃಹ:–** ಗರ್ಭಗೃಹ 8X8 ಅಡಿ ಉದ್ದ ಅಗಲವಾಗಿ ಚೌಕಾಕಾರವಾಗಿದೆ. ಮಧ್ಯದಲ್ಲಿ ಪಾಣಿಪೀಠದ ಮೇಲೆ ಪ್ರತಿಷ್ಠಾಪಿಸಲಾಗಿರುವ ಮಲ್ಲೇಶ್ವರ ಲಿಂಗವಿದೆ.**(ಚಿ.ಸಂ.2)** ಲಿಂಗದ ಕೆಳಗಿರುವ ಪೀಠವು ಸಂಪೂರ್ಣವಾಗಿ ಮಣ್ಣಿನಲ್ಲಿ ಹೂತುಹೋಗಿದೆ. ಮೇಲ್ಛಾವಣಿಯಲ್ಲಿ ಸರಳವಾಗಿ ಬಿಡಿಸಲಾಗಿರುವ ಅರಳಿದ ಕಮಲ ಪುಷ್ಪವಿದೆ. ಗರ್ಭಗೃಹದ ದ್ವಾರವು ಸರಳವಾಗಿದೆ.

**ಸುಕನಾಸಿ:–** ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಮತ್ತು ಅಗಲವಾಗಿದ್ದು, ಇದರ ಮಧ್ಯದಲ್ಲಿ ಶಿವನಿಗೆ ಎದುರಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ನಂದಿ ಶಿಲ್ಪವನ್ನು ಬೇರೆಡೆಯಿಂದ ಸ್ಥಳಾಂತರಿಸಿ ತಂದು ಇಲ್ಲಿ ಇಟ್ಟಿರುವಂತೆ ಕಂಡುಬರುತ್ತದೆ.[8] ಇದರ ಮೇಲ್ಛಾವಣಿಯಲ್ಲಿ

ಚಪ್ಪಟೆಯಾಕಾರದ ಪದ್ಮಪುಷ್ಪ ಬಿಡಿಸಲಾಗಿದೆ. ಈ ಸುಕನಾಸಿಯ ದ್ವಾರದ ಉತ್ತರದ ಗೋಡೆ ಸಂಪೂರ್ಣವಾಗಿ ಬಿದ್ದು ಹೋಗಿದೆ. ಕಲ್ಲಿನ ಕಂಬದ ಆಸರೆಯ ಮೇಲೆ ಮೇಲ್ಛಾವಣಿ ನಿಂತಿದೆ.

**ನವರಂಗ:-** ನವರಂಗವು ಸುಮಾರು 15x15 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಆದರೆ ನವರಂಗದ ಮಧ್ಯದಲ್ಲಿರುವ ನಾಲ್ಕು ಕಂಬಗಳ ಆಸರೆಯ ಮೇಲೆ ಈಗ ಮೇಲ್ಛಾವಣಿ ನಿಂತಿದೆ. ಈ ಕಂಬಗಳು ಚೌಕಾಕಾರ ಗಾಲಿ, ಘಂಟೆ, ಘಟಾ ಮತ್ತು ಗಾಲಿಯಾಕಾರದ ಬೋಧಿಗೆ ಅದರ ಮೇಲೆ ಸರಳವಾದ ಕಪೋತವಿದೆ. ನವರಂಗದ ಮೇಲ್ಛಾವಣಿಯಲ್ಲಿ ಅರಳಿದ ಪದ್ಮವಿದೆ. ಈ ನವರಂಗದ ಪಶ್ಚಿಮ ಉತ್ತರ ಮತ್ತು ದಕ್ಷಿಣ ಗೋಡೆ ಸಂಪೂರ್ಣವಾಗಿ ಬಿದ್ದು ಹೋಗಿದೆ. **(ಚಿ.ಸಂ.4)** ಇದೇ ದೇವಾಲಯದ ಮುಂದೆ ಬಿದ್ದಿರುವ ಕಲ್ಲಿನ ಮೇಲೆ ಕ್ರಿ.ಶ.12ನೇ ಶತಮಾನದ ಶಾಸನವೊಂದು ದೊರೆತಿದ್ದು, ಈ ಶಾಸನ ಕಲ್ಲು ಅಲ್ಲಲ್ಲಿ ತೃಟಿತವಾಗಿದ್ದು, ಮಳಲಿಯ ಮಹಾದೇವರಿಗೆ ಕೊಂಚಗೌಡನ ಮಗ ಮಲೆಗೌಡನು ದೇವಾಲಯಕ್ಕೆ ದಾನ ನೀಡಿದ ಬಗ್ಗೆ ಉಲ್ಲೇಖಿಸುತ್ತದೆ.[9] **(ಚಿ.ಸಂ.5)** ದೇವಾಲಯದ ಮುಖಮಂಟಪವು ಸಂಪೂರ್ಣವಾಗಿ ಕಣ್ಮರೆಯಾಗಿದ್ದು, ಈ ದೇವಾಲಯದ ಒಳಭಾಗದಲ್ಲಿರುವ ಭಗ್ನವಾಗಿರುವ ಕೆಲವು ಶಿಲ್ಪಗಳನ್ನು ಮೇಲಕ್ಕೆ ನಿಲ್ಲಿಸಲಾಗಿದೆ.

ಈ ದೇವಾಲಯದ ಸುತ್ತಲೂ ಬೃಹದಾಕಾರದ ಆಲದ ಮರಗಳು ಬೆಳೆದು ನಿಂತಿರುವುದರಿಂದ ದೇವಾಲಯದ ಶಿಥಿಲಾವಸ್ಥೆಗೆ ಕಾರಣವಾಗಿದೆ. ಈ ದೇವಾಲಯದ ಅಧಿಷ್ಠಾನವು ಭೂಮಿಯಲ್ಲಿ ಹೂತುಹೋಗಿದೆ. ಭಿತ್ತಿ ಮತ್ತು ಗರ್ಭಗೃಹದ ಭಿತ್ತಿಯನ್ನು ಹೊರತುಪಡಿಸಿ ಶುಕನಾಸಿ ಮತ್ತು ನವರಂಗದ ಭಿತ್ತಿ ಬಿದ್ದು ಹೋಗಿದೆ.**(ಚಿ.ಸಂ.6)** ಈ ದೇವಾಲಯದ ಮುಂದೆ ಸೂರ್ಯದೇವನ ಪೀಠವಿದೆ. ಆದರೆ ಸೂರ್ಯದೇವನ ಮೂರ್ತಿ ಈಗ ಕಂಡುಬರುವುದಿಲ್ಲ.

**ಪಂಚಲಿಂಗೇಶ್ವರ ದೇವಾಲಯ-ಸೋಮನಾಥಪುರ**

ಹಾಸನ ಜಿಲ್ಲೆಯ ಗೋವಿಂದನಹಳ್ಳಿಯಲ್ಲಿರುವ ಪಂಚಕೂಟ ದೇವಾಲಯವಾದ ಪಂಚಲಿಂಗೇಶ್ವರ ದೇವಾಲಯದ (ಕ್ರಿ.ಶ.1237) ಮಾದರಿಯಲ್ಲಿ ಬಹುಶಃ ಈ ದೇವಾಲಯದಿಂದ ಪ್ರೇರಣೆ ಹೊಂದಿ 3ನೇ ನರಸಿಂಹನ ದಂಡನಾಯಕನಾದ ಸೋಮೆಯ ದಣ್ಣಾಯಕ,[10] ಸೋಮದೇವ,[11] ಸೋಮನಾಥನು[12] ಆತನ ಹೆಸರಿನಲ್ಲಿ ನಿರ್ಮಾಣ ಮಾಡಿದ ಅಗ್ರಹಾರವಾದ ಸೋಮನಾಥಪುರದ ಈಶಾನ್ಯ ದಿಕ್ಕಿನಲ್ಲಿ ಅಂದರೆ, ಕೇಶವ ದೇವಾಲಯದ ಅನತಿ ದೂರದಲ್ಲಿ ಕಾವೇರಿ ನದಿಯ ದಡದಲ್ಲಿ ಕ್ರಿ.ಶ.1269ರಲ್ಲಿ ಕೇಶವ ದೇವಾಲಯವನ್ನು

ನಿರ್ಮಾಣ ಮಾಡಿದ 11 ವರ್ಷಗಳ ತರುವಾಯ ಬಿಜ್ಜಳೇಶ್ವರ, ಹೆಮ್ಮೇಶ್ವರ, ರೇವಣೇಶ್ವರ, ಸೋಮೇಶ್ವರ ಹಾಗೂ ಭೈರವೇಶ್ವರ ಎಂಬ ಹೆಸರಿನ ಪಂಚಕೂಟ ದೇವಾಲಯವನ್ನು ಪೂರ್ವಾಭಿಮುಖವಾಗಿ ಬಿಳಿಕಣಶಿಲೆಯನ್ನು ಬಳಸಿ ನಿರ್ಮಿಸಿದನು.**(ಚಿ.ಸಂ.7)** ಈ ದೇವಾಲಯದಲ್ಲಿರುವ ರೇವಣೇಶ್ವರ ಹಾಗೂ ಹೆಮ್ಮೇಶ್ವರ ಲಿಂಗಗಳನ್ನು ತನ್ನ ತಂದೆ-ತಾಯಿಯರ ಹೆಸರಿನಲ್ಲಿ ನಿರ್ಮಿಸಿರುವುದು ಉಲ್ಲೇಖಾರ್ಹವಾಗಿದೆ. ಇದರಿಂದ ಸೋಮನಾಥನ ತಂದೆ ತಾಯಿಯ ಹೆಸರುಗಳು ರೇವಣ್ಣ ಹಾಗೂ ಹೆಮ್ಮಲಾದೇವಿ ಎಂಬುದು ಪಂಚಲಿಂಗೇಶ್ವರ ದೇವಾಲಯದ ಬಳಿ ದೊರೆತಿರುವ ಕ್ರಿ.ಶ.1268ರ ಶಾಸನದಿಂದ ತಿಳಿದುಬರುತ್ತದೆ.[13,14] ಈ ದೇವಾಲಯವು ಒಂದೇ ಸಾಲಿನಲ್ಲಿ ಐದು ಗರ್ಭಗೃಹಗಳನ್ನು ಹೊಂದಿದ್ದು, ಪ್ರಸ್ತುತ ಎಡ ಮತ್ತು ಬಲಪಾರ್ಶ್ವದ ಕೊನೆಯಲ್ಲಿರುವ ಬಿಜ್ಜಳೇಶ್ವರ ಹಾಗೂ ಭೈರವೇಶ್ವರ ಭಾಗಗಳು ಸಂಪೂರ್ಣವಾಗಿ ಅವನತಿ ಹೊಂದಿದ್ದು, ಅವುಗಳ ಕುರುಹುಗಳು ಮಾತ್ರ ದೊರೆಯುತ್ತವೆ. ಮಧ್ಯ ಭಾಗದಲ್ಲಿದ್ದ ರೇವಣ್ಣೇಶ್ವರ, ಹೆಮ್ಮೇಶ್ವರ ಹಾಗೂ ಸೋಮೇಶ್ವರ ಗರ್ಭಗುಡಿಗಳ ಶಿಥಿಲಗೊಂಡಿರುವ ಭಾಗಗಳು ಮಾತ್ರ ಉಳಿದಿವೆ. ಈ ಗರ್ಭಗುಡಿಗಳ ಮೇಲ್ಭಾಗ ಶಿಖರಗಳು ಒಂದೇ ರೀತಿ ಇದ್ದು ಇವು ದ್ರಾವಿಡ ಮಾದರಿಯಲ್ಲಿ ನಿರ್ಮಿತವಾಗಿವೆ.

**ಗರ್ಭಗೃಹಗಳು:-**ನಾಶವಾಗಿರುವ ಎರಡು ಗುಡಿಗಳನ್ನು ಹೊರತುಪಡಿಸಿ ಉಳಿದ ಗರ್ಭಗುಡಿಗಳು ಒಂದೇ ಮಾದರಿ ಹಾಗೂ ಸುತ್ತಳತೆಯನ್ನು ಹೊಂದಿವೆ. ಇವುಗಳ ಸುತ್ತಳತೆ 7.5X7.5 ಅಡಿ ಇದ್ದು, ಚೌಕಾಕಾರವಾಗಿವೆ. ಮಧ್ಯದಲ್ಲಿ ಒಂದು ಅಡಿ ಪೀಠವಿದ್ದು, ಈ ಗರ್ಭಗುಡಿಗಳಲ್ಲಿರುವ ಎಲ್ಲಾ ಮೂಲ ಶಿಲ್ಪಗಳು ಕಣ್ಮರೆಯಾಗಿವೆ. ಆದರೆ ಇಲ್ಲಿ ಲಿಂಗಗಳಿದ್ದ ಕುರುಹುಗಳು ಮಾತ್ರ ದೊರೆಯುತ್ತವೆ. ಈ ಗರ್ಭಗುಡಿಗಳಲ್ಲಿ ಯಾವುದೇ ಮಾದರಿಯ ಅಲಂಕರಣೆಗಳಿಲ್ಲದೆ ಸರಳವಾಗಿವೆ. ಉಳಿದಿರುವ ಗರ್ಭಗೃಹಗಳ ದ್ವಾರಗಳು ಸಹ ಒಂದೇ ಮಾದರಿಯಲ್ಲಿದ್ದು, ಸರಳವಾದ ಪಟ್ಟಿಕೆಗಳಿಂದ ಕೂಡಿವೆ. ಮಧ್ಯದಲ್ಲಿ ತೆಳುವಾದ ಅಥವಾ ಸಣ್ಣದಾದ ಅರೆಗಂಬಗಳಿವೆ. ಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರನ್ನು ಕೆತ್ತಲು ಬಿಟ್ಟಿರುವ ಜಾಗವು ಖಾಲಿಯಾಗಿದ್ದು, ಯಾವುದೇ ಉಬ್ಬುಶಿಲ್ಪಗಳ ಕೆತ್ತನೆಗಳಿಲ್ಲ. ತೋರಣದ ಭಾಗಗಳಲ್ಲಿ ಸಾಧಾರಣ ಅಲಂಕರಣೆಯ ಹೊಯ್ಸಳ ಶೈಲಿಯ ಕೆತ್ತನೆಗಳಿವೆ. ಲಲಾಟಬಿಂಬವು ಅಸ್ಪಷ್ಟವಾಗಿದ್ದು ಯಾವ ಶಿಲ್ಪವೆಂದು ತಿಳಿದುಬರುವುದಿಲ್ಲ.

**ಸುಕನಾಸಿಗಳು:** ಸುಕನಾಸಿಯು ಗರ್ಭಗೃಹಕ್ಕಿಂತ ಸ್ವಲ್ಪ ಚಿಕ್ಕದಾಗಿದ್ದು, 7.5 ಅಡಿ ಅಗಲ ಹಾಗೂ 7 ಅಡಿ ಉದ್ದವಾಗಿವೆ. ಚೌಕಾಕಾರಗಳಲ್ಲಿರುವ ಈ ಸುಕನಾಸಿಗಳಲ್ಲಿ ಯಾವುದೇ ಅಲಂಕರಣೆಗಳಿಲ್ಲದೆ ಸರಳವಾಗಿವೆ. ಸುಕನಾಸಿಯ ದ್ವಾರಬಂಧವು ಪಟ್ಟಿಕೆಗಳಿಂದ ಕೂಡಿದ್ದು

ಪಟ್ಟಿಕೆಗಳ ಮೇಲೆ ಯಾವುದೇ ಮಾದರಿಯ ಸೂಕ್ಷ್ಮಕೆತ್ತನೆಗಳು ಕಂಡುಬರುವುದಿಲ್ಲ. ದ್ವಾರಪಾಲಕರನ್ನು ಕೆತ್ತಲು ಬಿಟ್ಟಿರುವ ಜಾಗದಲ್ಲಿ ಯಾವುದೇ ಶಿಲ್ಪಗಳಿಲ್ಲದೆ ಖಾಲಿಯಾಗಿರುವ ಅಪೂರ್ಣ ಕೆತ್ತನೆಯಾಗಿದೆ. ಈ ಶಿವಾಲಯದ ಗರ್ಭಗುಡಿ ಹಾಗೂ ಸುಕನಾಸಿಗಳ ದ್ವಾರಗಳು ಸೋಮನಾಥ ದಂಡನಾಯಕನು ನಿರ್ಮಿಸಿರುವ ಲಕ್ಷ್ಮೀನರಸಿಂಹ ದೇವಾಲಯದ ಗರ್ಭಗೃಹ ಹಾಗೂ ಸುಕನಾಸಿಯ ದ್ವಾರಗಳ ಮಾದರಿಯಲ್ಲಿವೆ.

ಸುಕನಾಸಿ ಹಾಗೂ ಐದು ಗರ್ಭಗುಡಿಗಳ ಮುಂಭಾಗದಲ್ಲಿ ಕಂಬಗಳ ಸಾಲುಗಳಿದ್ದವೆಂದು 'ಹಿಸ್ಟರಿ ಆಫ್ ಸೋಮನಾಥಪುರ' ಎಂಬ ಕೃತಿಯಲ್ಲಿ ಡಿ.ವಿ.ದೇವರಾಜುರವರು ಉಲ್ಲೇಖಿಸಿದ್ದಾರೆ.[15] ಆದರೆ ಪ್ರಸ್ತುತ ಉಳಿದಿರುವ ಮೂರು ಗರ್ಭಗುಡಿಗಳ ಮುಂಭಾಗದಲ್ಲಿರುವ ಕಂಬಗಳ ಮಂಟಪದಲ್ಲಿ 13 ಕಂಬ 2 ಸಾಲಿನಲ್ಲಿ ಒಟ್ಟು 26 ಕಂಬಗಳಿವೆ.**(ಚಿ.ಸಂ.8)** ಈ ಕಂಬಗಳು ಒಂದು ಅಡಿಯ ಉಪಪೀಠ, ಚತುರಸ್ರಾಕಾರದ ಪೀಠ, ಅಷ್ಟಮುಖ ಹಾಗೂ ಹದಿನಾರು ಮುಖಗಳನ್ನು ಹೊಂದಿದ್ದು, ಮಧ್ಯಭಾಗದಲ್ಲಿ ಸಿಲಿಂಡರಿನಾಕಾರದಲ್ಲಿವೆ. ಅದರ ಮೇಲ್ಭಾಗದಲ್ಲಿ ತಡಿ, ಮಂಡಿ ವೃತ್ತಾಕಾರದ ಫಲಗೈಯನ್ನು ಹೊಂದಿರುವ ಬೋಧಿಗೆ ಇವೆ. ಶುಕನಾಸಿಗಳ ಮುಂಭಾಗಗಳಲ್ಲಿರುವ ನಾಲ್ಕು ಕಂಬಗಳ ಮೇಲಿನ ಮೇಲ್ಛಾವಣಿಯಲ್ಲಿ ಎರಡು ಹಂತಗಳಲ್ಲಿ ರಚಿತವಾಗಿರುವ ನಕ್ಷತ್ರಾಕಾರದ ಭುವನೇಶ್ವರಿಗಳಿವೆ. ಈ ಕಂಬಗಳ ಮಧ್ಯೆ ಯಾವುದೇ ಅಲಂಕರಣೆಗಳಿಲ್ಲದ ತುಂಡುಪಾದ ಹೊಂದಿರುವ ನಾಲ್ಕು ಮುಖಗಳ ಕಂಬಗಳನ್ನು ಸೇರಿಸಲಾಗಿದೆ. ಬಹುಶಃ ಇವುಗಳನ್ನು ಹೊಯ್ಸಳರ ನಂತರದ ಕಾಲಘಟ್ಟದಲ್ಲಿ ಜೀರ್ಣೋದ್ಧಾರ ಮಾಡಿಸಿ ಜೋಡಿಸಿರಬಹುದೆಂದು ಊಹಿಸಬಹುದಾಗಿದೆ. ಈ ಕಂಬಗಳ ಮಂಟಪದ ಮುಂಭಾಗದಲ್ಲಿ ದೇವಾಲಯವನ್ನು ಪ್ರವೇಶಿಸಲು ಮುಖಮಂಟಪಗಳ ಮಾದರಿಯಲ್ಲಿ ನಿರ್ಮಿಸಿರುವ ಕಂಬಗಳ ಎರಡು ಮಂಟಪಗಳಿದ್ದು, ಅವು ಸಂಪೂರ್ಣ ಶಿಥಿಲಾವಸ್ಥೆಯಲ್ಲಿವೆ. ಈ ಮಂಟಪಗಳ ಎರಡು ಬದಿಗಳಲ್ಲಿ ಮೂರು ಮೂರು ಕಂಬಗಳಿದ್ದು, ಒಟ್ಟು ಆರು ಕಂಬಗಳು ಕಂಡುಬರುತ್ತವೆ.

**ಅಧಿಷ್ಠಾನ:-** ನಾಲ್ಕು ಅಡಿ ಎತ್ತರವಾಗಿದ್ದು, ಉಪಾನ, ಜಗತಿ, ಚೂಪುಕುಮುದ, ಗಳ, ಕಂಠ ಹಾಗೂ ಪ್ರತಿಯ ಭಾಗಗಳಿವೆ. ಮಧ್ಯಭಾಗದ ದೇವಾಲಯದ ಅಧಿಷ್ಠಾನವು ಸಂಪೂರ್ಣವಾಗಿ ಭೂಮಿಯಲ್ಲಿ ಮುಚ್ಚಿಹೋಗಿದ್ದು ಉಳಿದೆರಡು ಗರ್ಭಗುಡಿಗಳ ಅಧಿಷ್ಠಾನವು ಸುಸ್ಥಿಯಲ್ಲಿವೆ.

**ಭಿತ್ತಿ**:-ಸುಮಾರು 10 ಅಡಿ ಎತ್ತರವಾಗಿರುವ ಭಿತ್ತಿಯನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದ್ದು, ಕೆಳಭಾಗದ ಭಿತ್ತಿಯಲ್ಲಿ ಭಿತ್ತಿಪಾದಗಳ ರಚನೆಗಳಿದ್ದು, ಈ ಭಿತ್ತಿಪಾದಗಳ

ಮಧ್ಯೆ ಪದ್ಮಬಂಧಗಳ ಕೆತ್ತನೆಗಳಿವೆ. ಮೇಲ್ಭಾಗದ ಭಿತ್ತಿಯಲ್ಲಿ ಭಿತ್ತಿಪಾದಗಳ ಮುಂದುವರಿದ ಭಾಗಗಳಿದ್ದು, ಈ ಸ್ತಂಭಗಳ ಮೇಲ್ಭಾಗದಲ್ಲಿ ಘಂಟಾ, ಮಂಡಿ, ಫಲಕದ ಅಲಂಕರಣೆಗಳಿವೆ.[16]

**ಪ್ರಸ್ತರ:**–ಪ್ರಸ್ತರದ ಭಾಗದ ಕಪೋತವು ಎರಡು ಅಡಿ ಮುಂಚಾಚಿದ್ದು, ಇಳಿಜಾರಾಗಿದೆ. ಕಪೋತ ಮೇಲ್ಭಾಗದಲ್ಲಿರುವ ಹಾರದಲ್ಲಿ ದಂತಪಂಕ್ತಿ ಅಥವಾ ವ್ಯಾಳಪಂಕ್ತಿಯ ಕೆತ್ತನೆಗಳಿವೆ. ದೇವಾಲಯದ ಸುತ್ತಲೂ ಇದೇ ರೀತಿ ಮುಂದುವರೆದಿದೆ.

**ಶಿಖರ:**– ಗರ್ಭಗೃಹಗಳ ಮೇಲ್ಭಾಗದ ಶಿಖರವು ಮೂರು ಹಂತಗಳಲ್ಲಿ ನಿರ್ಮಾಣವಾಗಿರುವ ಪಿರಮಿಡ್ ಆಕಾರದ ದ್ರಾವಿಡ ಶೈಲಿಯ ಶಿಖರವಾಗಿದೆ. ಈ ಶಿಖರಗಳಲ್ಲಿ ಶಿಲ್ಪಗಳನ್ನು ಕೆತ್ತಲು ಸ್ಥಳಾವಾಕಾಶವನ್ನು ಬಿಟ್ಟಿದ್ದು, ಶಿಲ್ಪಗಳ ಕೆತ್ತನೆಗಳಿಲ್ಲ. ಇವುಗಳ ಇಕ್ಕೆಲಗಳಲ್ಲಿ ಕೂಡುಗಳ ರಚನೆ ಇದ್ದು, ಮೂರು ಹಂತಗಳಲ್ಲೂ ಒಂದೇ ರೀತಿಯ ಕೆತ್ತನೆಗಳಿದ್ದು, ಚಿಕ್ಕದಾಗುತ್ತಾ ಸಾಗಿವೆ.

**ಸ್ತೂಪಿ:**–ಶಿಖರದ ಮೇಲ್ಭಾಗದಲ್ಲಿ ಆಯತಾಕಾರದ ಸೂಕ್ಷ್ಮ ಕೆತ್ತನೆಗಳನ್ನು ಹೊಂದಿಲ್ಲದ ಇಳಿಜಾರಾಗಿರುವ ಸ್ತೂಪವಿದ್ದು, ಸ್ತೂಪದ ಮೇಲ್ಭಾಗದ ಕಳಸವು ಕಣ್ಮರೆಯಾಗಿದೆ.[17]

ಈ ದೇವಾಲಯದ ಎಲ್ಲಾ ಗರ್ಭಗುಡಿಗಳು, ಸುಕನಾಸಿಗಳು, ಅಧಿಷ್ಠಾನಗಳು, ಭಿತ್ತಿಗಳು, ಪ್ರಸ್ತರಗಳು, ಶಿಖರಗಳು ಹಾಗೂ ಸ್ತೂಪಿಗಳೆಲ್ಲವೂ ಸಹ ಒಂದೇ ಮಾದರಿಯಲ್ಲಿರುವುದನ್ನು ಕಾಣಬಹುದಾಗಿದ್ದು, ಪ್ರಸ್ತುತ ಈ ಶಿವಾಲಯವು ಸಂಪೂರ್ಣವಾಗಿ ಶಿಥಿಲಗೊಂಡಿದ್ದು, ಅವನತಿಯ ಅಂಚಿನಲ್ಲಿದೆ. ಶೀಘ್ರವಾಗಿ ಪುರಾತತ್ವ ಇಲಾಖೆಯವರು ಜೀರ್ಣೋದ್ಧಾರ ಕೈಗೊಂಡಲ್ಲಿ ಈ ದೇವಾಲಯದ ಉಳಿದ ಭಾಗಗಳನ್ನು ರಕ್ಷಿಸಬಹುದಾಗಿದೆ. ಇಲ್ಲವಾದಲ್ಲಿ ಹೊಯ್ಸಳರ ನಿರ್ಮಿತಿಯಾದ ಈ ಕಲಾಕೃತಿಯನ್ನು ಮುಂದಿನ ವೇಳೆಗೆ ಕೇವಲ ಇತಿಹಾಸದ ಪುಸ್ತಕಗಳಲ್ಲಿ ಮಾತ್ರ ಪ್ರದರ್ಶಿಸಬೇಕಾಗುತ್ತದೆ.

**ಕರಕಂಠೇಶ್ವರ ದೇವಾಲಯ–ಕಂಪಲಾಪುರ**

ಈ ಗ್ರಾಮವು ಪಿರಿಯಾಪಟ್ಟಣ ತಾಲೂಕು ಕೇಂದ್ರದಿಂದ ಪೂರ್ವಕ್ಕೆ 7ಕಿ.ಮೀ ದೂರದಲ್ಲಿದೆ. ಹಾಗೆಯೇ ಈ ದೇವಾಲಯವು ಕಂಪಲಾಪುರ ಗ್ರಾಮದಿಂದ ಆಗ್ನೇಯ ಭಾಗದಲ್ಲಿದ್ದು, ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಲಾಗಿದೆ. ಈ ದೇವಾಲಯದ ಸುತ್ತಲೂ ಕಣಶಿಲೆಯಿಂದ ನಿರ್ಮಿಸಲಾಗಿದ್ದು, ಏಕಕೂಟ ದೇವಾಲಯವಾಗಿದೆ.**(ಚಿ.ಸಂ.9)** ಇದು ಕ್ರಿ.ಶ.9–10ನೇ ಶತಮಾನದಲ್ಲಿ ನಿರ್ಮಾಣವಾಗಿದ್ದು, ಇದರ ಗರ್ಭಗೃಹವು ಗಂಗರ ಕಾಲದಲ್ಲಿ ನಿರ್ಮಾಣ ಮಾಡಿದ್ದು, ತದನಂತರದ ಅವಧಿಯಲ್ಲಿ ಹೊಯ್ಸಳ ಕಾಲದಲ್ಲಿ ಉಳಿದ ಭಾಗವನ್ನು ವಿಸ್ತರಿಸಿದ್ದಾರೆ.[18]

ಹಾಗೂ ಈ ದೇವಾಲಯಕ್ಕೆ ಸಂಬಂಧಿಸಿದಂತೆ ದೇವಾಲಯದ ಪ್ರಕಾರದ ಗುಡಿಯ ಒಳಗೆ ಎರಡು ಕಲ್ಲುಗಳ ಮೇಲೆ ಇರುವ ಈ ಶಾಸನದ ಕಾಲ ಕ್ರಿ.ಶ.1174. ಆಗ ಎರಡನೇ ಬಲ್ಲಾಳನು ದೋರ ಸಮುದ್ರದಿಂದ ಆಳುತ್ತಿದ್ದು, ಅರಸನ ಅನೇಕ ಬಿರುದುಗಳನ್ನು ಈ ಶಾಸನದಲ್ಲಿ ಉಲ್ಲೇಖಿಸುತ್ತದೆ.[19] ಈ ಶಾಸನವು ಉಯಿಣಬಾಳಿನ ಹತ್ತು ಕುದುರೆಗಳ ನಾಯಕತನವನ್ನು ಪಡೆದ ಕೋಟೆಯ ಕುಪ್ಪಯ ಮಾದೆಯನಾಯಕನು ಕಂದಾಯವನ್ನು ಕೋಟೆಯ ಕುಪ್ಪೆ ಗ್ರಾಮದ ಹತ್ತು ಕಾಲುವಳಗಳನ್ನು ಅವನು ಪಡೆದಿದ್ದನು ಎಂಬುದಾಗಿ ತಿಳದುಬರುತ್ತದೆ.

ಬೆಟ್ಟರಸಣ್ಣನಾಯಕನಿಗೂ ಚಂಗಾಳ್ವ ಮಹಾದೇವನಿಗೂ ನಡೆದ ಯುದ್ಧದಲ್ಲಿ ಚೆಂಗಾಳ್ವ ಮಹಾದೇವನು ಮೃತ ಹೊಂದಲು, ಆ ಸೇಡನ್ನು ತೀರಿಸಲು ಆತನ ಉತ್ತರಾಧಿಕಾರಿಯಾದ ಮಹಾಮಂಡಲೇಶ್ವರ ಪೆಮ್ಮ ವೀರರಸ ಚೆಂಗಾಳ್ವನು ಹೊಯ್ಸಳ ಸೇನಾಪತಿಯ ವಶದಲ್ಲಿದ್ದ ಪಾಲ್ಪರೆಯ ಮೇಲೆ ದಾಳ ಮಾಡಿದನು. ಆಗ ನಡೆದ ಯುದ್ಧದಲ್ಲಿ ಮಾದೆಯನಾಯಕನು ಹೊಯ್ಸಳ ಸೇನಾಪತಿಯ ಪರವಾಗಿ ಪರಾಕ್ರಮದಿಂದ ಯುದ್ಧ ಮಾಡಿ ಮೃತ ಹೊಂದಿದನು. ಈ ವೀರನ ಗೌರವಾರ್ಥವಾಗಿ ದಂಡನಾಯಕನು ನೆತ್ತರು ಕೊಡುಗೆಯಾಗಿ ದತ್ತಿಯನ್ನು ಬಿಟ್ಟನು ಎಂದು ಉಲ್ಲೇಖಿಸಲಾಗಿದೆ. ಈ ದೇವಾಲಯದ ಬಗ್ಗೆ ಇಲ್ಲಿನ ಸ್ಥಳಯರ ಪ್ರಕಾರ ಅಂದರೆ ಶಿವನು ವಿಷವನ್ನು ಕುಡಿದ ಸಂದರ್ಭದಲ್ಲಿ ಗಂಟಲಿನಲ್ಲಿ ನೋವು ಕಾಣಿಸಿಕೊಂಡು ದೇಹದಲ್ಲಿ ಏನೊ ಕಂಪನ ಆದಾಗ ಶಿವನು ಇಲ್ಲಿ ಬಂದು ನೆಲೆಸಿದನು. ನಂತರ ಅವನು ಕರಕಂಠೇಶ್ವರನಾದನು ಎಂಬುದು ಇಲ್ಲಿರುವ ಸ್ಥಳಯರ ಅಭಿಪ್ರಾಯವಾಗಿದೆ.[20] ಹಾಗೆಯೇ ಶಿವನಿಗೆ ಕಂಪನ ಆದ್ದರಿಂದ ಈ ಊರಿಗೆ ಕಂಪಲಾಪುರ ಎಂದು ಹೆಸರಾಯಿತು ಎಂದು ತಿಳದುಬಂದಿದೆ. ಇಲ್ಲಿರುವ ಕರಕಂಠೇಶ್ವರ ಎಂಬ ಹೆಸರಿನ ದೇವಾಲಯವು ಇಡೀ ಕರ್ನಾಟಕದಲ್ಲಿ ಎಲ್ಲಿಯೂ ಸಹ ಕಂಡು ಬರುವುದಿಲ್ಲ ಎಂಬುದು ಸ್ಥಳಯರ ಅಭಿಪ್ರಾಯವಾಗಿದೆ. ಕರಕಂಠೇಶ್ವರ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಒಂದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪದ ಭಾಗಗಳನ್ನು ಹೊಂದಿದೆ.

**ಗರ್ಭಗೃಹ:–** ಈ ಗರ್ಭಗೃಹವು 8x8 ಉದ್ದ ಅಗಲವನ್ನು ಹೊಂದಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಪೀಠವಿದ್ದು, ಈ ಪೀಠವು 1.5 ಅಡಿ ಎತ್ತರವಿರುವ ಶಿವಲಿಂಗವನ್ನು ಹೊಂದಿದೆ. ಈ ಶಿವಲಿಂಗವು ಬ್ರಹ್ಮಭಾಗ, ವಿಷ್ಣುಭಾಗ, ರುದ್ರಭಾಗಗಳನ್ನು ಒಳಗೊಂಡಿದ್ದು ಶಿವಲಿಂಗದ ಮೇಲೆ ಲೋಹದ ಪ್ರಭಾವಳಯನ್ನು ನಿರ್ಮಾಣ ಮಾಡಲಾಗಿದೆ.[21] **(ಚಿ.ಸಂ.10)** ಈ ಶಿವಲಿಂಗದ ಮುಂದೆ ಮತ್ತೊಂದು ಶಿವಲಿಂಗವನ್ನು ಪಾಣಿಪೀಠದ ಮೇಲೆ ಇರಿಸಲಾಗಿದೆ. ಬಲಭಾಗದಲ್ಲಿ ನಾಗಶಿಲ್ಪವಿದೆ. ಗರ್ಭಗೃಹದ ಒಳಭಾಗದ ಭಿತ್ತಿಯು ಜೀರ್ಣೋದ್ಧಾರವಾಗಿದ್ದು, ಗರ್ಭಗೃಹದ ಮೇಲ್ಛಾವಣಿಯಲ್ಲಿ

ನಕ್ಷತ್ರಾಕಾರವಾದ ಭುವನೇಶ್ವರಿ ಇದೆ. ಈ ಭುವನೇಶ್ವರಿಯಲ್ಲಿ ಯಾವುದೇ ಅಲಂಕರಣೆ ಇಲ್ಲದೆ ಸರಳವಾಗಿದೆ.

**ಸುಕನಾಸಿ:–** ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರಲ್ಲಿ ಶಿವಲಿಂಗಕ್ಕೆ ಎದುರಾಗಿ ಕೂರಿಸಲಾಗಿರುವ ನಂದಿಯನ್ನು ಸ್ವಲ್ಪಭಾಗದಲ್ಲಿ ಅಂದರೆ ಉತ್ತರಗೋಡೆಯ ಮುಂದೆ ಸ್ಥಳಾಂತರಿಸಿ ಇಡಲಾಗಿದೆ. ಈ ಸುಕನಾಸಿಯ ಪಶ್ಚಿಮದ ಗೋಡೆಯ ಮುಂದೆ ಸುಮಾರು 2.5 ಅಡಿ ಎತ್ತರವಾದ ಭೈರವ ಶಿಲ್ಪವಿದೆ. ಗರ್ಭಗೃಹದ ಬಾಗಿಲ ಎಡಭಾಗದಲ್ಲಿ ಸುಖಾಸನದಲ್ಲಿ ಕುಳಿತಿರುವ ಎರಡು ಅಡಿ ಎತ್ತರವಿರುವ ವೀರಭದ್ರನ ಶಿಲ್ಪವಿದೆ. ಈ ಸುಕನಾಸಿಯ ಒಳಭಾಗದಲ್ಲಿ ಗೋಡೆಗೆ ಸುತ್ತಲೂ ಟೈಲ್ಸ್‌ಗಳನ್ನು ಅಂಟಿಸಲಾಗಿದೆ. ಸುಕನಾಸಿಯ ಮೇಲ್ಚಾವಣಿಯ ಗೋಡೆ ಮೇಲೆ ಹಾಗೂ ಸುಕನಾಸಿಯ ಬಾಗಿಲಿನಲ್ಲಿ ನಿಲ್ಲಿಸಿರುವ ಕಣಶಿಲೆಯ ದಪ್ಪನಾದ ಕಲ್ಲು ಚಪ್ಪಡಿಯ ಮೇಲೆ ಶಾಸನವನ್ನು ಬರೆಸಲಾಗಿದೆ.

**ನವರಂಗ:–** ನವರಂಗವು 20x20 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ವೃತ್ತಾಕಾರದ ನಾಲ್ಕು ಕಂಬಗಳಿವೆ. ಈ ಕಂಬಗಳು ಉಪಪೀಠ ಚೌಕಾಕಾರದ ಪೀಠ, ಷೋಡಶಮುಖ, ಬಳೆಗಳ ಅಲಂಕರಣ, ಘಂಟೆ, ಘಟಾ, ಗಾಲಿ, ಚೌಕಾಕಾರದ ಫಲಗೈ ಹಾಗೂ ಮೇಲ್ಭಾಗದಲ್ಲಿ ಸರಳವಾದ ಪುಷ್ಪಬೋದಿಗೆ ಇದೆ. ಈ ನವರಂಗದಲ್ಲಿರುವ ಕಂಬಗಳು ಅತ್ಯಂತ ಚಿಕ್ಕ ಅಂದರೆ ಕುಬ್ಜಕಂಬಗಳಾಗಿ ಕಂಡುಬರುತ್ತವೆ.**(ಚಿ.ಸಂ.11)** ನವರಂಗದ ಗೋಡೆಯು ಸಾಕಷ್ಟು ಜೀರ್ಣೋದ್ಧಾರವಾಗಿದ್ದು ಈ ನವರಂಗ ಉತ್ತರಗೋಡೆಯ ಮುಂದೆ ಸುಮಾರು 2.5. ಅಡಿ ಎತ್ತರವಿರುವ ಚಿಕ್ಕ ಗಣಪತಿಯನ್ನು ಇರಿಸಲಾಗಿದೆ. ಈ ದೇವನು ಸುಖಾಸನದಲ್ಲಿ ಕುಳಿತಿದ್ದು. ಕೈಗಳಲ್ಲಿ ಫಲ, ಮುರಿದದಂತ, ಪಾಶ, ಅಂಕುಶಗಳನ್ನು ಹಿಡಿದು ಕುಳಿತಿದ್ದಾನೆ. ನವರಂಗದ ದ್ವಾರದ ಪಟ್ಟಿಕೆಗಳಲ್ಲಿ ಪದ್ಮದಳಗಳ ಅಲಂಕರಣೆ ಕಂಡುಬರುತ್ತದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ.[22]

ಈ ದೇವಾಲಯದ ಒಳಭಾಗದಲ್ಲಿ ಚಿಕ್ಕ ಚಿಕ್ಕ ಗುಡಿಗಳನ್ನು ಮಾಡಿ ಕೆಲವು ಶಿಲ್ಪಗಳನ್ನು ಇರಿಸಲಾಗಿದೆ. ಗಣಪತಿ, ಪರಶುರಾಮ, ಶಿವ, ಸೂರ್ಯ,**(ಚಿ.ಸಂ.13)** ಸುಬ್ರಹ್ಮಣ್ಯ, ವೆಂಕಟರಮಣ, ನಾಗದೇವ, ನಂದಿ, ಶಿಲ್ಪಗಳಿವೆ. ಈ ದೇವಾಲಯದಲ್ಲಿ ಚಿಕ್ಕದೊಂದು ಗುಡಿ ಮಾಡಿ, ಈ ಗುಡಿಯ ಒಳಭಾಗದಲ್ಲಿ ಎರಡು ವೀರಗಲ್ಲುಗಳನ್ನು ನಿಲ್ಲಿಸಲಾಗಿದೆ. ಈ ಎರಡು ವೀರಗಲ್ಲುಗಳು ಬಳಪದ ಕಲ್ಲಿನಿಂದ ಮಾಡಲಾಗಿದ್ದು, ಸುಂದರವಾಗಿ ಶಿಲ್ಪಗಳಿಂದ ಅಲಂಕೃತಗೊಂಡಿದೆ. ಈ ಶಿಲ್ಪಗಳ ವಿವರ ಕೆಳಕಂಡಂತಿವೆ.

**ಎಡಮುರಿ ಗಣೇಶ:-** ಈ ಮೂರ್ತಿ ಶಿಲ್ಪವು 2 ಅಡಿ ಎತ್ತರವಾಗಿದ್ದು, ಎರಡು ಕೈಗಳನ್ನು ಹೊಂದಿದ್ದಾನೆ. ಬಲಗೈಯಲ್ಲಿ ಲೇಖನಿ ಎಡಗೈಯಲ್ಲಿ ಒಂದು ಚಿಕ್ಕದಾದ ಪಾತ್ರೆ ಹಿಡಿದಿದ್ದಾನೆ. ಈ ಪಾತ್ರೆಗೆ ಎಡಮುರಿ ಗಣೇಶನ ಸೊಂಡಿಲು ಪಾತ್ರೆಯೊಳಗೆ ಹೋಗಿರುವ ಹಾಗೆ ಬಿಡಿಸಲಾಗಿದೆ. ಈ ಮೂರ್ತಿಶಿಲ್ಪದ ಹಿಂಬದಿಯಲ್ಲಿ ಸರಳವಾದ ಪ್ರಭಾವಳಿಯನ್ನು ಇತ್ತೀಚೆಗೆ ನಿರ್ಮಾಣ ಮಾಡಲಾಗಿದೆ. ಮೇಲ್ಭಾಗದಲ್ಲಿ ಕೀರ್ತಿಮುಖವಿದೆ.

**ಪರಶುರಾಮ:-** ಈ ದೇವಮೂರ್ತಿಯು ಸ್ಥಾನಿಕ ಭಂಗಿಯಲ್ಲಿ ನಿಂತಿದ್ದಾನೆ. ಈತನು ಚತುರ್ಭುಜವನ್ನು ಹೊಂದಿದ್ದು, ಬಲ ಹಿಂಗೈಯಲ್ಲಿ ಮತ್ತು ಬಲಮುಂಗೈಯನ್ನು ತನ್ನ ಎದೆಯ ಮೇಲೆ ಇರಿಸಿದ್ದಾನೆ. ಹಾಗೆಯೇ ಎಡ ಮುಂಗೈಯಲ್ಲಿ ಕೊಡಲಿ, ಹಿಂಗೈಯಲ್ಲಿ ಫಲ ಹಿಡಿದು ನಿಂತಿದ್ದಾನೆ. ಈ ಮೂರ್ತಿಶಿಲ್ಪ ಪರಶುರಾಮನು ಯುದ್ಧಕ್ಕೆ ಸನ್ನದ್ಧನಾಗಿ ಹೊರಡುವಂತೆ ಶಿಲ್ಪಿಯು ಚಿತ್ರಿಸಿದ್ದಾನೆ. ಹಾಗೂ ತಲೆಯಲ್ಲಿ ಕೀರಿಟ, ಕೊರಳಲ್ಲಿ ಹಾರ, ಸೊಂಟದಲ್ಲಿ ವಸ್ತ್ರವನ್ನು ಧರಿಸಿದ್ದಾನೆ.**(ಚಿ.ಸಂ.15)**

**ಶಿವ:-** ಈ ಮೂರ್ತಿಶಿಲ್ಪವು ಒಂದು ಅಡಿ ಪದ್ಮಪೀಠದ ಮೇಲೆ ಸುಮಾರು ಮೂರು ಅಡಿ ಎತ್ತರವಿರುವ ಶಿವನು ಸ್ಥಾನಿಕ ಭಂಗಿಯಲ್ಲಿ ಕುಳಿತಿದ್ದಾನೆ. ಈ ಮೂರ್ತಿ ಶಿಲ್ಪವು ಚತುರ್ಭುಜವನ್ನು ಹೊಂದಿದ್ದು, ಬಲಗೈಗಳಲ್ಲಿ ತ್ರಿಶೂಲ, ಅಭಯಹಸ್ತ, ಎಡಗೈಗಳಲ್ಲಿ ಢಮರುಗ ಮತ್ತು ಇನ್ನೊಂದು ಕೈಯನ್ನು ತನ್ನ ತೊಡೆಯಲ್ಲಿ ಇಟ್ಟಿದ್ದಾನೆ. ಈ ದೇವಮೂರ್ತಿಯ ಕೆಳಗಿನ ಎಡಭಾಗದಲ್ಲಿ ನಂದಿ ಮೂರ್ತಿಯನ್ನು ಇಡಲಾಗಿದೆ. ಈ ಶಿವ ಮೂರ್ತಿಯು ತಲೆಯ ಮುಡಿಯಲ್ಲಿ ಗಂಗೆಯನ್ನು ಹಾಗೂ ಚಂದ್ರನನ್ನು ಇರಿಸಿಕೊಂಡಿದ್ದಾನೆ. ಹಾಗೆಯೇ ಕೋರಳಲ್ಲಿ ಸರ್ಪ, ಮಣಿಸರ, ಕಿವಿಯಲ್ಲಿ ಕರ್ಣಕುಂಡಲ, ಕಾಲಿನಲ್ಲಿ ಕಾಲ್ಗಡಗ ಧರಿಸಿ ಕುಳಿತಿದ್ದಾನೆ. ಈ ಮೂರ್ತಿಯನ್ನು ನಯವಾದ ಕಪ್ಪು ಕಣಶಿಲೆಯಿಂದ ಮಾಡಲಾಗಿದೆ.

**ಸುಬ್ರಹ್ಮಣ್ಯ:-** ದೇವಾಲಯದ ಹಿಂಭಾಗದಲ್ಲಿ ಈ ಮೂರ್ತಿ ಶಿಲ್ಪವು ಮೂರು ಅಡಿ ಎತ್ತರವಾಗಿದೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನು ಎರಡು ಕೈಗಳನ್ನು ಹೊಂದಿದ್ದಾನೆ. ಬಲಗೈಯಲ್ಲಿ ದಂಡ, ಎಡೆಗೈಯಲ್ಲಿ ಪುಷ್ಪವನ್ನು ಹಿಡಿದು ನಿಂತದ್ದಾನೆ. ಇದರ ಕೆಳಭಾಗದಲ್ಲಿ ಹಂಸವನ್ನು ಕಾಣಬಹುದು. ಈ ಮೂರ್ತಿಯು ತಲೆಯಲ್ಲಿ ಕಿರೀಟ, ಕಿವಿಯಲ್ಲಿ ಕಿವಿಯೊಲೆ, ಸೊಂಟದಲ್ಲಿ ವಸ್ತ್ರವನ್ನು ಧರಿಸಿದ್ದಾನೆ. ಈ ದೇವಮೂರ್ತಿಯ ಇಕ್ಕೆಲದಲ್ಲಿ ಕಮಾನಿನಾಕಾರದ ಪ್ರಭಾವಳಿ ಇದೆ. ಪ್ರಭಾವಳಿಯು ಸುಂದರ ಕೆತ್ತನೆಯಿಂದ ಕೂಡಿದ್ದು, ಸುರಳಿಯಾಕಾರ, ಬಳೆಯಾಕಾರದ ಉಬ್ಬು ಕೆತ್ತನೆ ಹಾಗೂ ಮೇಲ್ಭಾಗದಲ್ಲ್ಲಿ ಕೀರ್ತಿಮುಖವಿದೆ.**(ಚಿ.ಸಂ.14)**

**ಚನ್ನಕೇಶವ:-** ಈ ದೇವಾಲಯದ ನೈರುತ್ಯ ಭಾಗದಲ್ಲಿ 5 ಅಡಿ ಎತ್ತರದ ಸಮಭಂಗಿಯಲ್ಲಿ ಕೇಶವ ಶಿಲ್ಪವನ್ನು ನಿಲ್ಲಿಸಲಾಗಿದೆ. ಈ ಮೂರ್ತಿಯು ಎರಡು ಕೈಯಲ್ಲಿ ಆಯುಧಗಳನ್ನು ಹಿಡಿದು ನಿಂತಿದ್ದಾನೆ.

**ವೆಂಕಟರಮಣ ಅಥಾವಾ ನಾರಾಯಣ:-** ಈ ಮೂರ್ತಿ ಶಿಲ್ಪವು ದೇವಾಲಯದ ವಾಯುವ್ಯ ದಿಕ್ಕಿನಲ್ಲಿ ನಿಲ್ಲಿಸಲಾಗಿದ್ದು. ಈ ಮೂರ್ತಿಯು 3.5ಅಡಿ ಎತ್ತರವಿರುವ ಹಾಗೂ 4 ಕೈಗಳನ್ನು ಹೊಂದಿದ್ದಾನೆ. ಶಂಖ, ಚಕ್ರ, ಗಧೆ, ಅಭಯಹಸ್ತಗಳನ್ನು ಹೊಂದಿದ್ದು, ಸಮಭಂಗಿಯಲ್ಲಿ ನಿಂತಿದ್ದಾನೆ. ತಲೆಯಲ್ಲಿ ಕಿರೀಟ, ಕೊರಳಲ್ಲಿ ರುದ್ರಾಕ್ಷಿಮಾಲೆ, ಕೈಯಲ್ಲಿ ಕಡಗ ಸೊಂಟದಲ್ಲಿ ವಸ್ತ್ರವನ್ನು ಧರಿಸಿದ್ದಾನೆ. ಈ ಮೂರ್ತಿಯ ಇಕ್ಕೆಲದಲ್ಲಿ ದೊಡ್ಡದಾದ ಪ್ರಭಾವಳಿ ಇದೆ. ಈ ಪ್ರಭಾವಳಿಯು ಕಮಾನಿನಾಕಾರವಾಗಿದ್ದು, ಕೆಳಗೆ ವೃತ್ತಾಕಾರದ ಪುಷ್ಪದಂತೆ ಬಿಡಿಸಲಾಗಿದೆ. ನಂತರ ಇದಕ್ಕೆ ಹೊಂದಿಕೊಂಡಂತೆ ಎಡ ಮತ್ತುಬಲಭಾಗದಲ್ಲಿ ಶಂಖ ಮತ್ತು ಚಕ್ರದ ಕೆತ್ತನೆ ಇದ್ದು, ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಈ ಪ್ರಭಾವಳಿಯನ್ನು ಇತ್ತೀಚೆಗೆ ಕಂಚಿನಿಂದ ಮಾಡಲಾಗಿದೆ.

**ನಾಗರ ಶಿಲ್ಪ:-** ಈ ದೇವಾಲಯದ ಉತ್ತರ ಭಾಗಕ್ಕೆ ಸುಮಾರು 2.5 ಅಡಿ ಎತ್ತರವಿದ್ದು, ಕುಳಿತಿರುವ ನಾಗರ ಶಿಲ್ಪವನ್ನು ಕಾಣಬಹುದು, ಶಿಲ್ಪವು ಎರಡು ಕೈಗಳನ್ನು ಹೊಂದಿದ್ದು, ಬಲಗೈಯನ್ನು ಹಾಗೂ ಎಡಗೈಯನ್ನು ಕೆಳಗೆ ಇಳಿಬಿಡಲಾಗಿದೆ. ಮತ್ತು ಶಿರದ ಹಿಂಭಾಗದಲ್ಲಿ ಏಳು ತಲೆಯುಳ್ಳ ಸರ್ಪವು ತನ್ನ ಹೆಡೆಯನ್ನು ಬಿಚ್ಚಿಕೊಂಡಿರುವಂತೆ ಕೆತ್ತನೆ ಮಾಡಿ ಬಿಡಿಸಲಾಗಿದೆ. ಹಾಗೆಯೇ ದೇವಾಲಯದ ಈಶಾನ್ಯ ಭಾಗದಲ್ಲಿ ಒಂದು ಅಡಿ ಕಲ್ಲಿನ ಮೇಲೆ ನವಗ್ರಹದ ಶಿಲ್ಪಗಳನ್ನು ಇಡಲಾಗಿದೆ.**(ಚಿ.ಸಂ.16)**

**ಅಧಿಷ್ಠಾನ:-** ಈ ಅಧಿಷ್ಠಾನವು ಮಂಚಬಂಧ ಅಧಿಷ್ಠಾನವಾಗಿದ್ದು, ಅಧಿಷ್ಠಾನದ ಮೇಲೆ ನಿರ್ಮಿಸಲಾಗಿರುವ ಭಿತ್ತಿ ಜೀರ್ಣೋದ್ಧಾರವಾಗಿದ್ದು, ವಿಜಯನಗರ ಶೈಲಿಯಲ್ಲಿದೆ. ಕಪೋತವು ಹೊಯ್ಸಳ ಶೈಲಿಯಲ್ಲಿದ್ದು, ಅಂಚಿನಲ್ಲಿ ದಂತಪಂಕ್ತಿ ಇದೆ. ಇದರ ಮೇಲಿರುವ ಹಾರ ಭಾಗದಲ್ಲಿ ಎರಡು ದೇಹ ಒಂದು ತಲೆ ಇರುವ ನಂದಿಯ ಶಿಲ್ಪಗಳನ್ನು ಸುತ್ತಲೂ ಕೂರಿಸಲಾಗಿದೆ.**(ಚಿ.ಸಂ.12)**

**ಶಿಖರ:-** ಶಿಖರವು ಏಕತಲ ಶಿಖರವಾಗಿದ್ದು, ಶಿಖರದ ನಾಲ್ಕು ಮೂಲೆಗಳಲ್ಲಿ ಕುಳಿತಿರುವ ನಂದಿಯ ಶಿಲ್ಪಗಳನ್ನು ಬಿಡಿಸಲಾಗಿದೆ. ಅದರ ಮೇಲೆ ಚೌಕಾಕಾರವಾದ ಸ್ತೂಪಿ, ಸ್ತೂಪಿಯ ಮೇಲೆ ಕಳಸವಿದೆ.

ಈ ದೇವಾಲಯದ ಸುತ್ತಲೂ ಪ್ರಾಕಾರವಿದೆ. ಈ ಪ್ರಾಕಾರವನ್ನು ವಿಜಯನಗರ ಕಾಲದಲ್ಲಿ ನಿರ್ಮಿಸಿದಂತೆ ಕಂಡುಬರುತ್ತದೆ. ಈ ಪ್ರಾಕಾರ ಗೋಡೆಯ ಮೇಲ್ಭಾಗದಲ್ಲಿ ಚಂದ್ರಾಕೃತಿಯನ್ನು ಸಾಲಾಗಿ ರಚಿಸಲಾಗಿದೆ. ಇತ್ತೀಚಿಗೆ ದೇವಾಲಯದ ಮುಂದೆ ಮಹಾದ್ವಾರವನ್ನು ನಿರ್ಮಿಸಲಾಗಿದೆ.[23]

**ಕೋಡಿಮಲ್ಲೇಶ್ವರ ದೇವಾಲಯ-ಸಂಗರಶೆಟ್ಟರಹಳ್ಳಿ**

ಪಿರಿಯಾಪಟ್ಟಣ ತಾಲೂಕಿನಿಂದ 18 ಕಿ.ಮೀ. ದೂರದಲ್ಲಿ ಉತ್ತರಭಾಗಕ್ಕೆ ಸಂಗರಶೆಟ್ಟಿಹಳ್ಳಿ ಗ್ರಾಮವಿದೆ. ಈ ಗ್ರಾಮವು ಪ್ರಾಚೀನ ಕಾಲದಿಂದಲೂ ತನ್ನದೇ ಆದ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಈ ಗ್ರಾಮವನ್ನು ಕರ್ನಾಟಕದ ಪ್ರಸಿದ್ಧ ಮನೆತನವಾದ ಹೊಯ್ಸಳರು ತಮ್ಮ ಅಧೀನಕ್ಕೆ ತೆಗೆದುಕೊಂಡು ಆಳ್ವಿಕೆ ಮಾಡಿದ್ದಾರೆ. ಇಲ್ಲಿ ಹೊಯ್ಸಳರು ರಾಜಕೀಯವಾಗಿ, ಧಾರ್ಮಿಕವಾಗಿ ಹಾಗೂ ಕಲೆ ಮತ್ತು ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಕೊಡುಗೆ ನೀಡಿರುವುದನ್ನು ಇಲ್ಲಿ ಕಂಡುಬರುವ ಅನೇಕ ಐತಿಹಾಸಿಕ ಆಧಾರಗಳಿಂದ ತಿಳಿಯಬಹುದಾಗಿದೆ. ಹೊಯ್ಸಳ ರಾಜಮನೆತನದವರು ವೈಷ್ಣವ ಪಂಥದಷ್ಟೇ ಶೈವ ಪಂಥಕ್ಕೂ ಹೆಚ್ಚಿನ ಪ್ರೋತ್ಸಾಹವನ್ನು ನೀಡುತ್ತಿದ್ದರು ಎಂಬುದಕ್ಕೆ ಆ ತಾಲೂಕಿನ ಸುತ್ತಮುತ್ತಲ ಪ್ರದೇಶಗಳಲ್ಲಿ ನಿರ್ಮಾಣವಾಗಿರುವ ಹಲವಾರು ಶೈವಸಂಪ್ರದಾಯವನ್ನು ಸಾರುವ ದೇವಾಲಯಗಳ ನಿರ್ಮಾಣದಿಂದ ತಿಳಿಯಬಹುದಾಗಿದೆ. ಅದರ ಪ್ರತಿಫಲವಾಗಿಯೇ ಸಂಗರಶೆಟ್ಟಿಹಳ್ಳಿ ಗ್ರಾಮದಲ್ಲಿ ನಿರ್ಮಾಣವಾಗಿರುವ ಹೊಯ್ಸಳರ ಕಾಲದ ಕೋಡಿಬಸವೇಶ್ವರ ದೇವಾಲಯವು ಪ್ರಮುಖ ಸಾಕ್ಷಿಯಾಗಿದೆ.**(ಚಿ.ಸಂ.17)**

ಇಲ್ಲಿನ ಕ್ರಿ.ಶ.1197ರ ಕಾಲಮಾನದ ಶಾಸನದಲ್ಲಿ ಈ ಗ್ರಾಮದ ಹೆಸರು 'ಚಂಗಾಳ್ವಶೆಟ್ಟಿಹಳ್ಳಿ' ಎಂದು ದಾಖಲಾಗಿದ್ದು, ಕಾಲಕ್ರಮೇಣ ಇದು 'ಸಂಗರಶೆಟ್ಟಿಹಳ್ಳಿ' ಎಂದು ಪ್ರಚಲಿತದಲ್ಲಿದೆ. ಈ ಶಾಸನವು ಕುಲೋತ್ತುಂಗ ಚೋಳ ಉದಯಾದಿತ್ಯ ಚಂಗಾಳ್ವನು ಗಣಪತಿ ದೇವಾಲಯ ಮತ್ತು ಚಂಗಾಳ್ವ ಶೆಟ್ಟಿಹಳ್ಳಿಯಲ್ಲಿ ನಿರ್ಮಿಸಿದುದರ ಬಗ್ಗೆ ಉಲ್ಲೇಖವಿದೆ.[24]ಈ ದೇವಾಲಯವನ್ನು ಗ್ರಾಮದ ಅನತಿ ದೂರದಲ್ಲಿ ಈಶಾನ್ಯ ಭಾಗಕ್ಕೆ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಈ ದೇವಾಲಯವು ಪ್ರಸ್ತುತವಾಗಿ ಈ ದೇವಾಲಯದಲ್ಲಿ ಗರ್ಭಗೃಹ ಮತ್ತು ಸುಕನಾಶಿಯ ಭಾಗಗಳು ಮಾತ್ರ ಉಳಿದಿದ್ದು, ಇನ್ನುಳಿದಂತೆ ನವರಂಗ ಮತ್ತು ಮುಖಮಂಟಪದ ಭಾಗಗಳು ಇದುದ್ದಕ್ಕೆ ಅಲ್ಲಿ ಬಿದ್ದಿರುವ ಅವಶೇಷಗಳಿಂದ ತಿಳಿಯಬಹುದು. ಈ ದೇವಾಲಯವು ಸಂಪೂರ್ಣವಾಗಿ ಶಿಥಿಲಾವಸ್ಥೆಯಲ್ಲಿದ್ದರೂ ಸಹ ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ನೋಡಲು ಬಹಳ ಸುಂದರ ಮತ್ತು ಆಕರ್ಷಕವಾಗಿದೆ.

**ಗರ್ಭಗೃಹ**:- ಗರ್ಭಗೃಹವು 6X6 ಅಡಿ ಉದ್ದ ಅಗಲವನ್ನು ಹೊಂದಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ 1.5 ಅಡಿ ಎತ್ತರದ ಚೌಕಾಕಾರದ ವೇದಿಕೆ, ಆ ವೇದಿಕೆಯ ಮೇಲೆ ಸುಮಾರು ಮೂರು ಅಡಿ ಎತ್ತರವಿರುವ ನಕ್ಷತ್ರಾಕಾರದ ಪಾಣಿಪೀಠವಿದೆ. ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿವಲಿಂಗವು ಬ್ರಹ್ಮಭಾಗ, ವಿಷ್ಣುಭಾಗ, ರುದ್ರಭಾಗಗಳನ್ನು ಒಳಗೊಂಡಿದ್ದು, ಸುಮಾರು 1.5 ಅಡಿ ಎತ್ತರವಿದ್ದು, ನಯವಾದ ಕೆತ್ತನೆಯನ್ನು ಮಾಡಲಾಗಿದೆ.**(ಚಿ.ಸಂ.18)** ಈ ಲಿಂಗದ ಪಕ್ಕದಲ್ಲಿ ಚಿಕ್ಕದೊಂದು ನಂದಿ ಶಿಲ್ಪವನ್ನು ಇಡಲಾಗಿದೆ. ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಈ ಭುವನೇಶ್ವರಿಯಲ್ಲಿ ಅರಳಿದ ಪದ್ಮಪುಷ್ಪ ಹಾಗೂ ಕಮಲದ ಮೊಗ್ಗುಗಳ ಕೆತ್ತನೆ ಇದೆ. ಗರ್ಭಗೃಹದ ದ್ವಾರವು ಸರಳವಾಗಿದೆ

**ಸುಕನಾಸಿ**:- ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ನಂದಿಯನ್ನು ಶಿವನಿಗೆ ಎದುರಾಗಿ ಕೂರಿಸಲಾಗಿದೆ. ನಯವಾದ ಕೆತ್ತನೆಯಿಂದ ಕೂಡಿರುವ ಈ ನಂದಿಯು ಸುಂದರವಾಗಿದೆ. ಈ ಸುಕನಾಸಿಯ ಉತ್ತರದ ಗೋಡೆಯ ಮುಂದೆ ಸುಮಾರು 2.5 ಅಡಿ ಎತ್ತರವಿರುವ ಗಣಪತಿಯನ್ನು ಕೂರಿಸಲಾಗಿದೆ.[25] ಸುಖಾಸನದಲ್ಲಿ ಕುಳಿತಿರುವ ಈ ದೇವನು ಕೈಗಳಲ್ಲಿ ಫಲ ಮತ್ತು ದಂತವನ್ನು ಹಿಡಿದಿದ್ದಾನೆ. ಈ ಮೂರ್ತಿಶಿಲ್ಪವನ್ನು ನೋಡಿದರೆ ಅಪೂರ್ಣಗೊಂಡಂತೆ ಕಾಣುತ್ತದೆ.

ಗರ್ಭಗೃಹ ಮತ್ತು ಶುಕನಾಸಿಯ ದ್ವಾರವು ಸರಳವಾಗಿದೆ. ದ್ವಾರಪಟ್ಟಿಕೆಯಲ್ಲಿ ಯಾವುದೇ ಅಲಂಕರಣೆ ಕಂಡುಬಂದಿಲ್ಲ. ಲಲಾಟಬಿಂಬದಲ್ಲಿ ಯಾವುದೇ ಮೂರ್ತಿಶಿಲ್ಪ ಇಲ್ಲ ಮತ್ತು ನವರಂಗ ಮತ್ತು ಮುಖಮಂಟಪ ಸಂಪೂರ್ಣವಾಗಿ ನಶಿಸಿಹೋಗಿದ್ದು, ಈಗ ಉಳಿದು ಬಂದಿರುವುದು ಗರ್ಭಗೃಹ ಮತ್ತು ಸುಕನಾಸಿ ಮಾತ್ರ

**ಅಧಿಷ್ಠಾನ**:- ಅಧಿಷ್ಠಾನವು ಹೊಯ್ಸಳ ಶೈಲಿಯಲ್ಲಿ ನಿರ್ಮಾಣವಾಗಿದೆ. ಅಧಿಷ್ಠಾನವು ಉಪಾನ, ಜಗತಿ, ತ್ರಿಪಟ್ಟಕುಮುದ, ಗಳ, ಕಂಠ, ಪ್ರತಿ ಹಾಗೂ ಕಪೋತದ ಭಾಗಗಳನ್ನು ಹೊಂದಿದೆ.[26] ಆದರೆ ಈ ದೇವಾಲಯದಲ್ಲಿ ತ್ರಿಪಟ್ಟಕುಮುದ, ಗಳ ಮತ್ತು ಪ್ರತಿಯ ಭಾಗಗಳು ಮಾತ್ರ ಕಂಡುಬಂದಿದ್ದು, ಇನ್ನುಳಿದ ಭಾಗಗಳು ಮಣ್ಣಿನಲ್ಲಿ ಮುಚ್ಚಿ ಹೋಗಿದೆ.

**ಭಿತ್ತಿ**:- ಭಿತ್ತಿಯಲ್ಲಿ ಹೊಯ್ಸಳ ಶೈಲಿಯ ಅರೆಗಂಬಗಳು ಮತ್ತು ಏಕಶಿಲ ಸ್ತಂಭಪಂಜರ, ಘಂಟ, ದ್ವಿಕಂಬಸ್ತಂಭಪಂಜರಗಳ ಅಲಂಕರಣೆ ಇದೆ. ಈ ಸ್ತಂಭಪಂಜರಗಳ ಕೆಳಗೆ ಶಿವಪಾರ್ವತಿ, ಫಲವನ್ನು ಹಿಡಿದುನಿಂತಿರುವ ಸ್ತ್ರೀಯರು, ಈ ಸ್ತ್ರೀಯರ ಪಕ್ಕದಲ್ಲಿ ಸೇವಕಿಯರು ನಿಂತಿದ್ದಾರೆ. ಗಣಪತಿ, ವಿಷ್ಣು, ರತಿ-ಮನ್ಮಥ ಶಿಲ್ಪಗಳು, ಸುಖಾಸನದಲ್ಲಿ ಕುಳಿತಿರುವ ವಿಷ್ಣು, ಗೋವರ್ಧನ

ಗಿರಿಧರ ಕೃಷ್ಣ, ಶಿವಪಾರ್ವತಿ ರತಿಮನ್ಮಥ, ಸ್ತ್ರೀಯರ ಶಿಲ್ಪವನ್ನು ಬಿಡಿಸಲಾಗಿದೆ. ಭಿತ್ತಿಯ ಮೇಲ್ಭಾಗದಲ್ಲಿ ಇಳಿಜಾರಾದ ಕಪೋತವಿದೆ. ಈ ಕಪೋತದ ಭಾಗವು ಸರಳವಾಗಿದ್ದು, ಯಾವುದೇ ಅಲಂಕರಣೆ ಕಂಡುಬರುವುದಿಲ್ಲ, ಇದರ ಮೇಲಿನ ಪ್ರತಿಯ ಭಾಗವು ದಂತಪಂಕ್ತಿಗಳಿಂದ ಕೂಡಿದ್ದು ಸರಳವಾಗಿದೆ.

**ಶಿಖರ**:- ಈ ಶಿಖರವು ಏಕತಲವನ್ನು ಹೊಂದಿದ್ದು ಬ್ರಹ್ಮಚ್ಛಂದ ಶಿಖರವಾಗಿದೆ. ಇದರಲ್ಲಿ ದಂತಪಂಕ್ತಿ ಮಂಟಪಗಳು, ಗ್ರೀವ, ಇದರ ಮೇಲೆ ಅಲಂಕಾರವಾದ ಸ್ತಂಭ ಪಂಜರಗಳಿದ್ದು. ಈ ಸ್ತಂಭ ಪಂಜರಗಳ ಮಧ್ಯದಲ್ಲಿ ಧ್ಯಾನಾಸಕ್ತವಾಗಿ ಕುಳಿತಿರುವ ಶಿವನ ಶಿಲ್ಪವನ್ನು ಬಹಳ ಸೊಗಸಾಗಿ ಶಿಖರದ ನಾಲ್ಕು ದಿಕ್ಕುಗಳಲ್ಲೂ ಕೆತ್ತನೆ ಮಾಡಲಾಗಿದೆ. ಮೇಲ್ಭಾಗದಲ್ಲಿ ಚೌಕಾಕಾರದ ಸ್ತೂಪಿ ಇದ್ದು. ಈ ಸ್ತೂಪಿಯ ನಾಲ್ಕು ಕಡೆ ಕೀರ್ತಿಮುಖಗಳು ಹಾಗೂ ವ್ಯಾಳ ಚಿತ್ರ ಕಂಡುಬರುತ್ತವೆ. ಈ ಕೀರ್ತಿಮುಖದ ಒಳಗಿರುವ ಶಿಲ್ಪಗಳು ಬಣ್ಣವನ್ನು ಲೇಪಿಸಿರುವುದರರಿಂದ ಸ್ಪಷ್ಟವಾಗಿ ಕಾಣಬರುತ್ತದೆ. ಅದರ ಮೇಲೆ ಇರಿಸಲಾಗಿದ್ದ ಮೂಲ ಕಳಸವು ಈಗ ಕಣ್ಮರೆಯಾಗಿದೆ.**(ಚಿ.ಸಂ.19)** ಈ ದೇವಾಲಯದ ನವರಂಗ ಮತ್ತು ಮುಖಮಂಟಪದ ಅವಶೇಷಗಳ ಕೆಲವೇ ಕೆಲವು ಭಾಗಗಳು ದೇವಾಲಯದ ಮುಂದೆ ಬಿದ್ದಿವೆ. ಇನ್ನುಳಿದವು ಸಾರ್ವಜನಿಕರ ಅವಗಡಣೆಯಿಂದ ಕಣ್ಮರೆಯಾಗಿದೆ.[27]

ಒಟ್ಟಾರೆ ಹೇಳುವುದಾದರೆ ಈ ದೇವಾಲಯವು ಕಾಲಪುರುಷನ ಹಾವಳಿಯಿಂದ ಸಂಪೂರ್ಣವಾಗಿ ನಶಿಸಿ ಹೋಗಿದ್ದು, ಕಲೆ ಮತ್ತು ವಾಸ್ತು ರಚನಾ ದೃಷ್ಟಿಯಿಂದ ಈ ದೇವಾಲಯವು ಬಹಳ ಸುಂದರವಾಗಿದೆ. ಈ ದೇವಾಲಯದ ಭಿತ್ತಿಯಲ್ಲಿ ಕಂಡುಬರುವ ಶಿಲ್ಪಗಳು ಸಹ ಕಲಾತ್ಮಕವಾಗಿದ್ದು, ಮಾಕೋಡು ಗ್ರಾಮದ ಬಸವೇಶ್ವರ ದೇವಾಲಯದ ಭಿತ್ತಿಯಲ್ಲಿರುವ ಶಿಲ್ಪಗಳ ಮಾದರಿಯಲ್ಲಿವೆ. ಆದುದರಿಂದ ಮಾಕೋಡಿನ ಬಸವೇಶ್ವರ ದೇವಾಲಯ ನಿರ್ಮಿಸಿರುವ ರಾಜನೇ ಒಂದೇ ಅವಧಿಯಲ್ಲಿ ಈ ದೇವಾಲಯವನ್ನು ನಿರ್ಮಿಸಿರಬಹುದೆಂದು ಹೇಳಬಹುದಾಗಿದೆ.

**ಮಹಾಲಿಂಗೇಶ್ವರ ದೇವಾಲಯ – ಕೆ. ಹೆಮ್ಮನಹಳ್ಳಿ**

ಜಿಲ್ಲಾ ಕೇಂದ್ರ ಮತ್ತು ತಾಲೂಕು ಕೇಂದ್ರವಾದ ಮೈಸೂರಿನಿಂದ 15ಕಿ.ಮೀ. ನೈರುತ್ಯ ದಿಕ್ಕಿಗೆ ಹೆಮ್ಮನಹಳ್ಳಿ ಗ್ರಾಮವಿದೆ. ಶಾಸನಗಳಲ್ಲಿ ಹೆಂಮನಹಳ್ಳಿ,[28] ಹೆಮ್ಮನಹಳ್ಳಿ,[29] ಎಂದು ಉಲ್ಲೇಖಿಸಲ್ಪಟ್ಟಿರುವ ಪ್ರಸ್ತುತ ಕೆ.ಹೆಮ್ಮನಹಳ್ಳಿ ಗ್ರಾಮದಲ್ಲಿ ಹೊಯ್ಸಳರ ಎರಡನೇ ವೀರಬಲ್ಲಾಳನ ಕಾಲದ ಕ್ರಿ.ಶ.1188ರಲ್ಲಿ ನಿರ್ಮಾಣವಾಗಿರುವ ಮಹಾಲಿಂಗೇಶ್ವರ ದೇವಾಲಯವಿದೆ.[30]**(ಚಿ.ಸಂ.20)** ಈ ಶಾಸನದಲ್ಲಿ ಮೂಲನಗರೇಶ್ವರ ದೇವರು ಎಂದು ಪ್ರಸ್ತಾಪವಾಗಿರುವ ಈ ದೇವಾಲಯಕ್ಕೆ ಎರಡನೇ ವೀರ ಬಲ್ಲಾಳನ ಪಟ್ಟದರಾಣಿಯಾದ

ಬಮ್ಮಲ ಮಹಾದೇವಿಯವರ ತಂದೆ ಮೊಖರಿ ಲಕ್ಕಯ್ಯನು ದಾನಬಿಟ್ಟ ಪ್ರಸ್ತಾಪವಿದೆ.[31] ಈ ದೇವಾಲಯವು ಪೂರ್ವಭಿಮುಖವಾಗಿ ಬಿಳಿಕಣಶಿಲೆಯಲ್ಲಿ ನಿರ್ಮಾಣವಾಗಿರುವ ಏಕಕೂಟ ದೇವಾಲಯವಾಗಿದೆ.

ಹೊಯ್ಸಳ ಕಾಲದಲ್ಲಿ ನಿರ್ಮಾಣವಾಗಿದ್ದ ಈ ದೇವಾಲಯವು 1993ರ ಹಿಂದೆ ಸಂಪೂರ್ಣ ಶಿಥಿಲಗೊಂಡಿದ್ದು, ಅವನತಿಯ ಅಂಚಿನಲ್ಲಿತ್ತು. ಈ ಗ್ರಾಮದ ಗ್ರಾಮಸ್ಥರು ಹಾಗೂ ಧರ್ಮಸ್ಥಳದ ಧರ್ಮಾಧಿಕಾರಿಗಳಾಗಿರುವ ಡಾ.ವೀರೇಂದ್ರಹೆಗ್ಗಡೆಯವರ ಅಧ್ಯಕ್ಷತೆಯಲ್ಲಿ ಧರ್ಮಸ್ಥಳ ಧರ್ಮೋತ್ಥಾನ ಟ್ರಸ್ಟ್ ವತಿಯಿಂದ 1993ರಲ್ಲಿ ಜೀರ್ಣೋದ್ಧಾರ ಕೈಗೊಂಡು ಕ್ರಿ.ಶ.1994ರಲ್ಲಿ ಜೀರ್ಣೋದ್ಧಾರವನ್ನು ಸಂಪೂರ್ಣಗೊಳಿಸಿ[32] ಭಕ್ತಾದಿಗಳಿಗೆ ಮುಕ್ತ ಪ್ರವೇಶ ಕಲ್ಪಿಸಿರುವ ಈ ದೇವಾಲಯದಲ್ಲಿ ಜೀರ್ಣೋದ್ಧಾರಕ್ಕೂ ಮುಂಚೆ ಗರ್ಭಗೃಹ, ಸುಕನಾಸಿ, ನವರಂಗದ ಭಾಗಗಳು ಮಾತ್ರ ಇದ್ದವೆಂದು ಸ್ಥಳೀಯರಿಂದ ಹಾಗೂ ಈ ದೇವಾಲಯದಲ್ಲಿ ಅಳವಡಿಸಿರುವ ಮೂಲ ದೇವಾಲಯದ ಛಾಯಾಚಿತ್ರಗಳಿಂದ ತಿಳಿಯಬಹುದಾಗಿದೆ.[33] ಪ್ರಸ್ತುತ ಈ ದೇವಾಲಯವು ಹೊಯ್ಸಳ ಶೈಲಿಯ ನವರಂಗ ಕಂಬಗಳನ್ನು ಹೊಂದಿದ್ದು, ದೇವಾಲಯದ ಉಳಿದ ಭಾಗಗಳಲ್ಲಿ ಹೊಯ್ಸಳರ ಶೈಲಿಯ ಕಲಾಲಕ್ಷಣಗಳು ಕಂಡುಬರುವುದಿಲ್ಲ. ಇದರಲ್ಲಿ ಗರ್ಭಗೃಹ, ನವರಂಗ ಹಾಗೂ ಮುಖಮಂಟಪದ ಭಾಗಗಳನ್ನು ಕಾಣಬಹುದಾಗಿದೆ.

**ಗರ್ಭಗೃಹ:-** ಗರ್ಭಗೃಹ 8X8 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಮಧ್ಯಭಾಗದಲ್ಲಿ ಲಿಂಗವಿದೆ. ಈ ಲಿಂಗವು ಕೆಳಗೆ ಬ್ರಹ್ಮಭಾಗ, ಮಧ್ಯದಲ್ಲಿ ವಿಷ್ಣುಭಾಗ, ಮೇಲ್ಭಾಗದಲ್ಲಿ ರುದ್ರಭಾಗವನ್ನು ಹೊಂದಿದೆ. ಬ್ರಹ್ಮಭಾಗ, ಹಾಗೂ ವಿಷ್ಣುಭಾಗಕ್ಕಿಂತ ರುದ್ರಭಾಗವು ಹೆಚ್ಚು ಎತ್ತರವಾಗಿರುವುದರಿಂದ ಇದನ್ನು ಶಿವಾಧಿಕಲಿಂಗ ಎಂದು ಕರೆಯಲಾಗುತ್ತದೆ. ಈ ಲಿಂಗದ ರುದ್ರಭಾಗವು 1.5 ಅಡಿ ಎತ್ತರವಿದ್ದು, ಇದರಲ್ಲಿ ಶಿವನ ಮುಖವನ್ನು ಕೆತ್ತಲಾಗಿರುವುದರಿಂದ ಮಯಮತದ ಪ್ರಕಾರ ಇದನ್ನು ಮುಖಲಿಂಗ ಎಂದು ಕರೆಯಲಾಗುತ್ತದೆ.**(ಚಿ.ಸಂ.21)** ಲಿಂಗದಲ್ಲಿ ಶಿವನ ಮುಖವು ಸೌಮ್ಯವಾಗಿದ್ದು, ಹಣೆಯಲ್ಲಿ ಮೂರನೇ ಕಣ್ಣನ್ನು ಕೆತ್ತಲಾಗಿದೆ. ತಲೆಯ ಮೇಲ್ಭಾಗದಲ್ಲಿ ಸೂಕ್ಷ್ಮ ಅಲಂಕಾರಗಳಿಂದ ಕೂಡಿರುವ ಕಿರೀಟವಿದೆ. ಈ ಲಿಂಗದ ಎಡಭಾಗದಲ್ಲಿ ಅಭಿಷೇಕದ ನೀರು ಕೆಳಬೀಳಲು ಸೋಮಸೂತ್ರವಿದೆ. ಈ ಲಿಂಗವು 1994 ರಲ್ಲಿ ಜೀರ್ಣೋದ್ಧಾರ ಸಂದರ್ಭದಲ್ಲಿ ಹೊರತಾಗಿ ಕೆತ್ತಿಸಿ ತಂದು ಪ್ರತಿಷ್ಠಾಪಿಸಲಾಗಿದ್ದು, ಈ ದೇವಾಲಯದ ಮೂಲ ಲಿಂಗವನ್ನು ಇದೇ ದೇವಾಲಯದ ಬಲಪಾರ್ಶ್ವದಲ್ಲಿರುವ ಒಂದು ಸಣ್ಣ ಗುಡಿಯಲ್ಲಿ ಇಡಲಾಗಿದೆ. ಗರ್ಭಗೃಹದಲ್ಲಿ

ಯಾವುದೇ ಅಲಂಕರಣೆ ಇಲ್ಲದೆ. ಸರಳವಾಗಿದ್ದು, ಗರ್ಭಗೃಹದ ಮೇಲ್ಛಾವಣಿಯಲ್ಲಿ ಎರಡು ಹಂತಗಳಲ್ಲಿ ರಚಿತವಾಗಿರುವ ಸಣ್ಣ ಭುವನೇಶ್ವರಿ ಇದೆ. ಗರ್ಭಗೃಹದ ದ್ವಾರಬಂಧವು ಯಾವುದೇ ಅಲಂಕರಣೆ ಇಲ್ಲದೆ ಸರಳವಾಗಿದೆ.

**ಸುಕನಾಸಿ:–** ಸುಕನಾಸಿಯು ಸಹ ಗರ್ಭಗೃಹದಂತೆ 8X8 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದು ಯಾವುದೇ ಅಲಂಕರಣೆ ಇಲ್ಲದೇ ಸರಳವಾಗಿದ್ದು, ದ್ವಾರಬಂಧವಿಲ್ಲದೆ. ನವರಂಗಕ್ಕೆ ತೆರೆದುಕೊಂಡಿದೆ.

**ನವರಂಗ:–** ನವರಂಗವು 20X20 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಮಧ್ಯಭಾಗದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಪ್ರಧಾನ ಕಂಬಗಳಿವೆ. ಈ ಕಂಬಗಳು ಎಂಟು ಅಡಿ ಎತ್ತರವಾಗಿದ್ದು, ಈ ದೇವಾಲಯದಲ್ಲಿ ಉಳಿದಿರುವ ಹೊಯ್ಸಳ ಶೈಲಿಯ ಕುರುಹುಗಳಾಗಿವೆ. ಈ ಕಂಬಗಳು ಮಾತ್ರ ಸೋಪುಗಲ್ಲಿನಲ್ಲಿ ರಚಿತವಾಗಿದ್ದು, ಉಪಪೀಠ, ಚತುರಸ್ರಾಕಾರದ ಪೀಠ, ಮಧ್ಯಭಾಗದಲ್ಲಿ ತಿರುಗಣೆ ಯಂತ್ರದಿಂದ ತಿರುಗಿಸಿ ಮಾಡಿರುವ ಗಾಲಿಗಳ ರಚನೆ, ಮಂಡಿ, ತಡಿ, ಫಲಕಗಳನ್ನು ಹೊಂದಿದ್ದು, ಮೇಲ್ಭಾಗದಲ್ಲಿ ವೃತ್ತಾಕಾರದ ಬೋದಿಗೆ ಇದೆ.**(ಚಿ.ಸಂ.22)** ಈ ನಾಲ್ಕು ಕಂಬಗಳ ಮಧ್ಯದಲ್ಲಿ ಒಂದು ಅಡಿ ಎತ್ತರದ ರಂಗಮಂಟಪವಿದ್ದು, ಪ್ರಸ್ತುತ ಈ ರಂಗಮಂಟಪದಲ್ಲಿ ಗರ್ಭಗೃಹದಲ್ಲಿರುವ ಲಿಂಗಕ್ಕೆ ಅಭಿಮುಖವಾಗಿ ಅಲಂಕಾರಿಕ ಕೆತ್ತನೆಗಳಿಂದ ಕೂಡಿರುವ 1.5 ಅಡಿ ಎತ್ತರ ಹಾಗೂ 2 ಅಡಿ ಉದ್ದವನ್ನು ಹೊಂದಿರುವ ನಂದಿಯ ಶಿಲ್ಪವಿದೆ. ನವರಂಗದಲ್ಲಿರುವ ಪ್ರಧಾನ ಭುವನೇಶ್ವರಿಯು ಎರಡು ಹಂತಗಳಲ್ಲಿ ರಚಿತವಾಗಿರುವ ನಕ್ಷತ್ರಾಕಾರದ ಸರಳವಾದ ಭುವನೇಶ್ವರಿ ಇದ್ದು, ಮಧ್ಯದಲ್ಲಿ ಪದ್ಮಬಂಧದ ಉಬ್ಬು ಕೆತ್ತನೆಗಳಿವೆ.

ನವರಂಗದ ಎಡ ಪಾರ್ಶ್ವದಲ್ಲಿ ಜೀರ್ಣೋದ್ಧಾರ ಸಮಯದಲ್ಲಿ ನಿರ್ಮಾಣವಾಗಿರುವ ಮಹಾದೇವಿ ಅಮ್ಮನವರ ಗುಡಿ ಇದ್ದು, ಇದು 8X8 ಅಡಿ ಸುತ್ತಳತೆಯನ್ನು ಹೊಂದಿದೆ. ಈ ಗುಡಿಯ ಮಧ್ಯದಲ್ಲಿ ಮಹಾದೇವಿ ಅಮ್ಮನವರ 2.5 ಅಡಿ ಎತ್ತರದ ಶಿಲ್ಪವಿದೆ. ಈ ಶಿಲ್ಪಕ್ಕೆ ವಸ್ತ್ರಾಲಂಕರಣ ಮಾಡಿರುವುದರಿಂದ ಈ ಶಿಲ್ಪದ ವರ್ಣನೆ ಸಾಧ್ಯವಾಗಿಲ್ಲ. ದೇವಿಯ ತಲೆಯ ಮೇಲೆ ಸಣ್ಣ ಕಿರೀಟದ ಕೆತ್ತನೆಗಳು ಕಂಡುಬರುವುದಿಲ್ಲ ನವರಂಗದ ಭಿತ್ತಿಯು 12 ಭದ್ರಕಸ್ತಂಭಗಳನ್ನು ಹೊಂದಿದ್ದು, ಕಲ್ಲು ಚಪ್ಪಡಿಗಳಿಂದ ಮುಚ್ಚಲ್ಪಟ್ಟಿದೆ. ಹಾಗೂ ನವರಂಗದ ಹೊರಗೋಡೆಗೆ ಗಾರೆಯ ಲೇಪನವನ್ನು ಮಾಡಲಾಗಿದೆ.[34]

**ಮುಖಮಂಟಪ:-** ಮುಖಮಂಟಪವು ಸಂಪೂರ್ಣವಾಗಿ ಗಾರೆ ನಿರ್ಮಾಣವಾಗಿದ್ದು, ನಾಲ್ಕು ಕಂಬಗಳ ಆಧಾರದಲ್ಲಿ ರಚಿತವಾಗಿದೆ. ಮುಖಮಂಟಪದ ದ್ವಾರದ ಮೇಲ್ಭಾಗದಲ್ಲಿ ಶಿವ ಪಾರ್ವತಿ, ಗಣೇಶ, ಸುಬ್ರಹ್ಮಣ್ಯರ ಗಾರೆ ಶಿಲ್ಪಗಳಿದ್ದು, ಈ ಶಿಲ್ಪಗಳ ಇಕ್ಕೆಲಗಳಲ್ಲಿ ಸೊಂಡಿಲನ್ನು ಮೇಲೆತ್ತಿ ನಿಂತಿರುವ ಗಜಗಳ ಗಾರೆ ಶಿಲ್ಪಗಳನ್ನು ಕಾಣಬಹುದಾಗಿದೆ. ಮುಖಮಂಟಪದಲ್ಲಿ ಮರದಿಂದ ಮಾಡಿದ ಶಿವನ ವಾಹನವಾದ ನಂದಿ ಹಾಗೂ ಪಾರ್ವತಿ ವಾಹನವಾದ ಹುಲಿಯ ಉತ್ಸವ ಮೂರ್ತಿಗಳನ್ನಿಡಲಾಗಿದೆ ಮತ್ತು ಮುಖ ಮಂಟಪದ ಎರಡು ಪಾರ್ಶ್ವಗಳಲ್ಲಿ 8X8 ಸುತ್ತಳತೆಯನ್ನು ಹೊಂದಿರುವ ಗಣೇಶ ಹಾಗೂ ಶಾಸನ ನಿಲ್ಲಿಸಿರುವ ಗುಡಿಗಳಿವೆ. ಗಣೇಶನ ಗುಡಿಯ ಮಧ್ಯಭಾಗದಲ್ಲಿ ಒಂದು ಅಡಿ ಚತುರಸ್ರಾಕಾರದ ಪೀಠದ ಮೇಲೆ 2.5 ಅಡಿ ಎತ್ತರದ ಗಣೇಶನ ಶಿಲ್ಪವಿದ್ದು, ವಸ್ತ್ರಲಂಕಾರ ಮಾಡಿರುವುದರಿಂದ ಈ ಶಿಲ್ಪದ ವರ್ಣನೆ ಸಾಧ್ಯವಾಗುವುದಿಲ್ಲ. ಈ ಗುಡಿಯು ಸಹ ಯಾವುದೇ ಅಲಂಕರಣೆ ಇಲ್ಲದೇ ಸರಳವಾಗಿದೆ. ಮುಖಮಂಟಪದ ಎಡ ಪಾರ್ಶ್ವದಲ್ಲಿರುವ ಗುಡಿಯ ಮಧ್ಯಭಾಗದಲ್ಲಿ ಹೊಯ್ಸಳರ 2ನೇ ವೀರಬಲ್ಲಾಳನ ಶಾಸನ(**ಚಿ.ಸಂ.23**) ಹಾಗೂ ಜೀರ್ಣೋದ್ಧಾರ ಮಾಡಿಸಿದ ಧರ್ಮಸ್ಥಳ ಧರ್ಮಾತ್ಥಾನ ಟ್ರಸ್ಟ್‌ನವರು ನಿಲ್ಲಿಸಿರುವ ಎರಡು ಶಾಸನ ಕಲ್ಲುಗಳಿವೆ.

ದೇವಾಲಯವು ಏರುವಿನ್ಯಾಸದಲ್ಲಿ ಅಧಿಷ್ಠಾನವಿಲ್ಲದೆ, ಗಾರೆಯಿಂದ ಮಾಡಿರುವ ಗೋಡೆ ಮಾತ್ರ ಇದ್ದು, ಪ್ರಸ್ತರದ ಭಾಗದಲ್ಲಿ ಕೈಪಿಡಿಗೋಡೆ ಇದೆ. ಗರ್ಭಗೃಹ ಹಾಗೂ ಮಹಾದೇವಿ ಅಮ್ಮನವರ ಗುಡಿಗಳ ಮೇಲ್ಭಾಗದಲ್ಲಿ ಗಾರೆಯಿಂದ ನಿರ್ಮಿಸಿರುವ ಶಿಖರಗಳಿವೆ.

ದೇವಾಲಯದ ಸುತ್ತಲಿನ ಆವರಣವು ವಿಶಾಲವಾಗಿದ್ದು, ದೇವಾಲಯದ ಬಲಪಾರ್ಶ್ವದಲ್ಲಿರುವ ಸಣ್ಣ ಗುಡಿಯಲ್ಲಿ ಹೊಯ್ಸಳ ಕಾಲದಲ್ಲಿ ಈ ದೇವಾಲಯವನ್ನು ಪ್ರತಿಷ್ಠಾಪಿಸಿದ್ದ ಮೂಲ ಮಹಾಲಿಂಗೇಶ್ವರ ದೇವರನ್ನು ಸ್ಥಳಾಂತರ ಮಾಡಿರುವ ಲಿಂಗವಿದೆ. ಈ ಗುಡಿಯ ಮುಂದೆ ವೃತ್ತಾಕಾರದಲ್ಲಿ ಪ್ರತಿಷ್ಠಾಪಿಸಲಾಗಿರುವ ನವಲಿಂಗಗಳಿವೆ. ದೇವಾಲಯದ ಪ್ರಾಕಾರ ಗೋಡೆಗೆ ಹಾಗೂ ದೇವಾಲಯದ ಗೋಡೆಗೆ ಹೊಂದಿಕೊಂಡಂತೆ ಭಗ್ನಗೊಂಡಿರುವ ಹೊಯ್ಸಳರ ಕಾಲದ ಜೈನ ತೀರ್ಥಂಕರನ ಶಿಲ್ಪ, ವೀರಭದ್ರನ ಶಿಲ್ಪ ಹಾಗೂ ವೀರಗಲ್ಲುಗಳು ಮತ್ತು ಮಹಾಸತಿ ಕಲ್ಲುಗಳನ್ನು ನಿಲ್ಲಿಸಲಾಗಿದೆ.

**ಸೋಮೇಶ್ವರ ದೇವಾಲಯ-ಸುತ್ತೂರು**

ಸುತ್ತೂರು ನಂಜನಗೂಡಿಗೆ ಸೇರಿರುವ ಒಂದು ಗ್ರಾಮ ಮತ್ತು ಧಾರ್ಮಿಕವಾಗಿ ಒಂದು ಪವಿತ್ರ ಸ್ಥಳವಾಗಿದೆ. ಇದು ಕಪಿಲಾ ನದಿಯ ದಂಡೆಯ ಮೇಲಿದೆ. ಇದು ನಂಜನಗೂಡಿನಿಂದ ಈಶಾನ್ಯಕ್ಕೆ ಸುಮಾರು 18.ಕಿ.ಮೀ. ದೂರದಲ್ಲಿದೆ. ಅಲ್ಲದೆ ಮೈಸೂರಿನಿಂದ ಆಗ್ನೇಯಕ್ಕೆ 25.ಕಿ.ಮೀ. ದೂರದಲ್ಲಿ ಕಂಡುಬರುತ್ತದೆ. ಪ್ರಾಚೀನ ಕಾಲದಲ್ಲಿ ಈ ಗ್ರಾಮಕ್ಕೆ 'ಶ್ರೋತ್ರಿಯೂರು'[35] ಎಂದು ಹೆಸರಿಸಿದ್ದ ಬಗ್ಗೆ ಚೋಳರ ಕಾಲದಲ್ಲಿ ಬರೆಸಲಾಗಿರುವ ಕ್ರಿ.ಶ.1032ರ ಒಂದು ಶಾಸನದಿಂದ ತಿಳಿದುಬರುತ್ತದೆ. ಅಲ್ಲದೆ ಕ್ರಿ.ಶ.1169ರಲ್ಲಿ ಬರೆಸಲಾಗಿರುವ ಹೊಯ್ಸಳರ ಶಾಸನವೂ ಸಹ ತಿಳಿದುಬರುತ್ತದೆ. ನಂತರ ವಿಜಯನಗರ ಕಾಲದಲ್ಲಿ ಬರೆಸಲಾಗಿರುವ ದಾಖಲೆಗಳಲ್ಲಿ ಈ ಗ್ರಾಮಕ್ಕೆ ಸುತ್ತೂರು ಎಂದು ಕರೆಯಲಾಯಿತ್ತೆಂದು ಹೇಳಲಾಗಿದೆ.[36]

ಸುತ್ತೂರಿನಲ್ಲಿ ನೆಲೆಗೊಂಡಿರುವ ಜಗದ್ಗುರು ಶ್ರೀಶಿವರಾತ್ರೀಶ್ವರ ವೀರಸಿಂಹಾಸನ ಮಠದಿಂದಾಗಿ ಇದು ಪ್ರಸಿದ್ಧವಾಗಿದೆ. ಇಂದು ಈ ಮಠವು ಹಲವಾರು ಶೈಕ್ಷಣಿಕ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರ ಕೆಲಸವನ್ನು ನಿರ್ವಹಿಸುತ್ತದೆ. ಈ ಗ್ರಾಮದಲ್ಲಿ ಹೊಯ್ಸಳರ ಕಾಲದಲ್ಲಿ ನಿರ್ಮಿಸಲಾಗಿರುವ, ನಾರಾಯಣಸ್ವಾಮಿ ದೇವಾಲಯ ಮತ್ತು ಶ್ರೀ ಶಿವರಾತ್ರೀಶ್ವರಸ್ವಾಮಿಯ ಮಠ ಕಂಡುಬರುತ್ತದೆ.

ಈ ಸೋಮೇಶ್ವರ ದೇವಾಲಯ ಸುತ್ತೂರಿನ ಗ್ರಾಮದ ಮಧ್ಯೆಭಾಗದಲ್ಲಿ ಕಂಡುಬರುತ್ತದೆ. ಈ ಸೋಮೇಶ್ವರ ದೇವಾಲಯವನ್ನು ಪ್ರಾಯಶಃ ಹೊಯ್ಸಳರಿಗೆ ಮುನ್ನ ಆಳ್ವಿಕೆ ಮಾಡಿದ ಚೋಳರು ಈ ದೇವಾಲಯವನ್ನು ನಿರ್ಮಿಸಿ ಇದಕ್ಕೆ ಮೂಲಸ್ಥಾನೇಶ್ವರ ಎಂದು ಕರೆಯುತ್ತಿದ್ದರೆಂದು ಚೋಳರ ಕಾಲದ ಶಾಸನವೊಂದರಿಂದ ತಿಳಿದುಬರುತ್ತದೆ. ಇದೊಂದು ಏಕಕೂಟ ದೇವಾಲಯವಾಗಿದ್ದು, ಇದರಲ್ಲಿ ಒಂದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತದೆ.

ಈ ದೇವಾಲಯ ನಿರ್ಮಾಣವಾದ ಮೇಲೆ ಹಲವು ಬಾರಿ ಜೀರ್ಣೋದ್ಧಾರ ಮಾಡಲಾಗಿದೆ. ಕ್ರಿ.ಶ.1935ರಲ್ಲಿ ಒಂದು ಬಾರಿ ಮತ್ತು 2005ರಲ್ಲಿ ಮತ್ತೊಂದು ಬಾರಿ ಜೀರ್ಣೋದ್ಧಾರವಾಗಿರುವುದು ಆಧಾರಗಳಿಂದ ತಿಳಿದುಬರುತ್ತದೆ. ಸೋಮೇಶ್ವರ ದೇವಾಲಯವು ಚೋಳರ ಮತ್ತು ಹೊಯ್ಸಳರ ಕಾಲದ ಅವಧಿಯಲ್ಲಿ ನಿರ್ಮಾಣವಾಗಿದೆ ಎಂದು ಹೇಳಲು ಈ ಎರಡೂ ಸಂತತಿಯವರ ವಾಸ್ತು ಲಕ್ಷಣಗಳು ಈ ದೇವಾಲಯದಲ್ಲಿ ಕಂಡುಬರುತ್ತವೆ. ಇದಕ್ಕೆ

ಪೂರಕವಾಗಿ ಶಾಸನಗಳು ತಿಳಿಸುತ್ತವೆ. ಈ ದೇವಾಲಯವನ್ನು ಪೂರ್ವಾಭಿಮುಖವಾಗಿ ಕಣಶಿಲೆಯನ್ನು ಉಪಯೋಗಿಸಿ ನಿರ್ಮಿಸಲಾಗಿದೆ.**(ಚಿ.ಸಂ.24)**

**ಗರ್ಭಗೃಹ:**-ಗರ್ಭಗೃಹವು 8X8 ಅಡಿಗಳ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಪಾಣಿಪೀಠದ ಮೇಲೆ ಸುಮಾರು ಮೂರು ಅಡಿಗಳ ಎತ್ತರವಿರುವ ಸೋಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿವಲಿಂಗವು ಬ್ರಹ್ಮಭಾಗ, ವಿಷ್ಣುಭಾಗ ಮತ್ತು ರುದ್ರಭಾಗವನ್ನು ಹೊಂದಿರುವ ಲಿಂಗವಾಗಿದೆ. ಈ ಲಿಂಗದ ರುದ್ರಭಾಗದ ಮಧ್ಯದಲ್ಲಿ ಬ್ರಹ್ಮಸೂತ್ರವಿದೆ. ಆದರೆ ಇದರಲ್ಲಿರುವ ಲಿಂಗವನ್ನು ಚೋಳರ ಕಾಲದಲ್ಲಿ ನಿರ್ಮಾಣ ಮಾಡಲಾಗಿದೆ.[37]**(ಚಿ.ಸಂ.25)** ಇದರ ಮೇಲ್ಛಾವಣಿಯಲ್ಲಿ ಭುವನೇಶ್ವರಿಯನ್ನು ನಕ್ಷತ್ರಾಕಾರವಾಗಿ ರಚಿಸಿ ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲು ಸರಳವಾಗಿದೆ. ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಂಡುಬರುವುದಿಲ್ಲ.

**ಸುಕನಾಸಿ:**-ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ. ಇದರ ಮಧ್ಯದಲ್ಲಿ ಶಿವನಿಗೆ ಅಭಿಮುಖವಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಸುಕನಾಸಿ ಬಾಗಿಲ ಪಟ್ಟಿಕೆಗಳು ಸರಳವಾಗಿವೆ. ಇದರಲ್ಲಿ ಯಾವುದೇ ಮಾದರಿಯ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ. ಇತ್ತೀಚೆಗೆ ಗಾರೆಯಲ್ಲಿ ಮಾಡಿಸಲಾಗಿರುವ ದ್ವಾರಪಾಲಕರಿದ್ದಾರೆ. ಬಾಗಿಲವಾಡದಲ್ಲಿ ಗಜಲಕ್ಷ್ಮೀಯನ್ನು ಬಿಡಿಸಲಾಗಿದೆ.

**ನವರಂಗ:**-ನವರಂಗವು ಸುಮಾರು 20X20 ಅಡಿಗಳ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯಲ್ಲಿ ರಚಿಸಿ ನಿಲ್ಲಿಸಲಾಗಿರುವ ನಾಲ್ಕು ಬಳಪದ ಕಲ್ಲಿನ ಕಂಬಗಳಿವೆ.**(ಚಿ.ಸಂ.26)** ಇವುಗಳು ಚೌಕ, ಬಳೆಗಳು, ಗಂಟೆಯಾಕಾರ, ಕುಂಬಾಕಾರ ಗಾಲಿ, ಪುಷ್ಪ ಭೋದಿಗೆ ಚೌಕಾಕಾರದ ಫಲಗೈ ಅದರ ಮೇಲೆ ಸರಳವಾಗಿರುವ ಕಪೋತವಿದೆ.[38] ಈ ನವರಂಗದ ಮಧ್ಯದಲ್ಲಿ ಭುವನೇಶ್ವರಿಯನ್ನು ಮಾಡಿ ಅದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಟವನ್ನು ಬಿಡಿಸಲಾಗಿದೆ. ನವರಂಗದ ದಕ್ಷಿಣದ ಗೋಡೆಯ ಮುಂಭಾಗದಲ್ಲಿ ಸುಮಾರು 5 ಅಡಿಗಳ ಎತ್ತರವಿರುವ ಶಂಕರನಾರಾಯಣ ಮೂರ್ತಿಯನ್ನು ಇರಿಸಲಾಗಿದೆ.[39] ಇದರ ಎಡಭಾಗದಲ್ಲಿ ಶಿವನ ಶಿಲ್ಪವನ್ನು ಇರಿಸಲಾಗಿದೆ. ಸ್ಥಳೀಯರು ಈ ದೇವನನ್ನು ಜಟಾಮುಕುಟ ಶಿವ ಎಂದು ಕರೆಯುತ್ತಾರೆ. ಈ ಶಿವನ ಎಡಭಾಗದಲ್ಲಿ ಕಾರ್ತಿಕೇಯ ಶಿಲ್ಪವಿದೆ. ಕಾರ್ತಿಕೇಯನು ತನ್ನ ವಾಹನವಾದ ನವಿಲಿನ ಮೇಲೆ ಕುಳಿತಿದ್ದಾನೆ. ದಕ್ಷಿಣದ ಗೋಡೆಯ ಮುಂದೆ ಸಪ್ತಮಾತೃಕೆಯರನ್ನು ಇರಿಸಲಾಗಿದೆ. ನವರಂಗದಲ್ಲಿ ಪದ್ಮಾಸನದಲ್ಲಿ ಕುಳಿತಿರುವ

ಗಣಪತಿ, ವೀರಭದ್ರ ಮತ್ತು ಪಾರ್ವತಿ ದೇವಿಯ ಶಿಲ್ಪಗಳನ್ನು ಇರಿಸಲಾಗಿದೆ. ವೀರಭದ್ರನು ಸಮಭಂಗಿಯಲ್ಲಿ ನಿಂತಿದ್ದು, ಚತುರ್ಭುಜ ಹೊಂದಿದ್ದಾನೆ. ಈ ದೇವನು ಕೈಗಳಲ್ಲಿ ಕತ್ತಿ, ಗುರಾಣಿ, ಖಡ್ಗ, ಗದೆಯನ್ನು ಹಿಡಿದುಕೊಂಡಿದ್ದಾನೆ. ನವರಂಗದ ದ್ವಾರದ ಪಟ್ಟಿಕೆಗಳು ಸರಳವಾಗಿದೆ. ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರು ನಿಂತಿದ್ದಾರೆ.

**ಮುಖಮಂಟಪ:**–ಮುಖಮಂಟಪವು ನವರಂಗದಷ್ಟೇ ಅಗಲವಾಗಿದ್ದು, 10 ಅಡಿ ಉದ್ದವಾಗಿದೆ. ಇದರ ಮುಂಭಾಗದಲ್ಲಿ ಚೌಕ, ಅಷ್ಟಮುಖ ಹೊಂದಿರುವ ಕಣಶಿಲೆಯ ನಾಲ್ಕು ಕಂಬಗಳು ಸಾಲಾಗಿವೆ. ಮುಂಭಾಗದಲ್ಲಿ ಸೋಪಾನವನ್ನು ಮಾಡಲಾಗಿದೆ.

**ಅಧಿಷ್ಠಾನ:**–ಈ ದೇವಾಲಯದ ಅಧಿಷ್ಠಾನವು ಮೂರು ಅಡಿ ಎತ್ತರವಾಗಿದೆ. ಇದರಲ್ಲಿ ಮೂರು ಪಟ್ಟಿಕೆಗಳು ಕಂಡುಬರುತ್ತವೆ. ಕಣಶಿಲೆಯಲ್ಲಿ ರಚಿಸಲಾಗಿರುವ ಈ ಅಧಿಷ್ಠಾನದ ಪಟ್ಟಿಕೆಗಳನ್ನು ಹಿಂದೆ ಮುಂದೆ ಸರಿದಂತೆ ಕ್ರಮಬದ್ಧವಾಗಿ ಜೋಡಿಸಲಾಗಿದೆ.

**ಭಿತ್ತಿ:**–ಭಿತ್ತಿಯು ನವರಂಗದ ಭಾಗ ಜೀರ್ಣೋದ್ಧಾರವಾಗಿದೆ. ಸುಕನಾಸಿ, ಗರ್ಭಗೃಹದ ಭಿತ್ತಿಯು ವಾಸ್ತವ ಸ್ಥಿತಿಯಲ್ಲಿದ್ದು, ಇದನ್ನು ತೆಳುವಾದ ಮತ್ತು ಅಗಲವಾದ ಅರೆಗಂಬಗಳನ್ನು ಜೋಡಿಸಿ ನಿರ್ಮಿಸಲಾಗಿದೆ. ಗರ್ಭಗೃಹದ ಮೂರು ದಿಕ್ಕಿನಲ್ಲಿ ಕೋಷ್ಠಗುಡಿಗಳಿವೆ. ಇವುಗಳಲ್ಲಿ ಈಗ ಮೂರ್ತಿ ಇಲ್ಲ. ಕೋಷ್ಠಕದ ಮೇಲೆ ಹೊಯ್ಸಳ ಶೈಲಿಯ ಶಿಖರವಿದೆ.

ಕಪೋತ ಮತ್ತು ಶಿಖರದ ಭಾಗವನ್ನು ಮತ್ತು ಹಾರದ ಭಾಗವನ್ನು ಇತ್ತೀಚೆಗೆ ಇಟ್ಟಿಗೆ ಸೀಮೆಂಟಿನಿಂದ ಹೊಸದಾಗಿ ಕಟ್ಟಲಾಗಿದೆ. ಇದು ದ್ರಾವಿಡ ಶೈಲಿಯಲ್ಲಿದ್ದು, ಎರಡು ತಲಗಳನ್ನು ಹೊಂದಿದೆ. ಸ್ತೂಪಿಯು ಚೌಕಾಕಾರವಾಗಿದ್ದು, ನಾಲ್ಕು ದಿಕ್ಕುಗಳಲ್ಲೂ ಕೀರ್ತಿಮುಖಗಳಿವೆ. ಇದರ ಮೇಲೆ ಪಂಚಲೋಹದ ಕಳಸವಿದೆ.[40]

**ಸೋಮೇಶ್ವರ ದೇವಾಲಯ–ಜೋಡಿ ಕಾಟೂರು**

ಜೋಡಿಕಾಟೂರು ಗ್ರಾಮವು ನಂಜನಗೂಡು ತಾಲ್ಲೂಕಿಗೆ ಸೇರಿರುವ ಒಂದು ಚಿಕ್ಕ ಹಳ್ಳಿಯಾಗಿದೆ. ಈ ಗ್ರಾಮವು ತಾಲೂಕು ಕೇಂದ್ರದಿಂದ 20ಕಿ.ಮೀ. ದೂರದಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಹೊಯ್ಸಳ ಮನೆತನದವರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಇಲ್ಲಿ ಮೂಕ ಸಾಕ್ಷಿಯಾಗಿರುವ ದೇವಾಲಯ ಮತ್ತು ಶಾಸನದಿಂದ ತಿಳಿಯಬಹುದು. ಇಲ್ಲಿನ ಶಾಸನದ ಪ್ರಕಾರ ಸೋಮೇಶ್ವರ ದೇವಾಲಯವನ್ನು 2ನೇ ವೀರ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ.1198ರಲ್ಲಿ ನುಗುನಾಡಿಗೆ ಸೇರಿದ ಕಾಟೂರಿನ ಆರಿದರ, ಕೊಲದಮ ಮತ್ತು ತುಮುಕ[41] ಎಂಬುವವರು ನಿರ್ಮಿಸಿದರೆಂದು ತಿಳಿಯುತ್ತದೆ. ಹಾಗೂ ಈ

ದೇವಾಲಯವನ್ನು ನಿರ್ಮಿಸಿದ ಶಿಲ್ಪಿ ಹಾಗೂ ಬೋವಿಗಳ ಹೆಸರು ಸಹ ಶಾಸನದಲ್ಲಿದೆ. ಸೋಮೇಶ್ವರ ದೇವಾಲಯವು ಸಂಪೂರ್ಣವಾಗಿ ನಶಿಸಿ ಹೋಗಿದುದ್ದರಿಂದ ಗ್ರಾಮಸ್ಥರ ಆಸಕ್ತಿ ಮತ್ತು ನೆರವಿನಿಂದ ಅದೇ ಸ್ಥಳದಲ್ಲಿ ಹೊಸದಾಗಿ ದೇವಾಲಯ ನಿರ್ಮಿಸಿದ್ದಾರೆ.**(ಚಿ.ಸಂ.27)** ಈ ದೇವಾಲಯವು ಸಂಪೂರ್ಣವಾಗಿ ಸೋಪುಗಲ್ಲಿನಲ್ಲಿ ನಿರ್ಮಾಣವಾಗಿರುವುದನ್ನು ಅಲ್ಲಿ ಬಿದ್ದಿರುವ ಅವಶೇಷಗಳಿಂದ ತಿಳಿಯಬಹುದು.[42] ಮೂಲ ದೇವಾಲಯದ ಅವಶೇಷಗಳು ಮತ್ತು ಅವುಗಳ ಸುಂದರ ಕೆತ್ತನೆ ನೋಡುಗರ ಗಮನವನ್ನು ಸೆಳೆಯುತ್ತದೆ. ಹಿಂದೆ ನವರಂಗದ ದ್ವಾರವಾಗಿದ್ದ ಗಜಲಕ್ಷ್ಮೀಯ ಚಿತ್ರವಿರುವ ತೊಲೆ ಅಲ್ಲೆ ಬಿದ್ದಿದೆ. ಈ ತೊಲೆಯು ಗರ್ಭಗೃಹದ ಲಲಾಟಬಿಂಬದ ಭಾಗವಾಗಿದ್ದು ಆಕರ್ಷಕವಾಗಿದೆ. ಈ ಲಲಾಟಬಿಂಬದ ಮಧ್ಯಭಾಗದಲ್ಲಿ ಲಕ್ಷ್ಮೀದೇವಿಯು ತನ್ನ ಎರಡು ಕೈಗಳಲ್ಲಿ ಆಯುಧಗಳನ್ನು ಹಿಡಿದು ನೇರಭಂಗಿಯಲ್ಲಿ ಕುಳಿತಿದ್ದಾಳೆ. ಈ ದೇವಿಯ ಎಡ ಮತ್ತು ಬಲಪಾರ್ಶ್ವದಲ್ಲಿ ಸೇವಕಿಯರ ಚಿಕ್ಕದಾದ ಉಬ್ಬು ಕೆತ್ತನೆಗಳಿವೆ. ಹಾಗೂ ಈ ಸೇವಕಿಯರ ಎಡ ಮತ್ತು ಬಲಪಾರ್ಶ್ವದಲ್ಲಿ ಗಜಗಳು ತಮ್ಮ ಸೊಂಡಿಲನ್ನು ಮೇಲಕ್ಕೆತ್ತಿ ಲಕ್ಷ್ಮಿದೇವಿಗೆ ಹರಸುವಂತಿವೆ ಹಾಗೆಯೆ ಇಲ್ಲಿ ಬಿದ್ದಿರುವ ಮಾಹೇಶ್ವರಿ, ವಿಷ್ಣು, ಗಣೇಶ, ಕಂಕಣ ಮೂರ್ತಿಗಳು ಸಹ ಬಹಳ ಸುಂದರವಾಗಿವೆ.[43]

ಅದೇ ರೀತಿ ಈ ದೇವಾಲಯ ಬಹಳ ಆಕರ್ಷಕ ಭಾಗವಾದ ಭುವನೇಶ್ವರಿಯ ಚಿತ್ರವಿರುವ ಕಲ್ಲು ಬಹಳ ಸೌಂದರ್ಯವಾಗಿದೆ. ಈ ಭುವನೇಶ್ವರಿಯು ಚೌಕಾಕಾರದಿಂದ ಕೂಡಿದ್ದು, ನಾಲ್ಕು ಮೂಲೆಗಳಲ್ಲಿ ಕೀರ್ತಿಮುಖಗಳ ರಚನೆ ಹಾಗೂ ಸುತ್ತಲೂ ಲತೆ ಬಳ್ಳಿಗಳ ಸುಂದರ ಕೆತ್ತನೆ ಮಧ್ಯ ಭಾಗದಲ್ಲಿ ವೃತ್ತಾಕಾರವಾಗಿದ್ದು, ಕಮಲ ಪುಷ್ಪದ ಕೆತ್ತನೆಯನ್ನು ಕಾಣಬಹುದು. ವಿದ್ವಾಂಸರಾದ ಎಂ.ಎಸ್. ಕೃಷ್ಣಮೂರ್ತಿಯವರು ಈ ದೇವಾಲಯದ ಬಗ್ಗೆ ತಿಳಿಸುತ್ತಾ, "ಹೊಯ್ಸಳ ಕಾಲದ ಕದಂಬ-ನಾಗರ ಶಿಖರವೊಂದು ಈ ಸ್ಥಳದಲ್ಲಿ ಕಂಡು ಬಂದಿರುವುದು ನಿಜಕ್ಕೂ ಆಶ್ಚರ್ಯಕರವಾದುದ್ದು, ಹಾಗೂ ಉತ್ತರಕನ್ನಡ ಮತ್ತು ಅದರ ಸುತ್ತಮುತ್ತಲಿನ ಜಿಲ್ಲೆಗಳಲ್ಲಿ ಜೋಡಿಕಾಟೂರಿನ ಈ ಕದಂಬ-ನಾಗರ ಶಿಖರ ಪ್ರಾಯಶಃ ಕದಂಬನಾಗರ ಸಂಪ್ರದಾಯದ ಅತ್ಯಂತ ದಕ್ಷಿಣಮಿತಿ ಎನ್ನಬಹುದು" ಎಂದಿದ್ದಾರೆ.[44] ಈ ಹಿನ್ನೆಲೆಯಲ್ಲಿ ಎಂ.ಎಸ್.ಕೃಷ್ಣಮೂರ್ತಿಯವರು ಮೂಲ ದೇವಾಲಯವನ್ನು ನೋಡಿ ಅದರ ವಾಸ್ತು ರಚನೆಯನ್ನು ಅಧ್ಯಯನ ನಡೆಸಿರುತ್ತಾರೆ ಎಂಬುದು ಇದರಿಂದ ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಇಲ್ಲಿ ಬಿದ್ದಿರುವ ಅವಶೇಷಗಳಾದ ಗಜಲಕ್ಷ್ಮೀ ಪಟ್ಟಿಕೆ, ಶಾಸನಕಲ್ಲು, ಭುವನೇಶ್ವರಿಯ ಚಿತ್ರವಿರುವ ಕಲ್ಲು, ವಿಷ್ಣು, ಶಿಲ್ಪ, ಇನ್ನಿತರ ಬಿಡಿಭಾಗಗಳನ್ನು**(ಚಿ.ಸಂ.28)** ಮತ್ತು ಅವುಗಳ ಸೂಕ್ಷ್ಮ ಕೆತ್ತನೆ ಮತ್ತು ವಾಸ್ತು ರಚನಾ ಕೌಶಲ್ಯವನ್ನು ಗಮನಿಸಿದಾಗ ಈ ದೇವಾಲಯವನ್ನು ಹೊಯ್ಸಳ

ಆಳ್ವಿಕೆಯ ಅವಧಿಯಲ್ಲಿ ಕ್ರಿ.ಶ.1198ರಲ್ಲಿ ನಿರ್ಮಿಸಲಾಗಿದೆ ಎಂದು ನಮಗೆ ಶಾಸನಗಳಿಂದ ತಿಳಿದುಬರುತ್ತದೆ.[45]

**ಕಾಮೇಶ್ವರ ದೇವಾಲಯ – ಕಲ್ಲಂಬಾಳು**

ಕಲ್ಲಂಬಾಳು ಎಂಬ ಈ ಗ್ರಾಮವು ಹೆಗ್ಗಡದೇವನಕೋಟೆ ತಾಲೂಕಿಗೆ ಸೇರಿರುವ ಒಂದು ಗ್ರಾಮವಾಗಿದೆ. ಇದು ಹೆಗ್ಗಡದೇವನಕೋಟೆಯಿಂದ 30ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಬಗ್ಗೆ 2ನೇ ಬಲ್ಲಾಳನ ಕಾಲದಲ್ಲಿ ಕ್ರಿ.ಶ.1211 ರಲ್ಲಿ ಬರೆಸಲಾಗಿರುವ ಶಾಸನವು ಈ ಗ್ರಾಮವನ್ನು ಮೊದಲು "ಕೆಲ್ಲಂಬಾಳು" ಮತ್ತು ಕಲ್ಲಂಬಾರು"[46] ಎಂದು ಕರೆಯಲಾಗುತ್ತಿತ್ತೆಂದು ಉಲ್ಲೇಖಿಸಲಾಗಿದೆ. ಮತ್ತೊಂದು ಶಾಸನ ಕ್ರಿ.ಶ.1738ರಲ್ಲಿ ಬರೆಸಲಾಗಿರುವ ಶಾಸನವು ಈ ಗ್ರಾಮವನ್ನು ಆಗ "ಕಲ್ಲಮ್ಬಾರುನಗರ" ಎಂದು ಕರೆಯಲಾಗುತ್ತಿತ್ತೆಂದು ತಿಳಿಸುತ್ತದೆ. ಹಾಗೂ "ಸಿಲೆಪುರ" ಎಂದೂ ಸಹ ಕರೆಯಲಾಗುತ್ತಿತ್ತೆಂದು ತಿಳಿಸುತ್ತದೆ.[47] ಇದೇ ಗ್ರಾಮದ ಪಶ್ಚಿಮ ಭಾಗದಲ್ಲಿರುವ ಕಾಮೇಶ್ವರ ದೇವಾಲಯವಿದೆ.**(ಚಿ.ಸಂ.29)** ಈ ದೇವಾಲಯವನ್ನು ಕಟ್ಟಿಸಿದ ಬಗ್ಗೆ ಮಾಹಿತಿ ಸ್ಪಷ್ಟವಾಗಿ ಲಭ್ಯವಾಗುವುದಿಲ್ಲ. ಆದರೆ ಕ್ರಿ.ಶ. 1211ರಲ್ಲಿ ಬರೆಸಲಾಗಿರುವ ಒಂದು ಶಾಸನವು 2ನೇ ಬಲ್ಲಾಳನು ನುಗುನದಿಯ ಉತ್ತರ ತೀರದಲ್ಲಿರುವ ಕಾಮೇಶ್ವರ ದೇವರ ಸೇವೆಗೆಂದು ದತ್ತಿಬಿಟ್ಟ ವಿಚಾರರವನ್ನು ತಿಳಿಸುತ್ತದೆ.[48] ಕ್ರಿ.ಶ.1218 ರಲ್ಲಿ ಬರೆಸಲಾಗಿರುವ ಮತ್ತೊಂದು ಶಾಸನವು ರಾಣಿ ಕೇತಲಾದೇವಿಯು ರಾಜ್ಯಬಾರ ಮಾಡುತ್ತಿರುವಾಗ ಈ ಗ್ರಾಮವನ್ನು ಕುಮಾರ ಮಾದವ ದಂಡನಾಯಕನು ಇದೇ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ ಬಗ್ಗೆ ಮಾಹಿತಿ ನೀಡುತ್ತದೆ. ಕ್ರಿ.ಶ.1738ರಲ್ಲಿ ಬರೆಸಲಾಗಿರುವ ಮತ್ತೊಂದು ಶಾಸನವು ಕಲ್ಲಂಬಾಳುವಿನ ಕಾಮೇಶ್ವರ ದೇವಾಲಯವನ್ನು "ಕಪ್ಪಣ್ಣಗೌಡ"[49] ಎಂಬುವನು ಜೀರ್ಣೋದ್ಧಾರ ಮಾಡಿಸಿದನೆಂದು ಮಾಹಿತಿ ಒದಗಿಸುತ್ತದೆ. ಕಾಮೇಶ್ವರ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಇದರಲ್ಲಿ ಒಂದು ಗರ್ಭಗೃಹ, ಸುಕನಾಸಿ, ನವರಂಗ ಹೊಂದಿದೆ.

**ಗರ್ಭಗೃಹ:–** ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದೆ. ಇದರ ಮಧ್ಯದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಹೊಯ್ಸಳ ಶೈಲಿಯ ನಕ್ಷತ್ರಾಕಾರದ ಪಾಣಿಪೀಠದ ಮೇಲೆ ಸುಮಾರು 2.5 ಅಡಿ ಎತ್ತರವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.30)** ಇದರ ಪೀಠವು ಕಲಾತ್ಮಕ ಕೆತ್ತನೆಯಿಂದ ಕೂಡಿದ್ದು, ಆಕರ್ಷಕವಾಗಿದೆ. ಶಿವಲಿಂಗವು ನಯವಾದ ಕೆತ್ತನೆಯಿಂದ ಕೊಡಿದ್ದು, ಮುಂಭಾಗದಲ್ಲಿ ಬೆಳ್ಳಿಯ ತಗಡಿನಲ್ಲಿ ರಚಿಸಿ ಲೇಪಿಸಲಾಗಿರುವ ವಿಭೂತಿ ಇದೆ. ಈ ಗರ್ಭಗೃಹ, ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಈ

ಭುವನೇಶ್ವರಿಯ ಇಕ್ಕೆಲಗಳಲ್ಲಿ ಕೀರ್ತಿಮುಖ ಮಧ್ಯದಲ್ಲಿ ಮೂರು ಸುತ್ತು ಅರಳಿರುವ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ.

ಗರ್ಭಗೃಹದ ದ್ವಾರವು ಅಲಂಕರಣದ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಬಾಗಿಲ ಪಟ್ಟಿಕಗಳಲ್ಲಿ ಅರಳಿದ ಪುಷ್ಪಗಳ ಅಲಂಕರಣ ಬಳ್ಳಿ ಸುರಳಿಗಳ ಅಲಂಕರಣ, ಸುರಳಿಗಳ ಮಧ್ಯದಲ್ಲಿ ಚಿಕ್ಕ ಚಿಕ್ಕ ಆನೆ, ಒಂಟೆ, ಕುದುರೆಗಳನ್ನು ಬಿಡಿಸಲಾಗಿದೆ. ಈ ರೀತಿಯ ಬಾಗಿಲು ಪಟ್ಟಿಕೆಗಳ ಅಲಂಕರಣ ಹೊಯ್ಸಳ ದೇವಾಲಯಗಳ ದ್ವಾರಗಳಲ್ಲಿ ಬಹಳ ವಿರಳ. ಆದರೆ ಈ ದೇವಾಲಯದಲ್ಲಿ ಬಿಡಿಸಿರುವುದು ಒಂದು ವಿಶೇಷತೆಯಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯನ್ನು ಬಿಡಿಸಲಾಗಿದೆ. ಬಾಗಿಲ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಸುಮಾರು ಮೂರು ಅಡಿ ಎತ್ತರವಿರುವ ದ್ವಾರಪಾಲಕರಿದ್ದಾರೆ. ಈ ದ್ವಾರಪಾಲಕರು ತ್ರಿಶೂಲ, ಡಮರು, ಗಧಾ, ಹಸ್ತವನ್ನು ಹೊಂದಿದ್ದಾರೆ. ಈ ದ್ವಾರಪಾಲಕರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಆದರೆ ಭಕ್ತಾದಿಗಳು ಇವುಗಳ ಮೇಲೆ ಎಣ್ಣೆ ಮಜ್ಜನವನ್ನು ಕಾಲ ಕಾಲದಲ್ಲಿ ಮಾಡಿರುವುದರಿಂದ ವಿಗ್ರಹದ ಲಕ್ಷಣ ಅಷ್ಟು ಸ್ಪಷ್ಟವಾಗಿ ಗೋಚರಿಸುವುದಿಲ್ಲ.[50]

**ಸುಕನಾಸಿ:–** ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದ್ದು ಮಧ್ಯದಲ್ಲಿ ವಿಶಾಲವಾಗಿ ಅರಳಿರುವ ಮೂರು ಸುತ್ತು ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಇದರ ಒಳಭಾಗದಲ್ಲಿ ದಿಕ್ಪಾಲಕರು ಕಮಲದ ಮೊಗ್ಗುಗಳು ಮತ್ತು ಅರಳಿದ ಪುಷ್ಪಗಳನ್ನು ಮೂಲೆಗಳಲ್ಲಿ ಬಿಡಿಸಲಾಗಿದೆ.

ಸುಕನಾಸಿಯ ದ್ವಾರವು ಆಕರ್ಷಕವಾಗಿದ್ದು, ಇದಕ್ಕೆ ಬಾಗಿಲ ಪಟ್ಟಿಕೆಗಳ ಬದಲಾಗಿ ಇಕ್ಕೆಲಗಳಲ್ಲಿ ಸುಮಾರು ಆರು ಅಡಿ ಎತ್ತರವಿರುವ ದ್ವಾರಪಾಲಕರ ಮೂರ್ತಿಗಳನ್ನು ನಿಲ್ಲಿಸಲಾಗಿದೆ. ಈ ದ್ವಾರಪಾಲಕರು ತ್ರಿಭಂಗಿಯಲ್ಲಿ ನಿಂತಿದ್ದಾರೆ (ಚಂಡ ಪ್ರಚಂಡ). ಇವರು ಕೈಗಳಲ್ಲಿ ತ್ರಿಶೂಲ, ಡಮರು, ಗಧಾ, ಹಸ್ತವನ್ನು ಹೊಂದಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಎಣ್ಣೆಯ ಪ್ರಭಾವದಿಂದ ಅಷ್ಟು ಸ್ಪಷ್ಟವಾಗಿ ಕಾಣಬರುವುದಿಲ್ಲ. ಈ ರೀತಿಯ ಬಾಗಿಲ ಇಕ್ಕೆಲಗಳಲ್ಲಿ ಎತ್ತರವಾದ ದ್ವಾರಪಾಲಕರನ್ನು ನಿಲ್ಲಿಸಿರುವುದು ಒಂದು ವಿಶೇಷತೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯನ್ನು ಬಿಡಿಸಲಾಗಿದೆ. ಈ ದೇವಿಯ ಎಡ ಮತ್ತು ಬಲಭಾಗದಲ್ಲಿ ಸಂಗೀತಗಾರರು ನೃತ್ಯಗಾರರ ಶಿಲ್ಪಗಳಿವೆ. ಆದರೆ ಅವುಗಳಲ್ಲಿ ಕಾಲಕಾಲಕ್ಕೆ ಸುಣ್ಣವನ್ನು ಬಳಿದಿರುವುದರಿಂದ ಅವುಗಳ ಲಕ್ಷಣಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಬಾಗಿಲುವಾಡದ ಮೇಲೆ ಕೀರ್ತಿಮುಖವನ್ನು ಬಿಡಿಸಲಾಗಿದೆ.

**ನವರಂಗ**:– ನವರಂಗವು ಸುಮಾರು 30x30 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಕಣಶಿಲೆಯ ಚೋಳ–ಹೊಯ್ಸಳ ಶೈಲಿಯ ನಾಲ್ಕು ದೃಢವಾದ ಕಂಬಗಳಿವೆ.[51]**(ಚಿ.ಸಂ.31)** ಇವುಗಳು ಉಪಪೀಠದ ಮೇಲೆ ನಿಂತಿದ್ದು, ಚೌಕಾಕಾರದ ಪೀಠ, ಸಿಲಿಂಡಿರನಾಕಾರದ ಕಾಂಡಭಾಗ, ಕಂಠದ ಭಾಗವು ಅದರ ಮೇಲೆ ಗಾಲಿ, ಗಾಲಿಯ ಮೇಲೆ ಪುಷ್ಪಬೋದಿಗೆ, ಫಲಗೈ ಉರುಳೆಯಾಕಾರದ ಕಪೋತವಿದೆ. ಈ ಕಂಬಗಳು ಮೂಲತಃ ಚೋಳರ ಕಾಲದ್ದಾಗಿದ್ದು, ನಂತರ ಹೊಯ್ಸಳರು ಜೀರ್ಣೋದ್ಧಾರ ಮಾಡಿದ್ದಾರೆ. ನವರಂಗದ ಮೇಲ್ಛಾವಣಿಯ ಮಧ್ಯದಲ್ಲಿ ಭುವನೇಶ್ವರಿಯನ್ನು ಮಾಡಲಾಗಿದೆ. ಈ ಭುವನೇಶ್ವರಿಯು ಸರಳವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಚಪ್ಪಟೆಯಾಕಾರವಾಗಿ ಬಿಡಿಸಲಾಗಿರುವ ಎರಡು ಸುತ್ತಿನ ಪದ್ಮಪುಷ್ಪವಿದೆ. ಇಕ್ಕೆಲಗಳಲ್ಲಿ ಕೀರ್ತಿಮುಖಗಳಿವೆ. ಮೂಲೆಗಳಲ್ಲಿ ನಾಲ್ಕು ಅರಳಿದ ಪದ್ಮಪುಷ್ಪಗಳಿವೆ ಮತ್ತು ಅಂಚಿನ ಭಾಗದಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ನವರಂಗದ ಬಲಭಾಗದಲ್ಲಿ ಉಪಪೀಠದಂತಿರುವ ಪೀಠದ ಮೇಲೆ ಸುಮಾರು 3 ಅಡಿ ಎತ್ತರವಿರುವ ಗಣಪತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ಪದ್ಮಾಸನದಲ್ಲಿ ಕುಳಿತಿದ್ದು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಪಾಶ, ಅಂಕುಶ, ಫಲ ಮತ್ತು ಮುರಿದ ದಂತವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಅಸ್ಪಷ್ಟವಾಗಿದೆ. ಈ ಗಣಪತಿಯ ಬಲಭಾಗದಲ್ಲಿ ಸುಮಾರು ಎರಡು ಅಡಿ ಎತ್ತರವಿರುವ ಚಿಕ್ಕಗಣಪತಿಯನ್ನು ಇಡಲಾಗಿದೆ. ಈ ದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಪಾಶ, ಅಂಕುಶ, ಫಲ ಮತ್ತು ದಂತವನ್ನು ಹಿಡಿದುಕೊಂಡಿದ್ದಾನೆ. ಈ ಎರಡು ಗಣಪತಿಗಳು ಎಡಮುರಿ ಗಣಪತಿ ಇದ್ದಂತೆ ಇದೆ. ನವರಂಗದ ವಾಯುವ್ಯ ಮೂಲೆಯ ಪಕ್ಕದಲ್ಲಿ ಸುಮಾರು 4 ಅಡಿ ಎತ್ತರವಿರುವ ಷಣ್ಮುಗನನ್ನು ಇರಿಸಲಾಗಿದೆ. ಷಣ್ಮುಗನು ಕಳಸ, ಅಭಯಹಸ್ತ ಹೊಂದಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸ್ಪಷ್ಟವಾಗಿ ಕಾಣಬರುವುದಿಲ್ಲ. ಈ ದೇವನ ಎಡಭಾಗದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಸುಮಾರು 4 ಅಡಿ ಎತ್ತರವಾಗಿರುವ ಸರಸ್ವತಿಯನ್ನು ಇರಿಸಲಾಗಿದೆ. ಈ ದೇವಿಯು ಪದ್ಮಾಸನದಲ್ಲಿ ಕುಳಿತಿದ್ದು, ಚತುರ್ಭುಜವನ್ನು ಹೊಂದಿದ್ದಾಳೆ. ಕೈಗಳಲ್ಲಿ ಪಾಶ, ಅಂಕುಶ, ಪುಸ್ತಕ, ಮಣಿಹಸ್ತವನ್ನು ಹೊಂದಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಯಥೇಚ್ಛವಾಗಿದ್ದು ಅವುಗಳ ಅಲಂಕರಣ ಸ್ಪಷ್ಟವಾಗಿ ಕಾಣಬರುವುದಿಲ್ಲ. ಕಾರಣ ಈ ದೇವಿಯ ಮೇಲೆ ಎಣ್ಣೆಯನ್ನು ಸುರಿದು ಅಭಿಷೇಕ ಮಾಡುತ್ತಿರುವುದರಿಂದ ಅಷ್ಟು ಸ್ಪಷ್ಟವಾಗಿ ಆಭರಣಗಳು ಕಾಣಬರುವುದಿಲ್ಲ.

ನವರಂಗದ ಉತ್ತರದ ಗೋಡೆಯ ಮುಂದೆ ನಾಲ್ಕು ಹೆಡೆಗಳಿರುವ ನಾಗಶಿಲ್ಪವನ್ನು ಇರಿಸಲಾಗಿದೆ. ನಾಗಶಿಲ್ಪದ ಎಡಭಾಗದಲ್ಲಿ ನಾಲ್ಕು ಅಡಿ ಎತ್ತರವಿರುವ ಮತ್ತೊಂದು ಷಣ್ಮುಗನ

ಶಿಲ್ಪವನ್ನು ಇರಿಸಲಾಗಿದೆ. ಈ ದೇವನು ನವಿಲಿನ ಮೇಲೆ ಸಂಚರಿಸುವಂತೆ ರಚಿಸಲಾಗಿದೆ. ಕೈಗಳಲ್ಲಿ ಡಮರು, ತ್ರಿಶೂಲ, ಅಭಯಹಸ್ತ (ಮೋದಕ) ಹಿಡಿದಿದ್ದಾನೆ. ಈ ಷಣ್ಮುಗನ ಪಕ್ಕದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಪುರುಷದೇವನೊಬ್ಬನ ಶಿಲ್ಪವನ್ನು ಇರಿಸಲಾಗಿದೆ. ಈ ದೇವನು ಗಳಸ ಮತ್ತು ಆಯುಧವೊಂದನ್ನು ಹಿಡಿದುಕೊಂಡಿದ್ದಾನೆ. ಇದರ ಪಕ್ಕದಲ್ಲಿ ವೀರಪುರುಷರು ಹೋರಾಡುತ್ತಿರುವ ಶಿಲ್ಪವನ್ನು ಇಡಲಾಗಿದೆ. ಈ ದೇವಾಲಯದ ನವರಂಗದ ದಕ್ಷಿಣ ಗೋಡೆಯ ಮುಂದೆ ಸಪ್ತಮಾತೃಕೆಯವರ ಶಿಲ್ಪಗಳನ್ನು ಇರಿಸಲಾಗಿದೆ.[52] **(ಚಿ.ಸಂ.32)** ಈ ದೇವಿಯರೆಲ್ಲರು 3 ಅಡಿ ಎತ್ತರವಾಗಿದ್ದಾರೆ, ಸುಂದರವಾಗಿದ್ದಾರೆ. ಈ ದೇವಿಯರ ಎಡಭಾಗದಲ್ಲಿ ಮಹಿಷಮರ್ದಿನಿ ಶಿಲ್ಪವಿದೆ. ಇದು ಸುಮಾರು 4 ಅಡಿ ಎತ್ತರವಾಗಿದ್ದು, ಚತುರ್ಭುಜವನ್ನು ಹೊಂದಿದ್ದಾಳೆ. ಕೈಗಳಲ್ಲಿ ತ್ರಿಶೂಲದಿಂದ ಎಡಗೈಯಲ್ಲಿ ಮಹಿಷನ ಕತ್ತನ್ನು ಮುರಿದಿದ್ದಾಳೆ. ಬಲಗೈಯಿಂದ ಮಹಿಷನ ಕತ್ತನ್ನು ಕತ್ತರಿಸಿರುವುದು ಈ ಶಿಲ್ಪವು ಒಂದು ವಿಶೇಷ ಶಿಲ್ಪವಾಗಿದೆ. ಉಳಿದ ಕೈಗಳಲ್ಲಿ ಪದಕ, ದಂಡವನ್ನು ಹಿಡಿದಿದ್ದಾಳೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ಆಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಎಡಭಾಗದಲ್ಲಿ ಸಿಂಹವಿದೆ. ಈ ದೇವಿಯ ಎಡಪಾರ್ಶ್ವದಲ್ಲಿ ಸುಮಾರು 4.5 ಅಡಿ ಎತ್ತರವಿರುವ ಶಿವಪಾರ್ವತಿಯರ ಶಿಲ್ಪವಿದೆ. ನಕ್ಷತ್ರಾಕಾರದ ಪೀಠದ ಮೇಲೆ ನಂದಿ, ನಂದಿಯ ಮೇಲೆ ಶಿವಪಾರ್ವತಿಯರು ಸುಖಾಸನದಲ್ಲಿ ಕುಳಿತಿದ್ದಾರೆ. ಶಿವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ತ್ರಿಶೂಲ, ಡಮರು ಮತ್ತೊಂದು ಕೈಯಲ್ಲಿ ಪಾರ್ವತಿಯನ್ನು ತಬ್ಬಿಕೊಂಡಿದಾನೆ. ಇನ್ನೊಂದು ಕೈಯಲ್ಲಿ ಅಭಯಹಸ್ತವಿದೆ. ಪಾರ್ವತಿಯು ಶಿವನ ತೊಡೆಯ ಮೇಲೆ ಸುಖಾಸನದಲ್ಲಿ ಕುಳಿತಿದ್ದು, ಫಲ ಮತ್ತು ಅಭಯಹಸ್ತವನ್ನು ಹೊಂದಿದ್ದಾಳೆ. ಈ ದೇವ ದೇವತೆಯರ ಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವತೆಗಳ ಸ್ವಲ್ಪ ದೂರದಲ್ಲಿ ಎಡಕ್ಕೆ ಅಗ್ನಿದೇವನ ವಾಹನವಾದ (ಟಗರು) ಇದೆ. ಈ ದೇವನು ದ್ವಿಭುಜವನ್ನು ಹೊಂದಿದ್ದು, ಪುಸ್ತಕ ಮತ್ತು ದಂಡವನ್ನು ಹಿಡಿದಿದ್ದಾನೆ. ಅಗ್ನಿ ದೇವನ ವಾಹನದ ಪಕ್ಕದಲ್ಲಿ ಚಿಕ್ಕದೊಂದು ಗರ್ಭಗೃಹವನ್ನು ಮಾಡಿ ಅದರ ಮಧ್ಯದಲ್ಲಿ ಪಾಣಿಪೀಠದ ಮೇಲೆ ಭೈರವನ ಮೂರ್ತಿಯನ್ನು ನಿಲ್ಲಿಸಲಾಗಿದೆ. ಈ ದೇವನು ಸುಮಾರು 5 ಅಡಿ ಎತ್ತರವಾಗಿದ್ದು ತ್ರಿಭಂಗಿಯಲ್ಲಿ ನಿಂತಿದ್ದಾನೆ ಮತ್ತು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಬಿಕ್ಷಾಟನೆ ಪಾತ್ರೆ ಹಿಡಿದಿದ್ದಾನೆ. ಮೈಮೇಲೆ ರುಂಡಮಾಲೆ ಇದೆ. ಕಿವಿಗಳಿಗೆ ಹಾಕಿರುವ ಓಲೆ ಸ್ಥೂಲವಾಗಿದೆ. ಜಡೆಯು ಗುಂಗುರಾಗಿ ಊರ್ಧ್ವವಾಗಿ ಇದೆ. ನವರಂಗದ ಬಲಭಾಗದಲ್ಲಿ ಸುಖಾಸನದಲ್ಲಿ ಕುಳಿತಿರುವ ಈ ದೇವಿಯು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಪುಸ್ತಕ, ಅಭಯಹಸ್ತ, ಖಡ್ಗ, ಡಮರು, ಪಾತ್ರೆಯನ್ನೆ ಹಿಡಿದ್ದಾಳೆ. ಈ ದೇವಿಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವಿಯ ಮೂರ್ತಿಯ

ಪಕ್ಕದಲ್ಲಿ ಹಯಗ್ರೀವ ಶಿಲ್ಪವಿದೆ. ಈ ದೇವನು ಸುಖಾಸನದಲ್ಲಿ ಕುಳಿತಿದ್ದಾನೆ. ತನ್ನ ಎರಡು ಕೈಗಳಲ್ಲಿ ಒಂದರಲ್ಲಿ ಅಧಿಕಾರದಂಡ, ಮತ್ತೊಂದು ಕೈಯಲ್ಲಿ ಫಲವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ನವರಂಗದ ದಕ್ಷಿಣದ ಗೋಡೆಯ ಮುಂದೆ ಸುಮಾರು 4 ಅಡಿ ಎತ್ತರವಿರುವ ಸೂರ್ಯದೇವನ ಶಿಲ್ಪವಿದೆ. ಈ ದೇವನು ತನ್ನ ಎರಡು ಕೈಗಳಲ್ಲೂ ಕಮಲದ ಮೊಗ್ಗುಗಳನ್ನು ಹಿಡಿದುಕೊಂಡಿದ್ದಾನೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

ನವರಂಗದ ದ್ವಾರವು ನಾಲ್ಕು ಪಟ್ಟಿಕೆಗಳಿಂದ ಕೂಡಿದ್ದು, ಪಟ್ಟಿಕೆಗಳ ಮೇಲೆ ಯಾವುದೇ ಅಲಂಕರಣೆ ಕೆತ್ತನೆ ಮಾಡದೆ ಹಾಗೆ ಉಳಿಸಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಇದರ ಮೇಲೆ ಮಣಿಹಾರಗಳ ಅಲಂಕರಣೆ ಇದೆ ಮತ್ತು ಸಾಲಾಗಿ ಬಿಡಿಸಲಾಗಿರುವ ಕಮಲದ ಮೊಗ್ಗುಗಳಿವೆ. ಈ ದ್ವಾರದ ಮುಂದೆ ವೃತ್ತಾಕಾರದ ಬಲಿಪೀಠವಿದೆ.

**ಅಧಿಷ್ಠಾನ**:- ಅಧಿಷ್ಠಾನದಲ್ಲಿ ಉಪಾನ, ಜಗತಿ ಭೂಮಿಯಲ್ಲಿ ಹೂತುಹೋಗಿದೆ. ಕಪೋತ ತ್ರಿಪಟ್ಟ ಕುಮುದ, ಪ್ರತಿಯ ಭಾಗ ಮಾತ್ರ ಮುಂಭಾಗದಲ್ಲಿ ಕಾಣುತ್ತದೆ. ಆದರೆ ಉತ್ತರ-ದಕ್ಷಿಣದ ಪಶ್ಚಿಮಭಾಗದ ಅಧಿಷ್ಠಾನವು ಸಂಪೂರ್ಣವಾಗಿ ಭೂಮಿಯಲ್ಲಿ ಹೂತು ಹೋಗಿದೆ.

**ಭಿತ್ತಿ**:- ಭಿತ್ತಿಯು ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಶಿಥಿಲಾವಸ್ಥೆಯಲ್ಲಿದ್ದು ಭಿತ್ತಿಯನ್ನು ಇತ್ತೀಚೆಗೆ ಗ್ರಾಮಸ್ಥರು ಗೋಡೆಯನ್ನು ಉಳಿಸಿಕೊಳ್ಳಲು ಅದರ ಭದ್ರತೆಗಾಗಿ ಒದೆಗೋಡೆಗಳನ್ನು ನವರಂಗದ ಸುತ್ತಲೂ ಕಟ್ಟಲಾಗಿದೆ. ಗರ್ಭಗೃಹಕ್ಕೆ ಯಾವುದೇ ತಡೆಗೋಡೆ ಇಲ್ಲ. ಭಿತ್ತಿಯಲ್ಲಿ ಸಣ್ಣ ಸಣ್ಣ ತೆಳುವಾದ ಕಂಬಗಳನ್ನು ಒಂದೇ ಅಂತರದಲ್ಲಿ ನಿಲ್ಲಿಸಿದಂತೆ ಕಟ್ಟಲಾಗಿದೆ. ಇದರಲ್ಲಿ ಗರ್ಭಗೃಹದ ಮೂರು ಕಡೆ, ಹಾಗೂ ನವರಂಗದ ಎರಡು ಕಡೆ ಎರಡು ಕಂಬಗಳ ಮೇಲೆ ಶಿಖರವುಳ್ಳ ಕೋಷ್ಠಗಳನ್ನು ಮಾಡಲಾಗಿದೆ. ಆದರೆ ಈ ಕೋಷ್ಠಗಳಲ್ಲಿ ಯಾವುದೇ ಮೂರ್ತಿ ಕಂಡು ಬರುವುದಿಲ್ಲ. ಗರ್ಭಗೃಹದ ನೈರುತ್ಯ ಮೂಲೆಯಲ್ಲಿರುವ ಕೋಷ್ಠದಲ್ಲಿ ಉಗ್ರನರಸಿಂಹ ಶಿಲ್ಪವನ್ನು ಬಿಡಿಸಲಾಗಿದೆ. ಮತ್ತೊಂದು ಕೋಷ್ಠದಲ್ಲಿ ಕಾಳಿಂಗಮರ್ಧನ ಶಿಲ್ಪವಿದೆ.

**ಕಪೋತ**:- ಕಪೋತವು ಇಳಿಜಾರಾಗಿದ್ದು ಎರಡು ಅಡಿ ಭಿತ್ತಿಯಿಂದ ಮುಂದಕ್ಕೆ ಚಾಚಿದೆ. ಇದರ ಮೇಲೆ ದೇವಾಲಯದ ಸುತ್ತಲೂ ಎರಡು ಎತ್ತರವಿರುವ ಕೈಪಿಡಿ ಗೋಡೆ ಇದೆ. ದೇವಾಲಯದ ಮುಂಭಾಗದ ಕಪೋತದ ಭಾಗದಲ್ಲಿ ಒಂದು ಕೋಷ್ಠ ಗುಡಿಯನ್ನು ಮಾಡಿ ಕೋಷ್ಠ ಗುಡಿಯ ಒಳಗೆ ತ್ರುಟಿತವಾಗಿರುವ ಶಿವನ ಶಿಲ್ಪವಿದೆ. ಈ ಕೋಷ್ಠದ ಮುಂಭಾಗವನ್ನು ಬಳ್ಳಿಸುರಳಿ ಕೀರ್ತಿಮುಖದಿಂದ ಹಿಂಭಾಗದಲ್ಲಿ ದ್ರಾವಿಡ ಶೈಲಿಯ ಶಿಖರವಿದೆ. ಈ ದೇವಾಲಯದ ಕೈಪಿಡಿ

ಗೋಡೆಯ ಮೇಲೆ ಮೂಲೆಗಳಲ್ಲಿ ಕುಳಿತಿರುವ ನಂದಿಯ ಶಿಲ್ಪಗಳು ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ಶಿಲ್ಪಗಳಾಗಿವೆ. ಗರ್ಭಗೃಹದ ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾದ ಎರಡು ತಲಗಳುಳ್ಳ ಶಿಖರವಿದೆ. ಇದರ ಸ್ತೂಪಿಯು ವೃತ್ತಾಕಾರವಾಗಿದ್ದು. ಇದರ ನಾಲ್ಕು ದಿಕ್ಕುಗಳಲ್ಲೂ ಕೀರ್ತಿಮುಖವನ್ನು ಮಾಡಲಾಗಿದೆ. ಅದರ ಮೇಲೆ ಇರಿಸಲಾದ ಕಳಸವು ಈಗ ಕಣ್ಮರೆಯಾಗಿದೆ.

ಈ ದೇವಾಲಯದ ಈಶಾನ್ಯ ಭಾಗದಲ್ಲಿ ಹೊಯ್ಸಳ ಶೈಲಿಯ  ನಾಲ್ಕು ನಕ್ಷತ್ರಾಕಾರದ ನಾಲ್ಕು ಕಂಬಗಳಿವೆ. ಈ ಕಂಬಗಳ ಮೇಲೆ ಈಗ ಮೇಲ್ಛಾವಣಿ ಇದೆ. ಸಾಮಾನ್ಯವಾಗಿ ಮೂಲದೇವಾಲಯದ ನವರಂಗದ ಮಧ್ಯದಲ್ಲಿ ಕಂಬಗಳಿವೆ. ಆದರೆ ಈ ದೇವಾಲಯದ ಮುಖಮಂಟಪ ನವರಂಗದ ಗೋಡೆ ಇವೆಲ್ಲವೂ ಉಳಿದು ಬಂದಿಲ್ಲ. ಕಾರಣ ಈ ದೇವಾಲಯ ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಈ ರೀತಿಯಾಗಿರಬಹುದೆಂದು ಊಹಿಸಬಹುದು. ನವರಂಗದಲ್ಲಿರುವ ಈ ಕಂಬಗಳನ್ನು ಚೌಕಾಕಾರದ ಪೀಠದ ಮೇಲೆ ರಚಿಸಲಾಗಿದೆ. ಕಾಂಡದ ಭಾಗವನ್ನು ನಕ್ಷತ್ರಾಕಾರವಾಗಿ ರಚಿಸಿ ಬಳೆಗಳ ಅಲಂಕರಣ, ಗಾಲಿ, ಘಂಟೆ, ಘಟಾ, ಪುಷ್ಪಬೋದಿಗೆ, ಫಲಗೈ ಇವುಗಳೆಲ್ಲವೂ ಸಹ ನಕ್ಷತ್ರಾಕಾರವಾಗಿದೆ. ಇದರ ಮೇಲಿರುವ ಕಪೋತವು ಉರುಳೆಯಾಕಾರವಾಗಿದೆ. ಈ ಮಂಟಪದ ಮಧ್ಯ ಮೇಲ್ಛಾವಣಿಯ ಭುವನೇಶ್ವರಿ ಇದ್ದು ಇದರ ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ದ್ವಾರವು ಸರಳವಾಗಿದೆ. ಇದರ ಹಿಂಭಾಗದಲ್ಲಿ ಒಂದು ಚೌಕಾಕಾರದ ಕೋಟೆ ಇದೆ. ಇದು ಮೂಲತಃ ಸೂರ್ಯದೇವನನ್ನು ಪ್ರತಿಬಿಂಬಿಸಲಾಗಿದ್ದಂತಹ ಗರ್ಭಗೃಹವಿದ್ದಂತೆ ಕಂಡುಬರುತ್ತದೆ. ಆದರೆ ಪ್ರಕೃತಿಯ ವಿಕೋಪದಿಂದ ಬಲಿಯಾಗಿ ಮೂಲವಿಗ್ರಹವು ತೃಟಿತವಾಗಿದ್ದರಿಂದ ಅದನ್ನು ಪೀಠದಿಂದ ಬೇರ್ಪಡಿಸಿ ಹೊರಗಿರಸಲಾಗಿದೆ. ಆದರೆ ಮೂಲಪೀಠವು ಗರ್ಭಗೃಹದಲ್ಲೇ ಇದೆ. ಇದು ಎರಡು ಅಡಿ ಎತ್ತರವಾಗಿದ್ದು ನಕ್ಷತ್ರಾಕಾರವಾಗಿದೆ. ಈ ಪೀಠದ ಮುಂಭಾಗದಲ್ಲಿ ಸಪ್ತ ಅಶ್ವಗಳ ಶಿಲ್ಪಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಎರಡು ಕೈಗಳನ್ನು ಹಿಡಿದು ನಿಂತಿರುವಂತಹ ಸಾರಥಿ ಇದ್ದಾನೆ.

**ನಂದಿಮಂಟಪ:-** ದೇವಾಲಯದ ಮುಂದೆ ಆಯಾತಕಾರವಾಗಿ ನಿರ್ಮಿಸಲಾಗಿರುವ ಮಂಟಪವಿದೆ. ಈ ಮಂಟಪದಲ್ಲಿ ನಾಲ್ಕು ಕಂಬಗಳಿವೆ. ಎರಡು ಕಂಬಗಳು ಅಂಚಿನಲ್ಲಿದ್ದು ಚೌಕಾಕಾರವಾಗಿದೆ. ಮಧ್ಯದಲ್ಲಿರುವ ಎರಡು ಕಂಬಗಳು ಚೌಕ, ಅಷ್ಟಮುಖವನ್ನು ಹೊಂದಿದೆ. ಕಂಬದ ಮೇಲಿರುವ ಮೇಲ್ಛಾವಣಿಗೆ ಚಪ್ಪಡಿ ಕಲ್ಲುಗಳನ್ನು ಹಾಸಿ ಮುಚ್ಚಲಾಗಿದೆ. ಕಪೋತದ ಮೇಲೆ ಇರುವ ಹಾರದ ಭಾಗದಲ್ಲಿ ಎರಡು ಅಡಿ ಎತ್ತರದ ಕೈಪಿಡಿ ಗೋಡೆಯಿದೆ. ಈ

ಗೋಡೆಯ ಮೇಲೆ ಉತ್ತರ ಮತ್ತು ದಕ್ಷಿಣದಲ್ಲಿ ಗಾರೆ ಮತ್ತು ಇಟ್ಟಿಗೆಯಿಂದ ಮಾಡಿದ ಸುಂದರವಾದ ನಂದಿ ಇದೆ. ನಂದಿಗಳ ಕೊರಳಲ್ಲಿ ಗಂಟೆಗಳ ಹಾರ, ಮೈಮೇಲೆ ಗಂಟೆಯ ಸರ ಬಿಡಿಸಲಾಗಿದೆ.

ಈ ಮಂಟಪಕ್ಕೆ ಒಂದು ದ್ವಾರವಿದ್ದು ದ್ವಾರದ ಹಿಂಬದಿಯಲ್ಲಿ ಮತ್ತೊಂದು ಕೋಣೆಯಿದೆ. ಈ ಕೋಣೆಯ ಮಧ್ಯದಲ್ಲಿ ಮೂಲತಃ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಒಳಗೆ ಮೂರು ಅಡಿ ಮತ್ತು ಎರಡು ಅಡಿ ಎತ್ತರವಿರುವ ಒಂದೇ ರೀತಿಯ ಎರಡು ನಂದಿ ಶಿಲ್ಪಗಳನ್ನು ಶಿವಲಿಂಗಕ್ಕೆ ಎದುರಾಗಿ ಇರುವಂತೆ ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಬಲಭಾಗದಲ್ಲಿ ಹೊಯ್ಸಳ ಶೈಲಿಯುಳ್ಳ ಬರವಣಿಗೆಯಿಂದ ಕೂಡಿದ ಸುಮಾರು ನಾಲ್ಕು ಅಡಿ ಎತ್ತರವಿರುವ ಶಾಸನವಿದೆ. ಈ ಶಾಸನದ ಮೇಲೆ ಹಸು, ಕರು, ಶಿವಲಿಂಗ, ಪುರೋಹಿತ ಮೇಲ್ಭಾಗದಲ್ಲಿ ಸೂರ್ಯಚಂದ್ರರ ಶಿಲ್ಪಗಳಿವೆ. ಈ ದೇವಾಲಯವು ಈಗಾಗಲೇ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಸಾಕಷ್ಟು ಶಿಥಿಲಾವಸ್ಥೆಯಲ್ಲಿದೆ. ಇದಕ್ಕೆ ಕಾರಣ ದೇವಾಲಯದ ಮೇಲೆ ಬೆಳೆದಿರುವ ಗಿಡಗಂಟಿಗಳೇ ಸಾಕ್ಷಿಯಾಗಿವೆ.[53]

ಮೂಲತಃ ಈ ದೇವಾಲಯಕ್ಕೆ ಸುತ್ತಲೂ ಪ್ರಕಾರ ಇದ್ದುದಕ್ಕೆ ಸಾಕ್ಷಿಯಾಗಿ ಪ್ರಕಾರದ ಗೋಡೆಯನ್ನು ನಿರ್ಮಿಸಲಾಗಿದ್ದಂತಹ ಅಡಿಪಾಯದ ಕಲ್ಲುಗಳು ಈಗಲೂ ಹಾಗೆಯೇ ಉಳಿದಿವೆ. ಆದರೆ ಪ್ರಕಾರದ ಗೋಡೆ ಈಗ ಸುತ್ತಲೂ ಸಂಪೂರ್ಣವಾಗಿ ಹಾಳಾಗಿವೆ. ಇದಕ್ಕೆ ಕಾರಣ ಪುರಾತತ್ವ ಇಲಾಖೆಯವರಾಗಲೀ, ರಾಜ್ಯ ಸರ್ಕಾರವಾಗಲೀ ಮತ್ತು ಗ್ರಾಮಸ್ಥರಾಗಲೀ ಈ ದೇವಾಲಯದ ಸುಸ್ಥಿತಿಗೆ ಜವಾಬ್ದಾರಿಯನ್ನು ತೆಗೆದುಕೊಳ್ಳದೆ ನಿರ್ಲಕ್ಷಿಸಿ ಅನಾಥವಾಗಿ ಉಳಿದು ಬಂದಿದೆ.**(ಚಿ.ಸಂ.33)**

**ನಗರೇಶ್ವರ ದೇವಾಲಯ–ಹೆಡತಲೆ**

ಹೆಡತಲೆ ಎಂಬ ಗ್ರಾಮವು ನಂಜನಗೂಡಿಗೆ ಸೇರಿರುವ ಒಂದು ಚಿಕ್ಕ ಗ್ರಾಮ. ಇದು ನಂಜನಗೂಡಿನಿಂದ ಸುಮಾರು 14ಕಿ.ಮೀ. ದೂರದಲ್ಲಿ ನೈರುತ್ಯ ಭಾಗದಲ್ಲಿ ಕಂಡುಬರುತ್ತದೆ. ಈ ಗ್ರಾಮಕ್ಕೆ 'ದಾಮಶಿರೋನಗರ' ಎಂಬ ಸಂಸ್ಕೃತ ನಾಮಧೇಯವು ಹೆಡತಲೆಗಿದೆ. ನಗರೇಶ್ವರ ದೇವಾಲಯಕ್ಕೆ ಸಂಬಂಧಿಸಿದ ಕ್ರಿ.ಶ.1292ರಲ್ಲಿ ಬರೆಸಲಾಗಿರುವ ಶಾಸನದಲ್ಲಿ 'ಹೆಡತಲೆ 'ಎಂಬ ಹೆಸರು ಕಂಡುಬರುತ್ತದೆ. ಹೆಡತಲೆ ಎಂಬ ಸಂಸ್ಕೃತ ಅನುವಾದ 'ದಾಮಶಿರೋನಗರ' ಎಂಬುದುದಾಗಿದೆ.[54]

ಹೆಡತಲೆ ಎಂಬ ಹೆಸರು ಈ ಗ್ರಾಮಕ್ಕೆ ಬಂದದ್ದು ಹೇಗೆ ಎಂಬುದಕ್ಕೆ ಮೂರು ರೀತಿ ಐತಿಹ್ಯಗಳು ನಮಗೆ ದೊರೆಯುತ್ತವೆ.

1) ಈ ಪ್ರದೇಶದಲ್ಲಿ ರಾಕ್ಷಸನೊಬ್ಬನನ್ನು ಶಿವನು ಕೊಂದು ಹಾಕಿದನೆಂದು, ಆ ರಾಕ್ಷಸನ ತಲೆಯು ಎಡಭಾಗಕ್ಕೆ ತಿರುಗಿಕೊಂಡಿದ್ದರಿಂದ ಹಾಗೆ ಅವನ ಶವವು (ಶರೀರ) ಬಿದ್ದಿತ್ತಂತೆ. ಆ ದಿಕ್ಕಿಗಿದ್ದ ಊರಿಗೆ ಎಡತಲೆ ಎಂದು ಹೆಸರಾಗಿದೆ. ಅವನ ಕಾಲುಗಳು ಯಮನ ದಿಕ್ಕಾದ ದಕ್ಷಿಣಕ್ಕೆ ಚಾಚಿಕೊಂಡಿದ್ದರಿಂದ ಆ ದಿಕ್ಕಿನಲ್ಲಿದ್ದ ಊರಿಗೆ 'ಹೆಮ್ಮರಗಾಲ' ಎಂದು ಹೆಸರಾಯಿತು ಎಂದು ಹೇಳಲಾಗಿದೆ.
2) ಹೆಮ್ಮರಗಾಲದ ಪಾಳೇಯಗಾರನ ಹೆಂಡತಿಯು ಬರಿ ಹೆಣ್ಣು ಮಕ್ಕಳಿಗೆ ಜನ್ಮ ನೀಡಿದ್ದಳು. ಇದರಿಂದ ಕೋಪಗೊಂಡ ಪಾಳೇಗಾರನು ಪುನಃ ಏನಾದರು ಅವಳು ಹೆಣ್ಣು ಮಗುವಿಗೆ ಜನ್ಮ ನೀಡಿದರೆ ಇವನನ್ನು ಕೊಲ್ಲುವುದಾಗಿ ಹೇಳಿ ಅವನು ಯುದ್ಧಕ್ಕೆ ಹೊರಟನಂತೆ, ಯುದ್ಧಕ್ಕೆ ಅವನು ಹೋದ ತರುವಾಯ ಪತ್ನಿ(ರಾಣಿ)ಯು ಹೆಣ್ಣು ಮಗುವಿಗೆ ಜನ್ಮ ನೀಡಿದಳು. ಇದರಿಂದ ಹೆದರಿದ ರಾಣಿಯು ಆ ಮಗುವನ್ನು ಕೊಲ್ಲುವಂತೆ ದಾಸಿಗೆ ಕೊಟ್ಟಳಂತೆ. ಆ ದಾಸಿ ಮರಳಿ ಬರುವಷ್ಟರಲ್ಲಿ ಮಾತೃವಾತ್ಸಲ್ಯದಿಂದಾಗಿ ರಾಣಿಯು ರೋಧಿಸುತ್ತಿದ್ದಳಂತೆ, ಆಗ ಆ ದಾಸಿಯು ತಾನು ಮಗುವನ್ನು ಕೊಲ್ಲಲಿಲ್ಲವೆಂದು, ಅದನ್ನು ಊರಿನ (ಹೆಮ್ಮರಗಾಲ) ಗೋಪಾಲಕೃಷ್ಣನ ದೇವಾಲಯದಲ್ಲಿ ಮಲಗಿಸಿ ಬಂದಿರುವುದಾಗಿ ಹೇಳಿದಳು. ಆಗ ರಾಣಿ ಮತ್ತು ದಾಸಿಯು ದೇವಾಲಯಕ್ಕೆ ಹೋದಾಗ ಅಲ್ಲಿ ನೋಡಿದಾಗ ಅವರಿಗೆ ಒಂದು ಆಶ್ಚರ್ಯ ಕಾದಿತ್ತು. ಗುಡಿಯ ಎಡಭಾಗಕ್ಕೆ ತಲೆ ತಿರುಗಿಸಿಕೊಂಡಿದ್ದ ಮಗು ಆಗ ಗಂಡಾಗಿತ್ತು. ಎಡಭಾಗಕ್ಕೆ ತಿರುಗಿದ ಮಗುವಿನ ತಲೆಯ ಕಡೆ ಇದ್ದ ಊರು ಎಡತಲೆಯಾದರೆ, ದಕ್ಷಿಣಕ್ಕೆ ಚಾಚಿದ್ದ ಅದರ ಕಾಲುಗಳ ಕಡೆ ಇದ್ದ ಊರು ಹೆಮ್ಮರಗಾಲವೆಂದಾಯಿತೆಂದು ಹೇಳಲಾಗುತ್ತದೆ. ಕಥೆಯ ಕೇಂದ್ರ ಬಿಂದುವಾದ ಭೀಮಣ್ಣ ದಂಡನಾಯಕನ ಕಾಲ ಕ್ರಿ.ಶ.1292ರಲ್ಲಿ ಹೊಯ್ಸಳರ ದೊರೆ 3ನೇ ಬಲ್ಲಾಳನ ಕಾಲದಲ್ಲಿ ಈ ದೇವಾಲಯ ನಿರ್ಮಾಣವಾಗಿದೆ.[55]
3) ಇದರ ಪ್ರಕಾರ ಗುಂಡ್ಲು ನದಿಯು ಈ ಗ್ರಾಮದ ಎಡಭಾಗದಲ್ಲಿ ಹರಿಯುತ್ತಿರುವುದರಿಂದ ಈ ಗ್ರಾಮಕ್ಕೆ ಎಡತೊರೆ(ಎಡತಲೆ) ಎಂಬುದಾಗಿರಬಹುದು. ಅಲ್ಲದೆ ಪಾಳೇಪಟ್ಟಿನ ಸ್ಥಳ ಇದಾಗಿದ್ದುದ್ದರಿಂದ ವೀರನೊಬ್ಬನು ತನ್ನ ತಲೆಯನ್ನು ದೇವರಿಗೆ ಕಡಿದು ಎಡೆ ಇಟ್ಟನೆಂಬ ಕಾರಣದಿಂದ ಈ ಸ್ಥಳಕ್ಕೆ 'ಹೆಡತಲೆ' ಎಂಬ ಹೆಸರು ಬಂದಿತ್ತೆಂದು ಹೇಳಲಾಗುತ್ತದೆ.

ಹೆಡತಲೆಯಲ್ಲಿರುವ ಈ ನಗರೇಶ್ವರ ದೇವಾಲಯವನ್ನು ಕಣಶಿಲೆ ಮತ್ತು ಬಳಪದ ಕಲ್ಲನ್ನು ಬಳಸಿ ಪಶ್ಚಿಮಾಭಿಮುಖವಾಗಿ ನಿರ್ಮಿಸಲಾಗಿದೆ. ಸಾಮಾನ್ಯವಾಗಿ ದೇವಾಲಯಗಳು ಪೂರ್ವಾಭಿಮುಖವಾಗಿ ನಿರ್ಮಾಣವಾಗಿರುತ್ತವೆ. ಆದರೆ ಈ ದೇವಾಲಯವು ಪಶ್ಚಿಮಾಭಿಮುಖವಾಗಿ ನಿರ್ಮಾಣವಾಗಿರುವುದು ವಿಶೇಷವಾಗಿದೆ.[56]**(ಚಿ.ಸಂ.34)** ಇದೊಂದು ಏಕಕೂಟ ದೇವಾಲಯವಾಗಿದ್ದು, ಗಂಗರ ಕಾಲದಲ್ಲಿ ಗರ್ಭಗುಡಿಯಲ್ಲಿರುವ ನಗರೇಶ್ವರ ಲಿಂಗ ಪ್ರತಿಷ್ಠಾಪನೆಯಾಗಿ ಹೊಯ್ಸಳರ ಕಾಲದಲ್ಲಿ ದೇವಾಲಯದ ಗರ್ಭಗೃಹ, ಸುಕನಾಸಿ ಮತ್ತು ನವರಂಗಗಳು ನಿರ್ಮಾಣವಾಗಿ ನಂತರ ವಿಜಯನಗರ ಕಾಲದಲ್ಲಿ ಮಹಾಮಂಟಪವನ್ನು ನಿರ್ಮಾಣ ಮಾಡಲಾಗಿದೆ. ಒಟ್ಟರೆಯಾಗಿ ಈ ಮೂರು ಸಾಮ್ರಾಜ್ಯಗಳ ಆಳ್ವಿಕೆಗೆ ಒಳಪಟ್ಟು ಬೆಳೆದು ಬಂದಿರುವುದನ್ನು ದೇವಾಲಯದ ವಾಸ್ತುಶೈಲಿಯಿಂದ ತಿಳಿಯಬಹುದಾಗಿದೆ.[57]

**ಗರ್ಭಗೃಹ:-** ಗರ್ಭಗೃಹವು 8x8 ಅಡಿಗಳ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ನಕ್ಷತ್ರಾಕಾರದ ಪಾಣಿಪೀಠದ ಮೇಲೆ 1.5ಅಡಿ ಎತ್ತರದ ಶಿವಲಿಂಗ(ನಗರೇಶ್ವರ)ವನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.35)** ಈ ಲಿಂಗವು ಬ್ರಹ್ಮಭಾಗ ವಿಷ್ಣುಭಾಗಕ್ಕಿಂತ ಎತ್ತರವಾದ ಲಿಂಗವನ್ನು ಹೊಂದಿರುವುದರಿಂದ ಶಿವಾಧಿಕಲಿಂಗ ಎನ್ನುವರು.[58]ಇತ್ತೀಚೆಗೆ ಇದಕ್ಕೆ ಪಂಚಲೋಹದ ಮುಖ ಪದ್ಮವನ್ನು ಮಾಡಿಸಲಾಗಿದೆ. ಇದರ ಮೇಲ್ಛಾವಣಿಯಲ್ಲಿ ಚೌಕಾಕಾರದ ಭುವನೇಶ್ವರಿಯನ್ನು ಮಾಡಿ ಇದರಲ್ಲಿ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲ ಇಕ್ಕೆಲಗಳಲ್ಲಿ ಐದು ಪಟ್ಟಿಕೆಗಳಿದ್ದು, ಈ ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಸೂಕ್ಷ್ಮ ಅಲಂಕರಣದ ಕೆತ್ತನೆ ಕಂಡುಬರುವುದಿಲ್ಲ. ಲಲಾಟಬಿಂಬ ಹಾಗೆ ಇದೆ. ತೋರಣದಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ.

**ಸುಕನಾಸಿ:-**ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವನ್ನು ಹೊಂದಿದ್ದು, ಚೌಕಾಕಾರವಾಗಿದೆ. ದೇವಾಲಯದ ವಿನ್ಯಾಸದಲ್ಲಿ ಗರ್ಭಗೃಹದ ಮಾನಸೂತ್ರಕ್ಕೆ ನೇರವಾಗಿ ರ್ಗಭಗೃಹಕ್ಕೆ ಹೊಂದಿಕೊಂಡಂತೆ ಸುಕನಾಸಿಯನ್ನು ನಿರ್ಮಿಸಲಾಗುವುದು.[59]ಇದರಲ್ಲಿ ಯಾವುದೇ ದೇವತಾ ಮೂರ್ತಿಗಳು ಕಾಣಬರುವುದಿಲ್ಲ. ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿಯನ್ನು ರಚಿಸಿ ಅದರಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಸುಕನಾಸಿಯ ದ್ವಾರವು ಗರ್ಭಗೃಹದ ಬಾಗಿಲ ಮಾದರಿಯಲ್ಲಿಯೇ ಇದೆ. ಇದರಲ್ಲಿ ಯಾವುದೇ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ.

**ನವರಂಗ:-** ನವರಂಗವು 25x25 ಅಡಿಗಳ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯಲ್ಲಿರುವ ನಾಲ್ಕು ಕಂಬಗಳಿವೆ.**(ಚಿ.ಸಂ.36)** ಇವುಗಳ ಪೀಠವು

ಚೌಕಾಕಾರವಾಗಿದೆ. ದಿಂಡಿನ ಭಾಗದಲ್ಲಿ ಬಳೆಗಳು, ಘಂಟೆ, ಘಟಾ, ಗಾಲಿಯಾಕಾರದ ಬೋಧಿಗೆ, ಪದ್ಮಪುಷ್ಪದಂತಹ ಫಲಗೈ ಇದರ ಮೇಲೆ ಉರುಳೆಯಾಕಾರದ ಕಪೋತಗಳಿವೆ. ನವರಂಗದ ಮೇಲ್ಚಾವಣಿಯಲ್ಲಿ ಒಂಭತ್ತು ಭುವನೇಶ್ವರಿಗಳಿವೆ.**(ಚಿ.ಸಂ.37)** ಇವುಗಳನ್ನು ನಕ್ಷತ್ರಾಕಾರವಾಗಿ ಚೌಕಾಕಾರವಾಗಿ, ಅಷ್ಟಾಕಾರವಾಗಿ, ವೃತ್ತಾಕಾರವಾಗಿ ರಚಿಸಲಾಗಿದೆ. ಇವುಗಳ ಮಧ್ಯದಲ್ಲಿ ತಲೆಕೆಳಗಾಗಿ ಬಿಡಿಸಲಾಗಿರುವ ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಇವುಗಳು ವಿಶಾಲವಾಗಿ ಹಾಗೂ ಸುಂದರವಾಗಿದ್ದು, ಭುವನೇಶ್ವರಿಯ ಮಧ್ಯದಲ್ಲಿ ಅಷ್ಟದಿಕ್ಪಾಲಕರ ಕೆತ್ತನೆಯನ್ನು ಕಾಣಬಹುದು.[60]

ನವರಂಗದ ಮಧ್ಯದ ಅಂಕಣದ ಕೆಳಭಾಗದಲ್ಲಿ ಶಿವನಿಗೆ ಎದುರಾಗಿ ಕುಳಿತಿರುವಂತೆ ಪ್ರತಿಷ್ಠಾಪಿಸಾಗಿರುವ ಸುಮಾರು 3.5 ಅಡಿಗಳ ಎತ್ತರವಿರುವ ನಂದಿಯನ್ನು ಕಾಣಬಹುದು. ನಯವಾದ ಕೆತ್ತನೆಯಿಂದ ಕೂಡಿರುವ ಈ ನಂದಿಯ ಮೈಮೇಲೆ ಗೆಜ್ಜೆಹಾರ ಗಂಟೆಗಳ ಹಾರವನ್ನು ಬಿಡಿಸಿ ಸುಂದರಗೊಳಿಸಲಾಗಿದೆ. ನವರಂಗದ ಉತ್ತರದ ಗೋಡೆಯ ಮುಂದೆ ಸುಮಾರು ನಾಲ್ಕು ಅಡಿ ಎತ್ತರವಿರುವ ಭೈರವನ ಮೂರ್ತಿಯನ್ನು ಇರಿಸಲಾಗಿದೆ. ಈ ದೇವನು ತನ್ನ ಕೈಗಳಲ್ಲಿ ರುಂಡಮಾಲೆ ಮತ್ತು ಕತ್ತಿಯನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾನೆ. ಸುಕನಾಸಿಯ ದ್ವಾರದ ಬಲಭಾಗದಲ್ಲಿ ಸುಮಾರು ಮೂರು ಅಡಿಗಳ ಎತ್ತರವಿರುವ ಗಣೇಶನ ಮೂರ್ತಿಯನ್ನು ಇರಿಸಲಾಗಿದೆ. ಈ ದೇವನು ಪದ್ಮಾಸನದಲ್ಲಿ ಕುಳಿತಿದ್ದು, ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಪಾಶ, ಅಂಕುಶ, ಅಭಯಹಸ್ತ ಫಲವನ್ನು ಹಿಡಿದಿದ್ದಾನೆ. ಈ ದೇವನ ಹಿಂಬದಿಯಲ್ಲಿರುವ ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖ ಬಿಡಿಸಲಾಗಿದೆ. ನವರಂಗದ ಬಾಗಿಲು ಸರಳವಾಗಿದೆ. ಇದರಲ್ಲಿ ಐದು ಪಟ್ಟಿಕೆಗಳಿದ್ದು, ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಂಡುಬರುವುದಿಲ್ಲ. ಲಲಾಟಬಿಂಬದಲ್ಲಿ ಯಾವುದೇ ಮೂರ್ತಿ ಇಲ್ಲ.

**ಮುಖಮಂಟಪ:-** ಮುಖಮಂಟಪವು ಆಯಾತಕಾರವಾಗಿದೆ. ಇದರ ಮುಂಭಾಗದಲ್ಲಿ ನಾಲ್ಕು ಕಂಬಗಳಿವೆ. ಈ ಕಂಬಗಳ ಮೇಲೆ ಮೇಲ್ಛಾವಣಿ ನಿಂತಿದೆ. ಕಂಬಗಳ ರಚನೆಯು ನಾಲ್ಕು ಎಂಟು ಮೂಲೆಗಳನ್ನು ಹೊಂದಿದ್ದು, ಸರಳವಾಗಿದೆ. ಬಹುಶಃ ಈ ಕಂಬಗಳನ್ನು ಮೈಸೂರಿನ ಒಡೆಯರ ಕಾಲದಲ್ಲಿ ರಚಿಸಿ ನಿಲ್ಲಿಸಿರುವಂತಹ ಕಂಬಗಳಾಗಿವೆ. ಈ ಕಂಬಗಳನ್ನು ಕ್ರಿ.ಶ.1680ರಲ್ಲಿ ಸೇರಿಸಲಾಗಿದೆ. ಹಲಗೆ ಬಸವಯ್ಯನ ಮಗ ನಂಜುಂಡ ಎಂಬುವವನು ಮಾಡಿಸಿದನೆಂದು ಹೇಳಲಾಗಿದೆ.[61]

**ಅಧಿಷ್ಠಾನ:–** ಈ ದೇವಾಲಯದ ಅಧಿಷ್ಠಾನದಲ್ಲಿ ಐದು ಪಟ್ಟಿಕೆಗಳಿವೆ. ಇವುಗಳನ್ನು ಕ್ರಮವಾಗಿ ಹಿನ್ಸರಿತ ಮುನ್ಸರಿತದಂತೆ ಜೋಡಿಸಲಾಗಿದೆ. ಉಪಾನ, ಜಗತಿ, ತ್ರಿಪಟ್ಟಕುಮುದ, ಕಂಠ, ಪ್ರತಿ, ಹಾರಗಳಿವೆ. ಇದರಲ್ಲಿ ಯಾವುದೇ ಅಲಂಕರಣದ ಕೆತ್ತನೆಯಿಲ್ಲ.

**ಭಿತ್ತಿ:–** ಭಿತ್ತಿಯನ್ನು ಅಧಿಷ್ಠಾನದ ಮೇಲೆ ನಿರ್ಮಿಸಲಾಗಿದೆ. ಇದನ್ನು ಎರಡು ಭಾಗ ಮಾಡಿ ಮಧ್ಯದಲ್ಲಿ ಒಂದು ಕಪೋತವನ್ನು ಮಾಡಲಾಗಿದೆ. ಅದರ ಮೇಲೆ ಮತ್ತೊಂದು ಕಪೋತವಿದೆ. ಭಿತ್ತಿಯಲ್ಲಿ ಅರೆಗಂಬಗಳನ್ನು ದೇವಾಲಯದ ಸುತ್ತಲೂ ಜೋಡಿಸಿ ಅಲಂಕರಿಸಲಾಗಿದೆ. ಮೇಲ್ಭಾಗದಲ್ಲಿ ಕಂಬಗಳನ್ನು ಮಾಡಿ ಜೋಡಿಸಲಾಗಿದೆ. ಭಿತ್ತಿಯ ಮೇಲಿರುವ ಕಪೋತವು ಇಳಿಜಾರಾಗಿದ್ದು, ಅಂಚಿನ ಭಾಗದಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಿ ಅಲಂಕರಿಸಲಾಗಿದೆ. ಕಪೋತದ ಮೇಲೆ ಹೊಯ್ಸಳ ಶೈಲಿಯ ಶಿಖರವಿದ್ದು, ಮೂರು ತಲಗಳಿಂದ ಕೂಡಿದೆ. ಗ್ರೀವದ ಮೇಲೆ ಚೌಕಾಕಾರದ ಸ್ತೂಪಿ ಇದೆ. ಮೇಲ್ಭಾಗದಲ್ಲಿ ಕಳಸವನ್ನಿಡಲಾಗಿದೆ.[62] **(ಚಿ.ಸಂ.38)**

**ರಾಮೇಶ್ವರ ಅಥವಾ ಅವಿಮುಕ್ತೇಶ್ವರ ದೇವಾಲಯ–ಚಿಕ್ಕಹನಸೋಗೆ**

ಚಿಕ್ಕಹನಸೋಗೆಯು ಕೃಷ್ಣರಾಜನಗರ ತಾಲೂಕಿಗೆ ಸೇರಿರುವ ಒಂದು ಗ್ರಾಮ. ಇದು ಕೃಷ್ಣರಾಜನಗರದಿಂದ 22ಕಿ.ಮೀ. ದೂರದಲ್ಲಿದೆ. ಸುಮಾರು 10ನೇ ಶತಮಾನದ ಶಾಸನವೊಂದರಲ್ಲಿ ಈ ಊರನ್ನು ಪನಸೋಗೆ ಎಂದು ಉಲ್ಲೇಖಿಸಲಾಗಿದೆ. ಕ್ರಿ.ಶ.12ನೇ ಶತಮಾನದ ಇನ್ನೊಂದು ಶಾಸನದಲ್ಲಿ ಹನಸೋಗೆ ಎಂದು ಹೆಸರಿಸಲಾಗಿದೆ. ಇದನ್ನು ಚಂಗಾಳ್ವತೀರ್ಥ ಎಂದು ಕರೆಯಲಾಗುತ್ತಿದ್ದು, ಚಂಗಾಳ್ವರ ರಾಜಧಾನಿಯಾಗಿತ್ತೆಂದು ಅಭಿಪ್ರಾಯವಿದೆ.[63]ಚಿಕ್ಕಹನಸೋಗೆಯ ಊರಿನ ಹೊರಭಾಗದಲ್ಲಿ ಈ ದೇವಾಲಯವನ್ನು ಉತ್ತರ ಭಾಗದಲ್ಲಿ ನಿರ್ಮಾಣ ಮಾಡಲಾಗಿದ್ದು,**(ಚಿ.ಸಂ.39)** ನವರಂಗದ ತೊಲೆಯ ಮೇಲಿರುವ ಸಂಸ್ಕೃತ ಶಾಸನದಲ್ಲಿ ತೆನಸೇನೆಯ ಶ್ರೀಧರ ದೇವನ ಶಿಷ್ಯ ನೇಮಿಚಂದ್ರನು ಸಲ್ಲೇಖನವ್ರತ ಆಚರಿಸಿದ ವಿಷಯವಿದೆ. ಈ ದೇವಾಲಯದ ಪ್ರವೇಶದ್ವಾರದಲ್ಲಿರುವ ಸುಮಾರು 10ನೇ ಶತಮಾನದ ಮತ್ತೊಂದು ಶಾಸನದಲ್ಲಿ ಜೈನ ನಾಗಕುಮಾರ ಮಡದಿ ಜಕ್ಕಿಯಬ್ಬೆಯ ಮರಣದ ಸಂಗತಿ ಇದೆ.[64] ಈ ದೇವಾಲಯವು ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿದೆ. ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗಗಳು ಮಾತ್ರ ಕಂಡುಬರುತ್ತವೆ.

**ಗರ್ಭಗೃಹ:–** ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಚೌಕಾಕಾರದ ಪಾಣಿಪೀಠದ ಮೇಲೆ ಅವಿಮುಕ್ತೇಶ್ವರ ಲಿಂಗವನ್ನು

ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.40)** ಒಳಭಾಗ ಜೀರ್ಣೋದ್ಧಾರವಾಗಿದೆ. ಗರ್ಭಗೃಹದ ಬಾಗಿಲ ಪಟ್ಟಿಕೆಗಳಲ್ಲಿ ಯಾವುದೇ ಅಲಂಕರಣದ ಕೆತ್ತನೆ ಇಲ್ಲ.

**ಸುಕನಾಸಿ:-** ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರಲ್ಲಿ ದೇವರ ಪೂಜೆಯ ಪರಿಕರಗಳನ್ನು ಇರಿಸಲಾಗಿದೆ. ಮೇಲ್ಛಾವಣಿ ಸರಳವಾಗಿದೆ, ಸುಕನಾಸಿಯ ದ್ವಾರವು ಹೊಯ್ಸಳ ಶೈಲಿಯಲ್ಲಿದ್ದು ತನ್ನ ಮೂಲ ಸ್ವರೂಪ ಕಾಪಾಡಿಕೊಂಡಿದೆ. ಇದರ ಪಟ್ಟಿಕೆಗಳಲ್ಲಿಯೂ ಸಹ ಯಾವುದೇ ಶಿಲ್ಪಗಳಿಲ್ಲ.

**ನವರಂಗ:-** ನವರಂಗವು 20X20 ಅಡಿಗಳ ಉದ್ದ ಅಗಲವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ 4 ಕಂಬಗಳಿವೆ. ಇವುಗಳನ್ನು ರಾಟೆಯಂತ್ರದ ಮೂಲಕ ತಯಾರಿಸಲಾಗಿದ್ದು ಚೌಕ ಬಳಗೆಗಳ ಅಲಂಕರಣ, ಗಂಟೆಯಾಕಾರದ ಗಾಲಿ, ಘಟಾಕಾರದ ಕಂಠ, ವೃತ್ತಾಕಾರದ ಬೋದಿಗೆ ಅದರೆ ಮೇಲೆ ಚೌಕಾಕಾರದ ಫಲಗ್ಯೆ, ಫಲಗ್ಯೆ ಮೇಲೆ ಸರಳವಾದ ಕಪೋತವಿದೆ.**(ಚಿ.ಸಂ.41)** ಮೇಲ್ಛಾವಣಿಯಲ್ಲಿ ಚಪ್ಪಟೆಯಾಕಾರದಲ್ಲಿ ಬಿಡಿಸಲಾಗಿರುವ ಅರಳಿದ ಪದ್ಮಪುಷ್ಪವಿದೆ. ನವರಂಗದ ಪಶ್ಚಿಮದ ಗೋಡೆಯ ಮುಂದೆ ಅಂದರೆ ವಾಯುವ್ಯ ಮೂಲೆಯಲ್ಲಿ ಸುಮಾರು ನಾಲ್ಕು ಅಡಿ ಎತ್ತರವಿರುವ ಮಹಿಷಮರ್ಧಿನಿಯ ಶಿಲ್ಪ ಬಿಡಿಸಲಾಗಿದೆ. ಚತುರ್ಭುಜ ಹೊಂದಿರುವ ಈ ದೇವಿಯು ಕತ್ತಿ, ಗುರಾಣಿ, ಒಂದು ಕೈಯಲ್ಲಿ ಮಹಿಷನ ಶಿರ ಹಿಡಿದು ತ್ರಿಶೂಲದಿಂದ ಮಹಿಷನಿಗೆ ಇರಿಯುತ್ತಿದ್ದಾಳೆ.[65] ಪ್ರಭಾವಳಿಯಲ್ಲಿ ಬಳ್ಳಿ ಸುರಳಿ ಇದೆ. ಸುಕನಾಸಿಯ ದ್ವಾರದ ಬಲಭಾಗದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಗಣಪತಿಯನ್ನು ಇರಿಸಲಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ಈ ದೇವನು ಚತುರ್ಭುಜ ಹೊಂದಿದ್ದು ಪಾಶ, ಅಂಕುಶ, ಫಲ ಹಿಡಿದಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ನವರಂಗದ ದ್ವಾರವು ಸರಳವಾಗಿದೆ.

**ಮುಖಮಂಟಪ:-**ಮುಖಮಂಟಪದಲ್ಲಿ ಚೌಕಾಕಾರವಾಗಿರುವ ಎರಡು ಕಂಬಗಳನ್ನು ನಿಲ್ಲಿಸಲಾಗಿದೆ. ಮುಖಮಂಟಪದ ಮುಂದೆ ವೃತ್ತಾಕಾರವಾಗಿರುವ ಬಲಿ ಪೀಠವಿದೆ. ಈ ದೇವಾಲಯದ ಅಧಿಷ್ಠಾನ ಹಾಳಾಗಿದ್ದರಿಂದ ಇರುವಂತಹ ಭಾಗಗಳನ್ನು ಉಪಯೋಗಿಸಿ ಇತ್ತೀಚೆಗೆ ಸೈಜುಗಲ್ಲನ್ನು ಉಪಯೋಗಿಸಿ ಭಿತ್ತಿಯನ್ನು ಚೌಕಾಕಾರವಾಗಿ ನಿರ್ಮಿಸಲಾಗಿದೆ. ಮೇಲ್ಭಾಗದಲ್ಲಿ ಇಟ್ಟಿಗೆ ಸಿಮೆಂಟ್‌ನ ಕೈಪಿಡಿ ಗೋಡೆ ಇದೆ. ಮೂಲೆಗಳಲ್ಲಿ ಒಂದು ತಲೆ, ಎರಡು ದೇಹವಿರುವ ನಂದಿ ಇದ್ದು ಮುಖಮಂಟಪದ ಮೇಲೆ ಕೋಷ್ಠವಿದ್ದು ಗಣೇಶನನ್ನು ಇರಿಸಲಾಗಿದೆ. ಶಿಖರವನ್ನು ಇತ್ತೀಚೆಗೆ ಗುಮ್ಮಟಾಕಾರದ ಸ್ತೂಪಿಯನ್ನು ಮಾಡಿ ಮೇಲೆ ಕಳಶವನ್ನು ಇಡಲಾಗಿದೆ.[66]

**ಜ್ಯೋತಿರ್ಮಹೇಶ್ವರ ದೇವಾಲಯ-ಸಾಲಿಗ್ರಾಮ**

ಈ ಸಾಲಿಗ್ರಾಮವು ಕೆ.ಆರ್.ನಗರದ ಕೇಂದ್ರ ಭಾಗದಿಂದ ವಾಯುವ್ಯಕ್ಕೆ 26 ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಸಾಂಸ್ಕೃತಿಕವಾಗಿ ತನ್ನದೇ ಆದಂತಹ ಮಹತ್ವವನ್ನು ಹೊಂದಿದೆ. ಪ್ರಸ್ತುತವಾಗಿ ಇದು ಹೋಬಳಿಯ ಕೇಂದ್ರವಾಗಿದೆ. ಇದು ಪ್ರಾಚೀನ ಕಾಲದಲ್ಲಿ ವೈಷ್ಣವರ ಪವಿತ್ರ ಧಾರ್ಮಿಕ ಸ್ಥಳವಾಗಿತ್ತು.[67] ರಾಮಾನುಜಾಚಾರ್ಯರು ಈ ಗ್ರಾಮದಲ್ಲಿ ಕೆಲ ಕಾಲ ನೆಲೆಸಿದ್ದರೆಂಬ ಪ್ರತೀತಿ ಇದೆ. ಇವರ ಪಾದವೆನ್ನಲಾದ ಕಲ್ಲಿನ ಶಿಲ್ಪ ಈ ದೇವಾಲಯದಲ್ಲಿದೆ. ಈ ಗ್ರಾಮದಲ್ಲಿ ಹೊಯ್ಸಳರ ಕಾಲದ ಕೆಲವು ದೇವಾಲಯಗಳಿವೆ. ಅವುಗಳಲ್ಲಿ ನರಸಿಂಹಸ್ವಾಮಿ ದೇವಾಲಯ ಮುಖ್ಯವಾದುದು. ಗಂಗರ ಆಳ್ವಿಕೆಯ ಕಾಲದಲ್ಲಿ ಈ ಗ್ರಾಮ ಅವರ ರಾಜ್ಯದ ಒಂದು ಗ್ರಾಮವಾಗಿತ್ತೆಂದು ತಿಳಿದುಬರುತ್ತದೆ. ಕಾವೇರಿ ನದಿಯಿಂದ ತೋಡಿರುವ ಸಾಲಿಗ್ರಾಮ ಕಾಲುವೆ ಈ ಗ್ರಾಮದ ಮೂಲಕ ಹಾದುಹೋಗುತ್ತದೆ. ಈ ಗ್ರಾಮದ ಪೂರ್ವಭಾಗದಲ್ಲಿರುವ ಜೋತಿರ್ಮಹೇಶ್ವರ ದೇವಾಲಯವನ್ನು ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.**(ಚಿ.ಸಂ.42)** ಇದೊಂದು ಏಕಕೂಟ ದೇವಾಲಯವಾಗಿದ್ದು, ಹಿಂದಿನ ಕಾಲಗಳಲ್ಲಿ ಅಂಕನಾಥೇಶ್ವರ ಹಾಗೂ ಪ್ರಣವೇಶ್ವರ ದೇವಾಲಯ ಎಂದು ಕರೆಯಲಾಗಿದೆ. ಈ ದೇವಾಲಯದ ಮುಖ್ಯ ರಚನೆಯು ನರಸಿಂಹ ದೇವಾಲಯದ ಸಾಮ್ಯತೆಯನ್ನು ಹೊಂದಿರುವ ಹೊಯ್ಸಳ ರಚನೆಯಾಗಿದೆ.[68] ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳು ಕಾಣಬರುತ್ತವೆ. ಈ ದೇವಾಲಯದ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಉಲ್ಲೇಖಗಳು ಕಾಣಬರುವುದಿಲ್ಲ. ಆದರೆ 12ನೇ ಶತಮಾನದಲ್ಲಿ ಬರೆಸಲಾದ ಒಂದು ಶಾಸನವು ತಿಳಿಸುವ ಪ್ರಕಾರ ಶ್ರೀ ಮಹಾಪ್ರಧಾನ ಸರ್ವಾಧಿಕಾರಿಯಾದ ಹೆಗ್ಗಡೆ ಮಾಚಯ್ಯನು ದೇವರ ಅಂಗಭೋಗ ನೈವೇದ್ಯಕ್ಕಾಗಿ ದತ್ತಿ ಬಿಟ್ಟ ವಿಚಾರದ ಬಗ್ಗೆ ಶಾಸನವೊಂದು ತಿಳಿಸುತ್ತದೆ.[69]

**ಗರ್ಭಗೃಹ:-** ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯದಲ್ಲಿ ಸುಮಾರು 2 ಅಡಿ ಎತ್ತರವಿರುವ ಪಾಣಿಪೀಠದ ಮೇಲೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.43)** ಗರ್ಭಗೃಹವು ದೇವಾಲಯದ ಕೇಂದ್ರಭಾಗವಾಗಿದ್ದು, ಗರ್ಭಗೃಹದಲ್ಲಿ ಪ್ರಧಾನ ದೇವತಾಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿರುತ್ತದೆ. ಇಲ್ಲಿ ಪ್ರತಿಷ್ಠಾಪಿಸಲಾಗಿರುವ ಮೂರ್ತಿಯನ್ನು ಮೂಲಬೇರ ಅಥವಾ ಮೂಲಮೂರ್ತಿ ಎನ್ನುವರು. ಗರ್ಭಗೃಹವು ಸಾಮಾನ್ಯವಾಗಿ ಚೌಕಾಕಾರವಾಗಿರುತ್ತದೆ.[70] ಈ ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದ್ದು,**(ಚಿ.ಸಂ.44)** ಮಧ್ಯದಲ್ಲಿ

ಮೂರು ಸುತ್ತು ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ದ್ವಾರವು ಸರಳವಾಗಿದೆ. ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕಾರದ ಕೆತ್ತನೆ ಕಾಣಬರುವುದಿಲ್ಲ. ಲಲಾಟಬಿಂಬದಲ್ಲಿ ಶಿಲ್ಪವನ್ನು ಕೆತ್ತನೆ ಮಾಡಲು ಜೋಡಿಸಲಾಗಿದ್ದ ಕಲ್ಲು ಹಾಗೆಯೇ ಉಳಿದಿದೆ. ಈ ಗರ್ಭಗೃಹದ ಒಳಗೋಡೆಗೆ ಇತ್ತೀಚೆಗೆ ಟೈಲ್ಸ್‌ಗಳನ್ನು ಹಾಕಲಾಗಿದೆ.

**ಸುಕನಾಸಿ:–** ಸುಕನಾಸಿಯು ಗರ್ಭಗೃಹದಷ್ಟೇ ಉದ್ದಗಲವಾಗಿದ್ದು, ಇದು ಚೌಕಾಕಾರವಾಗಿದೆ. ಸರಳವಾಗಿರುವ ಈ ಸುಖನಾಸಿಯ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾದ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪ ಬಿಡಿಸಲಾಗಿದೆ. ಸುಕನಾಸಿಯ ದ್ವಾರವು ಹಲವು ಪಟ್ಟಿಕೆಗಳಿಂದ ಕೂಡಿದ್ದು, ಸರಳವಾಗಿದೆ. ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ. ಲಲಾಟಬಿಂಬದಲ್ಲಿ ಲಕ್ಷ್ಮೀಯನ್ನು ಬಿಡಿಸಲಾಗಿದೆ.

**ನವರಂಗ:–** ನವರಂಗವು ಸುಮಾರು 25X25 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ನಯವಾದ ಕೆತ್ತನೆಯಿಂದ ಕೂಡಿರುವ ಶ್ರೀಕಾರ ಕಂಬಗಳಿವೆ.**(ಚಿ.ಸಂ.45)** ಈ ಕಂಬಗಳನ್ನು ಉಪಪೀಠದ ಮೇಲೆ ನಿಲ್ಲಿಸಲಾಗಿದೆ. ಕೆಳಭಾಗವು ಚೌಕಾಕಾರವಾಗಿದ್ದು, ಕಾಂಡದ ಭಾಗವು ಗಳ, ಗಾಲಿ, ಘಂಟೆ, ಘಟಾಕಾರವಾಗಿ ಮತ್ತು ಬೋದಿಗೆಯನ್ನು ವೃತ್ತಾಕಾರವಾಗಿ ಗಾಲಿಯಂತೆ ರಚಿಸಲಾಗಿದೆ.**(ಚಿ.ಸಂ.46)** ಈ ಗಾಲಿಯ ನಾಲ್ಕು ದಿಕ್ಕುಗಳಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಮೂರ್ತಿಶಿಲ್ಪಗಳಿವೆ. ಈ ಕಂಬಗಳ ಬೋದಿಗೆಯ ಕೆಳಗಿರುವ ಗಾಲಿಯ ನಾಲ್ಕು ದಿಕ್ಕುಗಳಲ್ಲಿ ಆನೆ ಶಿರದ ಕೆತ್ತನೆಯಿದೆ. ಫಲಗೈಯಲ್ಲಿ ದುಂಡುಶಿಲ್ಪ ಕಪೋತದಲ್ಲಿ ಸರ್ಪದ ಹೆಡೆ ಮೇಲೆ ನಾಗಮಣಿ**(ಚಿ.ಸಂ.47)** ಹಾಗೂ ಮತ್ತೊಂದು ಕಂಬದ ಕಪೋತದಲ್ಲಿ ನೆಗೆಯುತ್ತಿರುವ ಸಿಂಹವನ್ನು ಬಿಡಿಸಲಾಗಿದೆ. ಇದು ಈ ದೇವಾಲಯದ ವಿಶೇಷತೆ.[71]ಗಾಲಿಯ ಮೇಲಿರುವ ಬೋದಿಗೆಯನ್ನು ವೃತ್ತಾಕಾರವಾಗಿ ಮಾಡಿ ಅದರ ಮೇಲೆ ಚೌಕಾಕಾರದ ಫಲಗೈಯನ್ನು ರಚಿಸಿ ಫಲಗೈ ಕೆಳಭಾಗದಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದೆ. ಫಲಗೈ ಮೇಲಿರುವ ಕಪೋತವನ್ನು ಉರುಳೆಯಾಕಾರವಾಗಿ ರಚಿಸಲಾಗಿದೆ. ನವರಂಗದ ಮೇಲ್ಛಾವಣಿಯು ಒಂಭತ್ತು ಅಂಕಣಗಳಿಂದ ಕೂಡಿದ್ದು, ಈ ಒಂಭತ್ತು ಅಂಕಣಗಳನ್ನು ಭುವನೇಶ್ವರಿಗಳಾಗಿ ವಿವಿಧ ಆಕಾರದಲ್ಲಿ ರಚಿಸಲಾಗಿದೆ.**(ಚಿ.ಸಂ.48)**

**ಮಧ್ಯದ ಭುವನೇಶ್ವರಿ:–** ಈ ಭುವನೇಶ್ವರಿಯನ್ನು ಚೌಕ, ಅಷ್ಟ, ವೃತ್ತಾಕಾರವಾಗಿ ರಚಿಸಲಾಗಿದೆ. ಇದರ ಮಧ್ಯದಲ್ಲಿ ಮೂರುಸುತ್ತು ಅರಳಿರುವ ಕಮಲದ ಪುಷ್ಪವನ್ನು ಬಹಳ ಸುಂದರವಾಗಿ ರಚಿಸಲಾಗಿದೆ. ಈ ಕಮಲ ಪುಷ್ಪದ ಸುತ್ತಲೂ ಗಾಲಿಯಾಕಾರವಾಗಿ ರಚಿಸಿ ಅದರಲ್ಲಿ ಸುತ್ತಲೂ

ಅರಳಿದ ಚಿಕ್ಕ ಚಿಕ್ಕ ಪದ್ಮ ಪುಷ್ಪಗಳು, ಆಭರಣದ ಕೆತ್ತನೆ ಮಾಡಲಾಗಿದೆ. ಒಳಭಾಗದಲ್ಲಿ ಅರಳಿದ ಕಮಲದ ಪುಷ್ಪಗಳು, ಕೀರ್ತಿಮುಖಗಳನ್ನು ಬಿಡಿಸಲಾಗಿದೆ.

**ಪಶ್ಚಿಮದ ಭುವನೇಶ್ವರಿ:-** ಈ ಭುವನೇಶ್ವರಿಯು ಚೌಕ, ವೃತ್ತಾಕಾರವಾಗಿ ರಚಿಸಲಾಗಿದೆ. ಇದರ ಮಧ್ಯದಲ್ಲಿ ಮೂರು ಹಂತದ ಅರಳಿದ ಪದ್ಮಪುಷ್ಪವನ್ನು ವೃತ್ತಾಕಾರವಾಗಿ ಬಿಡಿಸಲಾಗಿದೆ.

**ವಾಯುವ್ಯ ಭುವನೇಶ್ವರಿ:-** ಈ ಭುವನೇಶ್ವರಿಯು ಚೌಕ, ವೃತ್ತಾಕಾರವಾಗಿ ಮಾಡಿ ಒಳಭಾಗದಲ್ಲಿ ಮೂರು ಸುತ್ತು ಅರಳಿದ ಪದ್ಮಪುಷ್ಪವನ್ನು ವೃತ್ತಾಕಾರವಾಗಿ ಬಿಡಿಸಲಾಗಿದೆ.

**ಉತ್ತರ ಭುವನೇಶ್ವರಿ:-** ಈ ಭುವನೇಶ್ವರಿಯು ಚೌಕ, ವೃತ್ತಾಕಾರವಾಗಿ ಬಿಡಿಸಲಾಗಿದೆ. ಇದರ ಮಧ್ಯದಲ್ಲಿ ಮೂರು ಸುತ್ತು ಅರಳಿರುವಂತೆ ಬಿಡಿಸಲಾಗಿರುವ ಪದ್ಮಪುಷ್ಪ ಪಟ್ಟಿಕೆಯ ಅಂಚಿನಲ್ಲಿ ಸುತ್ತಲೂ ಮಣಿಗಳು, ಕೀರ್ತಿಮುಖವನ್ನು ರಚಿಸಿ ಅಲಂಕರಣಗೊಳಿಸಲಾಗಿದೆ.

**ಈಶಾನ್ಯ ಭುವನೇಶ್ವರಿ:-** ಇದೂ ಸಹ ಚೌಕ, ಅಷ್ಟಮುಖವಾಗಿ ರಚಿಸಿ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ.

**ಪೂರ್ವ ಭುವನೇಶ್ವರಿ:-** ಈ ಭುವನೇಶ್ವರಿಯನ್ನು ಚೌಕ, ಅಷ್ಟ, ವೃತ್ತಾಕಾರವಾಗಿ ರಚಿಸಿ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಒಳಭಾಗದಲ್ಲಿ ಅಷ್ಟಕೋನಾಕಾರವಾಗಿ ಬಿಡಿಸಲಾಗಿರುವ ಅರಳಿದ ಪದ್ಮಪುಷ್ಪ, ಕೀರ್ತಿಮುಖಗಳು, ಪದ್ಮಗಳ ಅಲಂಕರಣದ ಕೆತ್ತನೆ ಮಾಡಿ ಜೋಡಿಸಲಾಗಿದೆ. ಈ ಭುವನೇಶ್ವರಿಯ ಒಳಭಾಗದಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ.

**ಆಗ್ನೇಯ ಭುವನೇಶ್ವರಿ:-**ಇದನ್ನು ಚೌಕಾಕಾರವಾಗಿ ರಚಿಸಿ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ.

**ದಕ್ಷಿಣ ಭುವನೇಶ್ವರಿ:-**ಇದನ್ನು ಚೌಕ, ಅಷ್ಟ, ಚೌಕಮುಖಗಳ ಶಿಲೆ ಜೋಡಿಸಲಾಗಿದ್ದು, ಮಧ್ಯದಲ್ಲಿ ಮೂರುಸುತ್ತು ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಚೌಕಾಕಾರದ ಭುವನೇಶ್ವರಿಯ ನಾಲ್ಕು ದಿಕ್ಕುಗಳಲ್ಲಿ ವಿಶಾಲವಾಗಿ ಅರಳಿದ ಪದ್ಮಪುಷ್ಪಗಳನ್ನು ಬಿಡಿಸಿ ಅಲಂಕರಣ ಗೊಳಿಸಲಾಗಿದೆ.

**ನೈಋತ್ಯ ಭುವನೇಶ್ವರಿ:-**ಇದನ್ನು ಚೌಕಾಕಾರವಾಗಿ ರಚಿಸಿ ಮಧ್ಯದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಇದರ ಎಡ ಮತ್ತು ಬಲಪಾರ್ಶ್ವದಲ್ಲಿ ಶಿವ ಮತ್ತು ವೇಣುಗೋಪಾಲರ ಶಿಲ್ಪಗಳನ್ನು ಕೆತ್ತಲಾಗಿದೆ.**(ಚಿ.ಸಂ.49)** ನವರಂಗದ ಪಶ್ಚಿಮದ ಗೋಡೆಯ ಮುಂಭಾಗದಲ್ಲಿ

ಪೂರ್ವಾಭಿಮುಖವಾಗಿ ಸುಖನಾಸಿಯ ಎಡಭಾಗದಲ್ಲಿ ಲಕ್ಷ್ಮಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಿಯು ಕಮಲದ ಪೀಠದ ಮೇಲೆ ಸುಖನಾಸದಲ್ಲಿ ಕುಳಿತಿದ್ದು, ಚತುರ್ಭುಜವನ್ನು ಹೊಂದಿದ್ದಾಳೆ. ಕೈಗಳಲ್ಲಿ ಕಮಲದ ಪುಷ್ಪಗಳು, ಅಭಯಹಸ್ತ, ವರದಹಸ್ತವನ್ನು ಹೊಂದಿದ್ದಾಳೆ. ಸುಂದರವಾಗಿರುವ ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿವೆ. ಪ್ರಭಾವಳಯಲ್ಲಿ ಬಳ್ಳಿಸುರಳಿ, ಮಣಿಗಳ ಅಲಂಕರಣ ಮತ್ತು ಕೀರ್ತಿಮುಖಗಳ ಅಲಂಕರಣವಿದೆ. ಸುಕನಾಸಿಯ ದ್ವಾರದ ಬಲಭಾಗದಲ್ಲಿ ಸುಮಾರು 2 ಅಡಿ ಎತ್ತರವಿರುವ ಮೂಷಿಕ ಪೀಠದ ಮೇಲೆ ಸುಖಾಸನಲ್ಲಿ ಕುಳಿತಿರುವ ಗಣಪತಿಯನ್ನು ಇರಿಸಲಾಗಿದೆ. ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಮುರಿದ ದಂತ ಮತ್ತು ಫಲವನ್ನು ಹಿಡಿದುಕೊಂಡಿದ್ದಾನೆ. ಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಪ್ರಭಾವಳಯಲ್ಲಿ ಬಳ್ಳಿಸುರುಳಿ ಕೀರ್ತಿಮುಖ ಬಿಡಿಸಲಾಗಿದೆ. ದಕ್ಷಿಣದ ಗೋಡೆಯ ಮುಂಭಾಗದಲ್ಲಿ ಪದ್ಮಪೀಠದ ಮೇಲೆ ಕುಳಿತಿರುವ ಲಕ್ಷ್ಮಿಯನ್ನು ಇರಿಸಲಾಗಿದೆ. ಈ ದೇವಿಯು ತನ್ನೆರಡು ಕೈಗಳಲ್ಲಿ ಕಮಲದ ಮೊಗ್ಗುಗಳನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿದೆ. ಹಿಂಭಾಗದಲ್ಲಿರುವ ಪ್ರಭಾವಳಯನ್ನು ವೃತ್ತಾಕಾರವಾಗಿ ರಚಿಸಿ ಅದರಲ್ಲಿ ಬಳ್ಳಿ ಸುರಳಿಗಳ ಸೂಕ್ಷ್ಮ ಕೆತ್ತನೆಯನ್ನು ಮಾಡಿ ಅಂತ್ಯದಲ್ಲಿ ಕೀರ್ತಿಮುಖವನ್ನು ಬಿಡಿಸಲಾಗಿದೆ. ನವರಂಗದ ಉತ್ತರದ ಗೋಡೆಯ ಮುಂಬಾಗದಲ್ಲಿ ಸುಮಾರು ಒಂದೂವರೆ ಅಡಿ ಎತ್ತರವಿರುವ ಕಮಲ ಪೀಠದ ಮೇಲೆ ವಿಷ್ಣುವನ್ನು ಪ್ರತಿಷ್ಠಾಪಿಸಲಾಗಿದೆ.[72] ಸುಮಾರು ನಾಲ್ಕು ಅಡಿ ಎತ್ತರವಿರುವ ಈ ದೇವನು ಸಮಭಂಗಿಯಲ್ಲಿ ನಿಂತಿದ್ದು, ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ವರದಹಸ್ತ, ಇನ್ನೊಂದು ಕೈಯಲ್ಲಿ ಗಧೆಯನ್ನು ಹಿಡಿದಿದ್ದಾನೆ. ಪ್ರಭಾವಳಯಲ್ಲಿ ಬಳ್ಳಿಸುರುಳಿ ಕೀರ್ತಿಮುಖ ಬಿಡಿಸಲಾಗಿದೆ. ನವರಂಗದ ದ್ವಾರವು ಅಲಂಕೃತವಾಗಿದ್ದು ಸುಂದರವಾಗಿದೆ.**(ಚಿ.ಸಂ.50)** ಇದರ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರಿದ್ದಾರೆ. ಇವರ ಇಕ್ಕೆಲಗಳಲ್ಲಿ ಪರಿಚಾರಿಕೆಯರಿದ್ದು, ಲಲಾಟಬಿಂಬದಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರ ಉಬ್ಬು ಕೆತ್ತನೆಯಿದೆ.

**ಮುಖಮಂಟಪ:-** ಮುಖಮಂಟಪದಲ್ಲಿ ಎರಡು ಕಂಬಗಳಿವೆ. ಈ ಕಂಬಗಳು ಸಹ ನವರಂಗದ ಕಂಬದ ಮಾದರಿಯಲ್ಲಿವೆ. ಇತ್ತೀಚೆಗೆ ಮುಖಮಂಟಪವನ್ನು ಸೇರಿಸಿ ದೇವಾಲಯದ ಸುತ್ತಲೂ ಗೋಡೆಯನ್ನು ನಿರ್ಮಿಸಲಾಗಿದೆ. ದೇವಾಲಯದ ಮುಂದೆ ಸುಮಾರು 25 ಅಡಿ ಎತ್ತರವಿರುವ ಕಣಶಿಲೆಯ ನಂದಿ ಕಂಬವಿದೆ. ಇದನ್ನು ಅಷ್ಟಮುಖವಾಗಿ ರಚಿಸಲಾಗಿದೆ.**(ಚಿ.ಸಂ.51)**

**ಅಧಿಷ್ಠಾನ**:-ಈ ದೇವಾಲಯದ ಅಧಿಷ್ಠಾನವು ಸಂಪೂರ್ಣವಾಗಿ ಭೂಮಿಯಲ್ಲಿ ಹೂತುಹೋಗಿದೆ. ಭಿತ್ತಿಯ ಭಾಗದಲ್ಲಿ ತೆಳುವಾದ ಅರೆಗಂಬಗಳನ್ನು ಜೋಡಿಸಿ ಅಲಂಕರಣೆಗೊಳಸಲಾಗಿದೆ. ನವರಂಗದ ಭಾಗದ ಹೊರಭಿತ್ತಿಯನ್ನು ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಲಾಗಿದೆ. ಅಲ್ಲದೆ ಗರ್ಭಗೃಹದ ಭಿತ್ತಿಗೆ ಇತ್ತೀಚೆಗೆ ಭಿತ್ತಿಯ ಭದ್ರತೆಗಾಗಿ ಇಳಜಾರಾಗಿ ಕಲ್ಲಿನ ಆಸರೆ ಕೊಡಲಾಗಿದೆ. ಭಿತ್ತಿಯ ಮೇಲಿರುವ ಕಪೋತವು ಗರ್ಭಗೃಹದ ಭಾಗದಲ್ಲಿ ಮಾತ್ರ ಕಾಣಬರುತ್ತದೆ. ಇದನ್ನು ಕಮಾನಿನಾಕಾರವಾಗಿ ರಚಿಸಿ ಗೋಡೆಯಿಂದ ಒಂದೂವರೆ ಅಡಿ ಮುಂದಕ್ಕೆ ಚಾಚಿಕೊಂಡಂತೆ ರಚಿಸಲಾಗಿದೆ. ಕಪೋತದ ಮೇಲಿರುವ ಹಾರದ ಭಾಗದಲ್ಲಿ ದಂತದ ರೀತಿ ಅಲಂಕರಣೆ ಮಾಡಲಾಗಿದೆ. ಅಂತ್ಯದಲ್ಲಿರುವ ಭಾಗವನ್ನು ಇತ್ತೀಚೆಗೆ ಸಣ್ಣ ಸಣ್ಣ ಕೂಡುಗಳ ರೀತಿ ದೇವಾಲಯದ ಸುತ್ತಲು ಗಾರೆ ಇಟ್ಟಿಗೆಗಳಿಂದ ರಚಿಸಿಸಲಾಗಿದೆ. ದೇವಾಲಯದ ಮೂಲ ಶಿಖರವು ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಇತ್ತೀಚೆಗೆ ಇಟ್ಟಿಗೆ ಗಾರೆ ಉಪಯೋಗಿಸಿ ನಿರ್ಮಿಸಲಾಗಿರುವ ನವೀನ ಮಾದರಿಯ ಶಿಖರವಿದೆ. ಈ ದೇವಾಲಯದ ವಾಯುವ್ಯ ಭಾಗದಲ್ಲಿ ಚಿಕ್ಕದೊಂದು ಗೂಡಿನ ಒಳಗೆ ಪರಶುರಾಮನ ಶಿಲ್ಪವೊಂದನ್ನು ಪ್ರತಿಷ್ಠಾಪಿಸಲಾಗಿದೆ. ಇದು ಸುಮಾರು ಮೂರು ಅಡಿ ಎತ್ತರವನ್ನು ಹೊಂದಿದ್ದು ಈ ಮೂರ್ತಿಯು ಸಮಭಂಗಿಯಲ್ಲಿ ನಿಂತಿದ್ದು, ತನ್ನ ಎರಡು ಕೈಗಳನ್ನು ಜೋಡಿಸಿ ವಂದಿಸುತ್ತಾ, ಬಲಗೈ ತೋಳಿನಲ್ಲಿ ಕೊಡಲಿಯೊಂದನ್ನು ಇರಿಸಿಕೊಂಡಿದ್ದಾನೆ. ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖವಿದೆ. ಈ ದೇವಾಲಯದ ಮುಂದೆ ನಿರ್ಲಕ್ಷಿತವಾದಂತಹ ಹಲವಾರು ಶಿಲ್ಪಗಳಿವೆ. **(ಚಿ.ಸಂ.52)**

**ಪ್ರಾಕಾರ**:- ಈ ದೇವಾಲಯದ ಸುತ್ತಲೂ ಇಟ್ಟಿಗೆ ಮತ್ತು ಗಾರೆಯನ್ನು ಉಪಯೋಗಿಸಿ ನಿರ್ಮಿಸಲಾಗಿರುವ ಸುಮಾರು 6 ಅಡಿ ಎತ್ತರವಿರುವ ಪ್ರಕಾರವಿದೆ. ಈ ದೇವಾಲಯದ ಮುಂದೆ ಒಂದು ಮಹಾದ್ವಾರವಿದ್ದು, ಮಹಾದ್ವಾರದ ಮಂಟಪದಲ್ಲಿ ಸುಮಾರು 4 ಅಡಿ ಎತ್ತರವಿರುವ ಚೌಕಾಕಾರದ ಎತ್ತರದ ವೇದಿಕೆಯ ಮೇಲೆ ಚೌಕ ವೃತ್ತಾಕಾರವಾಗಿರುವ ನಾಲ್ಕು ಕಂಬಗಳಿವೆ. ಎರಡೂ ಬದಿಯಲ್ಲಿ ಬಂದಂತಹ ಭಕ್ತಾಧಿಗಳು ಕುಳಿತುಕೊಳ್ಳಲು ಜಗತಿಯನ್ನು ನಿರ್ಮಿಸಲಾಗಿದೆ.

**ಬಸವೇಶ್ವರ ದೇವಾಲಯ – ಮಾಕೋಡು**

ಮಾಕೋಡು ಗ್ರಾಮವು ಪಿರಿಯಾಪಟ್ಟಣ ತಾಲೂಕಿನ ರಾವಂದೂರು ಹೋಬಳಿಗೆ ಸೇರಿದೆ. ಇದು ತಾಲೂಕು ಕೇಂದ್ರದಿಂದ ಈಶಾನ್ಯ ಭಾಗಕ್ಕೆ 18ಕಿ.ಮೀ.ದೂರದಲ್ಲಿದೆ. ಈ ಗ್ರಾಮವು ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೆ ತನ್ನದೆ ಆದ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಇಲ್ಲಿ ಹೊಯ್ಸಳರು, ವಿಜಯನಗರದ ಅರಸರು, ಚಂಗಾಳ್ವರು ಮತ್ತು ಮೈಸೂರು ಒಡೆಯರು ಆಳ್ವಿಕೆ ಮಾಡಿರುವುದಕ್ಕೆ ಅನೇಕ ಆಧಾರಗಳು ದೊರೆಯುತ್ತವೆ. ಅದರಲ್ಲೂ ವಿಶೇಷವಾಗಿ ಹೊಯ್ಸಳರು ಕ್ರಿ.ಶ.12 ಮತ್ತು 13ನೇ ಶತಮಾನದಲ್ಲಿ ಈ ಪಿರಿಯಾಪಟ್ಟಣದ ಸುತ್ತಮುತ್ತಲ ಪ್ರದೇಶಗಳನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡು ಆಳ್ವಿಕೆ ಮಾಡಿರುವುದಕ್ಕೆ ಮಾಕೋಡು ಗ್ರಾಮದಲ್ಲಿ ನಿರ್ಮಿಸಿರುವ ಬಸವೇಶ್ವರ ದೇವಾಲಯವು ಪ್ರಮುಖ ಸಾಕ್ಷಿಯಾಗಿದೆ. ಹೊಯ್ಸಳ ಕಾಲದ ಅಧಿಕಾರಿಯಾದ ಸೋಮೋಜ ಎಂಬುವವನು ಈ ದೇವಾಲಯವನ್ನು ನಿರ್ಮಾಣ ಮಾಡಿ ಹೊಯ್ಸಳ ದೊರೆಯ ಪ್ರಸಂಸೆಗೆ ಒಳಗಾಗಿದ್ದಾನೆ ಎಂಬುದರ ಉಲ್ಲೇಖವಿದೆ.[73]ಈ ದೇವಾಲಯವು ಬಹಳ ಸುಂದರವಾಗಿ ಅತ್ಯಾಕರ್ಷಕವಾಗಿದ್ದು, ಸಂಪೂರ್ಣವಾಗಿ ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದೆ.**(ಚಿ.ಸಂ.53)** ಇದು ಗ್ರಾಮದ ಮಧ್ಯ ಭಾಗದಲ್ಲಿದ್ದು ಏಕಕೂಟ ದೇವಾಲಯವಾಗಿದೆ. ಇದು ಗರ್ಭಗೃಹ, ಸುಕನಾಸಿ, ನವರಂಗ, ತೆರೆದ ಮುಖಮಂಟಪಗಳನ್ನು ಒಳಗೊಂಡಿದೆ. ಈ ದೇವಾಲಯದ ಪ್ರವೇಶದ್ವಾರ ದಕ್ಷಿಣಾಭಿಮುಖವಾಗಿದ್ದು, ಗರ್ಭಗೃಹ ಮಾತ್ರ ಪೂರ್ವಾಭಿಮುಖವಾಗಿದೆ. ಈ ದೇವಾಲಯಕ್ಕೆ ಅಲ್ಲಿನ ಗ್ರಾಮಸ್ಥರು ತೋರಿದ ಭಕ್ತಿ, ಶ್ರದ್ಧೆ ಮತ್ತು ಆಸಕ್ತಿ ಹಾಗೂ ಸಹಕಾರದಿಂದ ಬಹಳ ಸುಸ್ಥಿತಿಯಲ್ಲಿದೆ.

**ಗರ್ಭಗೃಹ:–** ಈ ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಒಂದು ಅಡಿ ಎತ್ತರವಿರುವ ಚೌಕಾಕಾರದ ಪೀಠ. ಆ ಪೀಠದ ಮೇಲೆ ಸುಮಾರು ಮೂರು ಅಡಿ ಎತ್ತರವಿರುವ ನಕ್ಷತ್ರಾಕಾರದ ಪಾಣಿಪೀಠ, ಪಾಣಿಪೀಠದ ಮೇಲೆ ಸುಮಾರು 1.5 ಅಡಿ ಎತ್ತರವಿರುವ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.54)** ಲಿಂಗದ ರುದ್ರಭಾಗ ಕೆಲವು ರೇಖೆಗಳಿಂದ ಕೂಡಿದ್ದು, ಅದನ್ನು ಬ್ರಹ್ಮಸೂತ್ರ ರೇಖೆಗಳೆಂದು ಹೆಸರಿಸಿದ್ದಾರೆ.[74]ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಮೂರು ಸುತ್ತು ವೃತ್ತಾಕಾರವಾಗಿ ಅರಳಿರುವ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ದ್ವಾರವು ಮೂರು ಪಟ್ಟಿಕೆಗಳಿಂದ ಕೂಡಿದೆ. ಈ ಪಟ್ಟಿಕೆಗಳಲ್ಲಿ ಯಾವುದೇ ಸೂಕ್ಷ್ಮ ಕೆತ್ತನೆಯ ಅಲಂಕರಣೆ ಕಂಡುಬರುವುದಿಲ್ಲ. ಆದರೆ ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವನ್ನು ಇರಿಸಲಾಗಿದೆ.

**ಸುಕನಾಸಿ:-** ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿ ಶಿಲ್ಪಗಳು ಕಂಡುಬರುವುದಿಲ್ಲ. ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದ್ದು, ಈ ಭುವನೇಶ್ವರಿಯಲ್ಲಿ ಅರಳಿದ ಪದ್ಮ ಪುಷ್ಪ ಬಿಡಿಸಲಾಗಿದೆ. ಸುಕನಾಸಿಯ ದ್ವಾರವು ಅಲಂಕೃತ ಪಟ್ಟಿಕೆಗಳಿಂದ ಕೂಡಿದ್ದು, ಪಟ್ಟಿಕೆಗಳ ಇಕ್ಕೆಲಗಳಲ್ಲಿ ಜಾಲಾಂಧ್ರವನ್ನು ಮಾಡಲಾಗಿದೆ. ಬಾಗಿಲುವಾಡದಲ್ಲಿ ಸಾಲಾಗಿ ಬಿಡಿಸಲಾಗಿರುವ ಪದ್ಮಪುಷ್ಪಗಳು ಇಕ್ಕೆಲಗಳಲ್ಲಿ ಮಕರಗಳ ಬಾಯಿಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿಸುರುಳಿ ಮೇಲ್ಭಾಗದಲ್ಲಿ ಕೀರ್ತಿಮುಖವನ್ನು ಬಿಡಿಸಲಾಗಿದೆ. ಮಕರದ ಕೆತ್ತನೆ ಇರುವುದರಿಂದ ಇದನ್ನು ಮಕರ ತೋರಣ ಎನ್ನುವರು.

**ನವರಂಗ:-** ನವರಂಗವು 25x25 ಅಡಿಗಳ ಉದ್ದ ಅಗಲವಾಗಿದೆ. ಚೌಕಾಕಾರವಾಗಿರುವ ಈ ನವರಂಗದ ಮಧ್ಯೆ ಹೊಯ್ಸಳ ಶೈಲಿಯ ನಾಲ್ಕು ಶ್ರೀಕಾರ ಕಂಬಗಳಿವೆ. ಈ ಶ್ರೀಕಾರ ಕಂಬಗಳು ಚೌಕ, ಬಳೆಗಳ, ಗಾಲಿ, ಗಂಟೆ, ಘಟಾ, ಪುಷ್ಪ ಬೋದಿಗೆ, ಫಲಗೈ, ಉರುಳೆಯಾಕಾರದ ಕಪೋತ ಹೊಂದಿದೆ.**(ಚಿ.ಸಂ.55)** ಘಂಟೆಯ ಮಧ್ಯಭಾಗದಲ್ಲಿ ಮಣಿಹಾರಗಳ ಕೆತ್ತನೆಯಿದ್ದು ಗಾಲಿಯ ನಾಲ್ಕು ದಿಕ್ಕುಗಳಲ್ಲಿ ಗುಬುಟುಗಳನ್ನು ಮಾಡಿ ಅದರಲ್ಲಿ ಕುಳಿತಿರುವ ದುಂಡು ಶಿಲ್ಪಗಳನ್ನು ಬಿಡಿಸಲಾಗಿದೆ.[75]**(ಚಿ.ಸಂ.56)** ಕೆಲವು ಕಂಬಗಳ ಗಾಲಿಯಲ್ಲಿ ಸಂಗೀತಗಾರರ, ನೃತ್ಯಗಾರರ ಶಿಲ್ಪಗಳನ್ನು ಬಿಡಿಸಲಾಗಿದೆ. ಈಶಾನ್ಯ ಭಾಗದ ಕಂಬದ ಫಲಗೈ ಮೇಲೆ ಶಾಸನವನ್ನು ಬರೆಯಲಾಗಿದೆ.[76] ಹಾಗೂ ಬೋದಿಗೆ ನಾಲ್ಕು ಮುಖಗಳಲ್ಲಿ ಸೂಕ್ಷ್ಮ ಕೆತ್ತನೆ ಮಾಡಲಾಗಿದೆ. ಮತ್ತೊಂದು ಕಮಲದ ಬೋದಿಗೆಯಲ್ಲಿ ನಾಲ್ಕು ದಿಕ್ಕುಗಳಲ್ಲಿ ಮೂರು ಹೆಡೆಗಳುಳ್ಳ ನಾಗ ಶಿಲ್ಪಗಳನ್ನು ಬಿಡಿಸಲಾಗಿದೆ. ಇದೊಂದು ವಿಶೇಷತೆಯ ಹೊಯ್ಸಳ ದೇವಾಲಯಗಳ ಕಂಬಗಳ ಮೇಲೆ ನಾಗಶಿಲ್ಪವನ್ನು ಬಿಡಿಸಿರುವುದು ಬಹಳ ಅಪರೂಪ.[77] ಆದ್ದರಿಂದ ಈ ದೇವಾಲಯವನ್ನು ಬೋದಿಗೆಗಳ ವಿಶೇಷತೆಯಿಂದ ಕೂಡಿವೆ. ಮತ್ತೊಂದು ಗಾಲಿಯ ಮೇಲೆ ಗಣೇಶನ ಶಿಲ್ಪವನ್ನು ನಿರ್ಮಿಸಲಾಗಿದೆ. ಕುಳಿತ ಗಣಪ, ನಿಂತಿರುವ ಗಣಪ, ಧರ್ನುಧಾರಿ, ಗೋಪಿಕೃಷ್ಣರ, ನಟರಾಜರ ದುಂಡುಶಿಲ್ಪ ಇವೆ. ನವರಂಗದ ಮೇಲ್ಛಾವಣಿಯು ಒಂಭತ್ತು ಅಂಕಣಗಳಿಂದ ಕೂಡಿದ್ದು, ಇವುಗಳಲ್ಲಿ ಒಂಭತ್ತು ಭುವನೇಶ್ವರಿಗಳನ್ನು ರಚಿಸಲಾಗಿದೆ.

**ಮಧ್ಯಭುವನೇಶ್ವರಿ:-** ವಿತಾನ ಎಂದರೆ ದೇವಾಲಯದ ಮೇಲ್ಛಾವಣಿ. ಇವುಗಳು ಸಹ ಅಲಂಕೃತವಾಗಿರುತ್ತದೆ. ಸರಳವಾದ ಪದ್ಮಾಲಂಕರಣದಿಂದ ಹಿಡಿದು ಅತಿ ವಿಶಾಲವಾದ ವಿನ್ಯಾಸವುಳ್ಳ ಹೊಯ್ಸಳರ ಭುವನೇಶ್ವರಿವರೆಗೂ ನಾನಾ ಪ್ರಕಾರದ ವಿತಾನಗಳನ್ನು ಕಾಣಬಹುದು.[78] ಮಧ್ಯದ ಭುವನೇಶ್ವರಿಯು ಚೌಕ, ಅಷ್ಟಮುಖವಾಗಿದೆ. ಇದರಲ್ಲಿ

ಕೀರ್ತಿಮುಖಗಳು, ಪದ್ಮದ ದಳಗಳು, ಪದ್ಮಪುಷ್ಪ ಮತ್ತು ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಇದರಲ್ಲಿ ದಿಕ್ಪಾಲಕರ ಶಿಲ್ಪಗಳನ್ನು ಮಾತ್ರ ಬಿಡಿಸಲಾಗಿದೆ. ಮಧ್ಯದಲ್ಲಿ ಅರಳಿದ ಕಮಲದ ಪುಷ್ಪ ಮತ್ತು ಕಮಲದ ಮೊಗ್ಗುಗಳನ್ನು ವೃತ್ತಾಕಾರವಾಗಿ ಬಿಡಿಸಲಾಗಿದೆ.

**ಪಶ್ಚಿಮದ ಭುವನೇಶ್ವರಿ:-** ಈ ಭುವನೇಶ್ವರಿಯನ್ನು ಚೌಕಾಕಾರವಾಗಿ ರಚಿಸಿ ಒಳಭಾಗದಲ್ಲಿ ಕಮಲದ ದಳಗಳ ಅಲಂಕರಣ ಮತ್ತು ಒಂಬತ್ತು ಚೌಕಗಳಲ್ಲಿ ವೃತ್ತಾಕಾವಾಗಿ ಬಿಡಿಸಲಾಗಿರುವ ಪದ್ಮಪುಷ್ಪಗಳಿವೆ. ಇನ್ನುಳಿದ ಎಲ್ಲಾ ಭುವನೇಶ್ವರಿಗಳು ಇದೇ ಮಾದರಿಯಲ್ಲಿವೆ.**(ಚಿ.ಸಂ.57)**

**ಸುಕನಾಸಿ**:- ಸುಕನಾಸಿಯ ದ್ವಾರದ ಮುಂದೆ ಪಶ್ಚಿಮದ ಗೋಡೆಯ ಮುಂದೆ ಕೆಲವು ಶಿಲ್ಪಗಳನ್ನು ಇರಿಸಲಾಗಿದೆ. ಮಹಿಷಮರ್ದಿನಿಯ ಶಿಲ್ಪ ಗಣಪತಿ, ವಿಷ್ಣು, ನಾಗಶಿಲ್ಪ, ವರಹ, ಶಿಲ್ಪಗಳಿವೆ. ಮಹಿಷಮರ್ದಿನಿಯು ಚತುರ್ಭುಜವನ್ನು ಹೊಂದಿದ್ದು, ಒಂದು ಕೈಯಲ್ಲಿ ಮಹಿಷನ ಕೊಂಬನ್ನು ಮತ್ತೊಂದು ಕೈಯಲ್ಲಿ ತ್ರಿಶೂಲದಿಂದ ಮಹಿಷನ ತಲೆಗೆ ಇರಿಯುತ್ತಿದ್ದಾಳೆ. ಉಳಿದೆರಡು ಕೈಯಲ್ಲಿ ಕತ್ತಿ ಮತ್ತು ಆಯುಧವನ್ನು ಹಿಡಿದಿದ್ದಾಳೆ.

**ಗಣೇಶ**:- ಗಣೇಶನು ಪದ್ಮಾಸನದಲ್ಲಿ ಕುಳಿತಿದ್ದು, ದ್ವಿಭಂಗಿಯನ್ನು ಹೊಂದಿದ್ದಾನೆ. ಕೈಗಳಲ್ಲಿ ಫಲ ಮತ್ತು ಅಭಯಹಸ್ತವನ್ನು ಹೊಂದಿರುತ್ತಾನೆ.

**ವಿಷ್ಣು:-** ವಿಷ್ಣುವು ಸಮಭಂಗಿಯಲ್ಲಿ ನಿಂತಿದ್ದು, ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪುಷ್ಪವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಗಣಪ:-** ಗಣಪನು ಸಹ ಮುರಿದ ದಂತ ಫಲವನ್ನು ಹಿಡಿದಿರುವ ಪದ್ಮಾಸನದಲ್ಲಿ ಕುಳಿತಿದ್ದಾನೆ. ನಾಗಶಿಲ್ಪ ಇದರ ಪಕ್ಕದಲ್ಲಿ ಸುಖಾಸನದಲ್ಲಿ ಕುಳಿತಿರುವ 3.5 ಅಡಿ ಎತ್ತರವಿರುವ ಗಣಪ ಇದೆ. ಕೈಗಳಲ್ಲಿ ಫಲ, ದಂತ, ಪಾಶ, ಅಂಕಣ ಹಿಡಿದಿದ್ದಾನೆ.

**ವರಾಹಿ:-** ವರಾಹಿ ದೇವಿಯು ಕೈಯಲ್ಲಿ ಲೇಖನಿ ಎಡಗೈನಲ್ಲಿ ಪುಸ್ತಕವನ್ನು ಹಿಡಿದು ವಕ್ರಾಸನದಲ್ಲಿ ಕುಳಿತಿದ್ದಾಳೆ. ಈ ಮೂರ್ತಿಶಿಲ್ಪಗಳು ಸುಂದರವಾಗಿದ್ದು, ಭಕ್ತರು ಹಾಕುವ ಎಣ್ಣೆಯ ಅಭಿಷೇಕದಿಂದ ಮೂರ್ತಿಶಿಲ್ಪ ಲಕ್ಷಣ ಹಾಳಾಗಿದೆ.ಇವನ ಎದುರಾಗಿ ಪ್ರತಿಷ್ಠಾಪಿಸಲಾಗಿರುವ ನಂದಿಯನ್ನು ಸ್ಥಳಾಂತರಿಸಿ ನವರಂಗದ ಉತ್ತರ ಗೋಡೆಯನ್ನು ಒಡೆದು ಅದರಲ್ಲಿ ಒಂದು ಇಟ್ಟಿಗೆಯಿಂದ ಕಟ್ಟಿದ ಚೌಕಾಕಾರದ ಕೋಣೆಯನ್ನು ಮಾಡಿ ನಂದಿಯ ಶಿಲ್ಪವನ್ನು ದಕ್ಷಿಣಭಿಮುಖವಾಗಿ ಇರಿಸಲಾಗಿದೆ. ಈ ನಂದಿಯು ಸುಮಾರು ನಾಲ್ಕು ಅಡಿ

ಎತ್ತರವಾಗಿದ್ದು, ಮೈಮೇಲೆ ಬಿಡಿಸಿರುವ ಗೆಜ್ಜೆಗಳು ಗಂಟೆಯ ಹಾರಗಳ ಸೂಕ್ಷ್ಮ ಕೆತ್ತನೆಯಿಂದ ಮಾಡಲಾಗಿದೆ.

ನವರಂಗದ ದ್ವಾರವನ್ನು ದಕ್ಷಿಣಾಭಿಮುಖವಾಗಿ ಮಾಡಲಾಗಿದೆ. ಈ ದ್ವಾರದ ಪಟ್ಟಿಕೆಗಳು ಸರಳವಾಗಿವೆ. ಆದರೆ ಪಟ್ಟಿಕೆಗಳ ಮುಂದೆ ಇಕ್ಕೆಲಗಳಲ್ಲಿ ಇರಿಸಲಾಗಿರುವ ಸುಮಾರು ಆರು ಅಡಿ ಎತ್ತರವಿರುವ ಸೂಕ್ಷ್ಮ ಕೆತ್ತನೆವುಳ್ಳ ಸುಂದರವಾದ ದ್ವಾರಪಾಲಕರನ್ನು ಇರಿಸಲಾಗಿದೆ. ಈ ದ್ವಾರಪಾಲಕರು ಚತುರ್ಭುಜವನ್ನು ಹೊಂದಿದ್ದು, ತ್ರಿಶೂಲ, ಡಮರು, ಗಧಾ, ಎಡಭಾಗದ ದ್ವಾರಪಾಲಕರ ಬಲಗೈ ಮುರಿದುಹೋಗಿದೆ.

ಬಲಭಾಗದ ದ್ವಾರಪಾಲಕ ತ್ರಿಭಂಗಿಯಲ್ಲಿ ನಿಂತಿದ್ದು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಖಡ್ಗ, ಎಡಗೈ ಅಭಯಹಸ್ತ, ಡಮರು, ತ್ರಿಶೂಲಹಿಡಿದು ಕೈಯಲ್ಲಿ ನಾಗ ಶಿಲ್ಪವನ್ನು ಇರಿಸಲಾಗಿದೆ. ಈ ದ್ವಾರಪಾಲಕರ ಇಕ್ಕೆಲಗಳಲ್ಲಿ ಫಲವನ್ನು ಹಿಡಿದು ನಿಂತಿರುವ ಸೇವಕಿಯರಿದ್ದಾರೆ. ಪ್ರಭಾವಳಿಯಲ್ಲಿ ಕಮಲದ ಪುಷ್ಪಗಳನ್ನು ಸುರಳಿಗಳ ಒಳಗೆ ಸೂಕ್ಷ್ಮ ಕೆತ್ತನೆಮಾಡಿ ಬಿಡಿಸಲಾಗಿದೆ.[79] (ಚಿತ್ರ)

ಬಾಗಿಲುವಾಡದ ಮೇಲೆ ನಟರಾಜನ ಶಿಲ್ಪವನ್ನು ಬಹಳ ಸೂಕ್ಷ್ಮ ಕೆತ್ತನೆ ಮಾಡಿ ಸುಂದರವಾಗಿ ಬಿಡಿಸಲಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಸಂಗೀತಗಾರರು, ಗಂಧರ್ವರು, ಕಿನ್ನರರು ಮತ್ತು ಇಕ್ಕೆಲಗಳಲ್ಲಿ ಬ್ರಹ್ಮ, ವಿಷ್ಣುವಿನ ಶಿಲ್ಪಗಳನ್ನು ಬಿಡಿಸಲಾಗಿದೆ. ಪ್ರಭಾವಳಿಯಲ್ಲಿ ಸೂಕ್ಷ್ಮ ಕೆತ್ತನೆಯಿಂದ ಕೂಡಿದ ಬಳ್ಳಿ ಸುರಳಿಯ ಕೀರ್ತಿಮುಖವಿದೆ. ಈ ಶಿಲ್ಪದ ಇಕ್ಕೆಲಗಳಲ್ಲಿ ಸೂಕ್ಷ್ಮ ಕೆತ್ತನೆಯಿಂದ ಕೂಡಿದ ಕಲಾತ್ಮಕವಾದ ಮಕರಗಳನ್ನು ಬಿಡಿಸಲಾಗಿದೆ. ಈ ಮಕರಗಳ ಮೇಲೆ ದೇವ ದೇವತೆಗಳು ಆಸೀನರಾಗಿದ್ದಾರೆ. ಮಕರಗಳ ಬಾಲದಿಂದ ಹೊರಟಂತೆ ಬಿಡಿಸಲಾಗಿರುವ ಸೂಕ್ಷ್ಮ ಕೆತ್ತನೆಯ ಅಲಂಕರಣವು ಸುಂದರವಾಗಿದೆ. ಇದೊಂದು ಹೊಯ್ಸಳರ ಕಲಾಕೃತಿಗಳಲ್ಲಿ ಅದ್ಭುತವಾದ ಮತ್ತು ವಿಶೇಷತೆಯಿಂದ ಕೂಡಿದ ಶಿಲ್ಪ ಸಮೂಹವಾಗಿದೆ.

**ಮುಖಮಂಟಪ:–** ಮುಖಮಂಟಪದಲ್ಲಿ ಚೌಕಾಕಾರದ ಪೀಠ ಸಿಲಿಂಡರಿನಾಕಾರದ ಎರಡು ಕಂಬಗಳಿವೆ. ಈ ಕಂಬಗಳು ಗಾಲಿ, ಮತ್ತು ಉರುಳೆಯಾಕಾರದ ಕಪೋತದಲ್ಲಿ ಎರಡು ಕಡೆ ಕಕ್ಷಾಸನವನ್ನು ಮಾಡಲಾಗಿದೆ. ಮೇಲ್ಛಾವಣಿಯಲ್ಲಿ ಯಾವುದೇ ಭುವನೇಶ್ವರಿ ಕಂಡು ಬರುವುದಿಲ್ಲ. ಮುಖಮಂಟಪದ ದ್ವಾರದಲ್ಲಿ ಸೂಕ್ಷ್ಮ ಕೆತ್ತನೆಗಳುಳ್ಳ ದ್ವಾರಪಾಲಕರು ಮತ್ತು ಮಕರ ತೋರಣಗಳಿವೆ.**(ಚಿ.ಸಂ.೫೮)**

**ಅಧಿಷ್ಠಾನ**:– ಅಧಿಷ್ಠಾನದಲ್ಲಿ ನಾಲ್ಕು ಪಟ್ಟಿಕೆಗಳಿದ್ದು, ಅವುಗಳಲ್ಲಿ ಉಪಾನ, ಜಗತಿ, ಭೂಮಿಯಲ್ಲಿ ಮುಚ್ಚಿ ಹೋಗಿವೆ, ತ್ರಿಪಟ್ಟಕುಮುದ ಮತ್ತು ಪ್ರತಿ ಕಾಣಬರುತ್ತದೆ. ಪ್ರತಿಯ ಅಂಚಿನಲ್ಲಿ ದಂತಪಕ್ತಿಯನ್ನು ಮಾಡಲಾಗಿದೆ.

**ಭಿತ್ತಿ**:– ಭಿತ್ತಿಯಲ್ಲಿ ಸಣ್ಣ ಸಣ್ಣ ಅರೆಗಂಬಗಳ ಜೋಡಣೆ ಮಾಡಿ ಸುತ್ತಲೂ ಭಿತ್ತಿಯನ್ನು ಅಲಂಕರಣಗೊಳಸಲಾಗಿದೆ. ಗರ್ಭಗೃಹದ ಹಿಂಭಾಗದಲ್ಲಿ ಕೋಷ್ಠಗುಡಿ ಇದೆ. ಆದರೆ ಕೋಷ್ಠ ಗುಡಿಯನ್ನು ಗಾಳಿ ಬೆಳಕಿನ ದೃಷ್ಟಿಯಿಂದ ಮುಕ್ತಗೊಳಸಲಾಗಿದೆ.**(ಚಿ.ಸಂ.59)**

ಮುಂಭಾಗದಲ್ಲಿ ಬಲಗಡೆ ಭಿತ್ತಿಯಲ್ಲಿ ಗಜೇಂದ್ರ ಮೋಕ್ಷಶಿಲ್ಪ, ಸಮಭಂಗಿಯಲ್ಲಿ ನಿಂತಿರುವ ಶಿವ, ಸ್ತ್ರೀ, ಮಹಿಷಮರ್ದಿನಿ, ಧರ್ನುದಾರಿ, ಕೇಶವ, ಚಾಮರಧಾರಿಣಿ, ನಾಗಕನ್ಯೆ, ಮತ್ತು ನಾಗಪುರುಷ, ನಗ್ನ ಸ್ತ್ರೀ ಚಾಮರಧಾರಿಣಿ, ನಟರಾಜ, ವಿಷ್ಣು, ಫಲ ಹಿಡಿದು ನಿಂತಿರುವ ಸ್ತ್ರೀ, ಮತ್ಸ್ಯಭೇದ ಅರ್ಜುನ, ವಿಷ್ಣು ಮತ್ತು ಲಕ್ಷ್ಮಿ ಧನುರ್ಧಾರಿ, ಮತ್ಸ್ಯಭೇದ ಅರ್ಜುನ ಫಲಹಿಡಿದು ನಿಂತಿರುವ, ಸ್ತ್ರೀ ನೃತ್ಯಗಾರರು, ವಿಧಾನಶಿಲ್ಪ, ನೃತ್ಯಗಣಪ, ಲಕ್ಷ್ಮೀ, ಕಾಳಂಗಮರ್ದನ, ಶಿವಪಾರ್ವತಿ ಈ ಶಿಲ್ಪಗಳ ಮೇಲೆ ಏಕಕಂಬ, ಶಿಖರ ದ್ವಿಕಂಬ ಶಿಖರಗಳನ್ನು ರಚಿಸಿ ಭಿತ್ತಿಯನ್ನು ರಚಿಸಲಾಗಿದೆ.

**ಕಪೋತ**:– ಕಪೋತವು ಇಳಿಜಾರಾಗಿದ್ದು, ಗೋಡೆಯಿಂದ ಸುಮಾರು ಎರಡು ಅಡಿ ಮುಂಚಾಚಿದೆ. ಅದರ ಮೇಲೆ ಮತ್ತೊಂದು ಕಪೋತವಿದೆ. ಗರ್ಭದ್ವಾರಗಳ ಅಂಚಿನ ಭಾಗ ಮುರಿದುಹೋಗಿದೆ. ನವರಂಗದ ಮೇಲಿರುವ ಕಪೋತ ಸುಸ್ಥಿತಿಯಲ್ಲಿದೆ. ಇದರ ಮೇಲೆ 2.5 ಅಡಿ ಎತ್ತರದ ಕೈಪಿಡಿ ಗೋಡೆಯನ್ನು ನಿರ್ಮಿಸಲಾಗಿದೆ. ಮೂಲೆಗಳಲ್ಲಿ ನಂದಿಶಿಲ್ಪವನ್ನು ಇಡಲಾಗಿದೆ. ಗರ್ಭಗೃಹದ ಮೇಲೆ ಈಗ ಶಿಖರ ಇಲ್ಲ. ಶಿವನಿಗೆ ಎದುರಾಗಿರುವ ನಂದಿ ಮಂಟಪದ ಕೈಪಿಡಿ ಗೋಡೆಯಲ್ಲಿ ದೇವ ದೇವತೆಗಳ ಗಚ್ಚುಶಿಲ್ಪಗಳನ್ನು ಬಿಡಿಸಲಾಗಿದೆ. ದೇವಾಲಯದ ಮುಂದೆ ಎರಡು ವೀರಗಲ್ಲು ಶಾಸನಗಳಿವೆ. ಈ ವೀರಗಲ್ಲುಗಳ ಮೇಲೆ ಶಾಸನವನ್ನು ಬರೆಯಲಾಗಿದೆ.[೮೦]

ಈ ದೇವಾಲಯಕ್ಕೆ ಇತ್ತೀಚೆಗೆ ನಿರ್ಮಿಸಲಾಗಿರುವ ಕಲ್ಲಿನ ಪ್ರಾಕಾರವಿದೆ. ಅಲ್ಲದೆ ದೇವಾಲಯಕ್ಕೆ ಸುಣ್ಣ ಹಾಗೂ ಬಣ್ಣವನ್ನು ಬಳಿದು ದೇವಾಲಯದ ಲಕ್ಷಣವನ್ನು ಗ್ರಾಮಸ್ಥರು ಹಾಳು ಮಾಡಿದ್ದಾರೆ. **(ಚಿ.ಸಂ.60)**

**ಸೋಮೇಶ್ವರ ದೇವಾಲಯ–ತರಿಕಲ್ಲು**

ತರಿಕಲ್ಲು ಹುಣಸೂರು ತಾಲೂಕಿಗೆ ಸೇರಿರುವ ಒಂದು ಗ್ರಾಮ ಇದು ಹುಣಸೂರಿನಿಂದ ದಕ್ಷಿಣಕ್ಕೆ ಸುಮಾರು.15 ಕಿ.ಮೀ. ದೂರದಲ್ಲಿದೆ. ಈ ಗ್ರಾಮಕ್ಕೆ 'ತರಿಕಲ್ಲು' ಎಂದು ಹೆಸರು ಬರಲು ಕಾರಣ. ಈ ಗ್ರಾಮದ ಸುತ್ತಮುತ್ತ ಕಪ್ಪುನೀಲಿ ಮಿಶ್ರಿತ ಕಲ್ಲುಗಳು ಸುತ್ತಲೂ ಆವರಿಸಿದ್ದು, ಈ ಕಲ್ಲು ಚೂರಾದಾಗ ರವೆಯಂತಹ ತರಿ, ತರಿ ಮಣ್ಣು ಸಿಗುತ್ತದೆ. ಆದ್ದರಿಂದ ಈ ಗ್ರಾಮಕ್ಕೆ ತರಿಕಲ್ಲು ಎಂದು ಹೆಸರು ಬಂದಿದೆ[81] ಎಂದು ಹೇಳಲಾಗುತ್ತಿದೆ. ಇದಕ್ಕೆ ಪೂರಕವಾಗಿ ಇದೇ ಗ್ರಾಮದಲ್ಲಿರುವ ಕ್ರಿ.ಶ.1669ರ ಒಂದು ಶಾಸನವು ಶ್ರೀರಂಗಪಟ್ಟಣದ ಒಡೆಯರು ಬರೆಯಿಸಿರುವಂತಹ ಶಾಸನ ಗ್ರಾಮದ ಹೊಲದಲ್ಲಿರುವ ಜಮೀನಿನಲ್ಲಿದೆ. ಇದರಲ್ಲಿ ತರಿಕಲ್ಲು ಎಂದು ಉಲ್ಲೇಖಿಸಲಾಗಿದೆ.[82]

ಸೋಮೇಶ್ವರ ದೇವಾಲಯವು ಈ ಗ್ರಾಮದ ಪಶ್ಚಿಮ ಭಾಗದಲ್ಲಿದೆ. ಇದನ್ನು ಬೆಣಚು ಕಲ್ಲನ್ನು ಉಪಯೋಗಿಸಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.**(ಚಿ.ಸಂ.61)** ಇದೊಂದು ಏಕಕೂಟ ದೇವಾಲಯವಾಗಿದ್ದು, ಇದರಲ್ಲಿ ಒಂದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ. ಆದರೆ ಈಗ ದೇವಾಲಯವು ಸಂಪೂರ್ಣವಾಗಿ ಶಿಥಿಲಾವಸ್ಥೆಯಲ್ಲಿದೆ.

**ಗರ್ಭಗೃಹ:**–ಗರ್ಭಗೃಹವು 8X8 ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಪಾಣಿಪೀಠದ ಮೇಲೆ ಇರಿಸಲಾಗಿದ್ದ ಶಿವಲಿಂಗ ಇಲ್ಲವಾಗಿದೆ. ಇದರ ಮೇಲ್ಭಾಗದಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದ್ದು, ಸರಳವಾಗಿದೆ. ಇದರ ಮಧ್ಯದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲು ಸರಳವಾಗಿದ್ದು, ಇದರಲ್ಲಿ ಯಾವುದೇ ಅಲಂಕರಣ ಕಂಡುಬರುವುದಿಲ್ಲ.**(ಚಿ.ಸಂ.62)**

**ಸುಕನಾಸಿ:–** ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿಶಿಲ್ಪಗಳಿಲ್ಲ. ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಇದರಲ್ಲಿ ಅರಳಿದ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ವಿಶಾಲವಾಗಿ ಅರಳಿರುವ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಸುಕನಾಸಿಯ ದ್ವಾರದಲ್ಲಿ ಯಾವುದೇ ಮಾದರಿಯ ಅಲಂಕರಣದ ಕೆತ್ತನೆಗಳು ಕಂಡುಬರುವುದಿಲ್ಲ.

**ನವರಂಗ:–** ನವರಂಗವು ಸುಮಾರು 20X20 ಅಡಿಗಳ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯಲ್ಲಿರುವ ನಾಲ್ಕು ಪ್ರಧಾನ ಶ್ರೀಕಾರ

ಕಂಬಗಳು ಕಂಡುಬರುತ್ತವೆ. ಈ ಕಂಬಗಳು ಚೌಕಾಕಾರದ ಪೀಠ, ಗಾಲಿ, ಘಂಟೆ, ಘಟಾ, ಫಲಗೈ, ಮೇಲ್ಭಾಗದಲ್ಲಿ ಆಧಾರ ಪೋತಿಕೆಯನ್ನು ಹೊಂದಿದೆ.[83] **(ಚಿ.ಸಂ.64)** ಇದರ ಮಧ್ಯದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ.**(ಚಿ.ಸಂ.63)** ಇದರಲ್ಲಿ ದಿಕ್ಪಾಲಕರು ಮತ್ತು ಅರಳಿದ ಪದ್ಮ ಪುಷ್ಪವನ್ನು ಹಾಗೂ ಸುತ್ತಲೂ ಆನೆ ಕುದುರೆ ಸಾಲುಗಳನ್ನು ಬಿಡಿಸಲಾಗಿದೆ.**(ಚಿ.ಸಂ.66)** ಮೇಲ್ಛಾವಣಿಯ ಅಡ್ಡಪಟ್ಟಿಕೆಯ ಮಧ್ಯದಲ್ಲಿ ಊರ್ಧ್ವಮುಖವಾಗಿ ಬಿಡಿಸಲಾಗಿರುವ ಸುಂದರ ಪದ್ಮಪುಷ್ಪಗಳಿವೆ.**(ಚಿ.ಸಂ.65)** ಇನ್ನುಳಿದ ಎಂಟು ಭುವನೇಶ್ವರಿಗಳನ್ನು ಚೌಕಾಕಾರವಾಗಿ, ನಕ್ಷತ್ರಾಕಾರವಾಗಿ ಬಿಡಿಸಲಾಗಿದೆ. ಈ ಭುವನೇಶ್ವರಿಯ ನಾಲ್ಕು ದಿಕ್ಕುಗಳಲ್ಲಿ ನೃತ್ಯ ಶಿಲ್ಪಗಳು, ವೀರ ಪುರುಷರ ಶಿಲ್ಪಗಳು, ಅರಳಿದ ಕಮಲದ ಪುಷ್ಪಗಳು ಹಾಗೂ ದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ.

ನವರಂಗದ ಮುಂದೆ ಇದ್ದ ಮೂಲ ಮುಖಮಂಟಪ ಸಂಪೂರ್ಣವಾಗಿ ಹಾಳಾಗಿದೆ. ಮತ್ತು ದೇವಾಲಯದ ಹೊರಭಾಗದ ಯಾವುದೇ ಲಕ್ಷಣಗಳು ಈಗ ಉಳಿದು ಬಂದಿಲ್ಲ. ಈ ದೇವಾಲಯವು ಶಿಥಿಲವಾಗಿದ್ದು, ಗ್ರಾಮದವರ ನಿರ್ಲಕ್ಷ್ಯಕ್ಕೊಳಗಾಗಿ ದೇವಾಲಯದ ಸುತ್ತಲೂ ಗಿಡಗಂಟಿಗಳು ಬೆಳೆದುಕೊಂಡಿವೆ. ಗರ್ಭಗೃಹದ ಮೇಲೆ ನಿರ್ಮಿಸಲಾದ ಶಿಖರ ಸಂಪೂರ್ಣವಾಗಿ ನಾಶವಾಗಿದ್ದು,**(ಚಿ.ಸಂ.67,68)** ಇಟ್ಟಿಗೆಯಲ್ಲಿ ನಿರ್ಮಿಸಲಾದ ಅಸ್ಥಿಪಂಜರದಂತಿರುವ ಶಿಖರ ಮಾತ್ರ ಈಗ ಉಳಿದಿದೆ. ಸುಕನಾಸಿಯಲ್ಲಿ ಶಿವಲಿಂಗಕ್ಕೆ ಎದುರಾಗಿ ಪ್ರತಿಷ್ಠಾಪಿಸಲಾಗಿದ್ದ ನಂದಿ ದೇವಾಲಯದ ಹೊರಭಾಗದಲ್ಲಿ ಇರಿಸಲಾಗಿದೆ.[84]

**ಈಶ್ವರ ದೇವಾಲಯ-ಧರ್ಮಾಪುರ**

ಧರ್ಮಾಪುರ ಗ್ರಾಮವು ತಾಲೂಕು ಕೇಂದ್ರದಿಂದ 12ಕಿ.ಮೀ. ದೂರದಲ್ಲಿದ್ದು, ನೈರುತ್ಯ ಭಾಗದಲ್ಲಿದೆ. ಈ ಊರಿಗೆ ಮಹಾಭಾರತದ ಧರ್ಮರಾಯ ಭೇಟಿ ನೀಡಿದ್ದರಿಂದ ಮಯೂರಧ್ವಜ ಎಂಬುವವನು ಈ ಊರಿಗೆ 'ಧರ್ಮಾಪುರ' ಎಂದು ನಾಮಕರಣ ಮಾಡಿದ್ದರಿಂದ ಈ ಗ್ರಾಮಕ್ಕೆ 'ಧರ್ಮಾಪುರ' ಎಂದು ಹೆಸರು ಬಂದಿದೆ.[85] ಈ ಗ್ರಾಮದಲ್ಲಿರುವ ಈಶ್ವರ ದೇವಾಲಯವು ಧರ್ಮಾಪುರದಲ್ಲಿರುವ ಚೆನ್ನಕೇಶವ ದೇವಾಲಯದ ಈಶಾನ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.**(ಚಿ.ಸಂ.69)** ಇದೊಂದು ಏಕಕೂಟ ದೇವಾಲಯವಾಗಿದ್ದು, ಈಶ್ವರ ದೇವಾಲಯದ ನವರಂಗದ ಕಂಬವೊಂದರ ಮೇಲೆ ಒಂದು ಶಾಸನವಿದ್ದು, ಈ ಶಾಸನವು ಬೂವಣ್ಣನ ಕಂಬದ ಸೇವೆಯನ್ನು ಉಲ್ಲೇಖಿಸುತ್ತದೆ. ಇದು 15ನೇ ಶತಮಾನದ ಶಾಸನವಾಗಿದೆ.[86] ಇದರಲ್ಲಿ ಒಂದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ. ಈ ದೇವಾಲಯದ ವಾಸ್ತು ಲಕ್ಷಣವನ್ನು

ಗಮನಿಸಿದರೆ ಇದನ್ನು ಹೊಯ್ಸಳರ ಕಾಲದಲ್ಲಿ ನಿರ್ಮಾಣ ಮಾಡಿದಂತೆ ಕಂಡುಬರುತ್ತದೆ. ತರುವಾಯ ವಿಜಯನಗರದ ಅರಸರ ಕಾಲದಲ್ಲಿ ಇದನ್ನು ಜೀರ್ಣೋದ್ಧಾರ ಮಾಡಲಾಗಿದೆ. ಈ ದೇವಾಲಯವು ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದ್ದು, ದೇವಾಲಯದ ಸುತ್ತಲೂ ಕಲ್ಲು ಚಪ್ಪಡಿಯನ್ನು ಜೋಡಿಸಿ ನಿರ್ಮಿಸಲಾಗಿದೆ. ಆದರೆ ಮುಂದಿನ ಮುಖಮಂಟಪ ಮಾತ್ರ ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿಸಲಾಗಿದೆ.[87]

**ಗರ್ಭಗೃಹ:-** ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು, ಚೌಕಕಾರವಾಗಿದೆ. ಇದರ ಮಧ್ಯದಲ್ಲಿ ಎರಡು ಅಡಿ ಎತ್ತರವಿರುವ ಪಾಣಿಪೀಠದ ಮೇಲೆ ಶಿವಲಿಂಗವನ್ನು ಇರಿಸಲಾಗಿದೆ. **(ಚಿ.ಸಂ.70)** ಈ ಪೀಠದ ಮೇಲೆ ಎರಡು ಚಿಕ್ಕ ನಂದಿಗಳನ್ನು ಇಡಲಾಗಿದೆ. ಇದರ ಮೇಲ್ಛಾವಣಿ ಸರಳವಾಗಿದ್ದು, ಮಧ್ಯದಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿಯನ್ನು ರಚಿಸಲಾಗಿದೆ. ಇದರಲ್ಲಿ ಅರಳಿದ ಪದ್ಮಪುಷ್ಪಗಳು ಕಂಡುಬರುತ್ತವೆ. ಗರ್ಭಗೃಹದ ದ್ವಾರದಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣ ಕಂಡುಬರುವುದಿಲ್ಲ. ಲಲಾಟಬಿಂಬದಲ್ಲಿ ಗಜಲಕ್ಷ್ಮೀಯನ್ನು ಬಿಡಿಸಲಾಗಿದೆ. **(ಚಿ.ಸಂ.71)** ಬಾಗಿಲವಾಡದಲ್ಲಿ ದಂತಪಂಕ್ತಿ ಸಾಲುಗಳ ಅಲಂಕರಣ ಇದೆ.

**ಸುಕನಾಸಿ:-** ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಕಾರವಾಗಿದೆ. ಇದರ ಮಧ್ಯದಲ್ಲಿ ಶಿವನಿಗೆ ಎದುರಾಗಿರುವಂತೆ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಬಲಬಾಗದಲ್ಲಿ ಗಣೇಶ ಮೂರ್ತಿಯನ್ನು, ಎಡಭಾಗದಲ್ಲಿ ಪಂಚಲೋಹದ ಇತ್ತೀಚಿನ ನಂದಿ ಶಿಲ್ಪವನ್ನು ಇಡಲಾಗಿದೆ. ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಈ ಭುವನೇಶ್ವರಿಯ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ವೃತ್ತಾಕಾರವಾಗಿ ಬಿಡಿಸಲಾಗಿದೆ. **(ಚಿ.ಸಂ.72)**

**ನವರಂಗ:-** ನವರಂಗವು 20X20 ಅಡಿಗಳ ಉದ್ದ ಅಗಲವಾಗಿ ಚೌಕಕಾರವಾಗಿದೆ. ಇದರ ಮಧ್ಯದಲ್ಲಿ ನಾಲ್ಕು ವಿಜಯನಗರ ಶೈಲಿಯಲ್ಲಿರುವ ಕಂಬಗಳಿವೆ. **(ಚಿ.ಸಂ.74)** ಇವುಗಳ ಪೀಠ ಚೌಕಕಾರವಾಗಿ ಮೇಲಿನ ಭಾಗ ಅಷ್ಟಸ್ರ, ಷೋಡಶ, ಮುಖಗಳನ್ನೊಳಗೊಂಡಿದೆ. ಚೌಕಕಾರದ ಬೋದಿಗೆಯ ಮೇಲೆ ಕಪೋತವನ್ನು ಮಾಡಲಾಗಿದೆ. ಇದರ ಮೇಲ್ಛಾವಣಿಯ ಮಧ್ಯದಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿಯು ಅರಳಿದ ಕಮಲದ ಪುಷ್ಪವನ್ನೊಳಗೊಂಡಂತೆ ರಚನೆ ಮಾಡಲಾಗಿದೆ. ನವರಂಗದ ಮುಂಭಾಗದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಜಗತಿಯನ್ನು ರಚಿಸಲಾಗಿದ್ದು, ಇದರ ದ್ವಾರವು ಗಜಲಕ್ಷ್ಮೀ ಶಿಲ್ಪ ಹೊಂದಿದ್ದು ಸರಳವಾಗಿದೆ. **(ಚಿ.ಸಂ.73)**

**ಮುಖಮಂಟಪ:–** ನವರಂಗದ ಮುಂದೆ ನಿರ್ಮಿಸಲಾಗಿದ್ದ, ಮೂಲ ಮುಖಮಂಟಪವು ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಶಿಥಿಲಾವಸ್ಥೆಯಲ್ಲಿದ್ದುದ್ದರಿಂದ ನಂತರ ಕಾಲದಲ್ಲಿ ವಿಜಯನಗರದ ಅರಸರು ಇಟ್ಟಿಗೆಯಲ್ಲಿ ಆಯತಾಕಾರದ ಮುಖಮಂಟಪವನ್ನು ಕಟ್ಟಿಸಿ ಚತುರಸ್ರ, ಅಷ್ಟಸ್ರ ಮುಖವುಳ್ಳ ನಾಲ್ಕು ಕಣಶಿಲೆಯ ಕಂಬಗಳನ್ನು ಮಾಡಿಸಿ ನಿಲ್ಲಿಸಿದ್ದಾರೆ.

**ಅಧಿಷ್ಠಾನ:–** ದೇವಾಲಯವು ಸಾಕಷ್ಟು ಹಾಳಾಗಿದ್ದರಿಂದ ಅಧಿಷ್ಠಾನವನ್ನು ತೆಗೆದು ಗ್ರಾಮಸ್ಥರು ಸೈಜುಗಲ್ಲಿನಲ್ಲಿ ನಿರ್ಮಿಸಿದ್ದಾರೆ. ಹಾಗೂ ಮೂಲ ಭಿತ್ತಿಯನ್ನು ತೆಗೆದು ಹೊಸದಾಗಿ ನಿರ್ಮಿಸಲಾಗಿದೆ. ಭಿತ್ತಿಯ ಮೇಲಿದ್ದ ಕಪೋತವನ್ನು ತೆಗೆದು ಹೊಸದಾಗಿ ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ದಿಂಡನ್ನು ಸೇರಿಸಲಾಗಿದೆ.**(ಚಿ.ಸಂ.75)**

## ವೈಷ್ಣವ ದೇವಾಲಯಗಳು

ಭಾರತದ ಪ್ರಮುಖ ಧರ್ಮಗಳಲ್ಲಿ ವೈಷ್ಣವ ಧರ್ಮವು ಒಂದು. ವೈಷ್ಣವ ಧರ್ಮವೆಂದರೆ ಒಂದು ವಿಶಿಷ್ಟ ದೈವಾಸ್ತಿಕ್ಯ ಧರ್ಮ, ಅಲ್ಲಿ ವಿಷ್ಣುವಿನ ಪೂಜೆಯು ಪ್ರಮುಖವಾಗಿರುತ್ತದೆ. ಇವರು ವಿಷ್ಣುವೇ ಸರ್ವೋತ್ತಮನೆಂದು ನಂಬಿ ಅವನನ್ನೇ ಆರಾಧಿಸುವ ಪಂಥದವರಾಗಿದ್ದಾರೆ. ಇವರಲ್ಲಿ ಪ್ರಮುಖವಾಗಿ ಆರು ಪಂಗಡಗಳಿವೆ. 1.ಶ್ರೀ ರಾಮಾನುಜ ಸಂಪ್ರದಾಯದ ಶ್ರೀ ವೈಷ್ಣವ 2.ಶ್ರೀ ಮಧ್ವಾಚಾರ್ಯರ ಸಂಪ್ರದಾಯದ ಸದ್ವೈಷ್ಣವರು (ಬಹ್ಮತಂತ್ರ ವೈಷ್ಣವರು. ಹರಿವೈಷ್ಣವರು) 3. ಶ್ರೀಚೈತನ್ಯಸ್ವಾಮಿ ಸಂಪ್ರದಾಯದ ಶ್ರೀ ಚೈತನ್ಯ ವೈಷ್ಣವರು 4. ಶ್ರೀ ರಾಮಾನಂದ ಸಂಪ್ರದಾಯದ ಶ್ರೀ ರಾಮನಂದಿ ವೈಷ್ಣವರು 5.ಶ್ರೀ ನಿಂಬಾರ್ಕ ಸಂಪ್ರದಾಯದ ನಿಂಬಾರ್ಕ ವೈಷ್ಣವರು 6.ಶ್ರೀ ವಲ್ಲಭಚಾರ್ಯ ಸಂಪ್ರದಾಯದ ರಾಧಾವಲ್ಲಭ ವೈಷ್ಣವರು.[88] ಈ ಎಲ್ಲಾ ಪಂಥದವರು ಸಹ ವಿಷ್ಣುವಿನ ನಿರೂಪಣಾ ಶಿಲ್ಪಗಳನ್ನು ಪೂಜಿಸುತ್ತಿದ್ದರು. ವಿಷ್ಣುವಿನ ನಿರೂಪಣಾ ಶಿಲ್ಪಗಳ ಉಗಮವು ಕಾಲಾನಂತರದಲ್ಲಿ ಪ್ರಬುದ್ಧಮಾನವಾಗಿ ಬೆಳೆದುಬಂದಿತು. ಇಲ್ಲಿ ಕೇಶವ, ನರಸಿಂಹ, ಸೂರ್ಯನ ಆರಾಧನೆ, ನಾರಾಯಣನ ಕಲ್ಪನೆಯ ಜೊತೆಗೆ ಕೃಷ್ಣ, ವಾಸುದೇವ, ಅನಂತರದಲ್ಲಿ ರಾಮನ ಆರಾಧನೆ ಈ ರೀತಿಯಾಗಿ ವೈಷ್ಣವ ಧರ್ಮದಲ್ಲಿ ಅವಿಭಾಜ್ಯ ಅಂಗವಾಗಿ ಬೆಳೆದು ವಿಭಿನ್ನ ಆರಾಧನೆಗೆ ಪ್ರೇರಣೆ ಕೊಡಲಾಯಿತು. ಇವುಗಳಲ್ಲಿ ದಶಾವತಾರಗಳು ಪ್ರಮುಖವಾದವು ಮತ್ಸ್ಯ (ಮೀನು), ಕೂರ್ಮ(ಆಮೆ), ವರಹ (ಹಂದಿ), ನರಸಿಂಹ, ವಾಮನ(ಕುಬ್ಜ), ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ, ಇವುಗಳು ವಿಷ್ಣುವಿನ ದಶಾವತಾರ ಶಿಲ್ಪಗಳು.[89] ವೈಷ್ಣವ ಧರ್ಮದ ಪ್ರಾಚೀನತೆಯನ್ನು ಭಾರತದ ಪವಿತ್ರ ಧರ್ಮಗ್ರಂಥಗಳಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು. ಋಗ್ವೇದದಲ್ಲಿ ವಿಷ್ಣುವೂ ಒಬ್ಬ ದೇವತೆಯಾಗಿ ಕಾಣಿಸಿಕೊಳ್ಳುತ್ತಾನೆ. ಆದರೆ ವೈದಿಕ ಸ್ತೋತ್ರಗಳಲ್ಲಿ ಇಂದ್ರನನ್ನೇ ಹೆಚ್ಚಾಗಿ ಸ್ತುತಿಸಲಾಗುತ್ತಿದೆ.[90]

ದಕ್ಷಿಣಭಾರತದಲ್ಲಿ ವೈಷ್ಣವ ಧರ್ಮವು ಯಾವ ಕಾಲಕ್ಕೆ ಹಬ್ಬಿತು ಎಂಬ ವಿಷಯದಲ್ಲಿ ಕೇವಲ ಊಹೆ ಮಾಡಬಹುದಷ್ಟೇ, ವಿಷ್ಣುವನ್ನು ಆರಾಧ್ಯದೈವವಾಗಿ ಭಾವಿಸುವ ಆಗಮಗಳು ಪಾಂಚರಾತ್ರಾಗಮಗಳು ತಿಳಿಸುತ್ತವೆ.[91] ಆದರೆ ಕ್ರಿ.ಶ.4ನೇಯ ಶತಮಾನದಲ್ಲಿಯೇ ದಕ್ಷಿಣ ಭಾರತಕ್ಕೆ ಬಂದಿತು ಎಂದು ಸಾಹಿತ್ಯಕ ಆಧಾರಗಳಿಂದ ತಿಳಿಯಬಹುದು.[92] ಕರ್ನಾಟಕದಲ್ಲಿ ವೈಷ್ಣವ ಧರ್ಮದ ಬಗ್ಗೆ ಹಲ್ಮಿಡಿ ಶಾಸನದಿಂದಲೇ ತಿಳಿಯುತ್ತದೆ. ಈ ಶಾಸನದ ಆರಂಭವು ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.[93] ಬಾದಾಮಿ ಚಾಲುಕ್ಯರ ಕುಲದೇವತೆ ವಿಷ್ಣು ಅವರ ಶಾಸನಗಳ ಮತ್ತು ನಾಣ್ಯಗಳ ಮೇಲೆ ವಿಷ್ಣುವಿನ ಅವತಾರವಾದ ವರಹದ

ಮುದ್ರೆಗಳು ಇವೆ ಹಾಗೂ ಬಿರುದುಗಳನ್ನು ಅವಲೋಕಿಸಿದಾಗ ಇವರು ವಿಷ್ಣುಭಕ್ತರು ಎಂದು ಹೇಳಬಹುದು. ಹಾಗೆಯೇ ಇವರು ಶಿವನನ್ನು ಪೂಜಿಸುತ್ತಿದ್ದುದು ಅವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಿಂದ ತಿಳಿದುಬರುತ್ತದೆ.[94]

ದಕ್ಷಿಣಕರ್ನಾಟಕಕ್ಕೆ ರಾಮಾನುಜರು ಆಗಮಿಸಿದ್ದೂ ವಿಷ್ಣುವರ್ಧನನು ಮತ ಪರಿವರ್ತನೆಮಾಡಿಕೊಂಡು ವೈಷ್ಣವ ಮತವನ್ನು ಅಂಗೀಕರಿಸಿದ್ದೂ ಹಾಗೂ ಶ್ರೀ ವೈಷ್ಣವ ಮತದ ಪ್ರವೇಶವು ಹೊಯ್ಸಳರ ಕಾಲದಲ್ಲಿ ಆರಂಭವಾಯಿತು. ಇದರಿಂದ ಕರ್ನಾಟಕದ ಅನೇಕ ಭಾಗಗಳಲ್ಲಿ ವೈಷ್ಣವ ಧರ್ಮವು ರಾಜ ಮನೆತನದವರ ಆಶ್ರಯವನ್ನು ಪಡೆದು ದೇವಾಲಯಗಳ ನಿರ್ಮಾಣಕ್ಕೆ ಉತ್ತೇಜನ ನೀಡಿದವು.[95] ಹೊಯ್ಸಳರ ಕಾಲದಲ್ಲಿ ವೈಷ್ಣವ ದೇವಾಲಯಗಳು ನಿರ್ಮಾಣವಾದರೂ ಇವರ ಕಾಲದ ರಾಜರು ಸರ್ವಧರ್ಮಗಳನ್ನು ಪೋಷಿಸುತ್ತಿದ್ದುದು ಈಗಾಗಲೇ ಶಾಸನಗಳಿಂದ ತಿಳಿದು ಬರುತ್ತದೆ. ಇವರ ರಾಜವಂಶದಲ್ಲಿಯೇ ಬೇರೆ ಬೇರೆ ಮತಗಳಿಗೆ ಸೇರಿದ ಅರಸ ಅರಸಿಯರನ್ನು ಕಾಣಬಹುದು. ವಿಷ್ಣುವರ್ಧನನು ವೈಷ್ಣವನಾಗಿದ್ದರೆ ಅವನ ಪತ್ನಿ ಶಾಂತಲೆ ಜೈನ ಧರ್ಮಿಯಳು, ಅವಳ ತಂದೆ ಮಾರಸಿಂಗಯ್ಯ ಎಂಬುವವನು ಶೈವನಾಗಿದ್ದ.[96] ಹೊಯ್ಸಳರ ಅನಂತರ ಕಾಲದಲ್ಲಿ ಅಂದರೆ ವಿಜಯನಗರದ ಕಾಲದಲ್ಲಿಯೂ ಸಹ ಅನೇಕ ವೈಷ್ಣವ ದೇವಾಲಯಗಳು ನಿರ್ಮಾಣವಾದವು ಅನಂತರದಲ್ಲಿ ವಿಜಯನಗರದ ಸಾಮಂತ ರಾಜರುಗಳು ಮತ್ತು ಮೈಸೂರು ಒಡೆಯರು ಸಹ ವೈಷ್ಣವ ಧರ್ಮವನ್ನು ಪೋಷಿಸಿ ಬೆಳೆಸಿದರು. ಈ ನನ್ನ ಸಂಶೋಧನಾ ಕ್ಷೇತ್ರಕಾರ್ಯದಲ್ಲಿ ಕೆಲವು ವೈಷ್ಣವ ದೇವಾಲಯಗಳನ್ನು ಸಂದರ್ಶಿಸಿ ಹಾಗೂ ಕೆಲವು ಮೂಲಾಧಾರಗಳನ್ನು ಅಭ್ಯಾಸಮಾಡಿ ಅವುಗಳ ಕಲೆ ಮತ್ತು ವಾಸ್ತು ಶಿಲ್ಪದ ಬಗ್ಗೆ ವಿವರಣೆಯನ್ನು ಕೊಡಲಾಗಿದೆ.

**ಕೀರ್ತಿ ನಾರಾಯಣ ದೇವಾಲಯ–ತಲಕಾಡು**

ತಲಕಾಡು ತಿರುಮಕೂಡಲು ನರಸೀಪುರ ತಾಲೂಕಿಗೆ ಸೇರಿರುವ ಒಂದು ಗ್ರಾಮ ಮತ್ತು ಹೋಬಳಿಯ ಕೇಂದ್ರವಾಗಿದೆ. ಇದು ಈ ಗ್ರಾಮದ ದಕ್ಷಿಣ ದಿಕ್ಕಿನಲ್ಲಿ ಪೂರ್ವಾಭಿಮುಖವಾಗಿ ಹರಿಯುವ ಕಾವೇರಿ ನದಿಯ ದಂಡೆಯ ಮೇಲಿದೆ. ಇದು ಪುಣ್ಯಕ್ಷೇತ್ರ ಮತ್ತು ಇತಿಹಾಸ ಪ್ರಸಿದ್ಧವಾಗಿರುವ ಸ್ಥಳ. ಇಲ್ಲಿ ತಲ ಮತ್ತು ಕಾಡ ಎಂಬ ಇಬ್ಬರು ಕಿರಾತ ಸೋದರರಿಂದ ಈ ಊರಿಗೆ ತಲಕಾಡು ಎಂಬ ಹೆಸರು ಬಂದಿತ್ತೆಂದು ಹೇಳಲಾಗುತ್ತಿದೆ. ಆನೆಯ ಜನ್ಮ ಪಡೆದಿದ್ದ ಸೋಮದತ್ತ ಎಂಬ ಋಷಿ ಮತ್ತು ಆತನ ಶಿಷ್ಯರು ಇಲ್ಲಿ ಮೋಕ್ಷ ಪಡೆದಿದ್ದರಿಂದ ಗಜಾರಣ್ಯ ಕ್ಷೇತ್ರವೂ ಆಯಿತೆಂದು ಪೌರಾಣಿಕ ಕಥೆ[97] ಮೊದಲು

ಇಲ್ಲಿ ದಟ್ಟವಾದ ಅರಣ್ಯವಿದ್ದುದಕ್ಕೆ ತಲಕಾಡೆಂಬ ಹೆಸರು ಬಂದಿರುವುದು ಸಂಭವನೀಯ ತಲವನಪುರ ಎನ್ನುವುದು ಇದಕ್ಕೆ ಇದ್ದ ಮತ್ತೊಂದು ಹೆಸರು.[98]

ಈ ತಲಕಾಡು ಹಿಂದೆ ಗಂಗ ಅರಸರ ರಾಜಧಾನಿಯಾಗಿತ್ತು. ಮೊದಲು ಕೋಲಾರದಲ್ಲಿ ಆಳುತ್ತಿದ್ದ ಗಂಗರು ಸುಮಾರು ೫೦೦ರ ಹೊತ್ತಿಗೆ ತಲಕಾಡಿಗೆ ತಮ್ಮ ರಾಜಧಾನಿಯನ್ನು ಬದಲಾಯಿಸಿರಬೇಕು. ಗಂಗರಾಜ ಹರಿವರ್ಮ ಇಲ್ಲಿ ನೆಲೆಸಿದ್ದನೆಂದು ಒಂದು ಶಾಸನ ತಿಳಸುತ್ತದೆ. ಶ್ರೀಪುರುಷನ ಕಾಲದ ಗಂಗರ ಶಾಸನಗಳು ಇಲ್ಲಿ ದೊರೆಯುತ್ತದೆ. ಚೋಳರ ಆಳ್ವಿಕೆಗೆ ಒಳಪಟ್ಟಾಗ ಅವರು ಇದನ್ನು ರಾಜರಾಜಪುರ ಎಂದು ಕರೆದರು. ಚೋಳರು ಆಳಿದ ನೂರು ವರ್ಷಗಳಲ್ಲಿ ಏಳಿಗೆ ಪಡೆದಿತ್ತಾದರೂ ಮುಂದೆ ಕ್ರಿ.ಶ.1116ರಲ್ಲಿ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಾಗ ವಿಷ್ಣುವರ್ಧನನು ಚೋಳರನ್ನು ಸೋಲಿಸಿ ವಿಜಯ ಸಾಧಿಸಿದ ಸಂಕೇತವಾಗಿ ನಾಲ್ಕು ದೇವಾಲಯಗಳನ್ನು ನಿರ್ಮಿಸಿದನು. ಈ ನಾಲ್ಕು ದೇವಾಲಯಗಳಲ್ಲಿ ಕೀರ್ತಿನಾರಾಣ ದೇವಾಲಯವೂ ಒಂದು. ಈ ಪಟ್ಟಣ ಅತ್ಯಂತ ಉನ್ನತ ಸ್ಥಿತಿಯನ್ನು ಮುಟ್ಟಿತು. ಆಗ ಏಳುಪುರಗಳೂ ಸಂಭಮಠಗಳು ಇಲ್ಲಿದ್ದಂತೆ ತಿಳದುಬರುತ್ತದೆ.[99] ಆ ಕಾಲದಲ್ಲಿ ಈ ಊರು ಹೊಯ್ಸಳ ರಾಜ್ಯದ ಒಂದು ಉಪರಾಜಧಾನಿಯಾಗಿತ್ತು. ವಿಜಯನಗರ ಸಾಮ್ರಾಜ್ಯದ ಪ್ರಾಬಲ್ಯಕ್ಕೆ ಬಂದ ಮೇಲೆ ತಲಕಾಡಿನವನೇ ಆಗಿದ್ದ ಮಾಧವ ಮಂತ್ರಿ ಈ ಊರಿನ ಸಮೀಪದಲ್ಲಿ ಕಾವೇರಿಗೆ ಒಂದು ಅಣೆಕಟ್ಟೆಯನ್ನು ಕಟ್ಟಿಸಿದುದಲ್ಲದೆ (ಸು.೧೩೪೨) ಅನೇಕ ಅಭಿವೃದ್ಧಿ ಕಾರ್ಯಗಳನ್ನು ನಡೆಸಿದ. ಆದರೆ ಮುಂದೆ ಇದರ ಅವನತಿ ಪ್ರಾರಂಭವಾಯಿತು. ಇದಕ್ಕೆ ಬಹುಶಃ ಮುಖ್ಯಕಾರಣ ಮಾಧವ ಮಂತ್ರಿ ಅಣೆಕಟ್ಟೆಯೇ ಕಟ್ಟೆಯ ಹಿಂದೆ ಉಂಟಾದ ಮರಳು ಹರಿವಿನಿಂದ ಗಾಳಿ ಕಾಲದಲ್ಲಿ ತೂರಿಬರುವ ಕಣಗಳಿಂದ ಊರಿನ ಮೇಲೆ ಮರಳಿನ ದಿಣ್ಣೆಗಳು ಆವರಿಸುತ್ತಾ ಬಂದು ಊರ ಮರಳು ಮಾಯವಾಯಿತು. ಈ ಮರಳು ಆವರಿಸುವ ಬಗ್ಗೆ ಒಂದು ಕಥೆ ಇದೆ.

ವಿಜಯನಗರ ಪ್ರತಿನಿಧಿಯಾಗಿ ಸೋಮರಾಜ ಅಥವಾ ಶ್ರೀರಂಗರಾಯ ಎಂಬುವನು ಶ್ರೀರಂಗಪಟ್ಟಣದಲ್ಲಿ ಆಳುತ್ತಿದ್ದ ಅವನಿಗೆ ಬೆನ್ನುಪಣಿ ರೋಗ ಬಂದಾಗ ಅದರ ನಿವಾರಣೆಗಾಗಿ ವೈದ್ಯೆಶ್ವರನಿಗೆ ಪೂಜೆ ಅರ್ಪಿಸಲು ತಲಕಾಡಿಗೆ ಬಂದ ಆಗ ಮರಣಾವಸ್ಥೆಯಲ್ಲಿರುವನೆಂದರಿತ ಅವನ ಹೆಂಡತಿಯು ಬಂದಿದ್ದಳು. ರಾಜ ಮೃತನಾದಾಗ ಮೈಸೂರಿನ ರಾಜ ಒಡೆಯ ಆಕೆಯ ಅಮೂಲ್ಯವಾದ ಮೂಗು ಬಟ್ಟನ್ನು ಪಡೆಯಲು ಸೈನ್ಯ ಸಮೇತನಾಗಿ ಧಾವಿಸಿದ. ಮನನೊಂದ ಶ್ರೀರಂಗರಾಯನ ರಾಣಿ ಬಟ್ಟನ್ನು ಕಾವೇರಿಯ ಮಾಲಂಗಿ ಮಡುವಿಗೆ ಎಸೆದು ಮಾಲಂಗಿ

ಮಡುವಾಗಿ ತಲಕಾಡು ಮರಳಾಗಿ ಮೈಸೂರು ರಾಜರಿಗೆ ಮಕ್ಕಳಾಗದಿರಲಿ ಎಂದು ಶಾಪವಿತ್ತು, ತಾನೂ ಮಾಲಂಗಿಯಲ್ಲಿ ಬಿದ್ದು ಪ್ರಾಣತೆತ್ತಳೆಂದು ಈ ಕಥೆ. ಹೇಳುತ್ತದೆ.[100]

ಐತಿಹಾಸಿಕ ಮಹತ್ವವುಳ್ಳ ತಲಕಾಡಿನಲ್ಲಿ 30ಕ್ಕಿಂತಲೂ ಹೆಚ್ಚು ದೇವಾಲಯಗಳು ಇದ್ದುದಾಗಿ ತಿಳಿದುಬರುತ್ತದೆ. ಆದರೆ ಅಷ್ಟು ದೇವಾಲಯಗಳು ಇಲ್ಲಿ ಉಳಿದು ಬಂದಿಲ್ಲ. ಗಂಗರ, ಚೋಳರ ಕಾಲದಲ್ಲಿ ನಿರ್ಮಿಸಲಾಗಿದ್ದ ದೇವಾಲಯಗಳು ಬಹುಶಃ ಮರಳಿನಲ್ಲಿ ಹೂತು ಹೋಗಿರಬಹುದು, ಇಲ್ಲವೇ ನಾಶವಾಗಿರಬಹುದು. ಗಂಗರ ಕಾಲದ ವಾಸ್ತು ಅವಶೇಷಗಳನ್ನು ಮರುಳೇಶ್ವರ, ಪಾತಾಳೇಶ್ವರ, ಅರ್ಕೇಶ್ವರ ದೇವಾಲಯಗಳಿದ್ದರೆ ಚೋಳರ ಕಾಲದ ರಾಜರಾಜೇಶ್ವರ, ವೈಕುಂಠ ನಾರಾಯಣ ದೇವಾಲಯಗಳು ಇವು ಈಗ ಇಲ್ಲ. ಪಂಚಲಿಂಗೇಶ್ವರ, ಗೋಕರ್ಣೇಶ್ವರ, ವೀರಭದ್ರ ದೇವಾಲಯಗಳು ಮತ್ತು ಕೀರ್ತಿನಾರಾಯಣ ದೇವಾಲಯಗಳು ಕಂಡುಬರುತ್ತವೆ.[101]ಇವುಗಳಲ್ಲಿ ಕೀರ್ತಿನಾರಾಯಣ ದೇವಾಲಯ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರುವುದರಿಂದ ನನ್ನ ಸಂಶೋಧನಾ ವ್ಯಾಪ್ತಿಗೆ ಒಳಪಟ್ಟಿರುವುದರಿಂದ ಈ ದೇವಾಲಯವನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ.

ತಲಕಾಡಿನ ನೈರುತ್ಯ ಭಾಗದಲ್ಲಿ ಕೀರ್ತಿನಾರಾಯಣ ದೇವಾಲಯವನ್ನು ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಲಾಗಿದೆ.**(ಚಿ.ಸಂ.76)** ಕಣಶಿಲೆ ಮತ್ತು ಬಳಪದ ಕಲ್ಲನ್ನು ಉಪಯೋಗಿಸಿ ನಿರ್ಮಾಣ ಮಾಡಲಾಗಿರುವ ಈ ದೇವಾಲಯ ಏಕಕೂಟ ದೇವಾಲಯವಾಗಿದೆ. ಇದರಲ್ಲಿ ಒಂದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ.

ಮೂಲತಃ ಈ ದೇವಾಲಯ ಇತ್ತೀಚೆಗೆ ಪ್ರಕೃತಿ ವಿಕೋಪಕ್ಕೆ ತುತ್ತಾಗಿ ಶಿಥಿಲಾವಸ್ಥೆಯನ್ನು ಹೊಂದಿ ಸಾಕಷ್ಟು ಹಾಳಾಗಿದ್ದರಿಂದಾಗಿ ನಾಲ್ಕು ವರ್ಷಗಳ ಹಿಂದಿನಿಂದ 2002ರಲ್ಲಿ ರಾಜ್ಯ ಪುರಾತತ್ವ ಇಲಾಖೆಯವರು ಈ ದೇವಾಲಯವನ್ನು ಸಂಪೂರ್ಣವಾಗಿ ಬಿಚ್ಚಿ ಪುನಃ ವಾಸ್ತುವಿಗೆ ಭಂಗ ಉಂಟಾಗದಂತೆ ಯಥಾಸ್ಥಿತಿಯನ್ನು ಕಾಪಾಡಿಕೊಂಡು ಜೀರ್ಣೋದ್ಧಾರ ಮಾಡುತ್ತಿದ್ದಾರೆ.[102]

**ಗರ್ಭಗೃಹ:-** ಗರ್ಭಗೃಹವು 10X10 ಅಡಿಗಳ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಈ ಗರ್ಭಗೃಹದ ಮಧ್ಯದಲ್ಲಿ ಮೂರು ಅಡಿಗಳ ಎತ್ತರವಿರುವ ನಕ್ಷತ್ರಾಕಾರದ ಗರುಡ ಪೀಠದ ಮೇಲೆ ಸುಮಾರು 10 ಅಡಿಗಳ ಎತ್ತರವಿರುವ ಕೀರ್ತಿನಾರಾಯಣ ಸ್ವಾಮಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.77)** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು

ಹೊಂದಿದ್ದು, ಕೈಗಳಲ್ಲಿ ಶಂಖ, ಪದ್ಮ, ಗಧಾ ಹಾಗೂ ಚಕ್ರವನ್ನು ಹಿಡಿದುಕೊಂಡಿದ್ದಾನೆ.[103] ಸುಂದರವಾಗಿ ಮತ್ತು ಹೊಳಪಿನಿಂದ ಕೂಡಿರುವ ಈ ದೇವತಾ ಮೂರ್ತಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಆಕರ್ಷಕವಾಗಿವೆ.

ಈ ದೇವನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರು ಫಲ ಮತ್ತು ಪದ್ಮ ಪುಷ್ಪವನ್ನು ಹಿಡಿದು ನಿಂತಿದ್ದಾರೆ. ಪ್ರಭಾವಳಯ ಅಂಚಿನ ಭಾಗದಲ್ಲಿ ವಿಷ್ಣುವಿನ ದಶಾವತಾರ ಮೂರ್ತಿಗಳನ್ನು ಬಿಡಿಸಲಾಗಿದೆ. ಇದರ ಒಳಭಾಗದಲ್ಲಿ ಬಳ್ಳಿ ಸುರಳಿ ಮತ್ತು ಕೀರ್ತಿಮುಖವನ್ನು ಸೂಕ್ಷ್ಮ ಕೆತ್ತನೆ ಮಾಡಿ ಬಹಳ ಸುಂದರವಾಗಿ ರಚಿಸಲಾಗಿದೆ. ಈ ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿಯನ್ನು ಮಾಡಲಾಗಿದೆ. ಇದರಲ್ಲಿ ದಿಕ್ಪಾಲಕರು ಅಷ್ಟದಿಕ್ಪಾಲಕರ ಮತ್ತು ಕೀರ್ತಿಮುಖಗಳು ಬಳ್ಳಿ ಸುರುಳಿಗಳನ್ನು ಬಿಡಿಸಿ ಅಲಂಕರಣೆ ಮಾಡಲಾಗಿದೆ. ಗರ್ಭಗೃಹದ ಬಾಗಿಲ ಪಟ್ಟಿಕೆಗಳಲ್ಲಿ ಅಲಂಕರಣದ ಕೆತ್ತನೆ ಕಂಡುಬರುವುದಿಲ್ಲ.

**ಸುಕನಾಸಿ:–** ಗರ್ಭಗೃದಷ್ಟೇ ಉದ್ದ ಅಗಲವಾಗಿರುವ ಈ ಸುಖನಾಸಿಯು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ರೀತಿಯ ಶಿಲ್ಪಗಳು ಕಾಣಬರುವುದಿಲ್ಲ. ಮೇಲ್ಛಾವಣಿಯ ಮಧ್ಯದ ಭುವನೇಶ್ವರಿಯಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ನಾಲ್ಕು ದಿಕ್ಕುಗಳಲ್ಲಿ ಒಂದು ತಲೆ ಎರಡು ದೇಹ ಹೊಂದಿರುವ ಆನೆಗಳನ್ನು ಮತ್ತು ಒಂದು ಮುಖ ಎರಡು ದೇಹವನ್ನು ಹೊಂದಿರುವ ಹಸುಗಳನ್ನು ಬಿಡಿಸಲಾಗಿದೆ ಹಾಗೂ ಹೊಯ್ಸಳ ಲಾಂಛನ ಸಿಂಹದ ಕೆತ್ತನೆಯೂ ಸಹ ಇದೆ. ಮಧ್ಯದಲ್ಲಿ ಅಷ್ಟ ದಿಕ್ಪಾಲಕರ ಶಿಲ್ಪವನ್ನು ಬಿಡಿಸಲಾಗಿದೆ.

**ನವರಂಗ:–**ನವರಂಗವು ಸುಮಾರು 25x25 ಅಡಿಗಳ ಉದ್ದ ಅಗಲವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯಲ್ಲಿರುವ ನಾಲ್ಕು ಕಂಬಗಳಿವೆ. ಈ ಕಂಬಗಳನ್ನು ಉಪಪೀಠದ ಮೇಲೆ ನಿಲ್ಲಿಸಲಾಗಿದ್ದು, ಕಾಂಡದ ಭಾಗವನ್ನು ಚೌಕ, ಬಳೆಗಳ ಗಂಟೆಯಾಕಾರದ ಗಾಲಿ ಪುಷ್ಪ ಬೋದಿಗೆ ಫಲಗೈ ಅದರ ಮೇಲೆ ಉರುಳೆಯಾಕಾರದ ಕಪೋತವನ್ನು ಮಾಡಲಾಗಿದೆ.**(ಚಿ.ಸಂ.78)** ಈ ಕಂಬಗಳು ಶಾಸನವನ್ನು ಹೊಂದಿವೆ.**(ಚಿ.ಸಂ.79)** ಈ ನವರಂಗದ ಮೇಲ್ಛಾವಣಿಯಲ್ಲಿ 9 ಅಂಕಣಗಳಿವೆ. ಇವುಗಳಲ್ಲಿ ಭುವನೇಶ್ವರಿಗಳನ್ನು ಮಾಡಲಾಗಿದೆ.

**ಮಧ್ಯದ ಭುವನೇಶ್ವರಿ**:-ಈ ಭುವನೇಶ್ವರಿಯು ಸ್ವಲ್ಪ ವಿಶಾಲವಾಗಿದ್ದು, ಚೌಕ, ಅಷ್ಟ, ವೃತ್ತಾಕಾರವಾಗಿ ರಚಿಸಲಾಗಿದೆ. ಇದರ ಮಧ್ಯದಲ್ಲಿ ವಿಶಾಲವಾಗಿ ಅರಳಿರುವ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಪಾರ್ಶ್ವದ ಪಟ್ಟಿಕೆಗಳ ಅಂಚಿನ ಭಾಗದಲ್ಲಿ ಮಣಿಹಾರಗಳು ಬಳ್ಳಿ ಸುರುಳಿಗಳು ಮಧ್ಯದಲ್ಲಿ ಸುತ್ತಲೂ ನೆಗೆಯುತ್ತಿರುವ ಸಿಂಹಗಳು, ನಂದಿ ಮುಖಗಳನ್ನು ಬಿಡಿಸಿ ಅಲಂಕರಿಸಲಾಗಿದೆ.

**ಪಶ್ಚಿಮದ ಭುವನೇಶ್ವರಿ**:-ಇದನ್ನು ಚೌಕಾಕಾರವಾಗಿ ರಚಿಸಲಾಗಿದ್ದು ಇದರ ಮಧ್ಯದಲ್ಲಿ ೨ ಅರಳಿದ ಪದ್ಮ ಪುಷ್ಪ ಬಿಡಿಸಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಸೂಕ್ಷ್ಮ ಕೆತ್ತನೆಯ ಕೀರ್ತಿ ಮುಖಗಳಿವೆ.

**ವಾಯುವ್ಯ ಭುವನೇಶ್ವರಿ**:-ಈ ಭುವನೇಶ್ವರಿ ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಪಾರ್ಶ್ವಗಳ ಪಟ್ಟಿಕೆಗಳಲ್ಲಿ ಕೀರ್ತಿಮುಖಗಳು, ಬಳ್ಳಿಸುರುಳಿ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಿ ಅಲಂಕರಣಗೊಳಿಸಲಾಗಿದೆ. ಮಧ್ಯದಲ್ಲಿ ಕಮಲದ ಮೊಗ್ಗು ನಯವಾದ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.

**ಉತ್ತರದ ಭುವನೇಶ್ವರಿ**:-ಆಯತಾಕಾರವಾಗಿ ರಚಿಸಲಾಗಿರುವ ಈ ಭುವನೇಶ್ವರಿಯಲ್ಲಿ ಕೆಳಗಿನ ಪಟ್ಟಿಕೆಗಳಲ್ಲಿ ದಿಕ್ಪಾಲಕರು ಕೀರ್ತಿಮುಖಗಳನ್ನು ಬಿಡಿಸಲಾಗಿದ್ದು, ಮಧ್ಯದಲ್ಲಿ ೨ ಅಂಕಣಗಳನ್ನು ಮಾಡಿ ಇವುಗಳಲ್ಲಿ ವೃತ್ತಕಾರವಾಗಿ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ.

**ಈಶಾನ್ಯ ಭುವನೇಶ್ವರಿ**:-ಇದನ್ನು ನಕ್ಷತ್ರಾಕಾರವಾಗಿ ಬಹಳ ಸುಂದರವಾಗಿ ರಚಿಸಲಾಗಿದೆ. ಮೇಲ್ಭಾಗದಲ್ಲಿರುವ ಕಮಲದ ಮೊಗ್ಗು ದೃಢವಾಗಿದೆ. ಪಾರ್ಶ್ವದ ಪಟ್ಟಿಕೆಗಳಲ್ಲಿ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರುಳಿಗಳು, ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ.

**ಪೂರ್ವದ ಭುವನೇಶ್ವರಿ**:-ಆಯತಾಕಾರವಾಗಿ ರಚಿಸಲಾಗಿದೆ ಇದರಲ್ಲಿಯೂ ಮೂರು ಪದ್ಮ ಪುಷ್ಪ ಬಿಡಿಸಲಾಗಿದೆ. ಪಾರ್ಶ್ವದಲ್ಲಿ ಕೀರ್ತಿಮುಖ ಬಳ್ಳಿ ಸುರುಳಿ ಕಮಲದ ಮೊಗ್ಗುಗಳ ಅಲಂಕರಣವಿದೆ.

**ಆಗ್ನೇಯ ಭುವನೇಶ್ವರಿ**:-ಇದನ್ನು ಚೌಕ, ವೃತ್ತಕಾರ ಮತ್ತು ನಕ್ಷತ್ರಾಕಾರವಾಗಿ ಬಹಳ ಸುಂದರವಾಗಿ ರಚಿಸಲಾಗಿದೆ. ಪಾರ್ಶ್ವಗಳಲ್ಲಿ ಪದ್ಮಪುಷ್ಪದ ಮೊಗ್ಗುಗಳು ಕೀರ್ತಿಮುಖದ ಬಾಯಿಂದ ಹೊರಟಿರುವಂತೆ ಬಿಡಿಸಲಾಗಿರುವ ಬಳ್ಳಿ ಸುರುಳಿಗಳಿವೆ.

**ದಕ್ಷಿಣದ ಭುವನೇಶ್ವರಿ:**-ಇದನ್ನು ಆಯತಾಕಾರವಾಗಿ ರಚಿಸಲಾಗಿದೆ. ಇದರಲ್ಲಿ ಮೂರು ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಪಾರ್ಶ್ವಗಳಲ್ಲಿ ಪದ್ಮ ಪುಷ್ಪದ ಮೊಗ್ಗುಗಳು ಕೀರ್ತಿಮುಖ ಬಳ್ಳಿ ಸುರಳಿಗಳನ್ನು ಬಿಡಿಸಲಾಗಿದೆ.

**ನೈರುತ್ಯದ ಭುವನೇಶ್ವರಿ:**-ಇದನ್ನು ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಇದರ ದಳಗಳು ದೀರ್ಘವಾಗಿದ್ದು ಮೊನಚಾಗಿವೆ. ಮೇಲೆ ಪದ್ಮಪುಷ್ಪದ ಮೊಗ್ಗು ಬಿಡಿಸಲಾಗಿದೆ. ಪಾರ್ಶ್ವ ಪಟ್ಟಿಕೆಗಳಲ್ಲಿ ಕೀರ್ತಿಮುಖಗಳ ಬಳ್ಳಿಸುರಳಿ ಪದ್ಮಪುಷ್ಪದ ಮೊಗ್ಗುಗಳನ್ನು ಬಿಡಿಸಿ ಸುಂದರವಾಗಿ ಅಲಂಕರಿಸಲಾಗಿದೆ. ಈ ನವರಂಗಕ್ಕೆ ಮೂರು ಮುಖಮಂಟಪಗಳು ಮತ್ತು ಮೂರು ದ್ವಾರಗಳು ಕಂಡುಬರುತ್ತವೆ.

**ಉತ್ತರದ ಮುಖಮಂಟಪ:**-ಇದರಲ್ಲಿ ನಾಲ್ಕು ತೆಳುವಾದ ಕಂಬಗಳು ಇವೆ. ಎರಡು ಕಂಬಗಳು ಚೌಕಾಕಾರದ ಕಂಬಗಳು ಉಳಿದೆರಡು ಕಂಬಗಳು ನಕ್ಷತ್ರಾಕಾರವಾಗಿ ಇವೆ. ನಕ್ಷತ್ರಾಕಾರದ ಕಂಬಗಳು ಹೊಯ್ಸಳ ಶೈಲಿಯಲ್ಲಿದ್ದು ಉಪಪೀಠ, ಗಂಟೆ, ಘಟಾ, ಗಾಲಿ, ಪುಷ್ಪ ಬೋದಿಗೆ, ಫಲಗೈ, ಕಪೋತಗಳನ್ನು ನಕ್ಷತ್ರಾಕಾರವಾಗಿರುವಂತೆ ಗಾಡಿ ಕೊರೆದು ಬಿಡಿಸಲಾಗಿದೆ.**(ಚಿ.ಸಂ.೮೦)** ಉಳಿದೆರಡು ಕಂಬಗಳು 32 ಮೂಲೆಗಳಿಂದ ಕೂಡಿದ್ದು ಹೊಯ್ಸಳ ಶೈಲಿಯಲ್ಲಿಯಿದೆ. ಈ ಮುಖಮಂಟಪದ ಮೇಲ್ಛಾವಣಿಯನ್ನು ಆಯತಾಕಾರವಾಗಿ ರಚಿಸಿ ಇದರ ಮಧ್ಯದಲ್ಲಿ ಮೂರು ಚೌಕದ ಒಳಗೆ ಬಿಡಿಸಲಾಗಿರುವ ವೃತ್ತಕಾರದ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಇದರಲ್ಲಿ ಒಂದು ತಲೆ ಸಿಂಹಗಳನ್ನು ಬಿಡಿಸಲಾಗಿದೆ.**(ಚಿ.ಸಂ.೮೨)**

**ದಕ್ಷಿಣದ ಮುಖಮಂಟಪ:**- ಇದರಲ್ಲಿ ನಕ್ಷತ್ರಾಕಾರವಾಗಿ ರಚಿಸಿ ನಿಲ್ಲಿಸಲಾಗಿರುವ ೮ ಕಂಬಗಳಿವೆ. ಇವುಗಳಲ್ಲಿ ನಾಲ್ಕು 16 ಮುಖ ಹೊಂದಿದ್ದರೆ, ಉಳಿದ ನಾಲ್ಕು ಕಂಬಗಳು 32 ಮೂಲೆಗಳನ್ನು ಹೊಂದಿವೆ. ಮೇಲ್ಛಾವಣಿಯಲ್ಲಿ ಮೂರು ಚೌಕದ ಒಳಗೆ ವೃತ್ತಾಕಾರವಾಗಿ ಬಿಡಿಸಿರುವ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಒಳಗೆ ಮಣಿಹಾರಗಳು ಬಳ್ಳಿ ಸುರುಳಿಗಳನ್ನು ಬಿಡಿಸಲಾಗಿದೆ.

**ಪೂರ್ವದ ಮುಖಮಂಟಪ:**- ಇದರಲ್ಲಿ 6 ಕಂಬಗಳು ಕಂಡು ಬರುತ್ತವೆ. ಇವುಗಳನ್ನು ನಕ್ಷತ್ರಾಕಾರವಾಗಿ, ಅಷ್ಟಮುಖವಾಗಿ 16 ಮುಖಗಳಾಗಿ ರಚಿಸಿ ನಿಲ್ಲಿಸಲಾಗಿದೆ. ಮೇಲ್ಛಾವಣಿಯಲ್ಲಿ ಚೌಕ, ಅಷ್ಟವಾಗಿ ರಚಿಸಲಾಗಿದೆ. ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಒಳಭಾಗದ ಇಕ್ಕೆಲಗಳಲ್ಲಿ ಕೀರ್ತಿಮುಖದ ಬಾಯಿಂದ ಹೊರಟಿರುವಂತೆ ಬಿಡಿಸಲಾಗಿರುವ ಬಳ್ಳಿ ಸುರಳಿಗಳಿವೆ. ಪಟ್ಟಿಕೆಯ ಅಂಚಿನ ಭಾಗದಲ್ಲಿ ಒಂದು ತಲೆ ಎರಡು ದೇಹವಿರುವ ಆನೆ ಹಾಗೂ ಒಂದು ತಲೆ ಎರಡು ದೇಹವಿರುವ ಸಿಂಹಗಳನ್ನು ಬಿಡಿಸಲಾಗಿದೆ.

ನವರಂಗದ ಮೂರು ದಿಕ್ಕುಗಳಲ್ಲಿ ಜಗತಿಯನ್ನು ಮಾಡಲಾಗಿದೆ. ಈ ಜಗತಿಗಳ ಮೇಲೆ ನಕ್ಷತ್ರಾಕಾರವಾಗಿರುವ ಕಂಬಗಳನ್ನು ನಿಲ್ಲಿಸಲಾಗಿದೆ. ನವರಂಗದ ಮುಖ್ಯದ್ವಾರವು ಸರಳವಾಗಿದ್ದು ಪಟ್ಟಿಕೆಗಳಲ್ಲಿ ಯಾವುದೇ ರೀತಿ ಅಲಂಕರಣೆ ಕಾಣಬರುವುದಿಲ್ಲ. ಮುಖಮಂಟಪದ ಮುಂದೆ ಸೋಪಾನಗಳನ್ನು ಮಾಡಲಾಗಿದೆ.

**ಜಗತಿ**:-ಈ ದೇವಾಲಯವನ್ನು ನಾಲ್ಕು ಅಡಿಗಳ ಎತ್ತರವಿರುವ ನಕ್ಷತ್ರಾಕಾರದ ಜಗತಿಯನ್ನು ದೇವಾಲಯದ ಸುತ್ತಲೂ ನಿರ್ಮಿಸಿ, ಇದರ ಮಧ್ಯದಲ್ಲಿ ದೇವಾಲಯ ನಿರ್ಮಾಣ ಮಾಡಲಾಗಿದೆ. ಈ ಜಗತಿಯ ಉತ್ತರ, ದಕ್ಷಿಣ, ಪೂರ್ವ ಭಾಗದಲ್ಲಿ ಮೇಲಕ್ಕೆ ಏರಿ ಬರಲು ಸೋಪಾನಗಳನ್ನು ಮಾಡಲಾಗಿದೆ. ಸೋಪಾನಗಳ ಇಕ್ಕೆಲಗಳಲ್ಲಿರುವ ಕಲ್ಲಿನಲ್ಲಿ ಸಿಂಹದ ದೇಹ ವ್ಯಾಳ ಮುಖವನ್ನು ಮಾಡಿ ಅವುಗಳ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ದೃಢಬಳ್ಳಿ ಹಿಮ್ಮುಖವಾಗಿರುವ ಕಮಲದ ಮೊಗ್ಗನ್ನು ಬಿಡಿಸಲಾಗಿದೆ. ಈ ಜಗತಿಯಲ್ಲಿ ಆರು ಪಟ್ಟಿಕೆಗಳಿದ್ದು, ಅವುಗಳನ್ನು ಹಿನ್ಸರಿತ ಮುನ್ಸರಿತದಂತೆ ಕ್ರಮಬದ್ಧವಾಗಿ ಜೋಡಿಸಿ ಭದ್ರವಾಗಿ ನಿರ್ಮಿಸಲಾಗಿದೆ.

**ಅಧಿಷ್ಠಾನ;**-ಅಧಿಷ್ಠಾನದಲ್ಲಿ ಐದು ಪಟ್ಟಿಕೆಗಳಿವೆ. ಉಪಾನ, ಜಗತಿ, ತ್ರಿಪಟ್ಟಕುಮುದ, ಕಪೋತ, ಹಾರಗಳಿವೆ. ಹಾರದ ಹೊರ ಅಂಚಿನಲ್ಲಿ ದಂತದ ರೀತಿ ಕೆತ್ತನೆ ಮಾಡಲಾಗಿದೆ. ಈ ಪಟ್ಟಿಕೆಗಳಲ್ಲಿ ಯಾವುದೇ ಮಾದರಿಯ ಅಲಂಕರಣದ ಸೂಕ್ಷ್ಮ ಕೆತ್ತನೆ ಕಾಣಬರುವುದಿಲ್ಲ.

**ಭಿತ್ತಿ**:-ಭಿತ್ತಿಯನ್ನು ದೇವಾಲಯದ ಸುತ್ತಲೂ ಹಿನ್ಸರಿತ ಮತ್ತು ಮುನ್ಸರಿತವಾಗಿ ನಿರ್ಮಿಸಲಾಗಿದೆ. ಉತ್ತರ, ದಕ್ಷಿಣ ಮತ್ತು ಪಶ್ಚಿಮ ಭಾಗದಲ್ಲಿ ಗರ್ಭಗೃಹಕ್ಕೆ ಹೊಂದಿಕೊಂಡಂತೆ ಮೂರು ಕೋಷ್ಠಗಳಿವೆ. ಇವುಗಳಲ್ಲಿ ಯಾವುದೇ ರೀತಿಯ ದೇವತಾ ಮೂರ್ತಿಗಳು ಕಾಣಬರುವುದಿಲ್ಲ. ದೇವಾಲಯದ ಸುತ್ತಲೂ ಏಕಕಂಬ, ಶಿಖರ ತೆಳುವಾದ ಅರೆಗಂಬಗಳು ಮಧ್ಯದಲ್ಲಿ ದ್ವಿಕಂಬ ಶಿಖರಗಳನ್ನು ಮಾಡಿ ಭಿತ್ತಿಯನ್ನು ಅಲಂಕರಿಸಲಾಗಿದೆ. ನವರಂಗದ ಮೂರು ದಿಕ್ಕಿನ ಭಿತ್ತಿಯಲ್ಲಿ ಜಾಲಾಂಧ್ರಗಳನ್ನು ಮಾಡಲಾಗಿದೆ.

**ಕಪೋತ**:- ಭಿತ್ತಿಯ ಮೇಲೆ ಇರುವ ಕಪೋತವು ಎರಡು ಬಾಗು ಬಾಗಿದ್ದು ಗೋಡೆಯಿಂದ 2 ಅಡಿಗಳಷ್ಟು ಮುಂಚಾಚಿದೆ. ಈ ಕಪೋತಗಳ ಅಂಚಿನಲ್ಲಿ ದಂತದ ರೀತಿ ಕೆತ್ತನೆ ಮಾಡಲಾಗಿದೆ. ಕಪೋತದ ಮೇಲೆ ಇದ್ದ ಮೂಲ ಹಾರ ಪ್ರಕೃತಿ ವಿಕೋಪಕ್ಕೆ ಬಲಿಯಾಗಿ ಸಂಪೂರ್ಣವಾಗಿ ಹಾಳಾಗಿದ್ದರಿಂದ ಇತ್ತೀಚೆಗೆ ಪುರಾತತ್ವ ಇಲಾಖೆಯವರು ಗಾರೆ ಇಟ್ಟಿಗೆಯಿಂದ ಕೈಪಿಡಿ ಗೋಡೆ ಕಟ್ಟಿದ್ದಾರೆ. ಗರ್ಭಗೃಹದ ಮೇಲೆ ನಿರ್ಮಿಸಲಾಗಿದ್ದ ಮೂಲ ಗರ್ಭಗೃಹವು ಶಿಥಿಲವಾಗಿದ್ದರಿಂದ ಅದನ್ನು ತೆಗೆದು ಈಗ ಇಟ್ಟಿಗೆ ಗಾರೆಯಲ್ಲಿ ದ್ರಾವಿಡ

ಮಾದರಿಯ ಶಿಖರವನ್ನು ಕಟ್ಟಿ ಬಣ್ಣ ಬಳಿಯಲಾಗಿದೆ. ಸ್ತೂಪಿಯ ನಾಲ್ಕು ದಿಕ್ಕುಗಳಲ್ಲಿ ವಿಷ್ಣುವಿನ ಶಿಲ್ಪ ಹಾಗೂ ಕೀರ್ತಿಮುಖಗಳನ್ನು ಬಿಡಿಸಲಾಗಿದೆ. ಸ್ತೂಪಿಯ ಮೇಲೆ ಪಂಚಲೋಹದ ಕಳಸವನ್ನು ಇರಿಸಲಾಗಿದೆ. ಈ ದೇವಾಲಯದ ಅಧಿಷ್ಠಾನದ ಎರಡನೇ ಪಟ್ಟಿಕೆಯಲ್ಲಿ ಸುತ್ತಲೂ ಕನ್ನಡ ತಮಿಳು ಭಾಷೆಯ ಬರಹವುಳ್ಳ ಶಾಸನಗಳಿವೆ.

**ದ್ವಾರಮಂಟಪ**:-ಈ ದೇವಾಲಯದ ಸುತ್ತಲೂ ಮೊದಲು ಪ್ರಾಕಾರವಿದ್ದಂತೆ ಕಂಡುಬರುತ್ತದೆ. ಆದರೆ ಈಗ ಆ ಪ್ರಾಕಾರ ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಹಾಳಾಗಿರುವಂತೆ ಕಾಣುತ್ತದೆ. ಆದರೆ ಈ ಪ್ರಾಕಾರದ ಪೂರ್ವಭಾಗದಲ್ಲಿ ನಿರ್ಮಿಸಲಾಗಿದ್ದಂತಹ ಮಹಾದ್ವಾರ ಈಗ ಉಳಿದುಬಂದಿದೆ. ಈ ಪ್ರಾಕಾರವನ್ನು ನಕ್ಷತ್ರಾಕಾರವಾಗಿರುವ ಸುಮಾರು ೩ ಅಡಿಗಳ ಎತ್ತರವಿರುವ ಜಗತಿಯ ಮೇಲೆ ನಿರ್ಮಿಸಲಾಗಿದೆ. ಜಗತಿಯ ಮಧ್ಯದಲ್ಲಿ ನಿರ್ಮಿಸಲಾಗಿರುವ ಈ ಮಹಾದ್ವಾರದ ಕೆಳಭಾಗದಲ್ಲಿರುವ ಅಧಿಷ್ಠಾನವು ೮ ಅಡಿಗಳ ಎತ್ತರವಾಗಿದೆ. ಇದರಲ್ಲಿರುವ ಪಟ್ಟಿಕೆಗಳನ್ನು ಹಿನ್ಸರಿತ ಮುನ್ಸರಿತಗಳಂತೆ ಕ್ರಮಬದ್ಧವಾಗಿ ಜೋಡಣೆ ಮಾಡಲಾಗಿದೆ.**(ಚಿ.ಸಂ.೮೪)**

ಅಧಿಷ್ಠಾನದ ಮೇಲೆ ಭಿತ್ತಿಯನ್ನು ನಿರ್ಮಿಸಲಾಗಿದೆ.**(ಚಿ.ಸಂ.೮೩)** ಇದರಲ್ಲಿ ಏಕಕಂಬ ಶಿಖರಗಳು ಹಾಗೂ ದ್ವಿಕಂಬ ಶಿಖರಗಳನ್ನು ಮಾಡಲಾಗಿದೆ. ಈ ಶಿಖರಗಳ ಮೇಲೆ ಸ್ತೂಪಿ, ಸ್ತೂಪಿಯ ಮೇಲೆ ಕಳಸಗಳಿವೆ. ಏಕಕಂಬ ಶಿಖರಗಳ ಮೇಲೆ ಕೀರ್ತಿಮುಖಗಳನ್ನು ಬಿಡಿಸಿ ಅದರ ಬಾಯಿಂದ ಕೆಳಮುಖವಾಗಿ ಬಿಡಿಸಲಾಗಿರುವ ಕೀರ್ತಿಮುಖಗಳಿವೆ. ಭಿತ್ತಿಯ ಮೇಲೆ ನಿರ್ಮಿಸಲಾಗಿರುವ ಕಪೋತವು ಇಂಗ್ಲೀಷಿನ ಎಸ್ (S) ಆಕಾರವಾಗಿ ರಚಿಸಲಾಗಿದೆ. ಇದು ಗೋಡೆಯಿಂದ ಸುಮಾರು 2 ಅಡಿ ಮುಂದಕ್ಕೆ ಚಾಚಿದೆ. ಇದರ ಹೊರ ಅಂಚಿನಲ್ಲಿ ಕೂಡುಗಳು ಹಾಗೂ ಕೀರ್ತಿಮುಖಗಳನ್ನು ಬಿಡಿಸಲಾಗಿದೆ. ತದನಂತರ ಹಂಸಗಳ ಸಾಲು, ಸಿಂಹಮುಖಗಳ ಸಾಲುಗಳನ್ನು ಬಿಡಿಸಲಾಗಿದೆ. ಮೂಲೆಗಳಲ್ಲಿ ಏಕಮುಖ ಎರಡು ದೇಹವುಳ್ಳ ಸಿಂಹಗಳ ರಚನೆ ಇದೆ. ಇದರ ಮೇಲೆ ಮತ್ತೊಂದು ದಿಂಡನ್ನು ಮಾಡಲಾಗಿದೆ. ಈ ಮಹಾದ್ವಾರದ ಮೇಲೆ ನಿರ್ಮಿಸಲಾಗಿದ್ದ ಗೋಪುರವು ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಸಂಪೂರ್ಣವಾಗಿ ಬಿದ್ದು ಹೋಗಿದೆ. ಮಹಾದ್ವಾರದ ಒಳಭಾಗದಲ್ಲಿ ಹೊಯ್ಸಳ ಶೈಲಿಯಲ್ಲಿ ರಚಿಸಲಾಗಿರುವ ಜಗತಿ ಇದೆ.

ಜಗತಿಯ ಮೇಲೆ ಹೊಯ್ಸಳ ಶೈಲಿಯಲ್ಲಿರುವ ನಾಲ್ಕು ಕಂಬಗಳಿವೆ. ಮುಂಭಾಗದಲ್ಲಿ ವಿಜಯನಗರ ಶೈಲಿಯ ಕಂಬಗಳನ್ನು ಗೋಡೆಗೆ (ಅರೆಗಂಬ) ಸೇರಿಸಲಾಗಿದೆ. ಒಳಭಾಗದಲ್ಲಿ ವಿಜಯನಗರ ಶೈಲಿಯಲ್ಲಿರುವ 2 ಅರೆಗಂಬಗಳಿವೆ. ಮೇಲ್ಛಾವಣಿಗೆ ಕಲ್ಲಿನ ಚಪ್ಪಡಿಯನ್ನು

ಹಾಕಿ ಮುಚ್ಚಲಾಗಿದೆ. ಮಂಟಪದ ದಕ್ಷಿಣ ಭಾಗದ ಒಳಗೆ ಸುಂದರವಾದ ದೇವತೆಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಿಯು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಪದ್ಮಪುಷ್ಪ ಅಭಯ ಹಸ್ತವನ್ನು ಕಾಣಬಹುದು. ಮತ್ತೊಂದು ಕೈಯಲ್ಲಿ ವರದಹಸ್ತವಿದೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖ ಬಿಡಿಸಲಾಗಿದೆ. ಈ ದೇವಿಯ ಎಡಭಾಗದಲ್ಲಿ ಸುಮಾರು ಐದು ಅಡಿಗಳ ಎತ್ತರವಿರುವ ವಿಜಯ ನಾರಾಯಣ ಮೂರ್ತಿಯನ್ನು ಇರಿಸಲಾಗಿದೆ. ಈ ದೇವನು ಸಮಭಂಗಿಯಲ್ಲಿ ನಿಂತಿದ್ದು ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಅಭಯಹಸ್ತ, ಕಟಿಹಸ್ತವನ್ನು ಹೊಂದಿದ್ದಾನೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

ವಿಜಯನಾರಾಯಣನ ಎಡಭಾಗದಲ್ಲಿ ನರಸಿಂಹನ ಮೂರ್ತಿಯನ್ನು ಇರಿಸಲಾಗಿದೆ. ಎರಡುವರೆ ಅಡಿ ಎತ್ತರವಿರುವ ಈ ದೇವನು ಉತ್ಕಟಾಸನದಲ್ಲಿ ಕುಳಿತಿದ್ದಾನೆ. ಚತುರ್ಭುಜ ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಅಭಯಹಸ್ತ, ಧೋಲಹಸ್ತ ಹೊಂದಿದ್ದಾನೆ. ಈ ಗೋಪುರ ಮಂಟಪದ ಉತ್ತರದ ಭಾಗದಲ್ಲಿರುವ ಕೋಣೆಯಲ್ಲಿ ರಾಮಾನುಜಾಚಾರ್ಯ ಮತ್ತು ನಮ್ಮಾಳ್ವರುಗಳ ಶಿಲ್ಪಗಳನ್ನು ಇಡಲಾಗಿದೆ.

ಮಂಟಪದ ಬಾಗಿಲ ಪಟ್ಟಿಕೆಗಳಲ್ಲಿ ಕಮಲದ ದಳಗಳ ಅಲಂಕರಣ ಮತ್ತು ಕಮಲದ ಪುಷ್ಪಗಳ ಅಲಂಕರಣವಿದೆ. ದ್ವಾರದ ಇಕ್ಕೆಲಗಳ ಕೆಳಭಾಗದಲ್ಲಿ ಕುಳಿತಿರುವ ಸಿಂಹಗಳ ಮುಖಗಳಿವೆ. ಈ ದ್ವಾರದ ಮುಂದೆ ಸೋಪಾನಗಳನ್ನು ಮಾಡಲಾಗಿದೆ. ಸೋಪಾನದ ಇಕ್ಕೆಲಗಳಲ್ಲಿರುವ ಕಲ್ಲಿನಲ್ಲಿ ಎಡಭಾಗದಲ್ಲಿ ನಿಂತಿರುವ ಗಜವಿದ್ದರೆ ಬಲಭಾಗದಲ್ಲಿ ಕುಳಿತಿರುವ ಗಜವನ್ನು ಬಿಡಿಸಲಾಗಿದೆ.[104]

**ಚೆನ್ನಕೇಶವ ದೇವಾಲಯ–ಧರ್ಮಾಪುರ**

ಧರ್ಮಾಪುರ ಗ್ರಾಮವು ಹುಣಸೂರು ತಾಲೂಕಿಗೆ ಸೇರಿರುವ ಒಂದು ಗ್ರಾಮ. ಇದು ಹುಣಸೂರಿನಿಂದ ನೈರುತ್ಯಕ್ಕೆ ಸುಮಾರು 12 ಕಿ.ಮೀ ದೂರದಲ್ಲಿದೆ. ಈ ಗ್ರಾಮಕ್ಕೆ ಮೊದಲು 'ಮಣಿಪುರ' ಎಂಬ ಹೆಸರಿತ್ತು. ಒಂದು ಐತಿಹ್ಯದ ಪ್ರಕಾರ ಇಲ್ಲಿ ಮಯೂರಧ್ವಜನೆಂಬ ಅರಸನು ಆಳುತ್ತಿದ್ದನೆಂದು ಈ ಮಯೂರಧ್ವಜನ ಮಗನಾದ ತಾಮ್ರಧ್ವಜನು ಪಾಂಡವರ ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿಹಾಕಿದನಲ್ಲದೆ, ಅರ್ಜುನನನ್ನು ಸೋಲಿಸಿದನೆಂದು ಆಗ ಕೃಷ್ಣಾಅರ್ಜುನರು ಬ್ರಾಹ್ಮಣರ ವೇಷದಲ್ಲಿ ಬಂದು, ಇದೇ ವೇಳೆಯಲ್ಲಿ ಸಿಂಹವೊಂದು

ತಮ್ಮ ಒಬ್ಬನೇ ಮಗನನ್ನು ಹಿಡಿದುಕೊಂಡಿತ್ತೆಂದು ಅವನನ್ನು ಅದು ಬಿಟ್ಟುಕೊಡಬೇಕಾದರೆ ಮಯೂರಧ್ವಜನ ಅರ್ಧದೇಹದ ಮಾಂಸಬೇಕೆಂದು ಕೇಳಿದಾಗ ಮಯೂರಧ್ವಜನು ತನ್ನ ದೇಹವನ್ನು ಕತ್ತರಿಸಿ ಕೊಟ್ಟನೆಂಬ ಪ್ರತೀತಿ ಇದೆ. ಆಗ ಕೃಷ್ಣನು ಅವನಿಗೆ ದರ್ಶನವಿತ್ತು ಅವನಿಂದ ಕುದುರೆಯನ್ನು ಬಿಡಿಸಿಕೊಂಡನಂತೆ, ಹಾಗೆ ಕೃಷ್ಣ ಧರ್ಮಾತ್ಮನಾದ ಮಯೂರ ಧ್ವಜನನ್ನು ಪರೀಕ್ಷಿಸಿದ ಸ್ಥಳವೇ ಈ 'ಮಣಪುರಿ' ಆಗಿದೆ. ಈ ವಿಷಯವನ್ನು ತಿಳಿದ ಧರ್ಮರಾಯನು ಸ್ವರ್ಗಾರೋಹಣಕ್ಕೆ ಮೊದಲು ಇಂತಹ ಮಹಾಭಕ್ತನ ದರ್ಶನ ಮಾಡಬೇಕೆಂದು ಬರುತ್ತಿದ್ದನು. ದಾರಿಯಲ್ಲಿ ಸಿಕ್ಕಿದ ಹೊನ್ನನ್ನು ಸಮನಾಗಿ ಹಂಚಿಕೊಂಡಿದ್ದನ್ನು ನೋಡಿದ ಧರ್ಮರಾಯನು ಈ ನೆಲ ಎಂಥ ಸತ್ಯಧರ್ಮಗಳ ನೆಲೆವೀಡು ಎಂದು ಸ್ತುತಿಸಿದ ಹೀಗೆ ಧರ್ಮರಾಯ ಮಣಿಪುರಿಗೆ ಬಂದುದ್ದರಿಂದ ಮಯೂರಧ್ವಜ ತನ್ನ ಊರಿಗೆ "ಧರ್ಮಪುರಿ"[105] ಎಂದು ನಾಮಕರಣ ಮಾಡಿದನಂತೆ. ಇದೇ ದೇವಾಲಯದ ಮುಂದಿರುವ ಗಾಣದ ಕಲ್ಲಿನ ಮೇಲೆ ಶಾಸನ ಕ್ರಿ.ಶ.1115ರಲ್ಲಿ ವಿಷ್ಣುವರ್ಧನನ ಕಾಲದಲ್ಲಿ ಬರೆಸಲಾದ ಈ ಶಾಸನವು ಕೇತಗೌಡನು ದತ್ತಿ ಬಿಟ್ಟದನ್ನು ತಿಳಿಸುತ್ತದೆ.[106]

ಈ ಗ್ರಾಮದಲ್ಲಿರುವ ಚೆನ್ನಕೇಶವ ದೇವಾಲಯವನ್ನು ಪೂರ್ವಾಭಿಮುಖವಾಗಿ ಕಣಶಿಲೆಯನ್ನು ಮತ್ತು ಬಳಪದ ಕಲ್ಲನ್ನು ಉಪಯೋಗಿಸಿ ನಿರ್ಮಿಸಲಾಗಿದೆ.**(ಚಿ.ಸಂ.85)** ಇದೊಂದು ಏಕಕೂಟ ದೇವಾಲಯವಾಗಿದ್ದು, ಇದರಲ್ಲಿ ಒಂದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ. ಈ ದೇವಾಲಯವನ್ನು ಕ್ರಿ.ಶ.1162ರಲ್ಲಿ ಹೊಯ್ಸಳ ದೊರೆ ಒಂದನೇ ನರಸಿಂಹನ ಕಾಲದಲ್ಲಿ ಪ್ರಾಂತ್ಯಾಧಿಕಾರಿಯಾಗಿದ್ದ ಬಿಟ್ಟಿಮಯ್ಯನು ಈ ದೇವಾಲಯವನ್ನು ಕಟ್ಟಿಸಿದನೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ.[107] ಇದೇ ದೇವಾಲಯದ ನವರಂಗದ ಎಡಭಾಗದಲ್ಲಿ ನಿಲ್ಲಿಸಲಾಗಿರುವ ಶಾಸನವು ತಿಳಿಸುವ ಪ್ರಕಾರ ಒಂದನೇ ನರಸಿಂಹನು ಕ್ರಿ.ಶ.1162ರಲ್ಲಿ ಬರೆಸಲಾಗಿರುವಂತದ್ದು, ಇದರಲ್ಲಿ ತೊಗರವಾಡಿ ಹಾಗೂ ಭುವನಹಳ್ಳಿಗಳನ್ನು ಅಗ್ರಹಾರವನ್ನಾಗಿ ಮಾಡಿ ಧರ್ಮಾಪುರ ಎಂಬ ಅಭಿದಾನದೊಂದಿಗೆ ಅಲ್ಲಿಯ ಕೇಶವದೇವರಿಗೆ ದತ್ತಿ ಬಿಟ್ಟನೆಂದು ಹೇಳಲಾಗಿದೆ. ಈ ದೇವಾಲಯವು ಧರ್ಮಾಪುರ ಗ್ರಾಮದ ಮಧ್ಯದಲ್ಲಿರುವ ದಿಬ್ಬದ ಮೇಲೆ ನಿರ್ಮಿಸಲಾಗಿದೆ.

**ಗರ್ಭಗೃಹ:-** ಗರ್ಭಗೃಹವು ಸುಮಾರು 8X8 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ನಕ್ಷತ್ರಾಕಾರದ ಗರುಡ ಪೀಠದ ಮೇಲೆ ಐದು ಅಡಿಗಳ ಎತ್ತರವಿರುವ ಚೆನ್ನಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು

ಹಿಡಿದುಕೊಂಡಿದ್ದಾನೆ. ಈ ದೇವನ ಮೈ ಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.[108] ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ, ವಿಷ್ಣುವಿನ ದಶಾವತಾರ ಮೂರ್ತಿಗಳು ಹಾಗೂ ಕೀರ್ತಿಮುಖವಿದೆ. ಈ ದೇವನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರು ಫಲ ಮತ್ತು ಪದ್ಮ ಹಿಡಿದು ನಿಂತಿದ್ದಾರೆ. ಇದರ ಪಕ್ಕದಲ್ಲಿ ಉತ್ಸವ ಮೂರ್ತಿಯನ್ನು ಇಡಲಾಗಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಇದರಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ.

ಗರ್ಭಗೃಹದ ದ್ವಾರದಲ್ಲಿ ನಾಲ್ಕು ಪಟ್ಟಿಕೆಗಳಿದ್ದು, ಒಂದು ಪಟ್ಟಿಕೆಯಲ್ಲಿ ಶಂಖದ ಅಲಂಕರಣೆ, ಎರಡನೇ ಪಟ್ಟಿಕೆಯಲ್ಲಿ ಬಳ್ಳಿಸುರುಳಿ, ನಕ್ಷತ್ರಾಕಾರದ ಅರೆಗಂಬಗಳು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯನ್ನು ಬಿಡಿಸಲಾಗಿದೆ.**(ಚಿ.ಸಂ.86)** ಈ ಬಾಗಿಲ ಇಕ್ಕೆಲಗಳಲ್ಲಿ ಜಯ ವಿಜಯ ದ್ವಾರಪಾಲಕರು ನಿಂತಿದ್ದಾರೆ. ಬಾಗಿಲವಾಡದಲ್ಲಿ ಹೊಯ್ಸಳ ಶೈಲಿಯ ಸಣ್ಣ ಸಣ್ಣ ಶಿಖರಗಳ ಅಲಂಕರಣ, ಪದ್ಮ ಪುಷ್ಪಗಳ ಮತ್ತು ಮೊಗ್ಗಿನ ಅಲಂಕರಣದ ಕೆತ್ತನೆ ಇದೆ. ಈ ದ್ವಾರದ ಹೊಸ್ತಿಲಲ್ಲಿ ಕೂರ್ಮಶಿಲ್ಪವನ್ನು ಬಿಡಿಸಲಾಗಿದ್ದು,[109] ಇದು ಈ ದೇವಾಲಯದ ಒಂದು ವಿಶೇಷತೆ.**(ಚಿ.ಸಂ.88)**

**ಸುಕನಾಸಿ:-** ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಕಾರವಾಗಿದೆ. ಇದರ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಸರಳವಾಗಿರುವ ಈ ಭುವನೇಶ್ವರಿಯ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಇದರಲ್ಲಿ ಗರುಡನ ಕಂಚಿನ ಪ್ರತಿಮೆಯನ್ನು ಇಡಲಾಗಿದೆ. ಸುಕನಾಸಿಯ ದ್ವಾರವು ಗರ್ಭಗೃಹದ ದ್ವಾರದ ಮಾದರಿಯಲ್ಲಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವನ್ನು ಬಿಡಿಸಲಾಗಿದೆ. ದ್ವಾರದ ಇಕ್ಕೆಲಗಳಲ್ಲಿ ದ್ವಾರಪಾಲಕರ ಮೂರ್ತಿಗಳಿದ್ದು, ಇವರು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಹಸ್ತವನ್ನು ಹೊಂದಿದ್ದಾರೆ. ಇವರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಬಾಗಿಲ ಮೇಲ್ಭಾಗದಲ್ಲಿ ಮಕರ ತೋರಣವನ್ನು ಬಿಡಿಸಲಾಗಿದೆ.**(ಚಿ.ಸಂ.87)**

**ನವರಂಗ:-** ನವರಂಗವು 25x25 ಅಡಿಗಳ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಕಂಬಗಳಿವೆ. ಇವುಗಳನ್ನು ಉಪಪೀಠ, ಉಪಪೀಠದ ಮೇಲೆ ಚೌಕಕಾರದ ಮತ್ತೊಂದು ಪೀಠ, ಬಳೆಗಳ ರೀತಿಯ ಅಲಂಕರಣ, ಗಂಟೆ, ಘಟಾ, ಗಾಲಿ, ಪುಷ್ಪಬೋದಿಗೆ, ಫಲಗೈ, ಅದರ ಮೇಲೆ ಉರುಳೆಯಾಕಾರದ ಕಪೋತಗಳಿವೆ.**(ಚಿ.ಸಂ.89)** ನಾಲ್ಕು ಕಂಬಗಳ ಮಧ್ಯೆ ಚೌಕಾಕಾರದ ರಂಗವೇದಿಕೆ ಇದೆ. ಇದರ

ಮಧ್ಯದಲ್ಲಿ ನಕ್ಷತ್ರಾಕಾರವಾದ ಒಂದೇ ಒಂದು ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ನವರಂಗದ ಆಗ್ನೇಯ ಮೂಲೆಯಲ್ಲಿ ಸುಮಾರು ಎಂಟು ಅಡಿಗಳ ಎತ್ತರವಿರುವ ಹೊಯ್ಸಳ ಬರವಣಿಗೆಯುಳ್ಳ ಒಂದು ಶಾಸನವನ್ನು ನಿಲ್ಲಿಸಲಾಗಿದೆ. ಈ ಶಾಸನದ ಅಂತ್ಯದಲ್ಲಿ ಕಾಮಧೇನು(ಹಸು) ಬಲಭಾಗದಲ್ಲಿ ಗರುಡ ನಿಂತಿದ್ದಾನೆ. ಮೇಲ್ಭಾಗದಲ್ಲಿ ಆಂಜನೇಯನ ಶಿಲ್ಪವಿದೆ. ಇದು ಹೊಯ್ಸಳ ದೊರೆ ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಅಂದರೆ ಕ್ರಿ.ಶ.1162ರಲ್ಲಿ ಬರೆಯಿಸಲಾಗಿರುವ ಈ ಶಾಸನದಲ್ಲಿ ತೊಗರವಾಡಿ ಹಾಗೂ ಭುವನಹಳ್ಳಿಗಳನ್ನು ಅಗ್ರಹಾರವನ್ನಾಗಿ ಮಾಡಿ ಧರ್ಮಾಪುರ ಎಂಬ ಅಭಿದಾನದೊಂದಿಗೆ ಅಲ್ಲಿಯ ಕೇಶವ ದೇವರಿಗೆ ದಾನ ದತ್ತಿ ನೀಡಿದ ವಿಷಯವನ್ನು ತಿಳಿಸುತ್ತದೆ. **(ಚಿ.ಸಂ.೯೦)** ನವರಂಗದ ದ್ವಾರ ಪಟ್ಟಿಕೆಯಲ್ಲಿ ಬಳ್ಳಿ ಸುರುಳಿಗಳ ಕೆತ್ತನೆ ಮಾಡಿ ಅಲಂಕರಣ ಮಾಡಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯನ್ನು ಬಿಡಿಸಲಾಗಿದೆ. ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರು ಶಂಖ, ಚಕ್ರ, ಗಧಾ, ಅಭಯಹಸ್ತವನ್ನು ಹೊಂದಿದ್ದು, ಮೈ ಮೇಲೆ ಸುಂದರವಾಗಿ ಬಿಡಿಸಲಾಗಿರುವ ಬಳ್ಳಿಸುರಳಿಗಳ ಅಲಂಕರಣವಿದೆ. ಹಾಗೂ ಬಾಗಿಲುವಾಡದಲ್ಲಿ ಹೊಯ್ಸಳ ಲಾಂಛನವನ್ನು ಬಿಡಿಸಲಾಗಿದೆ.

**ಮುಖಮಂಟಪ:-** ನವರಂಗದ ಮುಂದೆ ಇರುವ ಮುಖಮಂಟಪದಲ್ಲಿ ಹೊಯ್ಸಳ ಶೈಲಿಯ ಎರಡು ಕಂಬಗಳಿವೆ. ಮುಖಮಂಟಪದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಮುಖಮಂಟಪದ ಮುಂದೆ ಸೋಪಾನಗಳನ್ನು ಮಾಡಲಾಗಿದ್ದು, ಇಕ್ಕೆಲಗಳಲ್ಲಿ ಇರುವ ಕಲ್ಲುಗಳನ್ನು ಆನೆಯ ತಲೆಯ ಮಾದರಿಯಲ್ಲಿ ರಚಿಸಲಾಗಿದೆ.

**ಅಧಿಷ್ಠಾನ:-** ಅಧಿಷ್ಠಾನವನ್ನು ವೃತ್ತಾಯಾತಾಕಾರವಾಗಿ ರಚಿಸಲಾಗಿದೆ. ಇದರಲ್ಲಿ ಉಪಾನ, ಜಗತಿ, ತ್ರಿಪಟ್ಟಕುಮುದ, ಕಪೋತಗಳು ಕಂಡುಬರುತ್ತವೆ. ಇವುಗಳನ್ನು ಒಳ ಮತ್ತು ಹೊರಸರಿದಂತೆ ಕ್ರಮಬದ್ಧವಾಗಿ ಜೋಡಿಸಿ ಭದ್ರಗೊಳಿಸಲಾಗಿದೆ. ಪ್ರತಿಯ ಭಾಗದಲ್ಲಿ ದಂತಪಂಕ್ತಿಗಳನ್ನು ರಚಿಸಲಾಗಿದೆ. ಇದು ಮುಳ್ಳೂರಿನ ಲಕ್ಷ್ಮೀಕಾಂತ ದೇವಾಲಯದ ಅಧಿಷ್ಠಾನದ ಮಾದರಿಯಲ್ಲಿದೆ.**(ಚಿ.ಸಂ.೯೧)**

**ಭಿತ್ತಿ:-** ಅಧಿಷ್ಠಾನದ ಮೇಲಿರುವ ಭಿತ್ತಿಯನ್ನು ಹಿನ್ಸರಿತ ಮತ್ತು ಮುನ್ಸರಿತದಂತೆ ನಿರ್ಮಿಸಲಾಗಿದೆ. ಭಿತ್ತಿಯ ಮಧ್ಯದಲ್ಲಿ ಎರಡು ಕಂಬಗಳ ಮೇಲೆ ಶಿಖರವಿರುವ ಕೋಷ್ಠಗಳಿವೆ. ಮಧ್ಯದಲ್ಲಿ ತೆಳುವಾದ ಅರೆಗಂಬಗಳನ್ನು ಜೋಡಿಸಿ ಅಲಂಕರಣ ಮಾಡಲಾಗಿದೆ. ಈ ಭಿತ್ತಿಯಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ರಚಿಸಿ ಸೇರಿಸಲಾಗಿದೆ. ಈ ಅಷ್ಟದಿಕ್ಪಾಲಕರೆಲ್ಲರೂ

ತಮ್ಮ ವಾಹನದ ಮೇಲೆ ಪತ್ನಿ ಸಮೇತರಾಗಿ ಕುಳಿತಿದ್ದಾರೆ ಮತ್ತು ಸಪ್ತಮಾತೃಕೆಯರ ಶಿಲ್ಪಗಳು ಹಾಗೂ ಗಣೇಶ, ಸುಬ್ರಹ್ಮಣ್ಯ, ವೀರಾಂಜನೇಯ ಶಿಲ್ಪಗಳನ್ನು ಬಿಡಿಸಲಾಗಿದೆ. ಪಶ್ಚಿಮ ಭಾಗದಲ್ಲಿ ಮಕರ ತೋರಣವಿದೆ. ಭಿತ್ತಿಯ ಮೇಲಿರುವ ಕಪೋತವು ಭಿತ್ತಿಯಿಂದ ಸ್ವಲ್ಪ ಮುಂದೆ ಇಳಿಜಾರಾಗಿರುವಂತೆ ರಚಿಸಲಾಗಿದೆ. ಕಪೋತದ ಮೇಲೆ ಇತ್ತೀಚೆಗೆ ನಿರ್ಮಿಸಲಾಗಿರುವ ಮೂರು ಅಡಿ ಎತ್ತರವಿರುವ ಕೈಪಿಡಿ ಗೋಡೆಯನ್ನು ಕಟ್ಟಲಾಗಿದೆ. ಗರ್ಭಗೃಹದ ಮೇಲೆ ನಿರ್ಮಿಸಲಾಗಿದ್ದ ಮೂಲ ಶಿಖರವು ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಸಂಪೂರ್ಣವಾಗಿ ಹಾಳಾಗಿದ್ದು, ಇತ್ತೀಚೆಗೆ ಅದನ್ನು ತೆಗೆದು ಹಾಕಲಾಗಿದೆ.**(ಚಿ.ಸಂ.92)**

**ಕೇಶವ ದೇವಾಲಯ–ಸೋಮನಾಥಪುರ**

ಸೋಮನಾಥಪುರವು ತಿರುಮಕೂಡಲು ನರಸೀಪುರ ತಾಲೂಕಿಗೆ ಸೇರಿರುವ ಒಂದು ಗ್ರಾಮ. ಇದು ಸೋಸಲೆ ಹೋಬಳಿಯಿಂದ 10ಕಿ.ಮೀ ದೂರದಲ್ಲಿ ಆಗ್ನೇಯಕ್ಕೆ ಇದೆ. ಮೈಸೂರಿನಿಂದ ಆಗ್ನೇಯಕ್ಕೆ 40ಕಿ.ಮೀ ದೂರದಲ್ಲಿದೆ. ಅಲ್ಲದೆ ಈ ಗ್ರಾಮವು ಪಶ್ಚಿಮದಲ್ಲಿ ಹರಿಯುವ ಕಾವೇರಿ ನದಿಯ ಎಡದಂಡೆಯ ಮೇಲಿದೆ. ಈ ಗ್ರಾಮವು 12ನೇ ಶತಮಾನದಲ್ಲಿ ಇದೊಂದು ಮಹಾಅಗ್ರಹಾರ, ವಿದ್ಯಾನಿಧಿಪ್ರಸನ್ನ ಸೋಮನಾಥಪುರ ಅಥವಾ ಚತುರ್ವೇದಿಮಂಗಲ ವಿದ್ಯಾನಿಧಿಪ್ರಸನ್ನ ಸೋಮನಾಥಪುರ ಎಂಬ ಹೆಸರಿತ್ತು.[110] ಈ ಗ್ರಾಮದಲ್ಲಿ ಒಟ್ಟು ಏಳು ಶಾಸನಗಳಿವೆ. ಹರಿಹರದಲ್ಲಿರುವ ಒಂದು ಶಾಸನವು ಹೆಬ್ಬಕವಾಡಿಯಲ್ಲಿರುವ ಮತ್ತೊಂದು ಶಾಸನವು ಈ ಅಗ್ರಹಾರದ ಬಗ್ಗೆ ಮತ್ತು ಇಲ್ಲಿರುವ ದೇವಾಲಯಗಳ ಬಗ್ಗೆ ಸಾಕಷ್ಟು ವಿವರಗಳನ್ನು ನೀಡುತ್ತವೆ. ಕಲೆ ಹಾಗೂ ವಿದ್ಯೆಗೆ ಈ ಅಗ್ರಹಾರ ಆಗರವಾಗಿತ್ತೆಂದು ಶಾಸನಗಳು ವರ್ಣಿಸುತ್ತವೆ.

ಹೊಯ್ಸಳ ಚಕ್ರವರ್ತಿ ಮುಮ್ಮಡಿ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಆತನ ಸಂದಿವಿಗ್ರಹಿಯೂ ಮಂತ್ರಿಯೂ, ದಂಡನಾಯಕನು ಆಗಿದ್ದ ಸೋಮನಾಥ ಈ ಅಗ್ರಹಾರವನ್ನು ಕ್ರಿ.ಶ.1258ರಲ್ಲಿ ನಿರ್ಮಿಸಿ ತನ್ನ ಹೆಸರಿನಿಂದ ಸೋಮನಾಥಪುರವೆಂದು ಕರೆದು ಇಲ್ಲಿ ಒಂದು ವಿಷ್ಣು ದೇವಾಲಯವನ್ನು (ಕೇಶವ) ಮತ್ತು ಒಂದು ಶಿವಾಲಯವನ್ನು (ಪಂಚಲಿಂಗ) ಕಟ್ಟಿಸಿದ.[111] ಈ ದೇವಾಲಯಗಳಲ್ಲದೆ ಕಾವೇರಿ ನದಿಯ ದಡಕ್ಕೆ ಹೊಂದಿಕೊಂಡಂತೆ ಲಕ್ಷ್ಮೀ ನರಸಿಂಹ, ಯೋಗಾನಾರಾಯಣ ಮತ್ತು ನರಸಿಂಹೇಶ್ವರ ದೇವಾಲಯಗಳನ್ನು ಪಂಚಲಿಂಗ ದೇವಾಲಯದ ಬಳಿ ಸೋವಲೇಶ್ವರ ಎಂಬ ಮತ್ತೊಂದು ಶಿವ ದೇವಾಲಯವನ್ನು ಈತ ಕಟ್ಟಿಸಿದುದಾಗಿ ತಿಳಿದುಬರುತ್ತದೆ.

ಈ ಸೋಮನಾಥಪುರದಲ್ಲಿರುವ ಕೇಶವ ದೇವಾಲಯವು ಸೋಮನಾಥಪುರದ ವಾಯುವ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿರುವಂತಹ ತ್ರಿಕೂಟ ದೇವಾಲಯವಾಗಿದೆ.**(ಚಿ.ಸಂ.93)** ಅಲ್ಲದೆ ಈ ದೇವಾಲಯವನ್ನು ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ಹೊಯ್ಸಳ ಶೈಲಿಯಲ್ಲಿ ನಿರ್ಮಿಸಲಾಗಿದೆ. ಇದರಲ್ಲಿ ಮೂರು ಗರ್ಭಗೃಹ, ಸುಕನಾಸಿಗಳು ಒಂದು ನವರಂಗ ಮುಖಮಂಟಪವನ್ನು ಹೊಂದಿದೆ. ಇದನ್ನು 218 ಅಡಿಗಳ ಉದ್ದ 117 ಅಡಿಗಳ ಅಗಲವಾದ ಚತುರಸ್ರಾಕಾರದ ಅಂಗಳದ ಮಧ್ಯದಲ್ಲಿ ನಿರ್ಮಿಸಲಾಗಿದೆ.[112] ಈ ಅಂಗಳದ ಒಳಭಾಗದಲ್ಲಿ ಪ್ರಾಕಾರದ ಗೋಡೆಗೆ ಸೇರಿದಂತೆ ಕೈ ಸಾಲೆಯ ಮುಂದೆ ಸುಮಾರು ಹೊಯ್ಸಳ ಶೈಲಿಯ 64 ಕಂಬಗಳಿವೆ.

**ಪಶ್ಚಿಮದ ಗರ್ಭಗೃಹ:**-ಈ ಗರ್ಭಗೃಹವು 8X8 ಅಡಿಗಳ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಗರ್ಭಗೃಹದ ಮಧ್ಯದಲ್ಲಿ ಎರಡು ಅಡಿಗಳ ಎತ್ತರವಿರುವ ನಕ್ಷತ್ರಾಕಾರದ ಗರುಡ ಪೀಠದ ಮೇಲೆ ಸುಮಾರು ನಾಲ್ಕುವರೆ ಅಡಿಗಳ ಎತ್ತರವಿರುವ ಕೇಶವನಮೂರ್ತಿಯನ್ನು ಮೊದಲು (ಮೂಲ) ಸ್ಥಾಪಿಸಲಾಗಿದ್ದ ಮೂರ್ತಿ ಇಲ್ಲವಾಗಿದ್ದರಿಂದ ತದನಂತರ ಕಾಲದಲ್ಲಿ ಅದೇ ಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರವಿರುವ ಕೇಶವ ಮೂರ್ತಿಯನ್ನು ತಂದು ಇರಿಸಲಾಗಿದೆ.[113] ಇದು ಹೊಯ್ಸಳ ಶೈಲಿಯಲ್ಲಿದ್ದು ಸುಂದರವಾಗಿದೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದುಕೊಂಡಿದ್ದಾನೆ.**(ಚಿ.ಸಂ.94)**

ನಯನ ಮನೋಹರವಾಗಿರುವ ಈ ಸುಂದರ ಮೂರ್ತಿಯ ಮೈಮೇಲೆ ಸೂಕ್ಷ್ಮ ಕೆತ್ತನೆ ಮಾಡಿ ಬಿಡಿಸಲಾಗಿರವ ಸುಂದರವಾದ ವಸ್ತ್ರಾಭರಣಗಳಿವೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ದೇವತೆಯರಿದ್ದಾರೆ. ಪ್ರಭಾವಳಿಯಲ್ಲಿ ವ್ಯಾಳನ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರಳಿಗಳ ಸೂಕ್ಷ್ಮ ಕೆತ್ತನೆಯ ಅಲಂಕರಣವಿದೆ. ಪ್ರಭಾವಳಿಯ ಅಂಚಿನಲ್ಲಿ ವಿಷ್ಣುವಿನ ದಶಾವತಾರ ಮೂರ್ತಿಗಳನ್ನು ಚಿಕ್ಕದಾಗಿ ಬಿಡಿಸಲಾಗಿದೆ ಅಂತ್ಯದಲ್ಲಿ ಕೀರ್ತಿಮುಖವಿದೆ.

ಈ ಗರ್ಭಗೃಹದ ಮೇಲ್ಛಾವಣಿಯು ಅಷ್ಟಮುಖವನ್ನೊಂದಿದ್ದು, ಒಳಭಾಗದ ಪಟ್ಟಿಕೆಗಳಲ್ಲಿ ಅಷ್ಟದಿಕ್ಪಾಲಕರ ಮೂರ್ತಿಗಳನ್ನು ಬಿಡಿಸಲಾಗಿದೆ. ಇದರ ಮಧ್ಯದಲ್ಲಿ ಸೈನಿಕರ ಶಿಲ್ಪಗಳು ಸಂಗೀತ ನೃತ್ಯದಲ್ಲಿ ತೊಡಗಿರುವಂತೆ ಶಿಲ್ಪಗಳನ್ನು ಬಿಡಿಸಲಾಗಿದೆ. ಕೆಳಭಾಗದ ಅಂಚಿನಲ್ಲಿ ಸುತ್ತಲೂ ಮಣಿಹಾರಗಳು ಮೂಲೆಗಳಲ್ಲಿ ಕೆಳಮುಖವಾಗಿ ಬಿಡಿಸಲಾಗಿರುವ ಕೀರ್ತಿಮುಖಗಳ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರುಳಿಗಳ ಅಲಂಕರಣವಿದೆ. ಮಧ್ಯದಲ್ಲಿ

ಒಂಭತ್ತು ಚೌಕಗಳ ಒಳಗೆ ಬಿಡಿಸಲಾಗಿರುವ ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಗರ್ಭಗೃಹದ ದ್ವಾರವು ಸರಳವಾದ ಪಟ್ಟಿಕೆಗಳಿಂದ ಕೂಡಿವೆ. ಮಧ್ಯದಲ್ಲಿ ನಕ್ಷತ್ರಾಕಾರದ ಅರೆಗಂಬವಿದೆ. ಬಾಗಿಲ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಸುಮಾರು ೩ ಅಡಿ ಎತ್ತರವಿರುವ ಸುಂದರವಾದ ನಯನ ಮನೋಹರವಾಗಿರುವ ಈ ಸುಂದರ ಮೂರ್ತಿಯ ಮೈಮೇಲೆ ಸೂಕ್ಷ್ಮ ಕೆತ್ತನೆ ಮಾಡಿ ಬಿಡಿಸಲಾಗಿರುವ ಸುಂದರವಾದ ವಸ್ತ್ರಾಭರಣಗಳಿವೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ದೇವತೆಯರಿದ್ದಾರೆ. ಪ್ರಭಾವಳಿಯಲ್ಲಿ ವ್ಯಾಳನ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರಳಿಗಳ ಸೂಕ್ಷ್ಮ ಕೆತ್ತನೆಯ ಅಲಂಕರಣವಿದೆ. ಪ್ರಭಾವಳಿಯ ಅಂಚಿನಲ್ಲಿ ವಿಷ್ಣುವಿನ ದಶಾವತಾರ ಮೂರ್ತಿಗಳನ್ನು ಚಿಕ್ಕದಾಗಿ ಬಿಡಿಸಲಾಗಿದೆ. ಅಂತ್ಯದಲ್ಲಿ ಕೀರ್ತಿಮುಖವಿದೆ. ಈ ಗರ್ಭಗೃಹದ ಮೇಲ್ಛಾವಣಿಯು ಅಷ್ಟಮುಖವನ್ನು ಹೊಂದಿದ್ದು ಒಳಭಾಗದ ಪಟ್ಟಿಕೆಗಳಲ್ಲಿ ಅಷ್ಟದಿಕ್ಪಾಲಕರ ಮೂರ್ತಿಗಳನ್ನು ಬಿಡಿಸಲಾಗಿದೆ. ಇದರ ಮಧ್ಯದಲ್ಲಿ ಸೈನಿಕರ ಶಿಲ್ಪಗಳು, ಸಂಗೀತ ನೃತ್ಯದಲ್ಲಿ ತೊಡಗಿರುವಂತೆ ಶಿಲ್ಪಗಳನ್ನು ಬಿಡಿಸಲಾಗಿದೆ. ಕೆಳಭಾಗದ ಅಂಚಿನಲ್ಲಿ ಸುತ್ತಲೂ ಮಣಿಹಾರಗಳು ಮೂಲೆಗಳಲ್ಲಿ ಕೆಳಮುಖವಾಗಿ ಬಿಡಿಸಲಾಗಿರುವ ಕೀರ್ತಿಮುಖಗಳ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರಳಿಗಳ ಅಲಂಕರಣವಿದೆ. ಮಧ್ಯದಲ್ಲಿ ಒಂಭತ್ತು ಚೌಕಗಳ ಒಳಗೆ ಬಿಡಿಸಲಾಗಿರುವ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ.

ಗರ್ಭಗೃಹದ ದ್ವಾರವು ಸರಳವಾದ ಪಟ್ಟಿಕೆಗಳಿಂದ ಕೂಡಿದೆ. ಮಧ್ಯದಲ್ಲಿ ನಕ್ಷತ್ರಾಕಾರದ ಅರೆಕಂಬವಿದೆ. ಬಾಗಿಲ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಸುಮಾರು ೩ ಅಡಿ ಎತ್ತರವಿರುವ ಸುಂದರವಾದ ದ್ವಾರಪಾಲಕರ ಮೂರ್ತಿಗಳನ್ನು ಇರಿಸಲಾಗಿದೆ. ಚತುರ್ಭುಜ ಹೊಂದಿರುವ ಇವರು ಶಂಖ, ಚಕ್ರ, ಗಧಾ, ಪದ್ಮವನ್ನು ಹೊಂದಿದ್ದಾರೆ. ಇವರ ಮೈಮೇಲೆ ಬಿಡಿಸಲಾಗಿರುವ ಸೂಕ್ಷ್ಮ ಕೆತ್ತನೆಯ ವಸ್ತ್ರಾಭರಣಗಳು ಇವೆ. ಈ ದ್ವಾರಪಾಲಕರ ಇಕ್ಕೆಲಗಳಲ್ಲಿ ಫಲ ಮತ್ತು ಚಾಮರ ಹಿಡಿದು ನಿಂತಿರುವ ಸ್ತ್ರೀಯರಿದ್ದಾರೆ.**(ಚಿ.ಸಂ.೨೫)**

ಗರ್ಭಗೃಹದ ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಸಮೇತವಾಗಿ ಸುಖಾಸನದಲ್ಲಿ ಕುಳಿತಿರುವ ಕೇಶವನ ಮೂರ್ತಿಯನ್ನು ಬಹಳ ಸುಂದರವಾಗಿ ಬಿಡಿಸಲಾಗಿದೆ. ತೋರಣದ ಭಾಗದಲ್ಲಿ ಕಮಲದ ಮೊಗ್ಗುಗಳು, ಮಣಿಹಾರಗಳ ಸೂಕ್ಷ್ಮ ಕೆತ್ತನೆಯು ಇದೆ. ಬಾಗಿಲುವಾಡದಲ್ಲಿ ಹೊಯ್ಸಳ ಶೈಲಿಯ ಚಿಕ್ಕ ಚಿಕ್ಕ ಶಿಖರಗಳ ಅಲಂಕರಣ ಮಾಡಲಾಗಿದೆ. ಶಿಖರಗಳ ಮಧ್ಯದಲ್ಲಿ ನೆಗೆಯುತ್ತಿರುವ ಸಿಂಹಗಳ ಶಿಲ್ಪಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಸುಖಾಸನದಲ್ಲಿ ಕುಳಿತಿರುವ ಗಜಲಕ್ಷ್ಮೀಯನ್ನು ಬಿಡಿಸಲಾಗಿದೆ.

**ಸುಕನಾಸಿ:-** ಸುಖನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ರೀತಿಯ ಮೂರ್ತಿ ಶಿಲ್ಪಗಳು ಕಾಣಬರುವುದಿಲ್ಲ. ಈ ಸುಕನಾಸಿಯ ಮೇಲ್ಛಾವಣಿಯಲ್ಲಿ ಗರ್ಭಗೃಹದಲ್ಲಿರುವಂತೆಯೇ ರಚಿಸಿ ಸೇರಿಸಲಾಗಿರುವ ಭುವನೇಶ್ವರಿ ಇದೆ. ಇದರಲ್ಲಿ ಅಷ್ಟದಿಕ್ಪಾಲಕರು ಮತ್ತು ದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ. ಒಳಭಾಗದಲ್ಲಿ ಕಮಲದ ಪುಷ್ಪಗಳು, ಕೀರ್ತಿಮುಖಗಳ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರಳಿಗಳು ಮೇಲ್ಭಾಗದಲ್ಲಿ ೯ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಸುಕನಾಸಿಯ ದ್ವಾರವು ಸರಳವಾಗಿದೆ. ದ್ವಾರದ ಪಟ್ಟಿಕೆಗಳ ಮೇಲೆ ಯಾವುದೇ ರೀತಿಯ ಸೂಕ್ಷ್ಮ ಕೆತ್ತನೆ ಅಲಂಕರಣೆ ಕಂಡುಬರುವುದಿಲ್ಲ. ದ್ವಾರದ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರ ಮೂರ್ತಿಗಳಿವೆ. ಇವರು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಪದ್ಮಗಧೆಯನ್ನು ಹಿಡಿದುಕೊಂಡಿದ್ದಾರೆ. ಇವರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇದರ ಇಕ್ಕೆಲಗಳಲ್ಲಿ ಫಲ ಮತ್ತು ಚಾಮರ ಹಿಡಿದು ನಿಂತಿರುವ ಸ್ತ್ರೀಯರಿದ್ದಾರೆ (ದ್ವಾರಪಾಲಕರ ಕೈಗಳು ಅಲ್ಲಲ್ಲಿ ತೃಟಿತವಾಗಿದೆ) ಸುಖನಾಸದ ದ್ವಾರದ ಲಲಾಟಬಿಂಬದಲ್ಲಿ ವಿಷ್ಣುವನ್ನು ಸೂಕ್ಷ್ಮ ಕೆತ್ತನೆ ಮಾಡಿ ಬಿಡಿಸಲಾಗಿದೆ. ಈ ದೇವನ ಎಡ ಮತ್ತು ಬಲಭಾಗದಲ್ಲಿ ಸ್ತ್ರೀ ದೇವತೆಯರು ನಿಂತಿದ್ದಾರೆ. ಬಾಗಿಲ ತೋರಣದಲ್ಲಿ ಮಣಿಹಾರ, ಪದ್ಮಪುಷ್ಪದ ಮೊಗ್ಗುಗಳನ್ನು ಬಿಡಿಸಲಾಗಿದೆ. ಈ ತೋರಣದ ಮಧ್ಯದಲ್ಲಿ ಕುಳಿತಿರುವ ಗಜಲಕ್ಷ್ಮೀಯನ್ನು ಬಿಡಿಸಲಾಗಿದೆ.[114] ಬಾಗಿಲವಾಡದಲ್ಲಿ ಹೊಯ್ಸಳ ಶೈಲಿಯ ಚಿಕ್ಕ ಚಿಕ್ಕ ಶಿಖರಗಳನ್ನು ಜೋಡಿಸಿ ಅಲಂಕರಣ ಮಾಡಲಾಗಿದೆ. ಮಧ್ಯದಲ್ಲಿ ನೆಗೆಯುತಿರುವ ಸಿಂಹಗಳಿವೆ. ಮಧ್ಯದಲ್ಲಿ ವಾಸುದೇವನ ಶಿಲ್ಪವನ್ನು ಬಿಡಿಸಲಾಗಿದೆ. ಈ ದೇವನ ತಲೆಯ ಮೇಲೆ ಸರ್ಪವು ಛಾಮರದಂತೆ ತನ್ನ ಐದು ಹೆಡೆಗಳನ್ನು ಬಿಚ್ಚಿಕೊಂಡಿರುವಂತೆ ಬಹಳ ಸುಂದರವಾಗಿ ಬಿಡಿಸಲಾಗಿದೆ. ಇದರ ಮೇಲೆ ಕೀರ್ತಿಮುಖವಿದೆ.

**ದಕ್ಷಿಣದ ಗರ್ಭಗೃಹ:-**ಈ ಗರ್ಭಗೃಹವು ಪಶ್ಚಿಮ ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಗರ್ಭಗೃಹದ ಮಧ್ಯದಲ್ಲಿ ನಕ್ಷತ್ರಾಕಾರದ ಗರುಡ ಪೀಠದ ಮೇಲೆ ಸುಮಾರು ಐದು ಅಡಿಗಳ ಎತ್ತರವಾಗಿರುವ ಗೋವರ್ಧನಧಾರಿ ಕೃಷ್ಣನನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.೯೬)** ಈ ದೇವನು ಒಂಟಿಕಾಲಿನಲ್ಲಿ ನಿಂತು ಎರಡು ಕೈಗಳಲ್ಲಿ ಕೊಳಲನ್ನು ಹಿಡಿದು ನುಡಿಸುತ್ತಿರುವಂತೆ ಇದೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಕೊಳಲು ಅರ್ಧಕ್ಕೆ ಮುರಿದು ಹೋಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ. ಈ ದೇವನ ಬಲಭಾಗದಲ್ಲಿ ಗೋವುಗಾಯಿಗಳು ಎಡಭಾಗದಲ್ಲಿ ಗೋವುಗಳು, ಭಕ್ತಜನರು, ಸೇವಕರು ನಿಂತಿದ್ದಾರೆ. ತಲೆಯ ಮೇಲೆ ತಾಳೆವೃಕ್ಷವನ್ನು

ಛತ್ರಿಯಂತೆ ಬಿಡಿಸಲಾಗಿದೆ. ಶಿಲ್ಪ ಅಲ್ಲಲ್ಲಿ ತೃಟಿತವಾಗಿದೆ. ಪ್ರಭಾವಳಿಯ ಅಂಚಿನಲ್ಲಿ ವಿಷ್ಣುವಿನ ದಶಾವತಾರ ಮೂರ್ತಿಗಳನ್ನು ಬಿಡಿಸಲಾಗಿದೆ ಅಂತ್ಯದಲ್ಲಿ ಕೀರ್ತಿಮುಖವಿದೆ.

ಗರ್ಭಗೃಹದ ಮೇಲ್ಛಾವಣಿಯಲ್ಲಿ ಅಷ್ಟಮುಖವುಳ್ಳ, ಚೌಕಾಕಾರ ರಚಿತವಾಗಿರುವ ಭುವನೇಶ್ವರಿ ಇದೆ. ಇದರಲ್ಲಿ ಅಷ್ಟದಿಕ್ಪಾಲಕರು ತಮ್ಮ ತಮ್ಮ ಪತ್ನಿಯರ ಸಮೇತ ಆಸೀನರಾಗಿದ್ದಾರೆ. ಪಟ್ಟಿಕೆಗಳ ಅಂಚಿನಲ್ಲಿ ಮಣಿಹಾರಗಳು ಕೀರ್ತಿಮುಖಗಳು ಮಧ್ಯದಲ್ಲಿ ೨ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲ ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ. ಮಧ್ಯದಲ್ಲಿ ನಕ್ಷತ್ರಾಕಾರವಾದ ಅರೆಗಂಬವಿದೆ. ಬಾಗಿಲ ಇಕ್ಕೆಲಗಳಲ್ಲಿ ಸುಮಾರು ಮೂರು ಅಡಿಗಳ ಎತ್ತರವಿರುವ ದ್ವಾರಪಾಲಕರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಚತುರ್ಭುಜ ಹೊಂದಿರುವ ಇವರು ಶಂಖ, ಚಕ್ರ, ಪದ್ಮ ಮತ್ತು ಗಧಾ ಹಿಡಿದುಕೊಂಡಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿವೆ. ಈ ದ್ವಾರಪಾಲಕರ ಇಕ್ಕೆಲಗಳಲ್ಲಿ ಫಲ ಮತ್ತು ಚಾಮರ ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ.

ಲಲಾಟಬಿಂಬದಲ್ಲಿ ಲಕ್ಷ್ಮೀಯನ್ನು ಬಿಡಿಸಲಾಗಿದೆ. ತೋರಣದ ಭಾಗದಲ್ಲಿ ಕಮಲದ ಮೊಗ್ಗುಗಳು ಫಲ ಹಿಡಿದು ನಿಂತಿರುವ ಸ್ತ್ರೀಯರು ಬಾಗಿಲುವಾಡದಲ್ಲಿ ಮಣಿಹಾರಗಳು ಕೂಡುಗಳ ಸೂಕ್ಷ್ಮ ಕೆತ್ತನೆ ಮಾಡಲಾಗಿದೆ. ಮೇಲ್ಭಾಗದ ಬಾಗಿಲುವಾಡದಲ್ಲಿ ಹೊಯ್ಸಳ ಶೈಲಿಯ ಚಿಕ್ಕ ಚಿಕ್ಕ ಶಿಖರಗಳಿವೆ. ಮಧ್ಯದಲ್ಲಿ ನೆಗೆಯುತ್ತಿರುವ ಸಿಂಹಗಳಿವೆ. ಕೆಳಗೆ ಇಕ್ಕೆಲಗಳಲ್ಲಿ ಸಂಗೀತಗಾರರು ಇದ್ದಾರೆ.

**ಸುಕನಾಸಿ:–** ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಕಾರವಾಗಿದೆ. ಮೇಲ್ಛಾವಣಿಯಲ್ಲಿರುವ ಭುವನೇಶ್ವರಿಯು ಅಷ್ಟ ಚೌಕಾಕಾರವಾಗಿ ರಚಿಸಲಾಗಿದೆ. ಮಧ್ಯದಲ್ಲಿ ಅರಳಿದ ಕಮಲದ ಪುಷ್ಪಗಳನ್ನು ಬಿಡಿಸಲಾಗಿದೆ. ಪಟ್ಟಿಕೆಗಳಲ್ಲಿ ಅಷ್ಟದಿಕ್ಪಾಲಕರು, ದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಸಂಗೀತಗಾರರ, ನೃತ್ಯಗಾರರ ಶಿಲ್ಪಗಳನ್ನು ಬಿಡಿಸಲಾಗಿದೆ. ಸುಕನಾಸಿಯ ದ್ವಾರದ ಪಟ್ಟಿಕೆಗಳಲ್ಲಿ ಯಾವುದೇ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ. ದ್ವಾರದ ಇಕ್ಕೆಲಗಳಲ್ಲಿ ಚತುರ್ಭುಜ ಹೊಂದಿದ್ದು, ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರು ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದುಕೊಂಡಿದ್ದು ಮೈಮೇಲೆ ಬಿಡಿಸಲಾಗಿರುವ ಆಭರಣಗಳು ಸುಂದರವಾಗಿದೆ.**(ಚಿ.ಸಂ.97)** ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖವಿದೆ. ಲಲಾಟಬಿಂಬದಲ್ಲಿ ಗೋವರ್ಧನಗಿರಿಧಾರಿ ಕೃಷ್ಣನ ಮೂರ್ತಿ ಬಿಡಿಸಲಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಚಾಮರ ಹಿಡಿದು ನಿಂತಿರುವ ಚಾಮರಧಾರಿಣಿಯರು ನಿಂತಿದ್ದಾರೆ.

ಬಾಗಿಲುವಾಡದಲ್ಲಿ ಸಣ್ಣ ಸಣ್ಣ ಹೊಯ್ಸಳ ಶೈಲಿಯ ಚಿಕ್ಕ ಚಿಕ್ಕ ಶಿಖರಗಳಿವೆ. ಮಧ್ಯದಲ್ಲಿ ನೆಗೆಯುತ್ತಿರುವ ಸಿಂಹಗಳಿವೆ. ಮಧ್ಯದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಲಕ್ಷ್ಮೀನಾರಾಯಣನ ಮೂರ್ತಿಯನ್ನು ಸುಂದರವಾಗಿ ಮತ್ತು ಆಕರ್ಷಕವಾಗಿ ಕೆತ್ತನೆ ಮಾಡಲಾಗಿದೆ.

**ಉತ್ತರದ ಗರ್ಭಗೃಹ:–** ಈ ಗರ್ಭಗೃಹವು ಪಶ್ಚಿಮದ ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಎರಡು ಅಡಿಗಳ ಎತ್ತರವಿರುವ ಗರುಡ ಪೀಠದ ಮೇಲೆ ಸುಮಾರು 6 ಅಡಿಗಳ ಎತ್ತರವಿರುವ ಜನಾರ್ಧನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.[115] ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರ ಅಲಂಕರಣದಿಂದ ಕೂಡಿವೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮಪುಷ್ಪವನ್ನು ಹಿಡಿದು ನಿಂತಿರುವ ದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ವ್ಯಾಳನ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ, ಸುರಳಿಗಳಿವೆ. ಪ್ರಭಾವಳಿಯ ಅಂಚಿನಲ್ಲಿ ವಿಷ್ಣುವಿನ ದಶಾವತಾರ ಮೂರ್ತಿಗಳನ್ನು ಚಿಕ್ಕದಾಗಿ ಬಿಡಿಸಲಾಗಿದೆ. ಅಂತ್ಯದಲ್ಲಿ ಕೀರ್ತಿಮುಖವನ್ನು ಬಿಡಿಸಲಾಗಿದೆ.

ಗರ್ಭಗೃಹದ ಮೇಲ್ಛಾವಣಿಯಲ್ಲಿ ಅಷ್ಟ, ಚೌಕಕಾರವಾಗಿ ರಚಿಸಲಾಗಿರುವ ಭುವನೇಶ್ವರಿ ಇದೆ. ಇದರ ಒಳಪಟ್ಟಿಕೆಗಳಲ್ಲಿ ದಿಕ್ಪಾಲಕರ, ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ. ಇವರ ಮಧ್ಯದಲ್ಲಿ ಸೈನಿಕರ ಶಿಲ್ಪಗಳನ್ನು ಬಿಡಿಸಲಾಗಿದೆ. ನಂತರ ಕೆಳಮುಖವಾಗಿ ಕೀರ್ತಿಮುಖದ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಕೀರ್ತಿಮುಖಗಳನ್ನು ಬಿಡಿಸಲಾಗಿದೆ.

ಗರ್ಭಗೃಹದ ಬಾಗಿಲ ಪಟ್ಟಿಕೆಗಳಲ್ಲಿ ಯಾವುದೇ ಮಾದರಿಯ ಅಲಂಕರಣದ ಸೂಕ್ಷ್ಮ ಕೆತ್ತನೆಗಳನ್ನು ಮಾಡದೆ ಹಾಗೆ ಉಳಿಸಲಾಗಿದೆ. ಈ ಪಟ್ಟಿಕೆಗಳ ಮಧ್ಯದಲ್ಲಿ ನಕ್ಷತ್ರಾಕಾರವಾಗಿ ರಚಿಸಿ ಸೇರಿಸಲಾಗಿರುವ ಅರೆಗಂಬವಿದೆ. ಬಾಗಿಲ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರಿದ್ದಾರೆ. ಚತುರ್ಭುಜವನ್ನು ಹೊಂದಿರುವ ಇವರ ಇಕ್ಕೆಲಗಳಲ್ಲಿ ಚಾಮರ ಮತ್ತು ಫಲ ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ. ದ್ವಾರದ ಲಲಾಟಬಿಂಬದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಲಕ್ಷ್ಮೀ ಶಿಲ್ಪವನ್ನು ಸೂಕ್ಷ್ಮ ಕೆತ್ತನೆ ಮಾಡಲಾಗಿದೆ. ತೋರಣದ ಭಾಗದಲ್ಲಿ ಅರಳಿದ ಕಮಲದ ಮೊಗ್ಗುಗಳು, ಸಣ್ಣ ಕೂಡುಗಳು ಇವೆ. ಬಾಗಿಲವಾಡದಲ್ಲಿ ಹೊಯ್ಸಳ ಶೈಲಿಯಲ್ಲಿ ರಚಿಸಿ ಸೇರಿಸಲಾಗಿರುವ ಚಿಕ್ಕ ಚಿಕ್ಕ ಶಿಲ್ಪಗಳ ಸಾಲಿದೆ. ಇವುಗಳ ಮಧ್ಯದಲ್ಲಿ ಸಿಂಹಗಳು ನೆಗೆಯುತ್ತಿರುವಂತೆ ರಚಿಸಲಾಗಿದೆ. ಮಧ್ಯಭಾಗದಲ್ಲಿ ಧ್ಯಾನಾಸಕ್ತನಾಗಿ ಕುಳಿತಿರುವ ಯೋಗನಾರಾಯಣನ ಶಿಲ್ಪವನ್ನು ಬಹಳ ಸುಂದರವಾಗಿ ಬಿಡಿಸಲಾಗಿದೆ.

**ಸುಕನಾಸಿ**:–ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರುಳಿಗಳು ಇವೆ. ಭುವನೇಶ್ವರಿಯ ಮಧ್ಯದಲ್ಲಿ 9 ಅಂಕಣಗಳನ್ನನಾಗಿ ರಚಿಸಿ ಇವುಗಳ ಒಳಭಾಗದಲ್ಲಿ ಅರಳಿದ ಒಂಭತ್ತು ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಸುಕನಾಸಿಯ ದ್ವಾರವು ಹಲವು ಪಟ್ಟಿಕೆಗಳಿಂದ ಕೂಡಿದ್ದು ಪಟ್ಟಿಕೆಗಳ ಮೇಲೆ ಯಾವುದೇ ಮಾದರಿಯ ಸೂಕ್ಷ್ಮ ಕೆತ್ತನೆಗಳು ಕಾಣಬರುವುದಿಲ್ಲ. ಬಾಗಿಲ ಪಟ್ಟಿಕೆಗಳ ಮಧ್ಯದಲ್ಲಿ ನಕ್ಷತ್ರಾಕಾರವಾಗಿ ರಚಿಸಲಾಗಿರುವ ತೆಳುವಾದ ಅರೆಗಂಬಗಳಿವೆ. ದ್ವಾರದ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಚತುರ್ಭುಜ ಹೊಂದಿರುವ ವಿಷ್ಣು ದ್ವಾರಪಾಲಕರಿದ್ದಾರೆ. ಇವರು ಕೈಗಳಲ್ಲಿ ತ್ರಿಶೂಲ, ಢಮರು, ಗಧಾ, ಅಭಯಹಸ್ತವನ್ನು ಹೊಂದಿದ್ದಾರೆ. ಇವರ ಇಕ್ಕೆಲಗಳಲ್ಲಿ ಚಾಮರ ಮತ್ತು ಫಲವನ್ನು ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ.

ಸುಕನಾಸಿಯ ಲಲಾಟಬಿಂಬದಲ್ಲಿ ಬಿಡಿಸಲಾಗಿರುವ ಬಾಗಿಲ ತೋರಣವನ್ನು ಮೇಲ್ಭಾಗದಲ್ಲಿ ಹೊಯ್ಸಳ ಶೈಲಿಯ ಸಣ್ಣ ಸಣ್ಣ ಶಿಖರಗಳ ಅಲಂಕರಣ ಮಾಡಲಾಗಿದೆ. ಮಧ್ಯದಲ್ಲಿ ನೆಗೆಯುತ್ತಿರುವಂತೆ ಬಿಡಿಸಿರುವ ಸಿಂಹಗಳಿವೆ. ಇದರ ಮಧ್ಯದಲ್ಲಿ ಸುಖಾಸನದಲ್ಲಿ ಕುಳಿತಿರುವ ಲಕ್ಷ್ಮೀಯ ಸೂಕ್ಷ್ಮ ಕೆತ್ತನೆ ಬಿಡಿಸಲಾಗಿದೆ.

**ನವರಂಗ**:–ನವರಂಗವು ಸುಮಾರು 25X25 ಅಡಿಗಳ ಉದ್ದ ಅಗಲವಾಗಿದ್ದು ಮಧ್ಯದಲ್ಲಿ ಚೌಕಾಕಾರವಾಗಿದೆ. ನವರಂಗದ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಕಂಬಗಳಿವೆ.**(ಚಿ.ಸಂ.99,100)** ಈ ಕಂಬಗಳನ್ನು ಪೀಠದಲ್ಲಿ ಚೌಕಾಕಾರ ಕಾಂಡದ ಭಾಗವನ್ನು ಬಳೆಗಳ, ಗಾಲಿಯಾಕಾರದ, ಮಧ್ಯದಲ್ಲಿ ಗಂಟೆ, ಘಟ, ಗಾಲಿಯಾಕಾರವಾಗಿ ಮೇಲೆ ಚೌಕಾಕಾರದ ಫಲಗೈ ಬೋದಿಗೆ ಇದೆ. ಗಾಲಿಯ ನಾಲ್ಕು ದಿಕ್ಕುಗಳಲ್ಲೂ ಮದನಿಕಾ ಶಿಲ್ಪಗಳನ್ನು ಇರಿಸಲು ಮಾಡಲಾಗಿದ್ದ ಬುಗುಟುಗಳಿವೆ.[116] ಆದರೆ ಈ ನಾಲ್ಕು ಕಂಬಗಳಲ್ಲಿ ಮದನಿಕಾ ಶಿಲ್ಪಗಳು ಈಗ ಕಾಣಬರುವುದಿಲ್ಲ. ಇದರ ಮೇಲೆ ಇರುವ ಕಪೋತಗಳು ಉರುಳೆಯಾಕಾರವಾಗಿ ರಚಿಸಲಾಗಿದೆ. ಇವುಗಳ ಮಧ್ಯದಲ್ಲಿ ನೆಗೆಯುತ್ತಿರುವ ಸಿಂಹಗಳಿವೆ.**(ಚಿ.ಸಂ.98)**

ಈ ನವರಂಗದ ನಾಲ್ಕು ಕಂಬಗಳಿಗೆ ಸರಿಸಮಾನವಾಗಿ ಒಳಭಿತ್ತಿ ಗೋಡೆಗೆ ಸೇರಿಸಲಾಗಿರುವ ಆರು ನಕ್ಷತ್ರಾರವಾಗಿರುವ ಕಂಬಗಳಿವೆ. ನವರಂಗದ ನೈರುತ್ಯ ಮತ್ತು ಈಶಾನ್ಯ ಮೂಲೆಗಳಲ್ಲಿ ಎರಡು ಮಂದರಗಳು ಅಥವಾ ಕೋಷ್ಠಗುಡಿಗಳಿವೆ. ಇವುಗಳನ್ನು ನಕ್ಷತ್ರಾಕಾರವಾಗಿ ನಿರ್ಮಿಸಲಾಗಿದೆ. ನೈರುತ್ಯದಲ್ಲಿರುವ ಕೋಷ್ಠದ ಒಳಭಾಗದಲ್ಲಿ ವಿಷ್ಣು

ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಮೂಲ ಮೂರ್ತಿ ಕಣ್ಮರೆಯಾಗಿದ್ದು, ನಂತರದ ಕಾಲದಲ್ಲಿ ಬೇರೆ ಪ್ರದೇಶದಿಂದ ಸ್ಥಳಾಂತರಿಸಿ ತಂದಿರಿಸಲಾಗಿರುವ ಲಕ್ಷ್ಮೀ ನಾರಾಯಣನ ಮೂರ್ತಿಯನ್ನು ಇರಿಸಲಾಗಿದೆ.[117] ಈ ಮೂರ್ತಿಯ ಪ್ರಭಾವಳಿ ತೃಟಿತವಾಗಿದೆ. ಕೋಷ್ಠಗುಡಿಯ ಮೇಲ್ಭಾಗದಲ್ಲಿ ಪ್ರಭಾವಳಿ ತೃಟಿತವಾಗಿದೆ. ಕೋಷ್ಠಗುಡಿಯ ಮೇಲ್ಭಾಗದಲ್ಲಿ ಹೊಯ್ಸಳ ಶೈಲಿಯಲ್ಲಿ ರಚಿಸಲಾಗಿರುವ ಶಿಖರವಿದೆ. ಈ ಶಿಖರದ ಮಧ್ಯದಲ್ಲಿ ಗಣೇಶನ ಶಿಲ್ಪವನ್ನು ಬಿಡಿಸಲಾಗಿದೆ.

ವಾಯುವ್ಯ ಮೂಲೆಯಲ್ಲಿರುವ ಕೋಷ್ಠ ಗುಡಿಯಲ್ಲಿ ಪ್ರತಿಷ್ಠಾಪಿಸಲಾಗಿದ್ದ ಮೂಲ ವಿಗ್ರಹ ಕಣ್ಮರೆಯಾಗಿದೆ. ಶಿಖರದ ಮುಂಭಾಗದಲ್ಲಿ ಮಹಿಷಾಸುರ ಮರ್ಧಿನಿಯ ಶಿಲ್ಪವನ್ನು ಇಡಲಾಗಿದೆ. ನವರಂಗದ ಮೇಲ್ಛಾವಣಿಯು ೯ ಅಂಕಣಗಳಿಂದ ಕೂಡಿದ್ದು ಇದರಲ್ಲಿ ಭುವನೇಶ್ವರಿಗಳನ್ನು ಒಳಸರಿದಂತೆ ವೃತ್ತಾಕಾರವಾಗಿ ರಚಿಸಲಾಗಿದೆ. ಇದರ ಒಳಭಾಗದಲ್ಲಿ ಸಣ್ಣ ಸಣ್ಣ ಕಂಬಗಳು ಇವುಗಳ ಮಧ್ಯದಲ್ಲಿ ವಿಷ್ಣುವಿನ ದಶಾವತಾರ ಮೂರ್ತಿಗಳನ್ನು ಬಿಡಿಸಲಾಗಿದೆ. ಕೆಲವು ಭಾಗದಲ್ಲಿ ಮೂರ್ತಿಶಿಲ್ಪ ರಚಿಸದೆ ಕಲ್ಲನ್ನು ಹಾಗೆ ಬಿಡಲಾಗಿದೆ. ಒಳಭಾಗದಲ್ಲಿ ಹಿನ್ಸರಿತ ಮತ್ತು ಮುನ್ಸರಿತದಂತೆ ರಚಿಸಿ ಅದರ ಅಂಚಿನಲ್ಲಿ ಸಣ್ಣ ಸಣ್ಣ ಕಮಲದ ಮೊಗ್ಗುಗಳನ್ನು ಬಿಡಿಸಿ ಸುಂದರಗೊಳಿಸಲಾಗಿದೆ. ಮಧ್ಯದಲ್ಲಿ ಮೂರು ಸುತ್ತು ಅರಳುತ್ತಿರುವಂತೆ ಬಿಡಿಸಲಾಗಿರುವ ಸುಮಾರು ಎರಡೂವರೆ ಅಡಿ ಕೆಳಗೆ ಬಂದಿರುವಂತೆ ಬಿಡಿಸಲಾಗಿರುವ ದೃಢಕಾಯವಾದ ಕಮಲದ ಮೊಗ್ಗಿದೆ.

**ಪಶ್ಚಿಮದ ಭುವನೇಶ್ವರಿ**:–ಇದನ್ನು ಚೌಕ, ಅಷ್ಟ ಮುಖವಾಗಿರುವಂತೆ ರಚಿಸಲಾಗಿದೆ. ಇದರ ಒಳಭಾಗದಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಸುತ್ತಲೂ ಬಿಡಿಸಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಕೆಳಮುಖವಾಗಿ ಬಿಡಿಸಲಾಗಿರುವ ಕಮಲದ ಮೊಗ್ಗನ್ನು ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ವಿಷ್ಣುವಿನ ದಶಾವತಾರ ಮೂರ್ತಿಗಳನ್ನು ಚಿಕ್ಕದಾಗಿ ಬಿಡಿಸಲಾಗಿದೆ.

**ವಾಯುವ್ಯ ಭಾಗದ ಭುವನೇಶ್ವರಿ:**–ಈ ಭುವನೇಶ್ವರಿಯನ್ನು ಸುಮಾರು ಮೂರು ಅಡಿಗಳ ಆಳವಾಗಿ ಒಳಸರಿದಂತೆ ರಚಿಸಲಾಗಿದ್ದು, ಚೌಕಾಕಾರವಾಗಿದೆ. ಇದರ ಒಳಭಾಗದಲ್ಲಿ ದಿಕ್ಪಾಲಕರು, ವಿಷ್ಣುವಿನ ದಶಾವತಾರದ ಮೂರ್ತಿಗಳು, ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಇದರ ಮೇಲ್ಭಾಗದಲ್ಲಿ ಚೌಕಾಕಾರದ ಪಟ್ಟಿಕೆಯಲ್ಲಿ ಹೊಯ್ಸಳ ಶೈಲಿಯ ಸಿಂಹ ಮುಖಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ 1.5 ಅಡಿ ಕೆಳಮುಖವಾಗಿ ಬಿಡಿಸಲಾಗಿರುವ ಕಮಲದ ಮೊಗ್ಗನ್ನು ಬಿಡಿಸಲಾಗಿದೆ.

**ಉತ್ತರದ ಭುವನೇಶ್ವರಿ**:-ಈ ಭಾಗದಲ್ಲಿರುವ ಭುವನೇಶ್ವರಿಯನ್ನು ಚೌಕ, ವೃತ್ತಾಕಾರವಾಗಿ ರಚಿಸಲಾಗಿದೆ. ಇದರ ಒಳಭಾಗದಲ್ಲಿ ಅಷ್ಟದಿಕ್ಪಾಲಕರ ಮೂರ್ತಿಗಳನ್ನು ಬಿಡಿಸಲಾಗಿದೆ. ದಿಕ್ಪಾಲಕರ ಇಕ್ಕೆಲಗಳಲ್ಲಿ ಸೇವಕಿಯರು ಫಲವನ್ನು ಹಿಡಿದು ನಿಂತಿದ್ದಾರೆ. ಮೇಲ್ಭಾಗವನ್ನು ವೃತ್ತಾಕಾರವಾಗಿ ಬಳೆಗಳ ರೀತಿ ರಚಿಸಿ, ಇದರ ಅಂಚಿನಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಇದರ ಮೇಲೆ ವಿಷ್ಣುವಿನ ದಶಾವತಾರ ಮೂರ್ತಿಗಳನ್ನು ಸಮಭಂಗಿಯಲ್ಲಿ ನಿಂತಿರುವಂತೆ ಬಿಡಿಸಲಾಗಿದೆ. ಮಧ್ಯದಲ್ಲಿ 1.5 ಅಡಿ ಆಳವಾಗಿ ಕೆಳಮುಖವಾಗಿ ಬಿಡಿಸಿರುವ ಕಮಲದ ಮೊಗ್ಗು ಇದೆ.

**ಈಶಾನ್ಯದ ಭುವನೇಶ್ವರಿ**:-ಇದನ್ನು ವೃತ್ತಾಕಾರವಾಗಿ ರಚಿಸಲಾಗಿದೆ. ಇದರ ಒಳಭಾಗದಲ್ಲಿ ದಶಾವತಾರ ಮೂರ್ತಿಗಳು, ಸ್ತ್ರೀ ದೇವತೆಯರನ್ನು ಬಿಡಿಸಲಾಗಿದೆ. ಇದರಲ್ಲಿರುವ ಮೂರ್ತಿಗಳೆಲ್ಲವೂ ಚತುರ್ಭುಜವನ್ನು ಹೊಂದಿದ್ದು, ಪದ್ಮ, ಶಂಖ, ಚಕ್ರ, ಗಧಾ ಹಿಡಿದಿದ್ದಾರೆ. ಮೇಲ್ಭಾಗದಲ್ಲಿ ಮೂರು ಸುತ್ತು ಅರಳಿದ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ದಳಗಳ ಅಂಚಿನಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಆಗತಾನೆ ಅರಳುತ್ತಿರುವಂತೆ ಬಿಡಿಸಿರುವ ಕಮಲದ ಮೊಗ್ಗು ಇದೆ. ಈ ಭುವನೇಶ್ವರಿಯ ಆಕರ್ಷಣೆ ಎಂದರೆ ಮೊಗ್ಗಿನ ದಿಂಡಿನ ಸುತ್ತಲೂ ಸಣ್ಣ ದಶಾವತಾರದ ಮೂರ್ತಿಗಳನ್ನು ಬಿಡಿಸಲಾಗಿರುವುದು.

**ಪೂರ್ವದ ಭುವನೇಶ್ವರಿ**:-ಇದನ್ನು ಚೌಕ, ಅಷ್ಟಮುಖವಾಗಿ ರಚಿಸಲಾಗಿದ್ದು, ಒಳಭಾಗದಲ್ಲಿ ವೃತ್ತಾಕಾರವಾಗಿದೆ. ಇದರಲ್ಲಿ ಅಷ್ಟದಿಕ್ಪಾಲಕರು, ದಿಕ್ಪಾಲಕರುಗಳ ಮೂರ್ತಿಯನ್ನು ಚಿಕ್ಕದಾಗಿ ಬಿಡಿಸಲಾಗಿದೆ. ಈ ದಿಕ್ಪಾಲರಲ್ಲಿ ಕುಬೇರ, ಇಂದ್ರನನ್ನು ಮಾತ್ರ ಬಿಡಿಸಿದ್ದಾರೆ. ಯಮ ಮತ್ತು ವರುಣನನ್ನು ಬಿಡಿಸಬೇಕಾಗಿದ್ದ ಕಲ್ಲುಗಳನ್ನು ಹಾಗೆ ಉಳಿಸಲಾಗಿದೆ. ಇದರ ಮೇಲ್ಭಾಗದಲ್ಲಿ ಅಷ್ಟದಿಕ್ಪಾಲಕರಿದ್ದು, ಹಿಂದಕ್ಕೆ ಮುಂದಕ್ಕೆ ಸರಿದಂತೆ ರಚಿಸಲಾಗಿದೆ. ಇದರಲ್ಲಿಯೂ ಸಹ ದಶಾವತಾರ ಮೂರ್ತಿ ಶಿಲ್ಪಗಳು ಮತ್ತು ದೇವತೆಗಳನ್ನು ಬಿಡಿಸಲಾಗಿದೆ. ಮೇಲ್ಭಾಗದ ಒಳಭಾಗದಲ್ಲಿ ಸಣ್ಣ ಸಣ್ಣ ಹೊಯ್ಸಳ ಶೈಲಿಯ ಶಿಖರಗಳನ್ನು ಬಿಡಿಸಲಾಗಿದೆ. ಇಕ್ಕೆಲಗಳಲ್ಲಿ ನೆಗೆಯುತ್ತಿರುವ ಸಿಂಹ ಮುಖಗಳನ್ನು ಬಿಡಿಸಲಾಗಿದೆ. ಇದರ ಮಧ್ಯಭಾಗ ನಕ್ಷತ್ರಾಕಾರವಾಗಿದ್ದು, ಮಧ್ಯದಲ್ಲಿ ಅರಳಿದ ಕಮಲದ ಮೊಗ್ಗನ್ನು ಬಿಡಿಸಲಾಗಿದೆ.

**ಆಗ್ನೇಯ ಭಾಗದ ಭುವನೇಶ್ವರಿ**:-ಈ ಭುವನೇಶ್ವರಿಯು ನಕ್ಷತ್ರಾಕಾರವಾಗಿದೆ. ಇದರಲ್ಲಿ ಎರಡು ರೀತಿಯ ಪಟ್ಟಿಕೆಗಳಿವೆ. ಇವುಗಳನ್ನು ಹಿಂದೆ ಮುಂದೆ ಸರಿದಂತೆ ರಚಿಸಲಾಗಿದೆ. ಒಳಭಾಗದಲ್ಲಿ ಕಮಲದ ಮೊಗ್ಗು ಮತ್ತು ಫಲವನ್ನು ಹಿಡಿದು ನಿಂತಿರುವ ಸ್ತ್ರೀಯರ ಶಿಲ್ಪಗಳಿವೆ. ಮತ್ತೆ ಕೆಲವು ಭಾಗದ ಕಲ್ಲನ್ನು ಉಳಿಸಲಾಗಿದೆ. ಒಳಭಾಗದಲ್ಲಿ ಸಣ್ಣ ಸಣ್ಣ ಶಿಖರಗಳನ್ನು ಸುತ್ತಲೂ

ಬಿಡಿಸಲಾಗಿದೆ. ಇವುಗಳ ಮಧ್ಯದಲ್ಲಿ ನೆಗೆಯುತ್ತಿರುವಂತೆ ಬಿಡಿಸಲಾಗಿರುವ ಸಿಂಹ ಮುಖಗಳಿವೆ. ಮಧ್ಯದಲ್ಲಿರುವ ಕಮಲದ ಮೊಗ್ಗನ್ನು ಈಗತಾನೇ ಅರಳುತ್ತಿರುವಂತೆ ರಚಿಸಲಾಗಿದೆ.

**ದಕ್ಷಿಣದ ಭುವನೇಶ್ವರಿ**:-ಇದನ್ನು ಚೌಕ, ವೃತ್ತಾಕಾರವಾಗಿರುವಂತೆ ರಚಿಸಲಾಗಿದ್ದು, ಇದರ ನಾಲ್ಕು ದಿಕ್ಕುಗಳಲ್ಲಿ ದಿಕ್ಪಾಲಕರ ಮೂರ್ತಿ ಶಿಲ್ಪಗಳನ್ನು ಬಿಡಿಸಲಾಗಿದೆ. ಇಕ್ಕೆಲಗಳಲ್ಲಿ ಸೇವಕಿಯರ ಶಿಲ್ಪಗಳಿವೆ. ಇದರ ಮೇಲೆ ಹಿಂದೆ ಮುಂದೆ ಸರಿದಂತೆ ಒಂದು ಬಳೆಯನ್ನು ರಚಿಸಿ ಒಳಭಾಗದಲ್ಲಿ ಕಮಲ ಹಿಡಿದು ನಿಂತಿರುವ ಸ್ತ್ರೀಪುರುಷರ ಶಿಲ್ಪಗಳಿವೆ. ಮೇಲ್ಭಾಗವು ಗಾಳಿಯಂತೆ ವೃತ್ತಾಕಾರವಾಗಿದ್ದು, ಅದರಲ್ಲಿ ಸುತ್ತಲೂ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಮೂರು ಸುತ್ತು ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ.

**ನೈರುತ್ಯ ಭುವನೇಶ್ವರಿ**:-ಇದನ್ನು ಚೌಕ, ಅಷ್ಟ, ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಇದರಲ್ಲಿ ಅಷ್ಟದಿಕ್ಪಾಲಕರು ಶಿಲ್ಪ ಬಿಡಿಸಲಾಗಿದೆ. ಮಧ್ಯದಲ್ಲಿ ವೀರಯೋಧರುಗಳ ಶಿಲ್ಪ ಹಾಗೂ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಅರಳುತ್ತಿರುವಂತೆ ಬಿಡಿಸಲಾಗಿರುವ ಕಮಲದ ಮೊಗ್ಗನ್ನು ಬಿಡಿಸಲಾಗಿದೆ. ನವರಂಗದ ಬಾಗಿಲು ಸರಳವಾಗಿದೆ. ಇದರ ಪಟ್ಟಿಕೆಯಲ್ಲಿ ಯಾವುದೇ ಸೂಕ್ಷ್ಮ ಕೆತ್ತನೆಯ ಅಲಂಕರಣೆ ಕಂಡುಬರುವುದಿಲ್ಲ.

ಈ ನವರಂಗದ ಸುತ್ತಲೂ ಕಕ್ಷಾಸನದ ರೀತಿ ಜಗತಿಯನ್ನು ಮಾಡಲಾಗಿದೆ. ಈ ಜಗತಿಯ ಮೇಲೆ ಕಂಬಗಳನ್ನು ನಿಲ್ಲಿಸಿ ಮೇಲ್ಛಾವಣಿಗೆ ಆಧಾರವಾಗಿರುವಂತೆ ನಿಲ್ಲಿಸಲಾಗಿದೆ. ಇದು ಮೊದಲು ಮುಕ್ತವಾಗಿದಂತೆ ಕಂಡುಬರುತ್ತದೆ. ತದನಂತರದಲ್ಲಿ ಇದಕ್ಕೆ ಜಾಲಾಂಧ್ರಗಳನ್ನು ಜೋಡಿಸಿದಂತೆ ಕಾಣಬರುತ್ತದೆ. ಜಗತಿಯು ಸುಮಾರು ಮೂರು ಅಡಿಗಳ ಎತ್ತರವಾಗಿದೆ. ಇದರ ಮೇಲ್ಛಾವಣಿಯನ್ನು ಚೌಕಾಕಾರವಾಗಿ ಮಾಡಿ ಇದರ ಒಳಗೆ ವೃತ್ತಾಕಾರವಾಗಿ ಬಿಡಿಸಲಾಗಿರುವ ಅರಳಿದ ಕಮಲದ ಪುಷ್ಪ ಬಿಡಿಸಲಾಗಿದೆ.[118]

**ಮುಖಮಂಟಪ**:-ಈ ದೇವಾಲಯಕ್ಕೆ ಮೂಲತಃ ಮುಖಮಂಟಪದಲ್ಲಿ ಎರಡು ಕಂಬಗಳಿದ್ದು, ಮುಕ್ತವಾಗಿತ್ತು. ಆದರೆ ತದನಂತರದ ಕಾಲದಲ್ಲಿ ಸುತ್ತಲೂ ಜಾಲಾಂಧ್ರಗಳನ್ನು ಸೇರಿಸಿ ಮುಚ್ಚಲಾಗಿದೆ. ಇದರ ಮೇಲ್ಛಾವಣಿಯ ಮಧ್ಯದಲ್ಲಿ ಭುವನೇಶ್ವರಿಯನ್ನು ಮಾಡಲಾಗಿದೆ. ಇದು ಸುಮಾರು ಐದು ಅಡಿಗಳ ಆಳವಾಗಿದ್ದು, ವಿಶಾಲವಾಗಿದೆ. ಇದನ್ನು ಅಷ್ಟಮುಖವಾಗಿ ರಚಿಸಲಾಗಿದೆ. ಒಳಭಾಗವನ್ನು ವೃತ್ತಾಕಾರವಾಗಿ ರಚಿಸಲಾಗಿದೆ. ಕೆಳಭಾಗದಲ್ಲಿ ಅಷ್ಟದಿಕ್ಪಾಲಕರ ಮೂರ್ತಿ ಶಿಲ್ಪಗಳನ್ನು ಬಿಡಿಸಲಾಗಿದೆ. ಅಷ್ಟದಿಕ್ಪಾಲಕರ ಮಧ್ಯದಲ್ಲಿ ವೀರಯೋಧರು, ಸಂಗೀತಗಾರರು, ನೃತ್ಯಗಾರರ ಶಿಲ್ಪಗಳನ್ನು ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಕತ್ತಿ, ಗುರಾಣಿ ಹಿಡಿದು ನಿಂತಿರುವ ವೀರಯೋಧರು, ಅದರ ಮೇಲೆ ವಿಷ್ಣುವಿನ ದಶಾವತಾರ ಮೂರ್ತಿಗಳು,

ಏಕಕಂಬ ಶಿಖರಗಳು, ನೆಗೆಯುತ್ತಿರುವ ಸಿಂಹಗಳು, ಸಣ್ಣ ಸಣ್ಣ ಕಮಲದ ಮೊಗ್ಗುಗಳು, ನಂದಿಯ ಪಾದಗಳು, ಅರಳಿದ ಪದ್ಮಪುಷ್ಪಗಳು ಮಧ್ಯದಲ್ಲಿ ನಾಲ್ಕು ಅಡಿಗಳವರೆಗೆ ಕೆಳಮುಖವಾಗಿ ಬಿಡಿಸಲಾಗಿರುವ ದೃಢವಾದ ಕಮಲದ ಮೊಗ್ಗನ್ನು ಬಿಡಿಸಲಾಗಿದೆ.**(ಚಿ.ಸಂ.101)**

ಮುಖಮಂಟಪದ ದ್ವಾರವು ಸರಳವಾಗಿದೆ. ಇದರ ಮುಂದೆ ನಾಲ್ಕು ಅಡಿ ಎತ್ತರವಿರುವ ದ್ವಾರಪಾಲಕರಿದ್ದಾರೆ. ಸಮಭಂಗಿಯಲ್ಲಿ ನಿಂತಿರುವ ಇದರ ಮುಂಗೈಗಳು ಮುರಿದು ಹೋಗಿವೆ. ಹಿಂದಿನ ಕೈಗಳಲ್ಲಿ ಶಂಖ, ಚಕ್ರ ಹಿಡಿದುಕೊಂಡಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸೂಕ್ಷ್ಮಕೆತ್ತನೆಯಿಂದ ಕೂಡಿದ್ದು, ಸುಂದರವಾಗಿದೆ. ಇದರ ಇಕ್ಕೆಲಗಳಲ್ಲಿ ಕಮಲದ ಮೊಗ್ಗು ಮತ್ತು ಫಲವನ್ನು ಹಿಡಿದು ನಿಂತಿರುವ ಸ್ತ್ರೀಯರಿದ್ದಾರೆ. ಈ ದ್ವಾರಪಾಲಕರು ಹಿಡಿದುಕೊಂಡಿರುವ ಚಕ್ರಗಳಲ್ಲಿ ಸ್ವಸ್ತಿಕ್ ಚಿನ್ಹೆ ಇದೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖವಿದೆ.

**ಜಗತಿ**:-ಈ ದೇವಾಲಯವನ್ನು ಸುಮಾರು ನಾಲ್ಕು ಅಡಿ ಎತ್ತರವಿರುವ ನಕ್ಷತ್ರಾಕಾರದ ಜಗತಿಯನ್ನು ಮೊದಲು ನಿರ್ಮಿಸಿದ್ದಾರೆ.[119] ಇದರಲ್ಲಿ ಆರು ಪಟ್ಟಿಕೆಗಳಿದ್ದು, ಹಿನ್ಸರಿತ ಮತ್ತು ಮುನ್ಸರಿತದಂತೆ ಕ್ರಮಬದ್ಧವಾಗಿ ಜೋಡಿಸಲಾಗಿದೆ. ಮೂಲೆಗಳಲ್ಲಿ ಹೊರಮುಖ ಮಾಡಿ ನಿಂತುಕೊಂಡಿರುವಂತೆ ಜೋಡಿಸಲಾಗಿರುವ ಆನೆಯ ಶಿಲ್ಪಗಳಿವೆ.**(ಚಿ.ಸಂ.102)** ಕೆಲವು ಕಡೆ ಆನೆಗಳಿಲ್ಲ. ಆದರೆ ಅವುಗಳ ಕೆಳಗೆ ಹಾಸಲಾಗಿದ ಮಟ್ಟಸವಾದ ಕಲ್ಲಿನ ಚಪ್ಪಡಿಗಳು ಈಗಲೂ ಇದೆ.

**ಅಧಿಷ್ಠಾನ**:-ಅಧಿಷ್ಠಾನವನ್ನು ಜಗತಿಯ ಮಧ್ಯದಲ್ಲಿ ರಚಿಸಲಾಗಿದೆ. ಇದರಲ್ಲಿ ಹಿನ್ಸರಿತ ಮತ್ತು ಮುನ್ಸರಿತಗಳಲ್ಲಿ ಪಟ್ಟಿಕೆಗಳನ್ನು ಕ್ರಮಬದ್ಧವಾಗಿ ಜೋಡಿಸಲಾಗಿದೆ. ಈ ಪಟ್ಟಿಕೆಗಳ ಹೊರ ಮೈಮೇಲೆ ಬಿಡಿಸಲಾಗಿರುವ ಸುಂದರ ಶಿಲ್ಪಗಳ ಅಲಂಕರಣದ ಕೆತ್ತನೆ ಮಾಡಲಾಗಿದೆ. ಅವುಗಳನ್ನು ಒಂದೊಂದಾಗಿ ವಿವರಿಸಲಾಗಿದೆ.**(ಚಿ.ಸಂ.104,106)**

**ಉಪಾನ(ಕೆಳಗಿನ ಪಟ್ಟಿಕೆ)**:-ಇದರಲ್ಲಿ ದೇವಾಲಯದ ಸುತ್ತಲೂ ವಿವಿಧ ಭಂಗಿಯಲ್ಲಿರುವಂತೆ ಆನೆಯ ಶಿಲ್ಪಗಳನ್ನು ಬಿಡಿಸಲಾಗಿದೆ. ಎರಡನೇ ಪಟ್ಟಿಕೆಯಲ್ಲಿ ಸೈನಿಕರು ಕುದುರೆಗಳ ಮೇಲೆ ಕುಳಿತು ಮುನ್ನಡೆಯುತ್ತಿರುವಂತೆ ರಚಿಸಲಾಗಿದೆ. ಮೂರನೇ ಪಟ್ಟಿಕೆಯಲ್ಲಿ ಲತಾಸುರುಳಿಗಳ ಅಲಂಕರಣ, ನಾಲ್ಕನೇ ಪಟ್ಟಿಕೆಯಲ್ಲಿ ಕಥಾನಕ ಶಿಲ್ಪಗಳ ದೃಶ್ಯಸನ್ನಿವೇಶದ ಶಿಲ್ಪಗಳನ್ನು ತುಂಬಾ ಚನ್ನಾಗಿ ಮೂಡಿ ಬರುವಂತೆ ರಚಿಸಲಾಗಿದೆ. ಇದರಲ್ಲಿ ರಾಮಾಯಣ, ಭಾಗವತ, ಪ್ರಹ್ಲಾದನ ದೃಶ್ಯ ಸನ್ನಿವೇಶದ ಶಿಲ್ಪಗಳನ್ನು ಚಿಕ್ಕದಾಗಿ ಬಿಡಿಸಲಾಗಿದೆ. ಐದನೇ ಸಾಲಿನಲ್ಲಿ ವ್ಯಾಳಗಳನ್ನು ಒಂದರ ಹಿಂದೆ ಒಂದರಂತೆ ಜೋಡಣೆ ಮಾಡಲಾಗಿದೆ. ಉಪಮಂಟಪ ಮತ್ತು ಮುಖಮಂಟಪಗಳಲ್ಲಿರುವ ಕಕ್ಷಾಸನದ ಹಿಂಬದಿಯಲ್ಲಿ ಹಂಸಗಳನ್ನು ಬಿಡಿಸಲಾಗಿದೆ.**(ಚಿ.ಸಂ.105)**

ಈ ಪ್ರತಿಯೊಂದು ಪಟ್ಟಿಕೆಯೂ ಸಹ ಏಳು ಅಂಗುಲ ಅಗಲವಾಗಿದೆ. ಆನೆ ಮತ್ತು ಅಶ್ವಾರೋಹಿಗಳ ಪಟ್ಟಿಯಲ್ಲಿ ಕಾಣಬರುವ ಉಡುಗೆ ತೊಡುಗೆಗಳು, ಆಭರಣಗಳು, ಆಯುಧಗಳು ಗಮನಾರ್ಹವಾದಂತಹವುಗಳಾಗಿವೆ. ರಾಮಾಯಣ, ಮಹಾಭಾರತ, ಭಾಗವತ ಕಥೆಗಳು, ಪೌರಾಣಿಕ ಕಥೆಗಳ ಪಟ್ಟಿಕೆಗಳಲ್ಲಿ ಪೂರ್ವದಿಂದ ಆರಂಭಿಸಿದರೆ ರಾಮಾಯಣದ ಕಥೆ, ದಶರಥನ ಆಸ್ಥಾನ, ಪುತ್ರ ಕಾಮೇಷ್ಠಿಯಾಗದಿಂದ ಹಿಡಿದು ರಾಮ ಸುಗ್ರೀವರ ಸ್ನೇಹದವರೆಗೂ ಕೆತ್ತನೆ ಮಾಡಲಾಗಿದೆ. ಅನಂತರ ಕೃಷ್ಣನ ಜನ್ಮದಿಂದ ಹಿಡಿದು ಕಂಸನ ವಧೆವರೆವಿಗೂ ಭಾಗವತ ಕಥೆ ಇದೆ. ಕೊನೆಯಲ್ಲಿ ಮಹಾಭಾರತದ ಕಥೆ ಇದೆ. ಮುಖಮಂಟಪದ ಎರಡೂ ಕಡೆ ಇರುವ ಕಕ್ಷಾಸನದ ಹಿಂಬದಿಯಲ್ಲಿ ಮಿಥುನ ಶಿಲ್ಪಗಳು ದೇವ ದೇವತೆಗಳ ಶಿಲ್ಪಗಳು ಕಾಣಬರುತ್ತವೆ. **(ಚಿ.ಸಂ.103)**

**ಭಿತ್ತಿ**:-ಭಿತ್ತಿಯನ್ನು ಎರಡು ಭಾಗವಾಗಿ ವಿಂಗಡಿಸಿ ನಿರ್ಮಿಸಲಾಗಿದೆ. ಭಿತ್ತಿಯ ಕೆಳಭಾಗದಲ್ಲಿ ದೇವಾಲಯದ ಸುತ್ತಲೂ ಸುಂದರವಾಗಿ ಕೆತ್ತನೆ ಮಾಡಿ ಸೇರಿಸಲಾಗಿರುವ 194 ಶಿಲ್ಪಗಳಿವೆ. ಭಿತ್ತಿಯನ್ನು ಹಿನ್ಸರಿತ ಮತ್ತು ಮುನ್ಸರಿತವಾಗಿ ರಚಿಸಲಾಗಿದೆ. ಇಲ್ಲಿ ಬಿಡಿಸಲಾಗಿರುವ ಶಿಲ್ಪಗಳ ಶಿರದ ಮೇಲೆ ಕಮಾನಿನಾಕಾರವಾಗಿ ಸೂಕ್ಷ್ಮ ಕೆತ್ತನೆ ಮಾಡಲಾಗಿರುವ ಉಬ್ಬಿದ ಭಾಗವನ್ನು ಕಾಣಬಹುದು. ಭಿತ್ತಿಯಲ್ಲಿ ಸೇರಿಸಲಾಗಿರುವ ಶಿಲ್ಪಗಳ ವಿವರವನ್ನು ಈ ಕೆಳಗಿನಂತೆ ವಿವರಣೆ ನೀಡಲಾಗಿದೆ.

**ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀ**:-ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು, ತನ್ನ ಎರಡು ಕೈಗಳಲ್ಲಿ ಬಹುಬೀಜ ಫಲ ಮತ್ತು ಪದ್ಮ ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸೂಕ್ಷ್ಮಕೆತ್ತನೆಯಿಂದ ಕೂಡಿದ್ದು, ಸುಂದರವಾಗಿವೆ.

**ವಾಸುದೇವ**:-ಈ ದೇವನು ವಾಸುಕಿಯನ್ನು ಪೀಠವನ್ನಾಗಿ ಮಾಡಿಕೊಂಡು ಅದರ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ಚತುರ್ಭುಜವನ್ನು ಹೊಂದಿರುವ ವಾಸುದೇವನು ಒಂದು ಕೈಯನ್ನು ಸರ್ಪದ ಮೇಲಿರಿಸಿದ್ದಾನೆ. ಇನ್ನೊಂದು ಕೈ ಲಂಬ ಹಸ್ತವಾಗಿ ಮೊಣಕಾಲಿನ ಮೇಲಿದೆ. ಉಳಿದೆರಡು ಕೈಗಳಲ್ಲಿ ಚಕ್ರ, ಶಂಖ ಹಿಡಿದುಕೊಂಡಿದ್ದಾನೆ. ತಲೆಯ ಮೇಲೆ ಸರ್ಪವು ತನ್ನ ಏಳು ಹೆಡೆಗಳನ್ನು ಛತ್ರಿಯಂತೆ ಬಿಚ್ಚಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪುಷ್ಪ ಹಿಡಿದು ನಿಂತಿರುವ ಸ್ತ್ರೀ ದೇವತೆಯರಿದ್ದಾರೆ. ಪಕ್ಕದಲ್ಲಿ ಭಕ್ತ ಜನರು ನಿಂತಿದ್ದಾರೆ.**(ಚಿ.ಸಂ.114)**

**ತಬಲದಾರಿ ಪುರುಷ**:-ಈ ಪುರುಷನು ತನ್ನ ತೊಡೆಗಳ ಮೇಲೆ ತಬಲವನ್ನು ಇಟ್ಟುಕೊಂಡಿದ್ದು, ಅದನ್ನು ಎಡಗೈಯಲ್ಲಿ ಹಿಡಿದುಕೊಂಡಿದ್ದಾನೆ. ಬಲಗೈಯಿಂದ ತಬಲವನ್ನು ನುಡಿಸುತ್ತಿದ್ದಾನೆ.

ವಕ್ರಭಂಗಿಯಲ್ಲಿ ನಿಂತಿರುವ ಈ ಪುರುಷನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ನೃತ್ಯ ಗಣಪತಿ**:-ಈ ಗಣಪನು ಎಡಗಾಲನ್ನು ಭೂ ಸ್ಪರ್ಶ ಮಾಡಿದ್ದಾನೆ. ಎಡಗಾಲನ್ನು ಮೇಲಕ್ಕೆ ಎತ್ತಿಕೊಂಡಿದ್ದಾನೆ. ಚತುರ್ಭುಜ ಹೊಂದಿರುವ ಈ ದೇವನು ಸ್ವರ್ಗಾಸ್ತ, ಬಹುಬೀಜಫಲ, ಮುರಿದ ದಂತ, ಅಂಕುಶವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು, ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಭಕ್ತರು ನಮಸ್ಕರಿಸುತ್ತಿದ್ದಾರೆ ಮತ್ತು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯರು ಫಲ ಮತ್ತು ಪದ್ಮ ಹಿಡಿದು ನಿಂತಿದ್ದಾರೆ.**(ಚಿ.ಸಂ.115)**

**ನೃತ್ಯ ಸರಸ್ವತಿ**:-ಸರಸ್ವತಿ ದೇವಿಯು ಬಲಗಾಲನ್ನು ಮೇಲಕ್ಕೆ ಎತ್ತಿದ್ದಾಳೆ. ಎಡಗಾಲು ಭೂ ಸ್ಪರ್ಶ ಮಾಡುತ್ತಿದೆ. ಅಷ್ಟ ಭುಜವನ್ನು ಹೊಂದಿರುವ ಈ ದೇವಿಯು ದಂಡ, ಪುಸ್ತಕ, ಒಂದು ಕೈ ಮುರಿದಿದೆ. ಮಣಿಹಸ್ತ, ಅಂಕುಶ, ಲಂಭಹಸ್ತ ಹೊಂದಿದ್ದಾಳೆ. ಈ ದೇವಿಯ ಇಕ್ಕೆಲಗಳಲ್ಲಿ ಸಂಗೀತಗಾರರು ನಿಂತಿದ್ದಾರೆ.ಫಲ ಮತ್ತು ಪುಷ್ಪ ಹಿಡಿದು ನಿಂತಿರುವ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದಾಳೆ. ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು, ಆಕರ್ಷಕವಾಗಿದೆ.**(ಚಿ.ಸಂ.116,117)**

**ಉಪೇಂದ್ರ**:-ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ಷಡ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಗಧಾ, ವರದಹಸ್ತ, ದಂಡ, ಶಂಖ, ಚಕ್ರ ಮತ್ತು ಪಾಶವನ್ನು ಹಿಡಿದುಕೊಂಡಿದ್ದಾನೆ. ಸುಂದರವಾಗಿರುವ ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸೂಕ್ಷ್ಮಕೆತ್ತನೆಯಿಂದ ಕೂಡಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪುಷ್ಪ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ. ಈ ದೇವನ ಬಲಭಾಗದಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ಸ್ತ್ರೀ ಶಿಲ್ಪವಿದೆ.**(ಚಿ.ಸಂ.118)**

**ವೇಣುಗೋಪಾಲ**:-ತ್ರಿಭಂಗಿಯಲ್ಲಿ ನಿಂತಿರುವ ಗೋಪಾಲನು ತನ್ನ ಎರಡೂ ಕೈಗಳಲ್ಲಿ ಕೊಳಲನ್ನು ಹಿಡಿದು ನುಡಿಸುತ್ತಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಆಕರ್ಷಕವಾಗಿದೆ. ಈ ದೇವನ ಬಾಹುವಿನ ಮೇಲೆ ಶಂಖ, ಚಕ್ರಗಳಿವೆ. ಇಕ್ಕೆಲಗಳಲ್ಲಿ ಗೋವುಗಳು ನಿಂತಿವೆ. ತಲೆಯ ಮೇಲೆ ಕಲ್ಪವೃಕ್ಷವಿದೆ. ಇಕ್ಕೆಲಗಳಲ್ಲಿ ಗೋವುಗಳನ್ನು ಕಾಯುವವರು ಸ್ತ್ರೀಯರು ನಿಂತಿದ್ದಾರೆ. ಈ ದೇವನ ಬಲಭಾಗದಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ಸ್ತ್ರೀಯ ಶಿಲ್ಪವಿದೆ.[120]**(ಚಿ.ಸಂ.119)**

**ದಾಮೋಧರ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಬಲಗೈಗಳಲ್ಲಿ ಶಂಖ, ಗಧಾ, ಎಡಗೈಗಳಲ್ಲಿ ಚಕ್ರ ಪದ್ಮವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಕಲಾತ್ಮಕ ಕೆತ್ತನೆಯಿಂದ ಕೂಡಿದ್ದು ಆಕರ್ಷಕವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ಸ್ತ್ರೀಯರಿದ್ದಾರೆ. ಈ ದೇವನ ಬಲಭಾಗದಲ್ಲಿ ತ್ರಿಭಂಗಿಯಲ್ಲಿ ನಿಂತು ಫಲ ಮತ್ತು ಪದ್ಮವನ್ನು ಹಿಡಿದುಕೊಂಡಿರುವ ಸುಂದರವಾದ ಸ್ತ್ರೀಯ ಶಿಲ್ಪವನ್ನು ಬಿಡಿಸಲಾಗಿದೆ.**(ಚಿ.ಸಂ.139)**

**ವಿಷ್ಣು**:-ಸಮಭಂಗಿಯಲ್ಲಿ ನಿಂತು ಚತುರ್ಭುಜ ಹೊಂದಿರುವ ಈ ದೇವನು ತನ್ನ ಬಲಗೈಯಲ್ಲಿ ವಜ್ರಾಯುಧ ಹಿಡಿದುಕೊಂಡಿದ್ದಾನೆ. ದಂಡವನ್ನು ನೆಲಕ್ಕೆ ಊರಿದ್ದಾನೆ. ಉಳಿದೆರಡು ಕೈಗಳಲ್ಲಿ ಶಂಖ, ಚಕ್ರ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ಸೂಕ್ಷ್ಮ ಕೆತ್ತನೆಯಿಂದ ಕೂಡಿರುವ ಆಭರಣಗಳಿವೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಚಾಮರ ಹಿಡಿದು ನಿಂತಿರುವ ಚಾಮರಧಾರಣಿಯರಿದ್ದಾರೆ. ಈ ದೇವನ ಎಡಭಾಗದಲ್ಲಿ ಬಹು ಬೀಜಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಶಿಲ್ಪವಿದೆ.

**ರಾಮ**:- ಸಮಭಂಗಿಯಲ್ಲಿ ನಿಂತಿರುವ ರಾಮನು ನಾಲ್ಕು ಕೈಗಳನ್ನು ಹೊಂದಿದ್ದು ಎಡಗೈಗಳಲ್ಲಿ ಬಿಲ್ಲು, ಶಂಖ ಬಲಗೈಗಳಲ್ಲಿ ಬಾಣ, ಚಕ್ರವನ್ನು ಹಿಡಿದಿದ್ದಾನೆ. ಸುಂದರವಾಗಿ ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಪುಷ್ಪ ಹಿಡಿದು ನಿಂತಿರುವ ದೇವಿಯರಿದ್ದಾರೆ. ಈ ದೇವನ ಬಲಭಾಗದಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ಸ್ತ್ರೀಯ ಶಿಲ್ಪವಿದೆ. ಬಿಲ್ಲುಬಾಣ ಹಿಡಿದು ನಿಂತಿರುವ ವಿಷ್ಣು (ರಾಮ) ಈ ದೇವನು ಸಮಭಂಗಿಯಲ್ಲಿ ನಿಂತಿದ್ದು ಷಡ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಪದ್ಮಪುಷ್ಪ ಬಾಣ, ಬಿಲ್ಲು, ಅಭಯಹಸ್ತ ಮತ್ತು ವರದ ಹಸ್ತವನ್ನು ಹೊಂದಿದ್ದಾನೆ. ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ. ಈ ದೇವನ ಬಲಭಾಗದಲ್ಲಿ ಫಲ ಮತ್ತು ಪುಷ್ಪವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯರ ಶಿಲ್ಪಗಳಿವೆ.**(ಚಿ.ಸಂ.122)**

**ಲಕ್ಷ್ಮೀ**:-ಸಮಭಂಗಿಯಲ್ಲಿ ನಿಂತಿರುವ ಈ ದೇವಿಯು ಷಡ್ಭುಜವನ್ನು ಹೊಂದಿದ್ದಾಳೆ. ಕೈಗಳಲ್ಲಿ ಪಾಶ, ಅಂಕುಶ, ಶಂಖ, ಚಕ್ರ ಬಹುಬೀಜಫಲ ಹಿಡಿದಿದ್ದಾಳೆ. ಒಂದು ಕೈ ಅಭಯ ಹಸ್ತದಲ್ಲಿದೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಈ ದೇವಿಯ ಇಕ್ಕೆಲಗಳಲ್ಲಿ ಸೇವಕಿಯರು ಫಲ ಮತ್ತು ಪದ್ಮ ಹಿಡಿದು ನಿಂತಿದ್ದಾರೆ. ಫಲ ಮತ್ತು ಪದ್ಮ ಹಿಡಿದು

ನಿಂತಿರುವ ಸ್ತ್ರೀಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಈ ದೇವಿಯರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿದೆ.**(ಚಿ.ಸಂ.124)**

**ಧ್ಯಾನಿ ವಿಷ್ಣು:**-ಪದ್ಮಾಸನದಲ್ಲಿ ಕುಳಿತು ಧ್ಯಾನಾಸಕ್ತನಾಗಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಎರಡು ಕೈಗಳು ಧ್ಯಾನ ಮುದ್ರೆಯಲ್ಲಿವೆ. ಉಳಿದೆರಡು ಕೈಗಳಲ್ಲಿ ಶಂಖ, ಚಕ್ರ ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.**(ಚಿ.ಸಂ.125)**

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದ್ದು ಆಕರ್ಷಕವಾಗಿವೆ.

**ನೃತ್ಯಪಾರ್ವತಿ**:-ಈ ದೇವಿಯು ಎಡಗಾಲನ್ನು ಭೂ ಸ್ಪರ್ಶ ಮಾಡಿದ್ದಾಳೆ. ಬಲಗಾಲನ್ನು ಮೇಲಕ್ಕೆ ಎತ್ತಿದ್ದಾಳೆ. ಷಡ್ಭುಜವನ್ನು ಹೊಂದಿರುವ ಈ ದೇವಿಯು ಕೈಗಳಲ್ಲಿ ಸ್ವರ್ಗಹಸ್ತ, ಚಕ್ರ, ಫಲ, ಶಂಖ ಒಂದು ಕೈ ಮುರಿದು ಹೋಗಿದೆ. ಈ ದೇವಿಯ ಇಕ್ಕೆಲಗಳಲ್ಲಿ ಸಂಗೀತಗಾರರು ತಮ್ಮ ಸಲಕರಣೆಗಳನ್ನು ಹಿಡಿದು ನುಡಿಸುತ್ತಿದ್ದಾರೆ.**(ಚಿ.ಸಂ.126)**

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದ್ದು ಆಕರ್ಷಕವಾಗಿವೆ.

**ಪ್ರದ್ಯುಮ್ನ:**-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಷಡ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಕತ್ತಿ, ಗುರಾಣಿ, ಪಾಶ, ಅಂಕುಶ, ಚಕ್ರ, ಒಂದು ಕೈ ಮುರಿದು ಹೋಗಿದೆ. ಈ ದೇವನ ಮೈಮೇಲೆ ಸೂಕ್ಷ್ಮ ಕೆತ್ತನೆ ಮಾಡಿ ಬಿಡಿಸಲಾಗಿರುವ ಸುಂದರವಾದ ವಸ್ತ್ರಾಭರಣಗಳಿವೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ದೇವಿಯರಿದ್ದಾರೆ. ಪೀಠದಲ್ಲಿ ಶಿಲ್ಪಿಯ ಹೆಸರನ್ನು ಬರೆಯಲಾಗಿದೆ.**(ಚಿ.ಸಂ.141)**

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದ್ದು ಆಕರ್ಷಕವಾಗಿವೆ.[121]

**ನಾರಾಯಣ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ಹಾರಗಳು ಮತ್ತು ವಸ್ತ್ರಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು

ಆಕರ್ಷಕವಾಗಿದೆ. ಇಕ್ಕೆಲಗಳಲ್ಲಿ ಫಲ ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ. ಪೀಠದಲ್ಲಿ ಮಲ್ಲಿತಮ್ಮನ ಹೆಸರಿದೆ.[122]**(ಚಿ.ಸಂ.140)**

**ಸ್ಥಾನಿಕ ಬ್ರಹ್ಮ:**–ಸಮಭಂಗಿಯಲ್ಲಿ ನಿಂತಿರುವ ಬ್ರಹ್ಮದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಮಣಿಹಸ್ತ ಗೋಮುಖದಂಡ, ಅಮೃತ ಕಳಸ, ಪಾಶ, ದಂಡವನ್ನು ಹಿಡಿದುಕೊಂಡಿದ್ದಾರೆ. ಬಲಕೈ ತೃಟಿತವಾಗಿದೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಈ ದೇವನ ಇಕ್ಕೆಲಗಳಲ್ಲಿ ಚಾಮರ ಮತ್ತು ಫಲವನ್ನು ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ.**(ಚಿ.ಸಂ.129)**

**ಸ್ತ್ರೀ**:–ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯು ತನ್ನ ಕೈಗಳಲ್ಲಿ ಫಲ ಮತ್ತು ಪದ್ಮಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಿರುವ ವಸ್ತ್ರಗಳ ಆಭರಣಗಳು ಸುಂದರವಾಗಿ ಮೂಡಿಬಂದಿದೆ.

**ವಿಷ್ಣು:**–ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ ಮತ್ತು ಅಭಯಹಸ್ತ ವರದಹಸ್ತ ಹೊಂದಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ಫಲ, ಪುಷ್ಪ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ.

**ಫಲ ಪದ್ಮ ಹಿಡಿದು ನಿಂತಿರುವ ಸ್ತ್ರೀ**:–ಈ ಸ್ತ್ರೀಯು ತ್ರಿಭಂಗಿಯಲ್ಲಿ ನಿಂತಿದ್ದು ಕೈಗಳಲ್ಲಿ ಬಹುಬೀಜ ಫಲ ಮತ್ತು ಪುಷ್ಪವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರ ಕೆತ್ತನೆಯಿಂದ ಕೂಡಿವೆ.

**ಅಮೃತ ಕಳಸ ಹಿಡಿದಿರುವ ಲಕ್ಷ್ಮೀ**:–ಪದ್ಮಾಸನದಲ್ಲಿ ಕುಳಿತಿರುವ ದೇವಿಯು ಫಲ ಮತ್ತು ಕಳಸವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ಆಭರಣ ಸುಂದರವಾಗಿದ್ದು ಆಕರ್ಷಕವಾಗಿದೆ. ಇಕ್ಕೆಲಗಳಲ್ಲಿ ಚಾಮರಣಧಾರಿಣಿಯರು ನಿಂತಿದ್ದಾಳೆ.**(ಚಿ.ಸಂ.132)**

**ಫಲ ಮತ್ತು ಪದ್ಮ ಹಿಡಿದ ಸ್ತ್ರೀ**:–ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯು ತನ್ನ ಕೈಗಳಲ್ಲಿ ಫಲ, ಪದ್ಮ ಪುಷ್ಪ ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಿರುವ ಆಭರಣ ಸುಂದರವಾಗಿವೆ.

**ವಿಷ್ಣು**:–ಪದ್ಮಾಸನದಲ್ಲಿ ಕುಳಿತಿರುವ ದೇವನು ಕೈಗಳಲ್ಲಿ ಫಲ ಮತ್ತು ಕಳಸವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾದ ಅಲಂಕರಣದ ಕೆತ್ತನೆಗಳಿಂದ ಕೂಡಿದೆ.

**ಫಲ ಹಿಡಿದು ನಿಂತಿರುವ ಸ್ತ್ರೀ**:-ಈ ಸ್ತ್ರೀಯ ತ್ರಿಭಂಗಿಯಲ್ಲಿ ನಿಂತು ತನ್ನ ಎರಡೂ ಕೈಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಸುಂದರವಾದ ವಸ್ತ್ರಾಭರಣಗಳನ್ನು ಬಿಡಿಸಲಾಗಿದೆ.

**ವರಹಾಮೂರ್ತಿ**:-ಸಮಭಂಗಿಯಲ್ಲಿ ನಿಂತಿರುವ ವರಹಸ್ವಾಮಿಯು ಷಡ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಬಲಗೈಗಳಲ್ಲಿ ಪದ್ಮ ಶಂಖ, ಒಂದು ಕೈ ಮುರಿದಿದೆ. ಎಡಗೈಗಳಲ್ಲಿ ದಂಡ, ಮಣಿಹಸ್ತ, ಚಕ್ರವಿದೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ.**(ಚಿ.ಸಂ.133)**

**ನರಸಿಂಹ**:-ಸಮಭಂಗಿಯಲ್ಲಿ ನಿಂತಿರುವ ನರಸಿಂಹದೇವನು ಷಡ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಚಕ್ರ, ಚಾಮರ, ಪದ್ಮ, ಎಡಗೈಗಳಲ್ಲಿ ಶಂಖ, ಪದ್ಮ ಒಂದು ಕೈ ಮುರಿದಿದೆ.**(ಚಿ.ಸಂ.134)**

**ಫಲ ಹಿಡಿದು ನಿಂತಿರುವ ಸ್ತ್ರೀ**:- ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯ ಕೈಗಳಲ್ಲಿ ಫಲ ಮತ್ತು ಪದ್ಮಪುಷ್ಪ ಹಿಡಿದುಕೊಂಡಿದ್ದಾಳೆ. ಮೈಮೇಲೆ ಸುಂದರವಾಗಿ ಬಿಡಿಸಿರುವ ವಸ್ತ್ರಾಭರಣಗಳಿವೆ.

**ಜಾಂಬವ**:-ಸಮಭಂಗಿಯಲ್ಲಿ ನಿಂತಿರುವ ಜಾಂಬವನು ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಮಣಿಹಸ್ತ, ಒಂದು ಕೈ ತೃಟಿತವಾಗಿದೆ. ಉಳಿದ ಕೈಗಳಲ್ಲಿ ಶಂಖ, ಚಕ್ರವಿದೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸುಂದರವಾಗಿದೆ.

**ಇಂದ್ರದೇವ**:-ಈ ದೇವನು ತನ್ನ ವಾಹನವಾದ ಆನೆಯ ಮೇಲೆ ಪತ್ನಿ ಸಮೇತನಾದ ಇಂದ್ರನು ಕೈಗಳಲ್ಲಿ ವಜ್ರಾಯುಧ ಹಿಡಿದು ಹೊರಟಂತೆ ಬಿಡಿಸಲಾಗಿದೆ.

**ಸ್ತ್ರೀಯರು**:-ಇಬ್ಬರು ಸ್ತ್ರೀಯರು ಫಲ ಮತ್ತು ಪುಷ್ಪವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸುಂದರವಾಗಿದೆ.

**ಕಳಸ ಹಿಡಿದಿರುವ ಸ್ತ್ರೀಯರು**:-ಇವರಿಬ್ಬರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ತಮ್ಮ ಕೈಗಳಲ್ಲಿ ಕಳಸ ಮತ್ತು ಪಾಶವಿದ್ದರೆ ಮತ್ತೊಂದು ಶಿಲ್ಪದಲ್ಲಿ ಬಲಗೈಯಲ್ಲಿ ಕಳಸ, ಎಡಗೈಯಲ್ಲಿ ಪದ್ಮವನ್ನು ಹಿಡಿದುಕೊಂಡಿದ್ದಾಳೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಗರುಡವಾಹನ ವಿಷ್ಣು**:-ವಿಷ್ಣುವು ತನ್ನ ಪತ್ನಿ ಸಮೇತನಾಗಿ ತನ್ನ ವಾಹನವಾದ ಗರುಡನ ಭುಜದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ಲಕ್ಷ್ಮೀಯ ವಿಷ್ಣುವಿನ ಎಡ ತೊಡೆಯ ಮೇಲೆ ಸುಖಾಸನದಲ್ಲಿ ಕುಳಿತ ಪದ್ಮವನ್ನು ಹಿಡಿದುಕೊಂಡಿದ್ದಾಳೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿದೆ.**(ಚಿ.ಸಂ.135)**

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದ್ದು ಆಕರ್ಷಕವಾಗಿವೆ.

**ಲಕ್ಷ್ಮೀ ನರಸಿಂಹ:**-ಗರುಡ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವ ನರಸಿಂಹನು ತನ್ನ ಪತ್ನಿಯಾದ ಲಕ್ಷ್ಮೀಯನ್ನು ತೊಡೆಯ ಮೇಲೆ ತಬ್ಬಿ ಹಿಡಿದ್ದಾನೆ. ಕೈಯಲ್ಲಿ ಪದ್ಮವಿದೆ. ಉಳಿದ ಕೈಗಳಲ್ಲಿ ಚಕ್ರ, ಶಂಖ, ಮೂರು ಕೈಗಳು ತುಟಿತವಾಗಿವೆ. ಬಲಭಾಗದಲ್ಲಿ ಸೇವಕನು ನಿಂತಿದ್ದಾನೆ.**(ಚಿ.ಸಂ.136)**

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದ್ದು ಆಕರ್ಷಕವಾಗಿವೆ.

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಷಡ್ಭುಜ ಹೊಂದಿದ್ದಾನೆ. ಕೈಗಳೆಲ್ಲವೂ ಮುರಿದು ಹೋಗಿವೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದ್ದು ಆಕರ್ಷಕವಾಗಿವೆ.

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಷಡ್ಬುಜ ಹೊಂದಿದ್ದು ಎಡಗೈ ವರದ ಹಸ್ತದಲ್ಲಿದೆ. ಇನ್ನುಳಿದ ಐದು ಕೈಗಳು ಮುರಿದು ಹೋಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದ್ದು ಆಕರ್ಷಕವಾಗಿವೆ.

**ನಾಟ್ಯಸರಸ್ವತಿ**:-ನೃತ್ಯಭಂಗಿಯಲ್ಲಿರುವ ಈ ದೇವಿಯು ಷಡ್ಭುಜವನ್ನು ಹೊಂದಿದ್ದಾಳೆ. ಎರಡು ಕೈಗಳಲ್ಲಿ ವೀಣೆ, ಪಾಶ, ಅಂಕುಶ ಮತ್ತು ಪುಸ್ತಕ ಮತ್ತು ಮಣಿ ಹಸ್ತವನ್ನು ಹೊಂದಿದ್ದಾಳೆ. ಸುಂದರವಾಗಿರುವ ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಕಲಾತ್ಮಕ ಕೆತ್ತನೆಯಿಂದ ಕೂಡಿವೆ.**(ಚಿ.ಸಂ.137)**

**ಸ್ತ್ರೀ:**- ಫಲ ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರಿ ಶಿಲ್ಪವಿದೆ.

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಒಂದು ಕೈ ಮುರಿದು ಹೋಗಿದೆ. ಮತ್ತೊಂದು ಕೈ ಅಭಯಹಸ್ತ, ಹಿಂದಿನ ಕೈಗಳಲ್ಲಿ ಶಂಖ ಚಕ್ರ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿ ಬಿಡಿಸಲಾಗಿದೆ.

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಎಡಗೈಯಲ್ಲಿ ಶಂಖ ಹಿಡಿದಿದ್ದಾನೆ. ಉಳಿದ ಮೂರು ಕೈ ಮುರಿದು ಹೋಗಿವೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸುಂದರವಾಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪುಷ್ಪ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ರಾಮ:**-ಎಡಗೈಯಲ್ಲಿ ಬಿಲ್ಲು ಬಲಗೈಯಲ್ಲಿ ಹಿಡಿದಿರುವ ಅಸ್ತ್ರ ಮುರಿದು ಹೋಗಿದೆ. ಎಡಗೈಯಲ್ಲಿ ಪಾಶ, ಬಲಗೈಯಲ್ಲಿ ಹಿಡಿದ ಆಯುಧ ಮುರಿದು ಹೋಗಿದೆ. ಇಕ್ಕೆಲಗಳಲ್ಲಿ ಫಲ ಪದ್ಮ ಹಿಡಿದು ನಿಂತಿರುವ ದೇವಿಯರಿದ್ದಾರೆ.**(ಚಿ.ಸಂ.138)**

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ವಿಷ್ಣು**:-ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ಷಡ್ಭುಜ ಹೊಂದಿದ್ದಾನೆ. ಕೈಗಳು ಮುರಿದು ಹೋಗಿವೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಪದ್ಮ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಹೃಷಿಕೇಶ:**-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಎರಡು ಕೈಗಳು ಮುರಿದು ಹೋಗಿದೆ. ಇಕ್ಕೆಲಗಳಲ್ಲಿ ಚಾಮರಧಾರಿಣಿಯರು ನಿಂತಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾದ ಕೆತ್ತನೆಯಿಂದ ಕೂಡಿದೆ.**(ಚಿ.ಸಂ.150)**

**ಹರಿ**:-ಸಮಭಂಗಿಯಲ್ಲಿ ನಿಂತಿದ್ದು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಬಲಗೈಯಲ್ಲಿದ್ದಂತ ಒಂದು ಕೈ ಮುರಿದು ಹೋಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪುಷ್ಪ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವತೆಯರಿದ್ದಾರೆ.[123]

**ಸ್ತ್ರೀ:-ಫ**ಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ನಾರಾಯಣ**:-**ಸ**ಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು ಪದ್ಮ ಮತ್ತು ಗಧೆಯನ್ನು ಹಿಡಿದುಕೊಂಡಿದ್ದಾನೆ. ಮುಂದಿನ ಎರಡು ಕೈ ಮುರಿದು ಹೋಗಿದೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪುಷ್ಪ ಹಿಡಿದು ನಿಂತಿರುವ ದೇವಿಯರಿದ್ದಾರೆ.**(ಚಿ.ಸಂ.140)**

**ಸ್ತ್ರೀ**:-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಆದರೆ ಈ ದೇವನ ನಾಲ್ಕು ಕೈಗಳು ಸಂಪೂರ್ಣವಾಗಿ ತೃಟಿತವಾಗಿವೆ ಪತ್ತೆಮಾಡಲು ಸಾಧ್ಯವಾಗದಷ್ಟು ಹಾಳಾಗಿದೆ.

**ಸ್ತ್ರೀ**:-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಮಾಧವ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಚಕ್ರ, ಪದ್ಮ, ಶಂಖ, ಬಲಗೈ ಮುರಿದು ಹೋಗಿದೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಇಕ್ಕೆಲಗಳಲ್ಲಿ ದೇವಿಯರು ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾರೆ.**(ಚಿ.ಸಂ.127)**

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಅಭಯಹಸ್ತ, ಗಧೆ ಹೊಂದಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ದೇವತೆಯರಿದ್ದಾರೆ.

**ಸ್ತ್ರೀ**:- ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ರಾಮ**:- ಸಮಭಂಗಿಯಲ್ಲಿ ನಿಂತಿರುವ ಈ ದೇವನು ಷಡ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಬಿಲ್ಲು ಬಾಣ, ಶಂಖ, ಚಕ್ರ, ಗುರಾಣಿ ಒಂದು ಕೈಮುರಿದಿದೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ.**(ಚಿ.ಸಂ.122)**

**ಸ್ತ್ರೀ**:-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಕುಬೇರ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಅಭಯ ಹಸ್ತ ಮತ್ತು ಚೌಕಾಕಾರದ ಆಯುಧವನ್ನು ಹಿಡಿದಿದ್ದಾನೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸುಂದರವಾಗಿದೆ.

**ಸ್ತ್ರೀ**:-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ನಾರಾಯಣ:-** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು ಅಭಯಹಸ್ತ, ಕಠಿಹಸ್ತ ಹಿಡಿದಿದ್ದಾನೆ. ಉಳಿದರೆಡು ಕೈಗಳು ಮುರಿದು ಹೋಗಿವೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಸ್ತ್ರೀ**:-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ವಿಷ್ಣು**:-ಸಮಭಂಗಿಯಲ್ಲಿ ಈ ದೇವನು ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಬಾಣ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಪದ್ಮ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಸ್ತ್ರೀ**:-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಮಧುಸೂದನ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ ಪದ್ಮವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿವೆ. ಇಕ್ಕೆಲಗಳಲ್ಲಿ ಫಲ ಪದ್ಮ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಸ್ತ್ರೀ**:-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಶ್ರೀಧರ:**-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಮುಂದಿನ ಎರಡು ಕೈಗಳು ತೃಟಿತವಾಗಿದೆ. ಹಿಂದಿನ ಕೈಗಳಲ್ಲಿ ಚಕ್ರ ಗಧೆಯನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ದೇವಿಯರು ಫಲ ಪದ್ಮ ಹಿಡಿದು ನಿಂತಿದ್ದಾರೆ.**(ಚಿ.ಸಂ.128)**

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಭಕ್ತ:**-ಸಮಭಂಗಿಯಲ್ಲಿ ನಿಂತಿದ್ದು ತನ್ನ ಎರಡೂ ಕೈಗಳನ್ನು ಜೋಡಿಸಿ ನಮಸ್ಕರಿಸುತ್ತಿರುವನು ಈ ಪುರುಷನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಶಂಖ ಮಾತ್ರ ಹೊಂದಿದ್ದು, ಉಳಿದ ಮೂರು ಕೈಗಳು ಮುರಿದು ಹೋಗಿವೆ.

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಷಡ್ಭುಜ ವಿಷ್ಣು:**-ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ಆರು ಕೈಗಳನ್ನು ಹೊಂದಿದ್ದಾನೆ. ಒಂದು ಕೈಯಲ್ಲಿ ದಂಡವನ್ನು ಹಿಡಿದುಕೊಂಡಿದ್ದಾನೆ. ಉಳಿದ ಐದು ಕೈಗಳು ಮುರಿದು ಹೋಗಿವೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾದ ಅಲಂಕರಣದ ಕೆತ್ತನೆಯಿಂದ ಕೂಡಿವೆ. ಈ ದೇವನ ಇಕ್ಕೆಲಗಳಲ್ಲಿ ಚಾಮರಧಾರಣಿಯರಿದ್ದಾರೆ.**(ಚಿ.ಸಂ.145)**

**ಸ್ತ್ರೀ:**-ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಹೃಷಿಕೇಶ**:-ಸಮಭಂಗಿಯಲ್ಲಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಮಣಿಹಸ್ತ, ಚಕ್ರ, ಗಧಾ ಮತ್ತು ಪದ್ಮವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಪದ್ಮ ಫಲ ಹಿಡಿದು ನಿಂತಿರುವ ದೇವತೆಯರಿದ್ದಾರೆ.**(ಚಿ.ಸಂ.150)**

**ಸ್ತ್ರೀ:**–ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ನೃತ್ಯ ಸರಸ್ವತಿ:–** ಈ ದೇವಿಯು ನೃತ್ಯ ಭಂಗಿಯಲ್ಲಿ ನಿಂತಿದ್ದು ಎಡಗಾಲನ್ನು ಭೂಸ್ಪರ್ಶ ಮಾಡಿ ಬಲಗಾಲನ್ನು ಮೇಲಕ್ಕೆ ಎತ್ತಿದ್ದಾಳೆ. ಷಡ್ಭುಜ ಹೊಂದಿದ್ದು, ಕೈಗಳಲ್ಲಿ ವೀಣೆ, ಪುಸ್ತಕ, ಸ್ವರ್ಗಹಸ್ತ, ಲಂಬಹಸ್ತವನ್ನು ಹೊಂದಿದ್ದಾರೆ ಇಕ್ಕೆಲಗಳಲ್ಲಿ ದೇವಿಯರಿದ್ದಾರೆ.

**ಸ್ತ್ರೀ:**–ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ನೃತ್ಯ ವಿಷ್ಣು:–** ಅಷ್ಟಭುಜವನ್ನು ಹೊಂದಿರುವ ಈ ದೇವನು ನೃತ್ಯಭಂಗಿಯಲ್ಲಿ ನಿಂತಿದ್ದಾನೆ. ಈ ದೇವನು ಕೈಗಳಲ್ಲಿ ಸ್ವರ್ಗಹಸ್ತ, ಲಂಬಹಸ್ತ, ಶಂಖ, ಕಳಸ, ಮಣಿಹಸ್ತ ಉಳದ ಕೈ ಮುರಿದು ಹೋಗಿದೆ. ಸುಂದರವಾದ ಅಲಂಕರಣದ ಕೆತ್ತನೆ ಮಾಡಿ ರೂಪಿಸಲಾಗಿದೆ. ಇಕ್ಕೆಲಗಳಲ್ಲಿ ಸಂಗೀತಗಾರರು ನಿಂತಿದ್ದಾರೆ.**(ಚಿ.ಸಂ.144)**

**ಸ್ತ್ರೀ:**–ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ವಿಷ್ಣು:**–ಸಮಭಂಗಿಯಲ್ಲಿರುವ ಈ ದೇವನ ಕೈಗಳೆಲ್ಲವೂ ಸಂಪೂರ್ಣವಾಗಿ ಮುರಿದು ಹೋಗಿವೆ. ಇಕ್ಕೆಲಗಳಲ್ಲಿ ಸಂಗೀತಗಾರರು ನಿಂತಿದ್ದಾರೆ.

**ಸ್ತ್ರೀ:**–ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಲಕ್ಷ್ಮೀ:** ಸಮಭಂಗಿಯಲ್ಲಿ ನಿಂತಿರುವ ಈ ದೇವಿಯು ಕೈಗಳಲ್ಲಿ ಫಲ ಮತ್ತು ಅಮೃತ ಕಳಸ ಹಿಡಿದುಕೊಂಡಿದ್ದಾಳೆ. ಈ ದೇವಿಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ಮನ್ಮಥ:**–ತ್ರಿಭಂಗಿಯಲ್ಲಿ ನಿಂತಿರುವ ಈ ಮನ್ಮಥನು ತನ್ನ ಕೈಗಳಲ್ಲಿ ಕಬ್ಬಿನ ಜಲ್ಲೆ, ಬಾಣ ಹಿಡಿದುಕೊಂಡಿದ್ದಾನೆ. ಇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿವೆ. ಇವರ ಇಕ್ಕೆಲಗಳಲ್ಲಿ ಸೇವಕರು ನಿಂತಿದ್ದಾರೆ.[124]**(ಚಿ.ಸಂ.146)**

**ಸ್ತ್ರೀ:**–ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ವಿಷ್ಣು:**–ಸಮಭಂಗಿಯಲ್ಲಿ ನಿಂತಿರುವ ಈ ದೇವನು ಎಡಗೈಯಲ್ಲಿ ಶಂಖ ಹಿಡಿದಿದ್ದಾನೆ. ಉಳಿದ ಮೂರು ಕೈ ಮುರಿದು ಹೋಗಿವೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸುಂದರವಾಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪುಷ್ಪ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಸ್ತ್ರೀ:**–ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸ್ತ್ರೀಯ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ.

**ವಿಷ್ಣು:**– ಸಮಭಂಗಿಯಲ್ಲಿ ನಿಂತಿರುವ ಈ ದೇವನ ಕೈಗಳಲ್ಲೆವು ಮುರಿದು ಹೋಗಿವೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾದ ಕಲಾತ್ಮಕ ಕೆತ್ತನೆಯಿಂದ ಕೂಡಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಕಮಲದ ಪುಷ್ಪವನ್ನು ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಲಕ್ಷ್ಮೀನಾರಾಯಣ:**–ಗರುಡಪೀಠದ ಮೇಲೆ ಲಕ್ಷ್ಮೀ ಸಮೇತನಾಗಿ ಸುಖಾಸನದಲ್ಲಿ ಕುಳಿತಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಲಕ್ಷ್ಮೀಯು ಈ ದೇವನ ತೊಡೆಯ ಮೇಲೆ ಸುಖಾಸನದಲ್ಲಿ ಕುಳಿತು ಅಮೃತ ಕಳಸ ಹಿಡಿದಿದ್ದಾಳೆ. ನಾರಾಯಣನು ಶಂಖ, ಚಕ್ರ, ಹಸ್ತವನ್ನು ಹೊಂದಿದ್ದಾನೆ. ಲಕ್ಷ್ಮೀಯ ಕಾಲಿನ ಕೆಳಗೆ ಆನೆಯನ್ನು ಬಿಡಿಸಲಾಗಿದೆ. ಸುಂದರವಾಗಿರುವ ಆಭರಣಗಳನ್ನು ಮೈಮೇಲೆ ಬಿಡಿಸಲಾಗಿದೆ. ಈ ದೇವನ ಬಲಭಾಗದಲ್ಲಿ ಗರುಡನು ನಿಂತಿದ್ದಾನೆ.

**ಲಕ್ಷ್ಮೀ:**– ಪದ್ಮಾಸನದಲ್ಲಿ ಕುಳಿತಿರುವ ಈ ದೇವಿಯು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಬಲಗೈಗಳಲ್ಲಿ ಚಕ್ರ, ಪದ್ಮ, ಎಡಗೈಗಳು ಮುರಿದು ಹೋಗಿವೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಕಲಾತ್ಮಕ ಕೆತ್ತನೆಯಿಂದ ಕೂಡಿದೆ.

**ಕೇಶವ:**–ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ಅಷ್ಟಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಮಣಿ ಹಸ್ತ, ಗಧೆ, ಬಲಗೈ ಮುರಿದಿದೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಕಲಾತ್ಮಕ ಕೆತ್ತನೆಯಿಂದ ಕೂಡಿದ್ದು, ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಛಾಮರಾಧಾರಣಿಯರಿದ್ದಾರೆ.

**ವಿಷ್ಣು:**–ಸಮಭಂಗಿಯಲ್ಲಿರುವ ಈ ದೇವನು ಶಂಖ, ಚಕ್ರ, ಗಧಾ, ಪದ್ಮ ಹಿಡಿದಿದ್ದಾನೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮಪುಷ್ಪ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ಹರಿ:**–ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ಷಡ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಬಾಣ, ಪದ್ಮ, ಕಟಿಹಸ್ತ, ಒಂದು ಕೈ ಮುರಿದಿದೆ. ಇಕ್ಕೆಲಗಳಲ್ಲಿ ಫಲಪುಷ್ಪ ಹಿಡಿದು ನಿಂತಿರುವ ದೇವತೆಯರಿದ್ದಾರೆ.

**ವಿಷ್ಣು**:-ಸಮಭಂಗಿಯಲ್ಲಿ ನಿಂತು ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಬಲಗೈಗಳಲ್ಲಿ ಜಪಮಣಿ, ಪದ್ಮ, ಶಂಖ, ಚಕ್ರ ಹಿಡಿದಿದ್ದಾನೆ. ಇಕ್ಕೆಲಗಳಲ್ಲಿ ಫಲ ಪದ್ಮ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ನಾರಾಯಣ:**-ಸಮಭಂಗಿಯಲ್ಲಿರುವ ನಾರಾಯಣ ದೇವನು ಆರು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ಪಾಶ, ಅಂಕುಶ, ಗಧಾ, ಪದ್ಮ, ಶಂಖ, ಚಕ್ರ ಹಿಡಿದುಕೊಂಡಿದ್ದಾನೆ. ಇಕ್ಕೆಲಗಳಲ್ಲಿ ಚಾಮರಧಾರಿಣಿಯರಿದ್ದಾರೆ.

**ಪರಶುರಾಮ**:-ಸಮಭಂಗಿಯಲ್ಲಿ ನಿಂತಿರುವ ಪರಶುರಾಮನು ಆರು ಕೈಗಳನ್ನು ಹೊಂದಿದ್ದಾನೆ. ಕೈಗಳಲ್ಲಿ ಕೊಡಲಿ, ಪಾಶ, ಗಧೆ, ಶಂಖ, ಚಕ್ರ, ಪದ್ಮ ಹಿಡಿದುಕೊಂಡಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಚಾಮರಧಾರಿಣಿಯರಿದ್ದಾರೆ.

**ಕೇಶವ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಮುರಿದಿದೆ. ಇಕ್ಕೆಲಗಳಲ್ಲಿ ಚಾಮರಧಾರಿಣಿಯರಿದ್ದಾರೆ.

**ಪ್ರದ್ಯುಮ್ನ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು, ಹಿಂದಿನ ಕೈಗಳಲ್ಲಿ ಪದ್ಮಪುಷ್ಪ, ವರದಹಸ್ತ, ಅಭಯಹಸ್ತ, ಶಂಖ ಹಿಡಿದಿದ್ದಾನೆ. ಇಕ್ಕೆಲಗಳಲ್ಲಿ ಸೈನಿಕರು ಕತ್ತಿ ಗುರಾಣಿ ಹಿಡಿದು ನಿಂತಿದ್ದಾರೆ.**(ಚಿ.ಸಂ.141)**

**ಜನಾರ್ಧನ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಆರು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ, ವರದಹಸ್ತ, ಅಭಯಹಸ್ತ ಹೊಂದಿದ್ದಾನೆ. ಇಕ್ಕೆಲಗಳಲ್ಲಿ ಚಾಮರಧಾರಿಣಿಯರಿದ್ದಾರೆ.**(ಚಿ.ಸಂ.130)**

**ಹರಿ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಸುಂದರವಾಗಿದ್ದು, ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದಿದ್ದಾನೆ. ಇಕ್ಕೆಲಗಳಲ್ಲಿ ದೇವಿಯರು ಫಲ ಪದ್ಮ ಹಿಡಿದು ನಿಂತಿದ್ದಾರೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿವೆ.

**ಕೃಷ್ಣ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದುಕೊಂಡಿದ್ದಾನೆ, ಇಕ್ಕೆಲಗಳಲ್ಲಿ ದೇವಿಯರು ನಿಂತಿದ್ದಾರೆ.

**ವಾಸುದೇವ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಎಡಗೈಗಳಲ್ಲಿ ಬಲಗೈಗಳಲ್ಲಿ ಗಧಾ, ಪದ್ಮ ಹಿಡಿದುಕೊಂಡಿದ್ದಾನೆ.

ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮಪುಷ್ಪ ಹಿಡಿದು ನಿಂತಿರುವ ದೇವಿಯರಿದ್ದಾರೆ.

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ನಾಲ್ಕು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ಅಲಂಕರಣದ ವಸ್ತ್ರಾಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿವೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ದೇವತೆಯರಿದ್ದಾರೆ.

**ಕೇಶವ**:-ಚತುರ್ಭುಜ ಹೊಂದಿರುವ ಈ ದೇವನು ಸಮಭಂಗಿಯಲ್ಲಿ ನಿಂತಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರ ಮತ್ತು ಆಭರಣಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಇಕ್ಕೆಲಗಳಲ್ಲಿ ಸ್ತ್ರೀ ದೇವತೆಯರು ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾರೆ.

**ದಾಮೋಧರ**:-ಸಮಭಂಗಿಯಲ್ಲಿ ನಿಂತಿದ್ದು, ಷಡ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಅಭಯಹಸ್ತ, ಫಲ ಮತ್ತು ಶಂಖ, ಚಕ್ರ, ಪದ್ಮ, ಕಳಸ ಹಿಡಿದುಕೊಂಡಿದ್ದಾನೆ. ಇಕ್ಕೆಲಗಳಲ್ಲಿ ಪದ್ಮಫಲ ಹಿಡಿದಿರುವ ದೇವಿಯರಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ನಾರಾಯಣ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಆರು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ, ಅಭಯಹಸ್ತ, ಪದ್ಮ ಹಿಡಿದುಕೊಂಡಿದ್ದಾನೆ. ಇಕ್ಕೆಲಗಳಲ್ಲಿ ಚಾಮರಧಾರಿಣಿಯರಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ದೇವತೆಯರಿದ್ದಾರೆ.

**ಪರಶುರಾಮ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಆರು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ಪದ್ಮ, ಕತ್ತಿ ಮತ್ತು ಶಂಖ ಹಾಗೂ ಎಡಗೈಗಳು ತೃಟಿತವಾಗಿವೆ. ಇಕ್ಕೆಲಗಳಲ್ಲಿ ಚಾಮರಧಾರಿಣಿಯರಿದ್ದಾರೆ.

**ವಿಷ್ಣು**:-ತ್ರಿಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಎರಡು ಕೈ ತೃಟಿತವಾಗಿವೆ. ಎರಡು ಕೈಗಳಲ್ಲಿ ಶಂಖ, ಚಕ್ರ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪುಷ್ಪ ಹಿಡಿದು ನಿಂತಿರುವ ದೇವತೆಯರಿದ್ದಾರೆ.

**ನಾರಾಯಣ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಆರು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ ಮತ್ತು ಬಲಗೈ ಮುರಿದಿದೆ. ಎಡಗೈಯಲ್ಲಿ ಗುರಾಣಿ ಇದೆ. ಇಕ್ಕೆಲದಲ್ಲಿ ದೇವಿಯರಿದ್ದಾರೆ.

**ದೇವತೆ**:-ಪದ್ಮಾಸನದಲ್ಲಿ ಕುಳಿತಿರುವ ಈ ದೇವಿಯಲ್ಲಿ ಫಲ ಮತ್ತು ಜಪಮಣಿಯನ್ನು ಹೊಂದಿದ್ದಾಳೆ. ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ನೃತ್ಯ ಲಕ್ಷ್ಮೀ**:- ಅಷ್ಟಭುಜ ಹೊಂದಿರುವ ಈ ದೇವಿಯು ನೃತ್ಯ ಭಂಗಿಯಲ್ಲಿದ್ದು, ಕೈಗಳಲ್ಲಿ ಅಭಯಹಸ್ತ, ವರದಹಸ್ತ, ಫಲ, ಉಳಿದ ಮೂರು ಕೈ ತೃಟಿತವಾಗಿವೆ. ಇಕ್ಕೆಲಗಳಲ್ಲಿ ಸಂಗೀತಗಾರರು ನಿಂತಿದ್ದಾರೆ.**(ಚಿ.ಸಂ.151)**

**ವಿಷ್ಣು**:-ಅಷ್ಟಭುಜ ಹೊಂದಿದ್ದು, ಸಮಭಂಗಿಯಲ್ಲಿ ನಿಂತಿದ್ದಾನೆ. ಕೈಗಳಲ್ಲಿ ಪಾಶ, ಪದ್ಮ, ಅಭಯಹಸ್ತ, ವರದಹಸ್ತ ಹಾಗೂ ಉಳಿದ ಕೈ ಮುರಿದು ಹೋಗಿವೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ದೇವಿಯರಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

**ವಿಷ್ಣು**:-ಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜ ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಕತ್ತಿ, ಅಮೃತ ಕಳಸ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ಸ್ತ್ರೀದೇವಿಯರಿದ್ದಾರೆ.

**ಮಹಿಷಮರ್ದಿನಿ**:-ಈ ದೇವಿಯು ಚತುರ್ಭುಜ ಹೊಂದಿದ್ದು, ಕೈಗಳಲ್ಲಿ ತ್ರಿಶೂಲವನ್ನು ಹಿಡಿದು ಮಹಿಷನ ಬೆನ್ನಿಗೆ ಇರಿದಿದ್ದಾಳೆ. ಒಂದು ಕಾಲನ್ನು ಮಹಿಷನ ಮೇಲಿಟ್ಟು ತುಳಿದಿದ್ದಾಳೆ. ಇನ್ನೊಂದು ಕೈಯಲ್ಲಿ ಮಹಿಷನ ಸಹಚರನಿಗೆ ಕತ್ತಿಯಿಂದ ಇರಿದಿದ್ದಾಳೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.**(ಚಿ.ಸಂ.152)**

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಬಲಗೈಗಳಲ್ಲಿ ಪಾಶ, ಬಾಣ, ಎಡಗೈಗಳಲ್ಲಿ ಶಂಖ, ಚಕ್ರ, ಹಿಡಿದುಕೊಂಡಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ದೇವತೆಯರಿದ್ದಾರೆ. ಮೈಮೇಲೆ ಬಿಡಿಸಲಾಗಿರುವ ಅಲಂಕರಣದ ವಸ್ತ್ರಾಭರಣಗಳು ಸೂಕ್ಷ್ಮ ಕೆತ್ತನೆಯಿಮದ ಕೂಡಿವೆ.

**ನೃತ್ಯ ಲಕ್ಷ್ಮೀ**:-ಈ ದೇವಿಯು ನೃತ್ಯ ಭಂಗಿಯಲ್ಲಿದ್ದು, ಬಲಗಾಲನ್ನು ಭೂಸ್ಪರ್ಶ ಮಾಡಿದ್ದಾಳೆ. ಎಡಗಾಲನ್ನು ಮೇಲಕ್ಕೆ ಎತ್ತಿದ್ದಾಳೆ. ಕೈಗಳಲ್ಲಿ ಅಭಯಹಸ್ತ, ವರದಹಸ್ತ, ಉಳಿದ ಆರು ಕೈಗಳು

ತೃಟಿತವಾಗಿವೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇಕ್ಕೆಲಗಳಲ್ಲಿ ಢಮರು ಹಿಡಿದು ನುಡಿಸುತ್ತಿರುವ ಸಂಗೀತಗಾರರಿದ್ದಾರೆ.

**ಸ್ತ್ರೀ**:-ತ್ರಿಭಂಗಿಯಲ್ಲಿ ನಿಂತಿರುವ ಈ ಸ್ತ್ರೀಯು ಕೈಗಳಲ್ಲಿ ಫಲ ಪದ್ಮ ಹಿಡಿದು ನಿಂತಿದ್ದಾಳೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ.

ಮುಖಮಂಟಪದ ಹೊರಭಾಗದಲ್ಲಿ ಸೈನಿಕರ ಶಿಲ್ಪಗಳು, ಭಕ್ತರು, ಸನ್ಯಾಸಿಗಳು, ಹೋರಾಟದ ದೃಶ್ಯ ಸನ್ನಿವೇಶಗಳು. ಮುಖಮಂಟಪದ ಭಿತ್ತಿಯಲ್ಲಿ ಜಾಲಾಂದ್ರಗಳನ್ನು ಜೋಡಿಸಲಾಗಿದೆ.

ಕೇಶವ ದೇವಾಲಯದ ಮೇಲಿನ ಭಿತ್ತಿಯಲ್ಲಿ ಏಕಕಂಬ ಶಿಖರಗಳು, ದ್ವಿಕಂಬ ಶಿಖರಗಳನ್ನು ರಚಿಸಿ ಅಲಂಕರಿಸಲಾಗಿದೆ. ಭಿತ್ತಿಯ ಮೇಲಿನ ಕಪೋತವು ಭಿತ್ತಿಯಿಂದ 2 ಅಡಿ ಮುಂದೆ ಚಾಚಿದ್ದು, ಕಮಾನಿನಾಕಾರವಾಗಿ ಮಾಡಲಾಗಿದೆ. ಕಪೋತದ ಅಂಚಿನಲ್ಲಿ ಮಣಿಹಾರಗಳ ಕಮಲದ ಚಿಕ್ಕ ಚಿಕ್ಕ ಮೊಗ್ಗುಗಳನ್ನು ಬಿಡಿಸಲಾಗಿದೆ. ಅಂಚಿನಲ್ಲಿ ಅಲ್ಲಲ್ಲಿ ಕೂಡುಗಳನ್ನು ಬಿಡಿಸಲಾಗಿದೆ. ಕಪೋತದ ಮೇಲಿರುವ ಹಾರದಲ್ಲಿ ಕೀರ್ತಿಮುಖಗಳ ಕುಬ್ಜ ಶಿಲ್ಪಗಳು ದುಂಡು ಶಿಲ್ಪಗಳು ದಶಾವತಾರಕ್ಕೆ ಸಂಬಂಧಿಸಿದ ಶಿಲ್ಪಗಳು ಕಂಡುಬರುತ್ತವೆ.

**ಶಿಖರ**:-ಈ ದೇವಾಲಯದ ಮೂರು ಗರ್ಭಗೃಹಗಳ ಮೇಲೂ ಶಿಖರಗಳು ಸುಸ್ಥಿತಿಯಲ್ಲಿವೆ. ಶೀಖರವು ನಾಲ್ಕು ತಲಗಳನ್ನು ಹೊಂದಿವೆ. ಶಿಖರದ ಹೊರಮೇಲ್ಮೈಯಲ್ಲಿ ದುಂಡು ಶಿಲ್ಪಗಳು ಕಳಸಗಳು ಕೀರ್ತಿಮುಖಗಳು, ಕೂಡು ಶಿಲ್ಪಗಳನ್ನು ಬಿಡಿಸಿ ಅಲಂಕರಣಗೊಳಸಲಾಗಿದೆ. ಇದರಲ್ಲಿ ದೇವ ದೇವತೆಯರ ಚಿಕ್ಕ ಚಿಕ್ಕ ಶಿಲ್ಪಗಳಿವೆ. ಶಿಖರದ ಮೇಲೆ ನಕ್ಷತ್ರಾಕಾರವಾಗಿರುವ ಸ್ತೂಪಿ. ಸ್ತೂಪಿಯ ಮೇಲೆ ಕಳಸಗಳನ್ನು ಇಡಲಾಗಿದೆ.**(ಚಿ.ಸಂ.107)** ಸುಖಾಸನದ ಮುಂಭಾಗದಲ್ಲಿ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಶಿಲ್ಪಗಳನ್ನು ಬಿಡಿಸಲಾಗಿದೆ. ಅಲ್ಲದೆ ಯಕ್ಷಯಕ್ಷಿಯರ ಶಿಲ್ಪಗಳು ಶಿಖರದಲ್ಲಿ ಉತ್ತರ ಶಿಖರದಲ್ಲಿ ಷಡ್ಭುಜ, ನೃತ್ಯ ವಿಷ್ಣು, ದಕ್ಷಿಣ ಶಿಖರದ ಸುಕನಾಸಿಯ ಮುಂಭಾಗದಲ್ಲಿ ಅಷ್ಟಭುಜ ವಿಷ್ಣು.**(ಚಿ.ಸಂ.113)**

**ಮುಖ್ಯದ್ವಾರ ಮತ್ತು ಪ್ರಾಕಾರ**:-ಈ ದೇವಾಲಯದ ಪೂರ್ವ ಭಾಗದಿಂದ ಮೂರು ನಾಲ್ಕು ಮೆಟ್ಟಿಲುಗಳನ್ನೇರಿ ಮಹಾದ್ವಾರವನ್ನು ಪ್ರವೇಶಿಸಿದಾಗ ಇದರ ದಕ್ಷಿಣ ಮತ್ತು ಉತ್ತರ ಹಾಗೂ ಪಶ್ಚಿಮದಲ್ಲಿ ಕಾಲುದಾರಿ ವಿಸ್ತರಿಸಿದ್ದು, ಕೇಶವ ದೇವಾಲಯವನ್ನು ಸುತ್ತುವರೆದಿರುವ ಹಜಾರದಲ್ಲಿ ಒಂದು ವೇದಿಕೆ ಕಂಡುಬರುತ್ತದೆ. ಪ್ರಾಕಾರದ ಒಳಭಾಗದಲ್ಲಿ ಸುತ್ತಲೂ ಹೊಯ್ಸಳ ಶೈಲಿಯಲ್ಲಿ ರಚಿತವಾಗಿರುವ ಒಂದು ಸಾಲು ಕಂಬಗಳನ್ನು ವೇದಿಕೆಯ ಅಂಚಿನಲ್ಲಿ ನಿಲ್ಲಿಸಿ ಪ್ರಾಕಾರದ

ಗೋಡೆ ಮತ್ತು ಕಂಬದ ಮೇಲಿರುವ ಕಪೋತಕ್ಕೆ ಹೊಂದಿಕೊಂಡಂತೆ ಅಡ್ಡ ಪಟ್ಟಿಯ ಕಲ್ಲುಗಳನ್ನು ಹಾಕಿ ಅದರ ಮೇಲೆ ಚಾವಣಿಯನ್ನು ನಿರ್ಮಿಸಿ ಒಳಭಾಗ ಮುಕ್ತವಾಗಿ ಪ್ರಾಕಾರದ ಗೋಡೆಗೆ ಸೇರಿಕೊಂಡಂತೆ ಸೇರಿಸಿ ಕೈಸಾಲೆಯನ್ನು ನಿರ್ಮಿಸಲಾಗಿದೆ.

ಈ ಪ್ರಾಕಾರದ ಪೂರ್ವ ಮತ್ತು ಆಗ್ನೇಯ ಭಾಗದಲ್ಲಿ ದೇವಾಲಯಕ್ಕೆ ಸಂಬಂಧಿಸಿದ ಒಂದು ಶಾಸನವಿದೆ. ಈ ಪ್ರಾಕಾರ ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡಿದ್ದು ಸುಸ್ಥಿತಿಯಲ್ಲಿದೆ.**(ಚಿ.ಸಂ.108)** ಇದರಲ್ಲಿ 64 ಸಾಲು ಗುಡಿಗಳು ಪ್ರಾಕಾರದ ಹೊರ ಪಾರ್ಶ್ವವನ್ನು ಹೊಂದಿದ್ದು, ಇವುಗಳಲ್ಲಿ 52 ಮಾತ್ರ ಉಳಿದುಕೊಂಡಿವೆ. ನಾಲ್ಕು ಮೂಲೆಗಳಲ್ಲಿರುವ ಜೋಡು ಮಂದಿರಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಇವುಗಳ ಸಮಸ್ಯೆ 56ಕ್ಕೆ ಏರುತ್ತದೆ. ಪೂರ್ವ ದಿಕ್ಕಿನಲ್ಲಿರುವ ಮಹಾದ್ವಾರದ ಇಕ್ಕೆಲಗಳಲ್ಲಿ ವಿಸ್ತರಿಸಿಕೊಂಡಿದ್ದ 8 ಗುಡಿಗಳು ಈಗ ಇಲ್ಲ. ಮೈಸೂರು ಸರ್ಕಾರವು 1924ರಲ್ಲಿ ಮಹಾದ್ವಾರದ ಉತ್ತರ ದಕ್ಷಿಣದ ಭಗ್ನಾವಶೇಷಗಳನ್ನೆಲ್ಲಾ ತೆಗೆದುಹಾಕಿ ಮಹಾದ್ವಾರದ ಮುಂದಿನ ಕೈ ಸಾಲೆಯನ್ನು ದುರಸ್ಥಿ ಮಾಡಿದುದಲ್ಲದೆ ದೇವಾಲಯವನ್ನೆಲ್ಲ ಜೀರ್ಣೋದ್ಧಾರಗೊಳಿಸಿದೆ ಎಂಬುದು ದಾಖಲೆಗಳಿಂದ ತಿಳಿದುಬರುತ್ತದೆ.

ಸಾಲು ಮಂದಿರದಲ್ಲಿರುವ ದೇವತಾ ಮೂರ್ತಿಗಳು ಈ ಪ್ರಾಕಾರವನ್ನು ಮೂಲ ದೇವಾಲಯದ ಅಂಗವೆಂದೇ ಪರಿಗಣಿಸಿ ಇಲ್ಲಿನ ಸಾಲು ಮಂದಿರಗಳಲ್ಲಿ ವಿಷ್ಣುವಿನ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿತ್ತು. ಈ ಪ್ರತಿಯೊಂದು ಗುಡಿಗೆ ಸರಳ ಸುಂದರ ಕಿರು ಬಾಗಿಲುಗಳಿದ್ದು, ಅದರ ಶಾಖೆಗಳನ್ನು ಕಿರುಗೋಪುರ ಮತ್ತು ತೂಗುಗಳಿಂದ ಹಿತಮಿತವಾಗಿ ಅಲಂಕರಿಸಲಾಗಿದೆ. ಪ್ರತಿ ಮಂದಿರದೊಳಗಿನ ಮಧ್ಯ ವೇದಿಕೆಯ ಮೇಲೆ ಸುಮಾರು ನಾಲ್ಕು ಅಡಿಗಳ ಎತ್ತರದ ದೇವತಾ ಮೂರ್ತಿ ಮೂಲದಲ್ಲಿ ಇದ್ದುವು. ಈಗ ಅವುಗಳಲ್ಲಿ ಕೆಲವು ಮಾತ್ರ ಉಳಿದುಕೊಂಡಿವೆ. ಇನ್ನು ಕೆಲವು ವಿಜಯನಗರ ಅರಸರ ಕಾಲದಲ್ಲಿ ಸೇರಿಸಿ ಮೂರ್ತಿಗಳೊಡನೆ ಸ್ಥಳ ಹಂಚಿಕೊಂಡಿವೆ.**(ಚಿ.ಸಂ.109)** ಮೊದಲು ಇಲ್ಲದ್ದ ಆರು ವಿಗ್ರಹಗಳು ಈಗ ಕೇಶವ ದೇವಾಲಯದ ವೇದಿಕೆಗೆ ಹೊಂದಿಕೊಂಡು ತೆರೆದಂಗಳದಲ್ಲಿ ನಿಂತಿವೆ.

ಶಾಸನದಲ್ಲಿ ತಿಳಿಸಿರುವಂತೆ 64 ಮಂದಿರಗಳಲ್ಲಿ ಪ್ರಧಾನವಾಗಿ ವಿಷ್ಣುವಿನ ವಿವಿಧ ಅವತಾರಗಳ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿತ್ತು. ಅವುಗಳಲ್ಲಿ ಮತ್ಸ್ಯಾವತಾರ, ಹಂಸನಾರಾಯಣ, ಕೇಶವ, ಸಂಕರ್ಷಣ, ವಿಶ್ವಕ್ಷೇನ, ಬ್ರಹ್ಮ, ಇಂದ್ರ ಅಲ್ಲದೆ ಇನ್ನಿತರ ಹಲವಾರು ಮೂರ್ತಿಗಳಿದ್ದವು.

ಪ್ರಾಕಾರದ ಒಳ ಅಂಚಿನಲ್ಲಿ ಸಾಲುಗೊಂಡು ನಿಂತಿರುವ 48 ಬಳಪದ ಕಲ್ಲಿನ ದುಂಡು ಕಂಬಗಳು, ದಕ್ಷಿಣ ಭುವನೇಶ್ವರಿಯಲ್ಲಿ ಉಳಿದುಕೊಂಡಿರುವ ಅಲ್ಪಸ್ವಲ್ಪ ಅಲಂಕಾರಿಕ ಉಬ್ಬು

ಶಿಲ್ಪಗಳು ಮತ್ತು ನಾಲ್ಕು ಸೋಪಾನ ಮಾರ್ಗಗಳು,(ಚಿ.ಸಂ.110) ಈಗ ಉಳಿದುಕೊಂಡಿರುವ ವಿಶೇಷತೆಗಳು. ಈ ಸೋಪಾನ ಮಾರ್ಗಗಳಲ್ಲಿ ಮೂರು ಪ್ರತಿ ದಿಕ್ಕಿನ ಸಮಮಧ್ಯ ಭಾಗದಲ್ಲಿ ಸ್ಥಿರಗೊಂಡಿದ್ದರೆ ಪಶ್ಚಿಮ ದಿಕ್ಕಿನ ಪ್ರಾಕಾರದಿಂದುಳಿಯುವ ಮಾರ್ಗ ವಕ್ರವಾಗಿ ಒಂದು ದಿಕ್ಕಿನಲ್ಲಿ ಸ್ಥಿತಿಗೊಂಡಿವೆ. ಪ್ರಾಕಾರದ ಮಾಳಿಗೆ ಮೆಟ್ಟಿಲು,(ಚಿ.ಸಂ.111) ಉತ್ತರ-ಪಶ್ಚಿಮ ದಿಕ್ಕಿನಲ್ಲಿ ಒಂದು ಏರುಮೆಟ್ಟಿಲಿದೆ.[125] ದೇವಾಲಯದ ಮುಂದೆ ಸುಮಾರು ೩೦ ಅಡಿ ಎತ್ತರದ ಧ್ವಜಸ್ತಂಭವಿದೆ.(ಚಿ.ಸಂ.112)

**ನರಸಿಂಹ ದೇವಾಲಯ–ಮೊಂಡುಸಾಲೆ (ಸೋಮನಾಥಪುರ)**

ಹೊಯ್ಸಳ ದೊರೆ ಮೂರನೇ ನರಸಿಂಹನ ದಂಡನಾಯಕನಾದ "ಸೋಮನಾಥ" ಎಂಬುವನು ಕ್ರಿ.ಶ.1258ರಲ್ಲಿ[126] ತನ್ನ ಹೆಸರಿನಿಂದ ನಿರ್ಮಿಸಿದ ಸೋಮನಾಥಪುರದ ಅನತಿ ದೂರದಲ್ಲಿ ಕಾವೇರಿ ನದಿಯ ದಂಡೆಯ ಮೇಲೆ ಪೂರ್ವಾಭಿಮುಖವಾಗಿ ನಿರ್ಮಿಸಿರುವ ವೈಷ್ಣವ ಪಂಥದ ನರಸಿಂಹೇಶ್ವರ ದೇವಾಲಯವಿದೆ.(ಚಿ.ಸಂ.153) ಈ ದೇವಾಲಯವು ಸೋಮನಾಥಪುರದ ವಾಯುವ್ಯ ಭಾಗದಲ್ಲಿ ನಿರ್ಮಿಸಲಾಗಿರುವ ಏಕಕೂಟ ದೇವಾಲಯವಾಗಿದೆ. ಈ ದೇವಾಲಯವನ್ನು ಸಂಪೂರ್ಣವಾಗಿ ಹೊಯ್ಸಳರ ಕಲೆ ಮತ್ತು ವಾಸ್ತುಶಿಲ್ಪದ ಮಾಧ್ಯಮವಾದ ಕ್ಲೋರೋಟಿಕ್‌ಸಿಸ್ಟ್ ಎಂಬ ಕಲ್ಲನ್ನು ಬಳಸಿ ಹೊಯ್ಸಳ ಶೈಲಿಯಲ್ಲಿ ನಿರ್ಮಿಸಿರುವುದನ್ನು ಕಾಣಬಹುದಾಗಿದೆ. ಗರ್ಭಗೃಹ, ಸುಕನಾಸಿ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿರುವ ಈ ದೇವಾಲಯವು ಪ್ರಸ್ತುತವಾಗಿ ಶಿಥಿಲಗೊಂಡಿದ್ದು, ಅವನತಿಯ ಅಂಚಿನಲ್ಲಿದೆ. ಈ ದೇವಾಲಯವು ವಾಸ್ತುಶೈಲಿ ಹಾಗೂ ರಚನಾ ವಿನ್ಯಾಸದಲ್ಲಿ ಅರಸೀಕೆರೆ ತಾಲೂಕಿನ ಹಾರ್ನಹಳ್ಳಿಯಲ್ಲಿರುವ ಹೊಯ್ಸಳರ ಕಲಾಕೃತಿಯಾದ ಸೋಮೇಶ್ವರ ದೇವಾಲಯವನ್ನು ಹೋಲುತ್ತದೆ.[127]

**ಗರ್ಭಗೃಹ:–** ಈ ಗರ್ಭಗೃಹವು ೮x೮ ಅಡಿಗಳ ಸುತ್ತಳತೆಯಿಂದ ಕೂಡಿದ್ದು, ಚೌಕಾಕಾರವಾಗಿದೆ. ಗರ್ಭಗೃಹದ ಮಧ್ಯದಲ್ಲಿ ಚತುರಸ್ರಾಕಾರದ ಒಂದು ಅಡಿಯ ಪೀಠವಿದ್ದು, ಈ ಪೀಠದ ಮೇಲಿನ ಶಿಲ್ಪ ಪ್ರಸ್ತುತ ಇಲ್ಲವಾಗಿದೆ. ಆದರೆ ಇಲ್ಲಿ ಶಿಲ್ಪವಿದ್ದ ಕುರುಹುಗಳು ಮಾತ್ರ ಇಂದು ಕಂಡುಬರುತ್ತವೆ ಹಾಗೂ ಗರ್ಭಗಡಿಯಲ್ಲಿ ಯಾವುದೇ ಶಿಲ್ಪಗಳು ಹಾಗೂ ಅಲಂಕರಣೆಗಳು ಸರಳವಾಗಿದೆ. ಮೇಲ್ಛಾವಣಿಯಲ್ಲಿ ಎರಡು ಹಂತಗಳಲ್ಲಿ ನಿರ್ಮಾಣವಾಗಿರುವ ಅಷ್ಟಮುಖವುಳ್ಳ ವೃತ್ತಾಯತ ಮಾದರಿಯ ಸರಳವಾದ ಭುವನೇಶ್ವರಿ ಇದೆ. ಗರ್ಭಗೃಹದ ದ್ವಾರವು ಸರಳವಾದ ಪಟ್ಟಿಕೆಗಳಿಂದ ಕೂಡಿವೆ. ಮಧ್ಯದಲ್ಲಿ ನಕ್ಷತ್ರಾಕಾರದ ಅರೆಗಂಬವಿದೆ. ಬಾಗಿಲ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರನ್ನು ಕೆತ್ತಲು ಬಿಟ್ಟಿರುವ ಜಾಗವು

ಹಾಗೇ ಉಳಿದುಕೊಂಡಿದೆ. ಗರ್ಭಗೃಹ ದ್ವಾರದ ಲಲಾಟಬಿಂಬದಲ್ಲಿ ಚಿತ್ರವನ್ನು ಕೆತ್ತಲು ಬಿಟ್ಟಿರುವ ಜಾಗವು ಸಹ ಖಾಲಿಯಾಗಿದೆ. ತೋರಣದ ಭಾಗದಲ್ಲಿ ಕಮಲದ ಮೊಗ್ಗುಗಳು, ಮಣಿಹಾರಗಳ ಸೂಕ್ಷ್ಮಕೆತ್ತನೆ ಇದೆ. ಬಾಗಿಲುವಾಡದಲ್ಲಿ ಹೊಯ್ಸಳ ಶೈಲಿಯ ಚಿಕ್ಕ ಶಿಖರಗಳ ಅಲಂಕರಣ ಮಾಡಲಾಗಿದೆ. ಗರ್ಭಗೃಹ ಹಾಗೂ ಸುಕನಾಸಿಯ ಮಧ್ಯದಲ್ಲಿರುವ ಕಂಬವು ನಕ್ಷತ್ರಾಕಾರವಾಗಿದ್ದು, ಉಪಪೀಠ, ಪೀಠ ಮಧ್ಯದಲ್ಲಿ ನಕ್ಷತ್ರಾಕಾರ, ಗಂಟೆ, ಘಟಾ ಹಾಗೂ ನಕ್ಷತ್ರಾಕಾರದ ಫಲಗೈ, ಬೋದಿಗೆ ಇದೆ.[128]

**ಸುಕನಾಸಿ:-** ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದು ಯಾವುದೇ ಅಲಂಕರಣೆಗಳಿಲ್ಲದೆ ಸರಳವಾಗಿದ್ದು ಮೇಲ್ಛಾವಣಿಯಲ್ಲಿ ಭುವನೇಶ್ವರಿಯನ್ನು ಹೊಂದಿದೆ. ಸುಕನಾಸಿಯ ದ್ವಾರವು ಹಲವು ಪಟ್ಟಿಕೆಗಳಿಂದ ಕೂಡಿದ್ದು ಪಟ್ಟಿಕೆಗಳ ಮೇಲೆ ಯಾವುದೇ ಮಾದರಿಯ ಸೂಕ್ಷ್ಮ ಕೆತ್ತನೆಗಳು ಕಂಡುಬರುವುದಿಲ್ಲ ಬಾಗಿಲವಾಡದ ಪಟ್ಟಿಕೆಗಳ ಮಧ್ಯಭಾಗದಲ್ಲಿ ನಕ್ಷತ್ರಾಕಾರವಾಗಿ ರಚಿಸಲಾಗಿರುವ ತೆಳುವಾದ ಅರೆಗಂಬಗಳಿವೆ. ದ್ವಾರಪಾಲಕರನ್ನು ಕೆತ್ತಲು ಬಿಟ್ಟಿರುವ ಭಾಗದಲ್ಲಿ ಯಾವುದೇ ಶಿಲ್ಪಗಳನ್ನು ಕೆತ್ತಲಾಗಿಲ್ಲ.

ನವರಂಗದ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಪ್ರಧಾನ ಆಧಾರ ಸ್ತಂಭಗಳಿವೆ. ಈ ಕಂಬಗಳು ಪೀಠದಲ್ಲಿ ಚೌಕಾಕಾರದ ಕಾಂಡದ ಭಾಗವನ್ನು, ಬಳೆಗಳ ಗಾಲಿಯಾಕಾರದ ಮಧ್ಯದಲ್ಲಿ ಗಂಟೆ, ಘಟಾ, ಗಾಲಿಯಾಕಾರವಾಗಿ ಮೇಲೆ ಚೌಕಾಕಾರದ ಫಲಗೈ ಭೋಧಿಗೆ ಇದೆ. ಗಾಲಿಯ ನಾಲ್ಕು ದಿಕ್ಕುಗಳಲ್ಲೂ ಮದನಿಕಾ ಶಿಲ್ಪಗಳನ್ನು ಇರಿಸಲು ಮಾಡಲಾಗಿದ್ದ ಬುಗುಟುಗಳಿವೆ. ಇದರ ಮೇಲಿರುವ ಕಪೋತಗಳು ಉರುಳೆಯಕಾರವಾಗಿ ರಚಿಸಲಾಗಿದೆ.**(ಚಿ.ಸಂ.154)**

ನವರಂಗದ ನೈರುತ್ಯ ಮತ್ತು ಈಶಾನ್ಯ ಮೂಲೆಗಳಲ್ಲಿ ಎರಡು ಕೋಷ್ಠಗುಡಿಗಳಿವೆ. ಇವುಗಳನ್ನು ನಕ್ಷತ್ರಾಕಾರವಾಗಿ ನಿರ್ಮಿಸಲಾಗಿದೆ. ಈ ಕೋಷ್ಠಗಳ ಒಳಭಾಗದಲ್ಲಿ ಪ್ರತಿಷ್ಠಾಪಿಸಲಾಗಿದ್ದ ಮೂರ್ತಿಗಳು ಕಣ್ಮರೆಯಾಗಿವೆ. ಕೋಷ್ಠಗುಡಿಗಳಲ್ಲಿ ಮೇಲ್ಭಾಗದಲ್ಲಿ ಹೊಯ್ಸಳ ಶೈಲಿಯಲ್ಲಿ ರಚಿಸಲಾಗಿರುವ ಶಿಖರವಿದೆ. ನವರಂಗದ ಮೇಲ್ಛಾವಣಿಯು ಒಂಭತ್ತು ಅಂಕಣಗಳಿಂದ ಕೂಡಿದ್ದು ಇದರಲ್ಲಿ ಭುವನೇಶ್ವರಿಗಳನ್ನು ರಚಿಸಲಾಗಿದೆ.[129]

**ಭುವನೇಶ್ವರಿ:-**ಇದನ್ನು ಚೌಕ, ಅಷ್ಟಮುಖವಾಗಿರುವಂತೆ ರಚಿಸಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಕೆಳಮುಖವಾಗಿ ಕೆತ್ತಲಾಗಿರುವ ಕಮಲದ ಮೊಗ್ಗನ್ನು ಬಿಡಿಸಲಾಗಿದೆ.

**ಮಧ್ಯದ ಭುವನೇಶ್ವರಿ:**-ವಿಶಾಲವಾಗಿರುವ ಈ ಭುವನೇಶ್ವರಿಯು ಸುಮಾರು 3 ಅಡಿಗಳಷ್ಟು ಆಳವಾಗಿ ಒಳಸರಿದಂತಿದ್ದು ಕೆಳಹಂತದಲ್ಲಿ ಅಷ್ಟಮುಖ ಮತ್ತು ಅದರ ಮೇಲೆ ವೃತ್ತಾಕಾರವಾಗಿದೆ. ಇದರ ಒಳಭಾಗದಲ್ಲಿ ಸಣ್ಣ ಸಣ್ಣ ಕಂಬಗಳು, ಇವುಗಳ ಮಧ್ಯೆ ದಶಾವತಾರ ಮೂರ್ತಿಗಳನ್ನು ಬಿಡಿಸಲಾಗಿದೆ. ಹಾಗೂ ಕೆಳಹಂತದ ಅಷ್ಟಮುಖಗಳಲ್ಲಿ ವಾಹನರೂಢ ದಿಕ್ಪಾಲಕರ ಉಬ್ಬು ಶಿಲ್ಪಗಳಿವೆ. ಒಳಭಾಗದಲ್ಲಿ ಹಿನ್ಸರಿತ ಮತ್ತು ಮುನ್ಸರಿತದಂತೆ ರಚಿಸಿ ಅದರ ಅಂಚಿನಲ್ಲಿ ಸಣ್ಣ ಸಣ್ಣ ಕಮಲದ ಮೊಗ್ಗುಗಳನ್ನು ಬಿಡಿಸಿ ಸುಂದರಗೊಳಸಲಾಗಿದೆ. ಮಧ್ಯೆದಲ್ಲಿ ಮೂರು ಸುತ್ತು ಅರಳುತ್ತಿರುವಂತೆ ಬಿಡಿಸಲಾಗಿರುವ ಒಂದು ಅಡಿ ಕೆಳಗೆ ಬಂದಿರುವಂತೆ ಬಿಡಿಸಲಾಗಿರುವ ದೃಢಕಾಯದ ಕಮಲದ ಮೊಗ್ಗಿದೆ. ಉಳಿದಂತೆ ನವರಂಗದ ಮೇಲ್ಛಾವಣಿಯ ಅಷ್ಟದಿಕ್ಕುಗಳಲ್ಲೂ ಒಂದೇ ಮಾದರಿಯ ಭುವನೇಶ್ವರಿಗಳಿದ್ದು, ಅವುಗಳನ್ನು ಚೌಕ, ಅಷ್ಟಮುಖವಾಗಿರುವಂತೆ ರಚಿಸಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖಗಳನ್ನು ಬಿಡಿಸಲಾಗಿದೆ. ಮಧ್ಯೆದಲ್ಲಿ ಕೆಳಮುಖವಾಗಿ ಕೆತ್ತಲಾಗಿರುವ ಕಮಲದ ಮೊಗ್ಗನ್ನು ಬಿಡಿಸಲಾಗಿದೆ.

ನವರಂಗದ ದ್ವಾರವು ಗರ್ಭಗೃಹ ಹಾಗೂ ಶುಕನಾಸಿಯ ದ್ವಾರದಂತೆ ಮಧ್ಯದಲ್ಲಿ ಅರೆಗಂಭಗಳು, ಮೇಲ್ಭಾಗದಲ್ಲಿ ಹೊಯ್ಸಳ ಶೈಲಿಯ ಕಮಲದ ಮೊಗ್ಗುಗಳು, ತೋರಣದ ಭಾಗದಲ್ಲಿ ಸಣ್ಣ ಸಣ್ಣ ಮೊಗ್ಗಿನ ರಚನೆಗಳನ್ನು ಹೊಂದಿದ್ದು, ಲಲಾಟದಲ್ಲಿ ಚಿತ್ರಬಿಡಿಸಲು ಬಿಟ್ಟಿರುವ ಜಾಗ ಖಾಲಿಯಾಗಿದೆ.[130]

**ಮುಖಮಂಟಪ:**-ಮುಖಮಂಟಪವು 10X10 ಅಡಿ ಸುತ್ತಳತೆಯಿಂದ ಕೂಡಿದೆ, ಮುಖಮಂಟಪ ಮುಂಭಾಗದಲ್ಲಿ ಎಡ ಮತ್ತು ಬಲಪಾರ್ಶ್ವದಲ್ಲಿ ತಲಾ ನಾಲ್ಕರಂತೆ ಎಂಟು ಕಂಬಗಳಿದ್ದು, ಬಲಪಾರ್ಶ್ವದಲ್ಲಿ ಒಂದು ಕಂಬ ಮುಂದಿದೆ. ಈ ಕಂಬಗಳು ಹೊಯ್ಸಳ ಶೈಲಿಯನ್ನು ಪ್ರತಿಬಿಂಬಿಸುತ್ತಿದ್ದು, ಇವು ಚತುರಸ್ರಾಕಾರದ ಪೀಠ, ತಿರುಗುರಾಟೆಯ ಸಹಾಯದಿಂದ ತಿರುಗಿಸಿ ಮಾಡಿರುವ ಬಳೆಗಳು ಹಾಗೂ ಗಾಲಿಗಳ ರಚನೆ, ಘಂಟೆ, ಘಟಾ ಹಾಗೂ ವೃತ್ತಾಕಾರದ ಫಲಗೈ ಮೇಲೆ ನಾಲ್ಕು ಕಡೆಗಳಲ್ಲೂ ಕೀರ್ತಿಮುಖದ ಕೆತ್ತನೆಗಳಿರುವ ಚಿತ್ರ ಪೋತಿಕೆಗಳಿವೆ. ಈ ಕಂಬಗಳಲ್ಲಿ ಎಡ ಮತ್ತು ಬಲಪಾರ್ಶ್ವದ ಕೊನೆಯಲ್ಲಿರುವ ಎರಡು ಕಂಬಗಳು ಸಿಲಿಂಡರಿನಾಕಾರದಲ್ಲಿದ್ದು, ಸರಳವಾಗಿವೆ. ಈ ಮುಖಮಂಟಪದ ದ್ವಾರದಿಂದ ಕಂಬದವರೆಗೂ ಕಕ್ಷಾಸನವನ್ನು ನಿರ್ಮಿಸಲಾಗಿದೆ. ಮೇಲ್ಛಾವಣಿಯಲ್ಲಿ ಎರಡು ಹಂತದಲ್ಲಿ ನಿರ್ಮಾಣವಾಗಿರುವ ಅಷ್ಟಕೋನದ ಸರಳವಾದ ಭುವನೇಶ್ವರಿ ಇದೆ.[131]

**ಅಧಿಷ್ಠಾನ:**-ನಾಲ್ಕು ಅಡಿ ಎತ್ತರವಿರುವ ಈ ಅಧಿಷ್ಠಾನದ ಭಾಗದಲ್ಲಿ ಉಪಾನ, ಜಗತಿ, ಕುಮುದ, ಗಳ, ದಂತಪಂಕ್ತಿ ಅಥವಾ ವ್ಯಾಳ ಪಂಕ್ತಿಯ ಹಿನ್ಸರಿತ ಹಾಗೂ ಮುನ್ಸರಿತದಲ್ಲಿ ಈ ಅಧಿಷ್ಠಾನವು ರಚನೆಯಾಗಿದ್ದು, ಇದು ವೃತ್ತಾಯತ ಅಧಿಷ್ಠಾನವಾಗಿದೆ. ದೇವಾಲಯದ ಗರ್ಭಗೃಹ ಭಾಗದಲ್ಲಿ ಮಾತ್ರ ಈ ಅಧಿಷ್ಠಾನದ ರಚನೆ ಕಂಡುಬರುತ್ತಿದ್ದು, ಉಳಿದ ಭಾಗಗಳಲ್ಲಿ ಅಧಿಷ್ಠಾನದ ಭಾಗವು ಭೂಮಿಯಲ್ಲಿ ಹುದುಗಿಹೋಗಿದೆ.**(ಚಿ.ಸಂ.155)** ಗರ್ಭಗೃಹದ ಅಧಿಷ್ಠಾನದ ಎಡ ಪಾರ್ಶ್ವದಲ್ಲಿ ಯಾವುದೇ ಅಲಂಕರಣೆಗಳನ್ನು ಹೊಂದಿಲ್ಲದೆ ಸರಳವಾದ ಜಲಪ್ರನಾಳವಿದೆ. ಮುಖಮಂಟಪದ ಅಧಿಷ್ಠಾನವು ಐದು ಪಟ್ಟಿಕೆಗಳನ್ನು ಹೊಂದಿರುವ ಅಪೂರ್ಣ ಅಧಿಷ್ಠಾನವಾಗಿರುವುದನ್ನು ಕಾಣಬಹುದಾಗಿದೆ.

**ಭಿತ್ತಿ**:-ಭಿತ್ತಿಯನ್ನು ಎರಡು ಭಾಗವಾಗಿ ವಿಂಗಡಿಸಲಾಗಿದೆ. ಕೆಳಭಾಗದ ಭಿತ್ತಿಯಲ್ಲಿ ದೇವಾಲಯದ ಸುತ್ತಲೂ ಭಿತ್ತಿಪಾದಗಳ ರಚನೆ ಇದೆ. ಈ ಭಿತ್ತಿ ಪಾದಗಳ ಮಧ್ಯೆ ಶಿಲ್ಪಗಳನ್ನು ಕೆತ್ತಲು ಕಲ್ಲುಗಳನ್ನು ಜೋಡಿಸಲಾಗಿದ್ದು, ಯಾವುದೇ ಶಿಲ್ಪಗಳನ್ನು ಕೆತ್ತದ ಅಪೂರ್ಣವಾಗಿದೆ. ಮೇಲ್ಭಾಗದ ಭಿತ್ತಿಯಲ್ಲಿ ಸ್ತಂಭ ಪಂಜರ ಹಾಗೂ ಕೋಷ್ಠ ಪಂಜರಗಳನ್ನು ದೇವಾಲಯದ ಸುತ್ತಲೂ ನಿರ್ಮಿಸಲಾಗಿದೆ.

ನವರಂಗದ ಬಲಪಾರ್ಶ್ವದ ಭಿತ್ತಿಯಲ್ಲಿ ದ್ವಾರಕ್ಕಾಗಿ ಎರಡು ಕಂಬ ಹಾಗೂ ದ್ವಾರಬಂಧದ ಕಲ್ಲುಗಳಿದ್ದು ಅವುಗಳನ್ನು ಕಲ್ಲುಚಪ್ಪಡಿಗಳಿಂದ ಮುಚ್ಚಲಾಗಿದೆ. ಗರ್ಭಗೃಹದ ಎರಡು ಪಾರ್ಶ್ವದ ಭಿತ್ತಿಗೆ ಹೊಂದಿಕೊಂಡಂತೆ ಹೊಯ್ಸಳ ಶೈಲಿಯ ಎರಡು ಕೋಷ್ಠಗಳಿದ್ದು, ಈ ಕೋಷ್ಠಗಳು ಇಂದು ಸಂಪೂರ್ಣವಾಗಿ ಶಿಥಿಲಗೊಂಡಿದ್ದು, ಮುರಿದು ಬಿದ್ದಿರುವುದು ಕಂಡುಬರುತ್ತದೆ.[132]

**ಪ್ರಸ್ತರ:**-ಪ್ರಸ್ತರ ಭಾಗದಲ್ಲಿ ಕಪೋತವು ಎರಡು ಅಡಿ ಮುಂಚಾಚಿದ್ದು, ಕಮಾನಿನಾಕಾರದಲ್ಲಿ ಮಾಡಲಾಗಿದೆ. ಕಪೋತದ ಅಂಚಿನಲ್ಲಿ ಮಣಿಹಾರ ಹಾಗೂ ಕಮಲದ ಚಿಕ್ಕ ಚಿಕ್ಕ ಮೊಗ್ಗುಗಳನ್ನು ಬಿಡಿಸಲಾಗಿದೆ. ಅಂಚಿನಲ್ಲಿ ಅಲ್ಲಲ್ಲಿ ಕೂಡುಗಳನ್ನು ಬಿಡಿಸಲಾಗಿದೆ. ಕಪೋತದ ಮೇಲಿರುವ ಹಾರದಲ್ಲಿ ಕೀರ್ತಿಮುಖಗಳನ್ನು ಬಿಡಿಸಲು ಸ್ಥಳಾವಕಾಶವಿದ್ದು, ಅಲ್ಲಿ ಯಾವುದೇ ಶಿಲ್ಪಗಳನ್ನು ಕೆತ್ತಿಲ್ಲದೆ ಅಪೂರ್ಣವಾಗಿದ್ದು, ದೇವಾಲಯದ ಸುತ್ತಲೂ ಇದೇ ರೀತಿ ಮುಂದುವರಿದಿದೆ.[133]

**ಶಿಖರ:**-ಈ ದೇವಾಲಯದಲ್ಲಿರುವ ಗರ್ಭಗೃಹದ ಮೇಲೆ ಸುಸ್ಥಿತಿಯಲ್ಲಿರುವ ಮೂರು ಹಂತಗಳಲ್ಲಿ ನಿರ್ಮಾಣವಾಗಿರುವ ದ್ರಾವಿಡ ಮಾದರಿಯ ತ್ರಿತಲ ಶಿಖರವಿದೆ. ಪ್ರತಿ ಹಂತದಲ್ಲೂ ದಂತಪಂಕ್ತಿಯ ರಚನೆಯಿಂದ ಕೂಡಿರುವ ಈ ಶಿಖರದಲ್ಲಿ ಶಿಲ್ಪಗಳನ್ನು ಕೆತ್ತಲು ಸ್ಥಳವಿದೆ.

ಆದರೆ ಯಾವ ಶಿಲ್ಪವನ್ನು ಕೆತ್ತಲಾಗಿದೆ. ಶಿಖರದ ಮೇಲ್ಭಾಗದಲ್ಲಿರುವ ಸ್ತೂಪಿಯು ನಕ್ಷತ್ರಾಕಾರವಾಗಿದ್ದು. ಅಧೋಮುಖವಾಗಿದೆ. ಶಿಖರದ ಮುಂಭಾಗದಲ್ಲಿ ಶುಕನಾಸವಿದೆ. ಸ್ತೂಪದ ಮೇಲ್ಭಾಗದಲ್ಲಿ ಕಳಸವಿದೆ.[134] ಒಟ್ಟಾರೆಯಾಗಿ ಈ ದೇವಾಲಯವು ಸಂಪೂರ್ಣ ಶಿಥಿಲಾವಸ್ಥೆಯಲ್ಲಿದ್ದು, ಅವನತಿಯ ಅಂಚಿನಲ್ಲಿದೆ. ಹಾಗೂ ಶೀಘ್ರವಾಗಿ ಜೀರ್ಣೋದ್ಧಾರ ಕೈಗೊಳ್ಳಬೇಕಾಗಿದೆ.**(ಚಿ.ಸಂ.156)**

**ಯೋಗಾನರಸಿಂಹ ದೇವಾಲಯ–ಮಿರ್ಲೆ**

ಮಿರ್ಲೆ ಗ್ರಾಮವು ಕೃಷ್ಣರಾಜನಗರ ತಾಲೂಕಿಗೆ ಸೇರಿದ ಗ್ರಾಮ ಮತ್ತು ಹೋಬಳಿಯ ಕೇಂದ್ರವಾಗಿದೆ. ಈ ಗ್ರಾಮದ ಹೊರ ವಲಯದಲ್ಲಿ ನಿರ್ಮಿಸಲಾಗಿರುವ ಯೋಗಾನರಸಿಂಹ ದೇವಾಲಯವು ಮೂಲತಃ ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯವಾಗಿದೆ. **(ಚಿ.ಸಂ.157)** ಆದರೆ ಈ ದೇವಾಲಯದ ಮುಖಮಂಟಪದ ಭಾಗವನ್ನು ವಿಜಯನಗರದ ಅರಸರ ಕಾಲದಲ್ಲಿ ಜೀರ್ಣೋದ್ಧಾರ ಹಾಗೂ ಈ ದೇವಾಲಯದ ಗೋಡೆಯ ಕಂಬದಲ್ಲಿ ಕ್ರಿ.ಶ.1299ರ ಶಾಸನವಿದೆ.[135] ಈ ಶಾಸನವು 3ನೇ ಬಲ್ಲಾಳನ ಕಾಲದ ಮಹಾಪ್ರಧಾನ ಅಧಿಕಾರಿಯಾದ ಬಲ್ಲೆಯದಣ್ಣಾಯಕನು ನರಸಿಂಹ ದೇವರಿಗೆ ನಂದಾದೀವಿಗೆ ನೀಡಿದ ಬಗ್ಗೆ ಉಲ್ಲೇಖವಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು, ಬೆಣಚುಕಲ್ಲನ್ನು ಉಪಯೋಗಿಸಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ. ಇದರಲ್ಲಿ ಒಂದು ಗರ್ಭಗೃಹ ಸುಕನಾಸಿ, ನವರಂಗ ಮತ್ತು ವಿಶಾಲವಾದ ಮಂಟಪವೊಂದು ಕಾಣಬರುತ್ತದೆ.

**ಗರ್ಭಗೃಹ:–** ಯೋಗಾನರಸಿಂಹ ಸ್ವಾಮಿ ದೇವಾಲಯದ ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಗರ್ಭಗೃಹದ ಮಧ್ಯದಲ್ಲಿ ಸುಮಾರು ಎರಡು ಅಡಿ ಎತ್ತರವಿರುವ ಗರುಡಪೀಠದ ಮೇಲೆ ಸುಮಾರು ಐದು ಅಡಿ ಎತ್ತರವಿರುವ ಯೋಗನರಸಿಂಹನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.[136]**(ಚಿ.ಸಂ.158)** ಈ ದೇವನು ಉತ್ಕಟಾಸನದಲ್ಲಿ ಕುಳಿತಿದ್ದು ಚತುರ್ಭುಜವನ್ನು ಹೊಂದಿದ್ದಾನೆ. ತನ್ನ ಎರಡೂ ಕೈಗಳನ್ನು ಮೊಣಕಾಲಿನ ಮೇಲೆ ಇರಿಸಿಕೊಂಡು ಯೋಗಮುದ್ರೆಯಲ್ಲಿರುವಂತೆ ರಚಿಸಲಾಗಿದೆ. ಉಳಿದ ಎರಡು ಕೈಗಳಲ್ಲಿ ಶಂಖ, ಚಕ್ರ ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಬಹಳ ಸುಂದರವಾಗಿವೆ. ಈ ದೇವನ ಇಕ್ಕೆಲಗಳಲ್ಲಿ ಚಾಮರ ಮತ್ತು ಫಲ ಮತ್ತು ಪದ್ಮವನ್ನು ಹಿಡಿದು ಸುಖಾಸನದಲ್ಲಿ ಕುಳಿತಿರುವ ದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿಸುರಳಿ ಪದ್ಮಪುಷ್ಪಗಳ ಅಲಂಕರಣ ಮತ್ತು ವಿಷ್ಣುವಿನ ದಶಾವತಾರಕ್ಕೆ ಸಂಬಂಧಿಸಿದ ಶಿಲ್ಪಗಳ ಮೇಲ್ಭಾಗದಲ್ಲಿ ಕೀರ್ತಿಮುಖ ಬಿಡಿಸಲಾಗಿದೆ. ಈ ಗರ್ಭಗೃಹದ ಉತ್ತರದ ಗೋಡೆಯ ಮಧ್ಯದಲ್ಲಿ

ಮುಂಚಾಚಿದಂತೆ ಕಲ್ಲೊಂದನ್ನು ಸೇರಿಸಲಾಗಿದೆ. ಇದರ ಮೇಲೆ ಪೂಜಾಸಾಮಗ್ರಿಗಳನ್ನು ಇಡಲಾಗಿದೆ. ಮತ್ತು ಇದರ ಕೆಳಗೆ ಕೈಮುಗಿದು ಕುಳಿತಿರುವ ರಾಮಾನುಜಾಚಾರ್ಯರ ಶಿಲ್ಪವನ್ನು ಇರಿಸಲಾಗಿದೆ. ಗರ್ಭಗೃಹದ ಮೇಲ್ಭಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿಯನ್ನು ಬಿಡಿಸಲಾಗಿದೆ. ಇದರ ಮಧ್ಯದಲ್ಲಿ ಸುಂದರವಾಗಿ ಬಿಡಿಸಲಾಗಿರುವ ಅರಳಿದ ಪದ್ಮಪುಷ್ಪವಿದೆ. ಮಧ್ಯದ ಮೊಗ್ಗಿನ ಭಾಗವನ್ನು ಅರ್ಧಕ್ಕೆ ಕತ್ತರಿಸಲಾಗಿದೆ. ಗರ್ಭಗೃಹ ಬಾಗಿಲಲ್ಲಿ ಏಳು ಪಟ್ಟಿಕೆಗಳಿದ್ದು, ಇದರಲ್ಲಿ ಬಳ್ಳಿ ಸುರಳಿ ಪದ್ಮದಳಗಳ ಮತ್ತು ಆಭರಣಗಳ ರೀತಿಯಲ್ಲಿ ಬಿಡಿಸಲಾಗಿರುವ ಸೂಕ್ಷ್ಮ ಕೆತ್ತನೆಯ ಪಟ್ಟಿಕೆಗಳಿವೆ. ಲಲಾಟಬಿಂಬದಲ್ಲಿ ಅಪೂರ್ಣಗೊಂಡ ಗಜಲಕ್ಷ್ಮಿಯ ಶಿಲ್ಪವನ್ನು ಬಿಡಿಸಲಾಗಿದೆ.[137]

**ಸುಕನಾಸಿ**:–ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಾಣಬರುವುದಿಲ್ಲ. ಆದರೆ ಮೇಲ್ಭಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಮೂರು ಸುತ್ತು ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಸುಕನಾಸಿಯ ದ್ವಾರವು ತುಂಬಾ ಕಲಾತ್ಮಕ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ.**(ಚಿ.ಸಂ.159)** ಬಾಗಿಲ ಇಕ್ಕೆಲಗಳಲ್ಲಿ ಸುಮಾರು ಐದು ಅಡಿಗಳ ಎತ್ತರವಿರುವ ದ್ವಾರಪಾಲಕರಿದ್ದಾರೆ. ತ್ರಿಭಂಗಿಯಲ್ಲಿ ನಿಂತಿರುವ ಇವರು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ ಚಕ್ರ, ಗಧಾ, ಹಸ್ತವನ್ನು ಹೊಂದಿದ್ದಾರೆ. ಈ ದ್ವಾರಪಾಲಕರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಕೆತ್ತನೆಯಿಂದ ಕೂಡಿದ್ದು ಸುಂದರವಾಗಿವೆ. ಆದರೆ ಭಕ್ತಾದಿಗಳು ಅವುಗಳ ಮೇಲೆ ಎಣ್ಣೆ ಸುರಿದು ವಿಕಾರವಾಗಿ ಕಾಣುವಂತೆ ಮಾಡಿದ್ದಾರೆ. ಇವರ ತಲೆಯ ಮೇಲ್ಭಾಗದಲ್ಲಿ ಎರಡೂ ಕಡೆ ಸಿಂಹಗಳನ್ನು ಬಹಳ ಸುಂದರವಾಗಿ ಬಿಡಿಸಲಾಗಿದೆ. ಇವರ ಇಕ್ಕೆಲಗಳಲ್ಲಿ ಚಾಮರಧಾರಿಣಿಯರು ಎರಡೂ ಕಡೆ ತ್ರಿಭಂಗಿಯಲ್ಲಿ ನಿಂತಿದ್ದಾರೆ. ಬಾಗಿಲ ಮೇಲ್ಭಾಗದಲ್ಲಿ ಹೊಯ್ಸಳ ಶೈಲಿಯ ಚಿಕ್ಕ ಚಿಕ್ಕ ಶಿಖರಗಳನ್ನು ರಚಿಸಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದ್ದು ಮಧ್ಯದಲ್ಲಿ ನೆಗೆಯುತ್ತಿರುವ ಸಿಂಹಮುಖಗಳನ್ನು ಬಿಡಿಸಲಾಗಿದೆ. ಸುಕನಾಸಿಯ ಎಡಭಾಗದಲ್ಲಿರುವ ದ್ವಾರಪಾಲಕರ ಪಕ್ಕದಲ್ಲಿ ಗೋಡೆಗೆ ಸೇರಿಸಲಾಗಿರುವ ಕಂಬದ ಮೇಲೆ ಶಾಸನವೊಂದನ್ನು ಬರೆಯಲಾಗಿದೆ. ಅಲ್ಲದೆ ಬಲಭಾಗದಲ್ಲಿರುವ ಕಂಬದ ಪೀಠದಲ್ಲಿಯೂ ಸಹ ಶಾಸನವೊಂದನ್ನು ಬರೆಸಲಾಗಿದೆ.[138]

**ನವರಂಗ**:–ನವರಂಗವು ಸುಮಾರು 25X25 ಅಡಿ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ಕಣಶಿಲೆಯಿಂದ ಕೂಡಿದ ನಾಲ್ಕು ದಪ್ಪವಾಗಿರುವ ಕಂಬಗಳಿವೆ. ಈ ಕಂಬಗಳು ಉಳಿಯಿಂದ ಕೆತ್ತನೆ ಮಾಡಿ ರಚಿಸಿ ನಿಲ್ಲಿಸಿರುವಂತೆ

ಕಂಡುಬರುತ್ತದೆ. ಇವುಗಳನ್ನು ಉಪ ಪೀಠದ ಮೇಲೆ ನಿಲ್ಲಿಸಲಾಗಿದೆ. ಕಾಂಡದ ಭಾಗದಲ್ಲಿ ಚೌಕಾಕಾರದ ಪೀಠ ಅದರ ಮೇಲೆ ಸ್ವಲ್ಪ ಅಷ್ಟ, ಷೋಡಶ ಮುಖ, ಮಧ್ಯಭಾಗ ಸಿಲಿಂಡರಿನಾಕಾರವಾಗಿ ಕಂಠದ ಭಾಗ ಗಾಲಿ ಅದರ ಮೇಲೆ ಸರಳವಾಗಿರುವ ಕಪೋತವಿದೆ. **(ಚಿ.ಸಂ.160)** ಈ ನವರಂಗದ ನೈರುತ್ಯ ಮೂಲೆಯಲ್ಲಿ ಲೋಹದ ಉತ್ಸವಮೂರ್ತಿಯೊಂದನ್ನು ಇರಿಸಲಾಗಿದೆ. ನವರಂಗದ ಮೇಲ್ಛಾವಣಿಯು ಒಂಭತ್ತು ಅಂಕಣಗಳಿಂದ ಕೂಡಿದ್ದು, ಇವುಗಳಲ್ಲಿ ವಿವಿಧಕಾರವಾಗಿ ಬಿಡಿಸಲಾಗಿರುವ ಒಂಭತ್ತು ಭುವನೇಶ್ವರಿಗಳಿವೆ.**(ಚಿ.ಸಂ.161)** ಇದು ಚೌಕ ಅದರೊಳಗೆ ಮತ್ತೊಂದು ಚೌಕ. ಮಧ್ಯದಲ್ಲಿ ವೃತ್ತಕಾರವಾಗಿ ಎತ್ತಿನ ಗಾಡಿಯ ಚಕ್ರದಂತೆ ಬಿಡಿಸಲಾಗಿರುವ ಪದ್ಮಪುಷ್ಪವಿದೆ. ನವರಂಗದ ದ್ವಾರವು ಐದು ಪಟ್ಟಿಕೆಗಳಿಂದ ಕೂಡಿದೆ. ಈ ಪಟ್ಟಿಕೆಗಳ ಮೇಲೆ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಮಾಡದೇ ಹಾಗೇ ಉಳಿಸಲಾಗಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮೀಯನ್ನು ಬಿಡಿಸಲಾಗಿದೆ.[139]

**ಮುಖಮಂಟಪ**:–ಮುಖಮಂಟಪದಲ್ಲಿ ಎರಡು ಕಣಶಿಲೆಯ ಕಂಬಗಳಿವೆ. ಆದರೆ ಮುಖಮಂಟಪ ಸೇರಿದಂತೆ ನಂತರದ ಕಾಲದಲ್ಲಿ ಪಾತಾಳ ಅಂಕಣವನ್ನು ಮಾಡಲಾಗಿದೆ. ಇದರಲ್ಲಿ ಚೌಕ, ಅಷ್ಟ ಮತ್ತು ಸಿಲಿಂಡಿರನಾಕಾರವಾಗಿರುವ ಸುಮಾರು ಹದಿನಾರು ಕಂಬಗಳಿವೆ. ಮೇಲ್ಛಾವಣಿಗೆ ಕಲ್ಲಿನ ಚಪ್ಪಡಿ ಹಾಕಿ ಮುಚ್ಚಲಾಗಿದೆ. ಈ ಮಂಟಪವನ್ನು ವಿಜಯನಗರ ಕಾಲದಲ್ಲಿ ನಿರ್ಮಿಸಲಾಗಿದೆ. ಇದರ ಪ್ರವೇಶ ದ್ವಾರದಲ್ಲಿ ಹಲವು ಪಟ್ಟಿಕೆಗಳಿದ್ದು ಒಳ ಹೊರಗೆ ಚಾಚಿಕೊಂಡಂತೆ ರಚಿಸಲಾಗಿದೆ. ಆದರೆ ಈ ಪಟ್ಟಿಕೆಗಳಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಇಲ್ಲ. ಇದರ ಮುಂದೆ ಸೋಪಾನ ಮಾಡಲಾಗಿದ್ದು ಇಕ್ಕೆಲದಲ್ಲಿರುವ ಕಲ್ಲನ್ನು ಆನೆಯ ಶಿರದಂತೆ ರಚಿಸಲಾಗಿದೆ.

**ಅಧಿಷ್ಠಾನ**:–ಅಧಿಷ್ಠಾನದಲ್ಲಿ ಸುಮಾರು ಆರು ಪಟ್ಟಿಕೆಗಳಿವೆ. ಅವುಗಳೆಂದರೆ, ಉಪಾನ, ಜಗತಿ, ತ್ರಿಪಟ್ಟಕುಮುದ, ಪ್ರತಿ, ಹಾರ ಮತ್ತು ಕಪೋತ ಇವುಗಳನ್ನು ದೇವಾಲಯದ ಸುತ್ತಲೂ ಹಿನ್ನರಿತ ಮತ್ತು ಮುನ್ನರಿತಗಳಂತೆ ಕ್ರಮಬದ್ಧವಾಗಿ ಜೋಡಿಸಿ ಅಧಿಷ್ಠಾನವನ್ನು ಭದ್ರಪಡಿಸಲಾಗಿದೆ. ನಾಲ್ಕನೇ ಪಟ್ಟಿಕೆಯು ಗರ್ಭಗೃಹದ ಅಧಿಷ್ಠಾನದ ಭಾಗದಲ್ಲಿ ಮಾತ್ರ ದಂತಪಂಕ್ತಿಯ ಸಾಲನ್ನು ಸುತ್ತಲೂ ಕೆತ್ತನೆ ಮಾಡಲಾಗಿದೆ. ಅದೇಕೋ ಏನೋ ನವರಂಗದ ಭಾಗದಲ್ಲಿರುವ ಪ್ರತಿಯನ್ನು ದಂತಪಂಕ್ತಿಯನ್ನು ಮಾಡದೆ ಹಾಗೆ ಉಳಿಸಲಾಗಿದೆ. ಅಧಿಷ್ಠಾನದ ಉತ್ತರ ಭಾಗದಲ್ಲಿ ಅಭಿಷೇಕದ ನೀರು ಹೊರಹೋಗಲು ಪುಷ್ಪ ಪ್ರನಾಳವನ್ನು ಮಾಡಲಾಗಿದೆ.**(ಚಿ.ಸಂ.162)**

**ಭಿತ್ತಿ**:–ಭಿತ್ತಿಯನ್ನು ಅಧಿಷ್ಠಾನದ ಮೇಲೆ ಸಣ್ಣ ಸಣ್ಣ ತೆಳು ಅರೆಗಂಬಗಳನ್ನು ದೇವಾಲಯದ ಸುತ್ತಲೂ ಭಿತ್ತಿಯಲ್ಲಿ ಜೋಡಿಸಿ ಅಲಂಕರಣವಾಗಿ ನಿರ್ಮಿಸಲಾಗಿದೆ. ಇದನ್ನು ಗಮನಿಸಿದರೆ ಹೊಯ್ಸಳರ ಆರಂಭ ಕಾಲದಲ್ಲಿ ನಿರ್ಮಿಸಲಾಗಿರುವಂತಹ ದೇವಾಲಯವೆನಿಸಿದೆ. ನವರಂಗದ

ಮಧ್ಯದ ಗೋಡೆಯಲ್ಲಿ ಎರಡು ಕಂಬಗಳ ಮೇಲೆ ಶಿಖರವುಳ್ಳ ಕೋಷ್ಠವಿದೆ. ಈ ಕೋಷ್ಠದಲ್ಲಿ ಈಗ ಯಾವುದೇ ಕೋಷ್ಠದಲ್ಲಿ ಶಿಲ್ಪ ಕಾಣಬರುವುದಿಲ್ಲ.

**ಕಪೋತ**:–ಭಿತ್ತಿಯ ಮೇಲಿರುವ ಕಪೋತವು ಸುಮಾರು 2 ಅಡಿ ಮುಂಚಾಚಿದ್ದು, ಕಮಾನಿನಾಕಾರವಾಗಿದೆ. ಇದರ ಅಂತ್ಯ ಭಾಗದಲ್ಲಿ ದಂತ ಪಂಕ್ತಿಯ ಸಾಲು ಇದೆ. ಆದರೆ ನವರಂಗದ ಕಪೋತದ ಅಂಚಿನಲ್ಲಿ ದಂತಪಂಕ್ತಿಯ ಸಾಲು ಕಂಡುಬರುವುದಿಲ್ಲ.

**ಶಿಖರ**:–ಶಿಖರವನ್ನು ಗರ್ಭಗೃಹದ ಮೇಲೆ ನಿರ್ಮಿಸಲಾಗಿದೆ. ಇದರ ಮೂಲ ಶಿಖರವು ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಸಂಪೂರ್ಣವಾಗಿ ನಾಶವಾಗಿದ್ದರಿಂದ ಶಿಖರವನ್ನು ತೆಗೆದು ಇತ್ತೀಚೆಗೆ ಇಟ್ಟಿಗೆ ಸಿಮೆಂಟನ್ನು ಉಪಯೋಗಿಸಿ ಮಾಡಲಾಗಿರುವ ಶಿಖರವಿದೆ. ಶಿಖರದಲ್ಲಿ ಆಂಜನೇಯ, ನರಸಿಂಹ, ವಿಷ್ಣು, ಗರುಡ, ಯೋಗಾನರಸಿಂಹ, ಸ್ತೂಪಿಯ ನಾಲ್ಕು ಮುಖಗಳಲ್ಲಿ ಕೀರ್ತಿ ಮುಖಗಳಿವೆ ಹಾಗೂ ಮೇಲ್ಭಾಗದಲ್ಲಿ ಪಂಚಲೋಹದ ಕಳಸವಿದೆ.[140]

**ಚನ್ನಕೇಶವ ದೇವಾಲಯ– ಭೇರ್ಯ**

ಭೇರ್ಯ ಗ್ರಾಮವು ಕೃಷ್ಣರಾಜನಗರಕ್ಕೆ ಸೇರಿರುವ ಒಂದು ಗ್ರಾಮ. ಇದು ಕೃಷ್ಣರಾಜನಗರದಿಂದ 12 ಕಿ.ಮೀ ದೂರದಲ್ಲಿದೆ.[141] ಪ್ರಾಚೀನ ಕಾಲದಲ್ಲಿ ಈ ಗ್ರಾಮವು ತನ್ನದೇ ಆದಂತಹ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಹೊಂದಿದ್ದ ಗ್ರಾಮವಾಗಿತ್ತೆಂದು ಹೇಳಬಹುದು. ಅಲ್ಲದೆ ಈ ಗ್ರಾಮವು ಈ ಹೋಬಳಿಯ ಕೇಂದ್ರವಾಗಿದೆ. ಕ್ರಿ.ಶ.1606ರಲ್ಲಿ ಬರೆಸಲಾಗಿರುವ ಒಂದು ಶಾಸನದ ಪ್ರಕಾರ ಮೈಸೂರು ಅರಸ ದೇವರಾಯರ ಮಗ ಚಿಕ್ಕದೇವರಾಯನು ಭೇರ್ಯವನ್ನು 12 ಉಪಗ್ರಾಮಗಳೊಂದಿಗೆ ಅಗ್ರಹಾರವನ್ನಾಗಿ ಮಾಡಿ 'ದೇವಪುರ' ಎಂದು ಹೆಸರಿಟ್ಟು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[142] ಇದೊಂದು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರುವಂತಹ ಸುಂದರವಾದ ದೇವಾಲಯ. ಈ ದೇವಾಲಯವು ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು,**(ಚಿ.ಸಂ.163)** ಇದರಲ್ಲಿ ಒಂದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ. ಈಗ ದೇವಾಲಯವನ್ನು ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಲಾಗಿದೆ. ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ನಾಶವಾಗಿರುವ ಮುಖಮಂಟಪ ಮತ್ತು ಶಿಖರ ಈಗ ಸಂಪೂರ್ಣವಾಗಿ ಕಣ್ಮರೆಯಾಗಿದೆ. ಈ ದೇವಾಲಯವನ್ನು ಇತ್ತೀಚೆಗೆ ಭಾರತೀಯ ಪುರಾತತ್ವ ಇಲಾಖೆಯವರು ಜೀರ್ಣೋದ್ಧಾರ ಮಾಡಿ ಸಂರಕ್ಷಿಸಿದ್ದಾರೆ. ಎತ್ತರವಾದ ಭಾಗದಲ್ಲಿರುವುದರಿಂದ ದೇವಾಲಯದ

ಸುತ್ತಲೂ ಇದ್ದ ಜಾಗವು ಇಳಿಜಾರಾಗಿ ದೇವಾಲಯಕ್ಕೆ ತೊಂದರೆ ಉಂಟಾಗಿದ್ದರಿಂದ ಪುರಾತತ್ವ ಇಲಾಖೆಯವರು ದೇವಾಲಯದ ಸುತ್ತ ಸುಮಾರು ನಾಲ್ಕು ಅಡಿ ಎತ್ತರದ ಗೋಡೆಯನ್ನು ನಿರ್ಮಿಸಿ ಅದರ ಮೇಲೆ ತಂತಿ ಬೇಲಿಯನ್ನು ಹಾಕಿ ಸಂರಕ್ಷಿಸಿದ್ದಾರೆ.

**ಗರ್ಭಗೃಹ**:-ಗರ್ಭಗೃಹವು ಸುಮಾರು 8x8 ಅಡಿ ಉದ್ದ ಅಗಲವಾಗಿದ್ದು, ಮಧ್ಯದಲ್ಲಿ ಎರಡು ಅಡಿ ಎತ್ತರವಿರುವ ಗರುಡಪೀಠದ ಮೇಲೆ ಸುಮಾರು ಎಂಟು ಅಡಿ ಎತ್ತರವಿರುವ ಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.[143]**(ಚಿ.ಸಂ.164)** ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದುಕೊಂಡಿದ್ದಾನೆ. ಸುಂದರವಾದ ಕಲಾಕೃತಿಯಿಂದ ಕೂಡಿರುವ ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮ ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ವ್ಯಾಳನ ಬಾಯಿಂದ ಹೊರಬಂದಂತೆ ಬಿಡಿಸಲಾಗಿರುವ ಬಳ್ಳಿ ಸುರುಳಿಗಳಿದ್ದು, ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಪ್ರಭಾವಳಿಯ ಅಂಚಿನಲ್ಲಿ ವಿಷ್ಣುವಿನ ದಶಾವತಾರವನ್ನು ಚಿಕ್ಕದಾಗಿ ಬಿಡಿಸಲಾಗಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ವಿಶಾಲವಾಗಿ ರಚಿಸಿ ಜೋಡಿಸಲಾಗಿರುವ ಭುವನೇಶ್ವರಿಯಿದೆ. ಈ ಭುವನೇಶ್ವರಿಯು ಚೌಕ, ಅಷ್ಟ, ಚೌಕ ಮತ್ತು ವೃತ್ತಾಕಾರವಾಗಿ ಮಾಡಲಾಗಿದೆ. ಇದರ ಒಳಭಾಗದಲ್ಲಿ ಅರಳಿದ ಪದ್ಮದ ಮೊಗ್ಗುಗಳನ್ನು ಮೂಲೆಗಳಲ್ಲಿ ಅರಳಿದಪದ್ಮ, ಕೀರ್ತಿಮುಖ, ಬಳ್ಳಿ ಸುರುಳಿಗಳನ್ನು ಬಿಡಿಸಲಾಗಿದೆ. ಅಷ್ಟ ದಿಕ್ಪಾಲಕರನ್ನು ಬಿಡಿಸಲು ಜೋಡಿಸಲಾಗಿದ್ದ ಕಲ್ಲುಗಳು ಹಾಗೇ ಉಳಿದಿವೆ. ಗರ್ಭಗೃಹದ ಬಾಗಿಲ ಪಟ್ಟಿಕೆಗಳಲ್ಲಿ ಯಾವುದೇ ಅಲಂಕರಣ ಕಾಣಬರುವುದಿಲ್ಲ. ಆದರೆ ಪಟ್ಟಿಕೆಗಳ ಮಧ್ಯದಲ್ಲಿ ಜೋಡಿಸಲಾಗಿದ್ದ ನಕ್ಷತ್ರಾಕಾರದ ಅರೆಗಂಬಗಳಿವೆ. ಲಲಾಟಬಿಂಬದಲ್ಲಿ ಲಕ್ಷ್ಮಿನರಸಿಂಹನ ಉಬ್ಬು ಕೆತ್ತನೆಯನ್ನು ಬಿಡಿಸಲಾಗಿದೆ.**(ಚಿ.ಸಂ.165)** ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ದೇವಿಯರಿದ್ದಾರೆ. ಬಾಗಿಲವಾಡದಲ್ಲಿ ಸಣ್ಣ ಸಣ್ಣ ಹೊಯ್ಸಳ ಶೈಲಿಯ ಶಿಖರಗಳು ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಲಲಾಟಬಿಂಬದ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಜಯ-ವಿಜಯ ದ್ವಾರಪಾಲಕರಿದ್ದಾರೆ. ಚತುರ್ಭುಜ ಹೊಂದಿರುವ ಇವರು ಕೈಗಳಲ್ಲಿ ಶಂಖ, ಚಕ್ರ, ಗಧಾ, ಹಸ್ತ ಹೊಂದಿದ್ದಾರೆ. ಇವರ ಇಕ್ಕೆಲಗಳಲ್ಲಿ ಫಲ ಮತ್ತು ಚಾಮರ ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ.

**ಸುಕನಾಸಿ**:-ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಸರಳವಾಗಿದೆ. ಇದರಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಾಣಬರುವುದಿಲ್ಲ. ಸುಕನಾಸಿಯ ಮೇಲ್ಛಾವಣಿಯಲ್ಲಿ

ಚೌಕಾಕಾರ, ಅಷ್ಟ, ವೃತ್ತಾಕಾರವಾಗಿ ರಚಿಸಲಾಗಿರುವ ಭುವನೇಶ್ವರಿ ಇದೆ. ಇದರ ಒಳಭಾಗದಲ್ಲಿ ಅರಳಿದ ಪದ್ಮಪುಷ್ಪ, ಕೀರ್ತಿಮುಖಗಳು, ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ. ಅಷ್ಟದಿಕ್ಪಾಲಕರನ್ನು ಬಿಡಿಸಲು ಜೋಡಿಸಲಾಗಿರುವ ಕಲ್ಲು ಹಾಗೇ ಉಳಿದಿದೆ. ಸುಕನಾಸಿಯ ದ್ವಾರವು ಮೂರು ಪಟ್ಟಿಕೆಗಳಿಂದ ಕೂಡಿದ್ದು, ಯಾವುದೇ ರೀತಿಯ ಅಲಂಕರಣ ಕಾಣಬರುವುದಿಲ್ಲ. ಮಧ್ಯದಲ್ಲಿ ನಕ್ಷತ್ರಾಕಾರದ ಅರೆಗಂಬಗಳಿವೆ. ಆದರೆ ಗಾಳಿ ಬೆಳಕಿನ ವ್ಯವಸ್ಥೆಗೋಸ್ಕರ ಇದರ ಇಕ್ಕೆಲಗಳಲ್ಲಿ ಪುಷ್ಪಜಾಲಾಂಧ್ರವನ್ನು ಮಾಡಲಾಗಿದೆ. ಲಲಾಟಬಿಂಬದಲ್ಲಿ ಲಕ್ಷ್ಮೀನಾರಾಯಣನ ಮೂರ್ತಿಶಿಲ್ಪವಿದ್ದು, ಈ ದೇವನು ಗರುಡ ಪೀಠದ ಮೇಲೆ ಸುಖಾಸನದಲ್ಲಿ ಕುಳಿತು ತನ್ನ ಎಡತೊಡೆಯ ಮೇಲೆ ಲಕ್ಷ್ಮೀದೇವಿಯನ್ನು ಕೂರಿಸಿಕೊಂಡಿದ್ದಾನೆ. ಈ ದೇವಿಯು ಸುಖಾಸನದಲ್ಲಿ ಕುಳಿತಿದ್ದು, ಎಡಗೈಯಲ್ಲಿ ಫಲಪುಷ್ಪ ಹಿಡಿದುಕೊಂಡಿದ್ದಾಳೆ. ಈ ದೇವನು ಚತುರ್ಭುಜ ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಪದ್ಮ ಹಿಡಿದುಕೊಂಡಿದ್ದಾನೆ. ಈ ದೇವ ದೇವಿಯರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಈ ದೇವನ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತು ಕೈಗಳಲ್ಲಿ ಪದ್ಮ ಮತ್ತು ಫಲವನ್ನು ಹಿಡಿದುಕೊಂಡಿರುವ ದೇವಿಯರಿದ್ದಾರೆ. ದ್ವಾರದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರು ತ್ರಿಭಂಗಿಯಲ್ಲಿ ನಿಂತಿದ್ದು ಚರ್ತುಭುಜವನ್ನು ಹೊಂದಿದ್ದಾರೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದಿದ್ದು ಪ್ರಭಾವಳಿಯಲ್ಲಿ ಬಳ್ಳಿ ಸುರುಳಿಗಳ ಕೀರ್ತಿಮುಖವಿದೆ.

**ನವರಂಗ**:-ನವರಂಗವು ಸುಮಾರು 25X25 ಅಡಿ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಪ್ರಧಾನ ಕಂಬಗಳಿವೆ. ಇವುಗಳನ್ನು ತಿರುಗಣೆ ಯಂತ್ರದಿಂದ ತಯಾರಿಸಲಾಗಿರುವ ಈ ಕಂಬಗಳನ್ನು ಚೌಕಾಕಾರದ ಉಪಪೀಠದ ಮೇಲೆ ನಿಲ್ಲಿಸಲಾಗಿದೆ.**(ಚಿ.ಸಂ.166)** ಪೀಠದ ಮೇಲೆ ಚೌಕ, ಗಾಲಿ, ಘಂಟೆ, ಫಟಾ, ಪುಷ್ಪಬೋದಿಗೆ, ಫಲಗೈ ಮತ್ತು ಉರುಳೆಯಾಕಾರದ ಕಪೋತವನ್ನು ಮಾಡಲಾಗಿದೆ. ಕಪೋತದ ಮೂಲೆಗಳಲ್ಲಿ ಮೇಲಿಂದ ಊರ್ಧ್ವಮುಖವಾಗಿ ಬಿಡಿಸಲಾಗಿರುವ ನಾಲ್ಕು ಕಮಲದ ಮೊಗ್ಗುಗಳಿವೆ. ನವರಂಗದ ಮೇಲ್ಛಾವಣಿಯಲ್ಲಿ ಒಂಭತ್ತು ಭುವನೇಶ್ವರಿಗಳಿವೆ.[144] **(ಚಿ.ಸಂ.167)**

**ಮಧ್ಯದ ಭುವನೇಶ್ವರಿ**:-ಮಧ್ಯದ ಭುವನೇಶ್ವರಿಯನ್ನು ವಿಶಾಲವಾಗಿ ರಚಿಸಿ ಅಷ್ಟ ಮತ್ತು ವೃತ್ತಾಕಾರವಾಗಿದೆ. ಇದರಲ್ಲಿ ಕೀರ್ತಿಮುಖಗಳು, ಅಷ್ಟದಿಕ್ಪಾಲಕರು, ಮಣಿಹಾರಗಳು ಹಾಗೂ ಕಮಲದ ಮೊಗ್ಗುಗಳ ಸೂಕ್ಷ್ಮಕೆತ್ತನೆಯಿದೆ. ಮಧ್ಯದಲ್ಲಿ ವಿಷ್ಣುಚಕ್ರದ ರೀತಿ ಪದ್ಮ ಪುಷ್ಪಗಳನ್ನು ಬಿಡಿಸಿದ್ದು, ಇದರ ಮೂಲೆಗಳಲ್ಲಿ ಕೀರ್ತಿಮುಖ ಬಿಡಿಸಲಾಗಿದೆ.

**ಪಶ್ಚಿಮ ಭುವನೇಶ್ವರಿ**:- ಈ ಭುವನೇಶ್ವರಿಯು ಚೌಕಾಕಾರವಾಗಿದೆ. ಇದರ ಒಳಭಾಗದಲ್ಲಿ ೯ ಅಂಕಣಗಳನ್ನು ಮಾಡಿ ಒಂದೊಂದು ಅಂಕಣದ ಒಳಗೆ ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಎರಡೂಕಡೆ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರಳಿಗಳು ಮತ್ತು ಚೌಕಾಕಾರವಾಗಿ ಬಿಡಿಸಲಾಗಿರುವ ಕಮಲದ ಮೊಗ್ಗುಗಳಿವೆ. ದಿಕ್ಪಾಲಕರನ್ನು ಬಿಡಿಸಲು ಜೋಡಿಸಲಾಗಿದ್ದ ಕಲ್ಲು ಹಾಗೆ ಉಳಿದಿದೆ.

**ವಾಯುವ್ಯ ಭುವನೇಶ್ವರಿ**:-ಇದನ್ನು ಚೌಕಾಕಾರವಾಗಿ ರಚಿಸಲಾಗಿದೆ. ಇದರ ಒಳಗೆ ಮತ್ತೊಂದು ಚೌಕಾಕಾರವಾಗಿ ಮಾಡಿ ಮಧ್ಯದಲ್ಲಿ ವೃತ್ತಾಕಾರವಾಗಿ ಬಿಡಿಸಲಾಗಿದ್ದ ಕಲ್ಲು ಹಾಗೆ ಉಳಿಸಿಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖಗಳು ಚೌಕಾಕಾರವಾಗಿ ಬಿಡಿಸಲಾಗಿರುವ ಕಮಲದ ಮೊಗ್ಗುಗಳಿವೆ.

**ಉತ್ತರದ ಭುವನೇಶ್ವರಿ**:-ಇದನ್ನು ಚೌಕಾಕಾರವಾಗಿ ರಚಿಸಿ ಒಳಭಾಗದಲ್ಲಿ ಏಳು ಅಂಕಣಗಳನ್ನು ಮಾಡಿ ಈ ಅಂಕಣಗಳ ಒಳಗೆ ಅರಳಿದ ಒಂಭತ್ತು ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಅದರಲ್ಲಿ ಒಂದನ್ನು ಯಂತ್ರೋಪಾದಿಯಲ್ಲಿ ಬಿಡಿಸಲಾಗಿದೆ. ಇಕ್ಕೆಲಗಳಲ್ಲಿ ಕೀರ್ತಿಮುಖದ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರಳಿಗಳಿವೆ. ಒಳಭಾಗದಲ್ಲಿ ದಿಕ್ಪಾಲಕರನ್ನು ಬಿಡಿಸಲು ಜೋಡಿಸಲಾಗಿದ್ದ ಕಲ್ಲು ಹಾಗೆ ಉಳಿದಂತೆ ಕಂಡುಬಂದಿದ್ದು, ಕಮಲದ ಮೊಗ್ಗಿನ ಅಲಂಕರಣೆ ಇದೆ.

**ಈಶಾನ್ಯ ಭುವನೇಶ್ವರಿ**:-ಈ ಭುವನೇಶ್ವರಿಯನ್ನು ಚೌಕಾಕಾರ ಹಾಗೂ ನಕ್ಷತ್ರಾಕಾರವಾಗಿ ಮಾಡಿ ಒಳಭಾಗದಲ್ಲಿ ವಿಷ್ಣುವಿನ ಚಕ್ರದಂತೆ ವೃತ್ತಾಕಾರವಾಗಿ ಬಿಡಿಸಲಾಗಿರುವ ಅರಳಿದ ಪದ್ಮಪುಷ್ಪವಿದೆ. ಮೂಲೆಗಳಲ್ಲಿ ಕೂಡುಗಳನ್ನು ಬಿಡಿಸಲಾಗಿದೆ ಮತ್ತು ಸುತ್ತಲೂ ಚೌಕಾಕಾರವಾಗಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ.

**ಪೂರ್ವ ಭುವನೇಶ್ವರಿ**:-ಈ ಭುವನೇಶ್ವರಿಯನ್ನು ಉತ್ತರದ ಭುವನೇಶ್ವರಿಯ ಮಾದರಿಯಲ್ಲಿಯೇ ರಚಿಸಲಾಗಿದೆ. ಒಳಭಾಗದಲ್ಲಿ ೯ ಅರಳಿದ ಪದ್ಮಪುಷ್ಪಗಳು ಇಕ್ಕೆಲಗಳಲ್ಲಿ ಕೀರ್ತಿಮುಖವನ್ನು ಬಿಡಿಸಲಾಗಿದೆ ಅಂತ್ಯದಲ್ಲಿ ಚೌಕಾಕಾರದ ಕಮಲದ ಮೊಗ್ಗು ಕಂಡುಬರುತ್ತದೆ.

**ಆಗ್ನೇಯ ಭುವನೇಶ್ವರಿ**:-ಇದನ್ನು ಪ್ರಮುಖ ಚೌಕಾಕಾರ ಒಳಗೆ ಮತ್ತೊಂದು ಚೌಕಾಕಾರ ಮಾಡಿ ವೃತ್ತಾಕಾರವಾಗಿ ಮಾಡಿ ೩ ಸುತ್ತು ಇರುವ ಪದ್ಮಪುಷ್ಪ ಬಿಡಿಸಲಾಗಿದೆ. ಮೂಲೆಗಳಲ್ಲಿ ಕೂಡುಗಳ ಕೆತ್ತನೆ ಕಂಡುಬರುತ್ತದೆ.

**ದಕ್ಷಿಣ ಭುವನೇಶ್ವರಿ:-** ದಕ್ಷಿಣದ ಭುವನೇಶ್ವರಿಯನ್ನು ಆಯಾತಕಾರವಾಗಿ ರಚಿಸಲಾಗಿದೆ.ಇದರಲ್ಲಿ ಬಿಡಿಸಲಾಗಿರುವ ಒಂಭತ್ತು ಅರಳಿದ ಪದ್ಮಪುಷ್ಪಗಳಿವೆ. ಇಕ್ಕೆಲಗಳಲ್ಲಿ ಕೀರ್ತಿಮುಖ, ಇದರ ಸುತ್ತಲು ಕಮಲದ ಪುಷ್ಪಗಳನ್ನು ಕಾಣಬಹುದು.

**ನೈರುತ್ಯ ಭುವನೇಶ್ವರಿ:-**ಈ ಭುವನೇಶ್ವರಿ ಚೌಕ ಮತ್ತು ವೃತಾಕಾರವಾಗಿರಚಿಸಲಾಗಿದೆ. ಇದರ ಮಧ್ಯದಲ್ಲಿ ಬಿಡಿಸಲಾಗಿರುವ ಪದ್ಮಪುಷ್ಪಗಳು ಆಗತಾನೇ ಅರಳುತ್ತಿರುವಂತೆ ಮತ್ತು ವೃತ್ತಾಕಾರದ ದಳಗಳು, ಮೊಗ್ಗುಗಳ ಅಲಂಕರಣೆ ಕೆತ್ತನೆ ಮಾಡಲಾಗಿದೆ. ಮೂಲೆಗಳಲ್ಲಿ ಕೀರ್ತಿಮುಖಗಳಿವೆ.[145]ನವರಂಗದ ಬಾಗಿಲ ಪಟ್ಟಿಕೆಗಳು ಯಾವುದೇ ಅಲಂಕರಣೆ ಇಲ್ಲದೆ ಹಾಗೇ ಉಳಿದಿವೆ. ಮಧ್ಯದಲ್ಲಿ ನಕ್ಷತ್ರಾಕಾರದ ಅರೆಗಂಬಗಳಿವೆ. ಬಾಗಿಲ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರು ಚತುರ್ಭುಜವನ್ನು ಹೊಂದಿದ್ದಾರೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದುಕೊಂಡಿದ್ದಾರೆ. ಇವರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿಗಳು ಮತ್ತು ಕೀರ್ತಿಮುಖವಿದೆ. ಇದರ ಇಕ್ಕೆಲಗಳಲ್ಲಿ ಫಲ ಮತ್ತು ಚಾಮರ ಹಿಡಿದು ನಿಂತಿರುವ ಚಾಮರಧಾರಿಣಿಯರಿದ್ದಾರೆ. ಲಲಾಟಬಿಂಬದಲ್ಲಿ ಲಕ್ಷ್ಮೀನಾರಾಯಣ ಶಿಲ್ಪವಿದೆ. ಇಕ್ಕೆಲಗಳಲ್ಲಿ ಫಲಪದ್ಮ ಹಿಡಿದು ನಿಂತಿರುವ ಸೇವಕಿಯರಿದ್ದಾರೆ. ಬಾಗಿಲವಾಡದಲ್ಲಿ ಕಮಲದ ಮೊಗ್ಗುಗಳ ಅಲಂಕರಣವಿದೆ.

**ಅಧಿಷ್ಠಾನ:-**ಅಧಿಷ್ಠಾನದಲ್ಲಿ ನಾಲ್ಕು ಪಟ್ಟಿಕೆಗಳಿವೆ. ಉಪಾನ, ಜಗತಿ, ತ್ರಿಪಟಕುಮುದ, ಪ್ರತಿ, ಕಪೋತಗಳಿವೆ. ಇವುಗಳನ್ನು ಒಳಹೊರ ಸರಿದಂತೆ ಕ್ರಮಬದ್ಧವಾಗಿ ಜೋಡಿಸಿ ಭದ್ರಪಡಿಸಲಾಗಿದೆ. ನಾಲ್ಕನೇ ಪಟ್ಟಿಕೆಯಲ್ಲಿ ಯುದ್ಧ ಸನ್ನಿವೇಶ ವೀರಯೋಧರ ಶಿಲ್ಪಗಳಿವೆ.

**ಭಿತ್ತಿ:-**ಭಿತ್ತಿಯಲ್ಲಿ ನಕ್ಷತ್ರಾಕಾರದ ದಪ್ಪನಾದ ಅರೆಗಂಬಗಳು, ಏಕಕಂಬ ಶಿಖರಗಳು, ದ್ವಿಕಂಬ ಶಿಖರಗಳನ್ನು ಮಾಡಿ ಅಲಂಕರಿಸಲಾಗಿದೆ. ಕೆಲವು ಕೋಷ್ಠಗಳಲ್ಲಿ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಶಿಲ್ಪಗಳಿವೆ. ಭಿತ್ತಿಯ ಮೇಲಿರುವ ಕಪೋತವು ಇಳಿಜಾರಾಗಿದೆ. ಈ ದೇವಾಲಯದ ಗರ್ಭಗೃಹದ ಮೇಲಿದ್ದ ಶಿಖರ ಸಂಪೂರ್ಣ ನಾಶವಾಗಿದೆ. ಇತ್ತೀಚೆಗೆ ರಾಜ್ಯ ಪುರಾತತ್ವ ಇಲಾಖೆಯವರು ಜೀರ್ಣೋದ್ಧಾರ ಮಾಡಿದ್ದಾರೆ. ಗರ್ಭಗೃಹದ ಮೇಲೆ ಈಗ ಶಿಖರವಿಲ್ಲ.[146]**(ಚಿ.ಸಂ.168)**

**ಲಕ್ಷ್ಮಿಕಾಂತ ದೇವಾಲಯ–ಮುಳ್ಳೂರು**

ಮುಳ್ಳೂರು ಗ್ರಾಮವು ತಾಲ್ಲೂಕು ಕೇಂದ್ರದ 25 ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಪಶ್ಚಿಮ ಭಾಗದಲ್ಲಿ ದಕ್ಷಿಣಭಿಮುಖವಾಗಿದ್ದು ಹೊಯ್ಸಳ ಮನೆತನದ ಆಳ್ವಿಕೆಯ ಅವಧಿಯಲ್ಲಿ ಈ ದೇವಾಲಯವನ್ನು ನಿರ್ಮಿಸಲಾಗಿದೆ.**(ಚಿ.ಸಂ.169)** ಈ ದೇವಾಲಯದ ಮುಂದೆ ದೀಪಸ್ತಂಭವನ್ನು ಮಾತ್ರ ಮೈಸೂರಿನ ಅರಸರಾದ ಚಾಮರಾಜ ಒಡೆಯರವರು ಕ್ರಿ.ಶ. 1625ರಲ್ಲಿ ನಿಲ್ಲಿಸಿದ್ದುದರ ಬಗ್ಗೆ ಅಲ್ಲಿರುವ ಶಾಸನದಿಂದ ನಮಗೆ ತಿಳಿದುಬರುತ್ತದೆ.[147]

ಈ ದೇವಾಲಯ ನಿರ್ಮಾಣದ ಅರಸನ ಉದ್ದೇಶದ ಬಗ್ಗೆ ಯಾವುದೇ ರೀತಿಯ ಮಾಹಿತಿ ಲಭ್ಯವಿಲ್ಲ ಆದರೆ ಈ ದೇವಾಲಯದ ವಾಸ್ತು ಲಕ್ಷಣಗಳಿಂದ ಇದು ಹೊಯ್ಸಳರ ಕಾಲದ ನಿರ್ಮಾಣ ಎಂದು ಹೇಳಬಹುದು. ಇದು ಏಕಕೂಟ ದೇವಾಲಯವಾಗಿದ್ದು, ಈ ದೇವಾಲಯವು ಮೈಸೂರು ಅರಸರ ಕ್ರಿ.ಶ. 1624–25ರ ಅವಧಿಯಲ್ಲಿ ದುರಸ್ಥಿಗೊಂಡಿದ್ದು ಪ್ರಸ್ತುತವಾಗಿ ಸುಸ್ಥಿತಿಯಲ್ಲಿದೆ.[148]

**ಗರ್ಭಗೃಹ**:–ಗರ್ಭಗೃಹವು 8X8 ಅಡಿ ಉದ್ದಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಗರುಡ ಪೀಠದ ಮೇಲೆ ಲಕ್ಷ್ಮಿಕಾಂತ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.170)** ಈ ದೇವನು ಸಮಭಂಗಿಯಲ್ಲಿ ನಿಂತಿದ್ದು ಚತುರ್ಭುಜವನ್ನು ಹೊಂದಿದ್ದಾನೆ.[149] ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಈ ದೇವನ ಪ್ರಭಾವಳಿಯಲ್ಲಿ ಬಳ್ಳಿಸುರುಳಿ, ಕೀರ್ತಿಮುಖವಿದೆ. ಈ ದೇವನ ಇಕ್ಕೆಲಗಳಲ್ಲಿ ಶ್ರೀದೇವಿ ಭೂದೇವಿಯರು ಫಲ ಮತ್ತು ಪದ್ಮವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಗರ್ಭಗೃಹದ ಮೇಲ್ಚಾವಣಿಯು ಭುವನೇಶ್ವರಿಯನ್ನು ಹೊಂದಿದ್ದು ಭುವನೇಶ್ವರಿಯು ನಕ್ಷತ್ರಾಕಾರವಾಗಿದ್ದು ಇಕ್ಕೆಲಗಳ ಪಟ್ಟಿಕೆಗಳಲ್ಲಿ ದಿಕ್ಪಾಲಕರು, ಕಮಲದ ಮೊಗ್ಗುಗಳು ಕೀರ್ತಿಮುಖಗಳ ಅಲಂಕರಣೆ ಇದೆ. ಮೇಲ್ಭಾಗದಲ್ಲಿ ಮೂರು ಸುತ್ತು ಅರಳಿದ ಸುಂದರವಾದ ಪದ್ಮಪುಷ್ಪವಿದೆ.

ಗರ್ಭಗೃಹದ ದ್ವಾರವು ಐದು ಪಟ್ಟಿಕೆಗಳಿಂದ ಕೂಡಿದ್ದು ಮದ್ಯದಲ್ಲಿ ನಕ್ಷತ್ರಾಕಾರದ ಅರೆಗಂಭಗಳಿವೆ. ಆದರ ಪಟ್ಟಿಕೆಗಳ ಮೇಲೆ ಯಾವುದೇ ರೀತಿಯ ಕೆತ್ತನೆಯ ಅಲಂಕರಣ ಕಾಣಬರುವುದಿಲ್ಲ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಈ ಲಕ್ಷ್ಮಿಯ ಇಕ್ಕೆಲಗಳಲ್ಲಿ ಪಂಜರದ ರೀತಿ ಬಿಡಿಸಲಾಗಿರುವ ಕಮಲದ ಮೊಗ್ಗುಗಳಿವೆ. ಬಾಗಿಲ ಅಡ್ಡ ಪಟ್ಟಿಕೆಯ ಕೆಳಗೆ

ಅರಳಿದ ಪದ್ಮಪುಷ್ಪವಿದೆ. ಮತ್ತು ಬಾಗಿಲ ಹೊಸ್ತಿಲ ಮೇಲೆ ಉಬ್ಬಿದಂತೆ ಬಿಡಿಸಿದ ಕಮಲದ ಪುಷ್ಪದ ಪೀಠವಿದೆ.

ಬಾಗಿಲವಾಡದಲ್ಲಿ ಮಣಿಹಾರಗಳು ಸಣ್ಣ ಸಣ್ಣ ಪದ್ಮ ಪುಷ್ಪದ ಮೊಗ್ಗುಗಳು ಅದರ ಮೇಲೆ ಹೊಯ್ಸಳ ಶೈಲಿಯ ಸಣ್ಣ ಸಣ್ಣ ಶಿಖರಗಳಿವೆ.

**ಸುಕನಾಸಿ**:-ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ಮೂರ್ತಿ ಶಿಲ್ಪಗಳಿಲ್ಲ. ಅದರ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿಯನ್ನು ಮಾಡಲಾಗಿದೆ. ಕಲಾತ್ಮಕ ಕೆತ್ತನೆಯಿಂದ ಕೂಡಿರುವ ಈ ಭುವನೇಶ್ವರಿಯ ಒಳಭಾಗದ ದಿಕ್ಪಾಲಕರು, ಕೀರ್ತಿಮುಖಗಳು, ಸಣ್ಣ ಸಣ್ಣ ಕಮಲದ ಮೊಗ್ಗುಗಳ ಅಲಂಕರಣ ಮತ್ತು ಮೇಲ್ಭಾಗದಲ್ಲಿ ವಿಶಾಲವಾಗಿ ಬಿಡಿಸಲಾಗಿರುವ ಅರಳಿದ ಪದ್ಮಪುಷ್ಪವಿದೆ. ಸುಕನಾಸಿಯ ದ್ವಾರವು ಯಾವುದೇ ರೀತಿಯ ಅಲಂಕರಣೆ ಇಲ್ಲದೆ ಸರಳವಾಗಿದೆ.ಮೂಲಗರ್ಭಗೃಹ ಮತ್ತು ಮುಖಮಂಟಪ ಹೊಯ್ಸಳರ ಕಲಾಕೃತಿಯಾಗಿದ್ದು, ತದನಂತರ ಕಾಣಬರುವ ನವರಂಗ ಸಂಪೂರ್ಣವಾಗಿ ಬಿದ್ದು ಹೋದಂತಿದೆ. ತರುವಾಯ ಅಧಿಕಾರಕ್ಕೆ ಬಂದ ವಿಜಯನಗರ ಅರಸರ ಕಾಲದಲ್ಲಿ ನವರಂಗವನ್ನು ಜೀರ್ಣೋದ್ಧಾರ ಮಾಡಿಸಿ ನಿರ್ಮಾಣ ಮಾಡಿದ್ದಾರೆ. ಈ ನವರಂಗದಲ್ಲಿ ವಿಜಯನಗರ ಶೈಲಿಯ ನಾಲ್ಕು ಕಂಬಗಳಿವೆ. ಈ ನಾಲ್ಕು ಕಂಬಗಳ ಮೇಲೆ ಸರಳವಾಗಿರುವ ಕಪೋತ, ಕಪೋತದ ಮೇಲೆ ಅಡ್ಡ ಪಟ್ಟಿಕೆಗಳನ್ನು ಹಾಕಿ ಈ ಅಡ್ಡಪಟ್ಟಿಕೆಗಳ ಮೇಲೆ ಕಣಶಿಲೆಯ ಕಲ್ಲುಚಪ್ಪಡಿಯನ್ನು ಹಾಸಿ ಮುಚ್ಚಲಾಗಿದೆ. ಇದು ಸುಮಾರು 20X20 ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದ ಒಳಭಾಗದ ವಾಯುವ್ಯ ಮೂಲೆಯಲ್ಲಿ ನಾಗಶಿಲ್ಪಗಳನ್ನು ಪಾಣಿಪೀಠದ ಮೇಲೆ ಮತ್ತೊಂದು ಪಾಣಿಪೀಠವನ್ನು ಚಿಕ್ಕದಾಗಿ ಮಾಡಿ ಶಿವಲಿಂಗವನ್ನು ಇರಿಸಲಾಗಿದೆ. ಈ ನವರಂಗದ ಎಡ ಮತ್ತು ಬಲ ಭಾಗದಲ್ಲಿ ದಾನ ಕೊಟ್ಟ ಎರಡು ಶಾಸನಗಳಿವೆ.

ನವರಂಗ ಬಾಗಿಲ ಪಟ್ಟಿಕೆಯು ಸೂಕ್ಷ್ಮ ಕೆತ್ತನೆವುಳ್ಳ ಅಲಂಕರಣೆಯಿಂದ ಕೂಡಿದೆ. ಇದರಲ್ಲಿ ಕಮಲದ ಮೊಗ್ಗುಗಳ ಅಲಂಕರಣ ಬಳ್ಳಿ ಸುರುಳಿಗಳು, ಕಮಲದ ದಳಗಳ ಅಲಂಕರಣೆ ಇದೆ. ಲಲಾಟಬಿಂಬದ ಗಜಲಕ್ಷ್ಮಿಯ ಶಿಲ್ಪವಿದೆ.**(ಚಿ.ಸಂ.171)**

**ಮುಖಮಂಟಪ**:-ಈ ಮುಖಮಂಟಪವು ಸಹ ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣ ಮಾಡಲಾಗಿದ್ದು, ಇದು ಆಯಾತಕಾರವಾಗಿದ್ದು, ಮೂರು ಅಡಿ ಎತ್ತರವಿರುವ ಜಗತಿಯ ಮೇಲೆ ಸಾಲಾಗಿ ನಾಲ್ಕು ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳ ಮೇಲೆ ಮೇಲ್ಛಾವಣಿಯನ್ನು

ಮಾಡಲಾಗಿದೆ. ಮೇಲ್ಛಾವಣಿಗೆ ಕಲ್ಲಿ ಚಪ್ಪಡಿಯನ್ನು ಹಾಸಿ ಮುಚ್ಚಲಾಗಿದೆ. ಮೇಲ್ಛಾವಣಿಯ ಸೂರ್ಯಭಾಗವನ್ನು ಇಳಜಾರಾಗಿ ಜೋಡಿಸಲಾಗಿದೆ. ಇದರ ಮುಂದೆ ಸೋಪಾನವನ್ನು ಮಾಡಲಾಗಿದೆ.

**ಅಧಿಷ್ಠಾನ**:–ಈ ಅಧಿಷ್ಠಾನದಲ್ಲಿ ಆರು ಪಟ್ಟಿಕೆಗಳಿವೆ. ಉಪಾನ ಭೂಮಿಯಲ್ಲಿ ಹೂತುಹೋಗಿದೆ. ಜಗತಿ, ಪದ್ಮ ಕುಮುದ, ಪ್ರತಿ, ಹಾರ ಕಪೋತ ಪದ್ಮ ಕುಮುದದ ಅಂಚಿನಲ್ಲಿ ದಂತಪಂಕ್ತಿ ಮತ್ತು ಪ್ರತಿ, ಹಾರ ಇವುಗಳ ಹೊರ ಅಂಚಿನಲ್ಲಿ ದಂತ ಪಂಕ್ತಿಯನ್ನು ಮಾಡಲಾಗಿದೆ. ಈ ಅಧಿಷ್ಠಾನವನ್ನು ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಈ ಪಟ್ಟಿಕೆಗಳನ್ನು ಒಳ ಹೊರ ಸರಿದಂತೆ ಕ್ರಮಬದ್ಧವಾಗಿ ಜೋಡಿಸಿ ಭದ್ರವಾಗಿ ರಚಿಸಲಾಗಿದೆ.**(ಚಿ.ಸಂ.172)**

**ಭಿತ್ತಿ**:–ಈ ದೇವಾಲಯದ ಗರ್ಭಗೃಹ ಮತ್ತು ಸುಖನಾಸಿಯಲ್ಲಿ ಮಾತ್ರ ಶಿಲ್ಪಗಳು ಕಂಡು ಬರುತ್ತವೆ. ಈ ಭಿತ್ತಿಯನ್ನೇ ಎರಡು ಭಾಗವಾಗಿ ವಿಂಗಡಿಸಲಾಗಿದೆ. ಕೆಳಗಿನ ಭಿತ್ತಿಯಲ್ಲಿ ಶಿಲ್ಪಗಳ ಜೋಡಣೆ ಇದೆ. ಅದರ ಮೇಲ್ಬಾಗದಲ್ಲಿ ಕಂಬ ಶಿಖರಗಳ ಅಲಂಕರಣೆ ಇದೆ. ಭಿತ್ತಿಯ ಮದ್ಯಭಾಗದಲ್ಲಿ ಒಂದು ಕಪೋತವನ್ನು ಮಾಡಿ ಕಪೋತದ ಕೆಳಗೆ ಸುತ್ತಲೂ ಶಿಲ್ಪಗಳನ್ನೇ ಜೋಡಿಸಲಾಗಿದೆ. ಜೋಡಿಸಲಾಗಿರುವ ಶಿಲ್ಪಗಳು ಕೆಲವು ಪೂರ್ಣಗೊಂಡಿವೆ. ಕೆಲವು ಶಿಲ್ಪಗಳು ಅಪೂರ್ಣವಾಗಿ ಉಳಿದಿವೆ.

ಶಿಲ್ಪಗಳ ವಿವರಣೆ ಈ ರೀತಿ ಇದೆ. ಮೊದಲನೆಯದಾಗಿ ಒಬ್ಬ ಪುರುಷ ಶಿಲ್ಪವಿದ್ದು, ಈ ಶಿಲ್ಪವು ತ್ರಿಭಂಗಿಯಲ್ಲಿದ್ದು, ಕೆತ್ತನೆ ಕೆಲಸವನ್ನು ಹಾಗೆ ಉಳಸಲಾಗಿದೆ. ಈ ಪುರುಷನ ಬಲಜಾಗದಲ್ಲಿ ಫಲ ಮತ್ತು ಪದ್ಮ ಹಿಡಿದು ನಿಂತಿರುವ ಸ್ತ್ರೀಯ ಶಿಲ್ಪವಿದೆ. ಇದು ಸಹ ಅಪೂರ್ಣಗೊಂಡಿದೆ. ಸ್ತ್ರೀಯ ಬಲಭಾಗದಲ್ಲಿ ಲಕ್ಷ್ಮೀನಾರಾಯಣನ ಶಿಲ್ಪವಿದೆ. ಸುಖಾಸನದಲ್ಲಿ ಕುಳಿತಿರುವ ಈ ದೇವನು ಲಕ್ಷ್ಮಿಯನ್ನು ತನ್ನ ತೊಡೆಯ ಮೆಲೆ ಕೂರಿಸಿಕೊಂಡಿದ್ದಾನೆ. ಈತನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಪದ್ಮವಿದೆ. ಇನ್ನೊಂದು ಕೈ ಲಕ್ಷ್ಮಿಯನ್ನು ತಬ್ಬಿಕೊಂಡಿದೆ. ಲಕ್ಷ್ಮಿಯು ವಿಷ್ಣುವಿನ ತೊಡೆಯ ಫಲವನ್ನು ಹಿಡಿದು ಕುಳಿತಿದ್ದಾಳೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣಗಳು ಸ್ಪಷ್ಟವಾಗಿ ಕಾಣಿಸುವುದಿಲ್ಲ.

ವಿಷ್ಣುವಿನ ಬಲಭಾಗದಲ್ಲಿ ನೃತ್ಯಗಣಪನಿದ್ದಾನೆ. ಈ ಗಣಪನು ನಯವಾದ ಕೆತ್ತನೆಯಿಂದ ಕೂಡಿದ್ದು ಷಡ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಪಾಶ, ಅಂಕುಶ, ಸ್ವರ್ಗಹಸ್ತ, ಲಂಬಹಸ್ತ, ಫಲ, ಅಭಯಹಸ್ತವನ್ನು ಹೊಂದಿದ್ದಾನೆ. ಈ ದೇವನ ಎಡಭಾಗದಲ್ಲಿ ಮೃದಂಗವನ್ನು ಹಿಡಿದು ನುಡಿಸುತ್ತಿರುವ ಇಬ್ಬರು ತಬಲಧಾರೆಯರಿದ್ದಾರೆ. ಎರಡು ಶಿಲ್ಪಗಳು ಸಹ ಅಪೂರ್ಣಗೊಂಡಿವೆ.

**ವಿಷ್ಣು**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಗದಾ, ಪದ್ಮ, ಶಂಖ, ಚಕ್ರವನ್ನು ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಬಲಭಾಗದಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ಸ್ತ್ರೀಯ ಶಿಲ್ಪವಿದೆ. ಈ ಶಿಲ್ಪವು ಸಹ ಅಪೂರ್ಣವಾಗಿದೆ. ಈ ಸ್ತ್ರೀಯ ಬಲಭಾಗದಲ್ಲಿ ವೃಶ್ಚಿಕ ಇದೆ. ತನ್ನ ಎರಡು ಕೈಗಳನ್ನು ಮೇಲಕ್ಕೆ ಎತ್ತಿದ್ದಾಳೆ, ತೊಡೆಗೆ ನಾಗನು ಸುತ್ತಿಕೊಂಡಿದ್ದಾನೆ.

**ಗರುಡ**:-ಸಮಭಂಗಿಯಲ್ಲಿ ನಿಂತಿರುವ ಈ ದೇವನು ತನ್ನ ಕೈಗಳಲ್ಲಿ ಫಲ ಹಿಡಿದಿರುವವ ಸ್ತ್ರೀ ನೃತ್ಯಶಾರದೆ. ಉಗ್ರನರಸಿಂಹ, ವರಾಹ, ವಾಸುದೇವ ಮಗುವನ್ನು ಹಿಡಿದು ನಿಂತಿರುವ ಸ್ತ್ರೀ ವಿಷ್ಣು, ಸ್ತ್ರೀ ಮತ್ಸ್ಯಭೇದ ಅರ್ಜುನ, ವೀರಯೋಧ ಇನ್ನುಳಿದ ಶಿಲ್ಪಗಳು ಸ್ಪಷ್ಟವಾಗಿ ಕಾಣದೇ ಅಪೂರ್ಣವಾಗಿದೆ.[150]

**ಕಪೋತ**:-ಭಿತ್ತಿಯ ಮಧ್ಯಭಾಗದಲ್ಲಿರವ ಈ ಕಪೋತವು ಭಿತ್ತಿಯಿಂದ 1.5 ಅಡಿ ಮುಂದಕ್ಕೆ ಚಾಚಿದ್ದು, ಇಂಗ್ಲೀಷಿನ ಎಸ್ ಅಕ್ಷರದ ಆಕಾರವಾಗಿ ರಚಿಸಲಾಗಿದ್ದ ಇದರ ಅಂಚಿನ ಭಾಗದಲ್ಲಿ ಸುತ್ತಲೂ ಕಮಲದ ಮೊಗ್ಗುಗಳು ದಂತಪಂಕ್ತಿಯನ್ನು ಮಾಡಲಾಗಿದೆ. ಭಿತ್ತಿಯ ಮೇಲಿರುವ ಕಪೋತವು ಸಹ ಮಧ್ಯದ ಕಪೋತದ ರೀತಿ ಇದ್ದು, ಇದರಲ್ಲಿಯೂ ಸಹ ಕಮಲದ ಮೊಗ್ಗು, ದಂತ ಪಂಕ್ತಿಗಳ ಅಲಂಕರಣೆ ಇದೆ. ನವರಂಗದ ಭಾಗವು ಸಂಪೂರ್ಣವಾಗಿ ವಿಜಯನಗರ ಕಾಲದಲ್ಲಿ ಜೀರ್ಣೋದ್ಧಾರವಾಗಿದೆ. ಕಪೋತದ ಮೇಲೆ ಇನ್ನೊಂದು ಕಪೋತವಿದ್ದು ಇದರ ಮೇಲೆ ನಿರ್ಮಿಸಲಾಗಿದ್ದ ಹೊಯ್ಸಳ ಶೈಲಿಯ ಶಿಖರ ಸಂಪೂರ್ಣವಾಗಿ ನಾಶವಾಗಿ ಹೋಗಿದೆ. ಇದರ ಮೇಲೆ ಇತ್ತೀಚೆಗೆ ಗೋಪುರದ ರೀತಿಯ ಶಿಖರವನ್ನು ನಿರ್ಮಿಸಲಾಗಿದೆ. ಇದರಲ್ಲಿ ಲಕ್ಷ್ಮಿನಾರಾಯಣ, ವೇಣುಗೋಪಾಲ, ಯೋಗನರಸಿಂಹ ಮತ್ತಿತರ ಶಿಲ್ಪಗಳನ್ನು ಬಿಡಿಸಲಾಗಿದೆ.

ಮುಖಮಂಟಪದ ಮೇಲೆ ಶಿಖರಗಳುಳ್ಳ ಕೋಷ್ಠಗಳನ್ನು ಮಾಡಲಾಗಿದೆ. ಈ ಕೋಷ್ಠದಲ್ಲಿ ಯಾವುದೇ ಮೂರ್ತಿಶಿಲ್ಪ ಕಾಣಬರುವುದಿಲ್ಲ. ಈ ದೇವಾಲಯದ ಈಶಾನ್ಯ ಭಾಗದಲ್ಲಿ ಒಂದು ತುಳಸಿಕಟ್ಟೆ ಇದೆ. ಈ ದೇವಾಲಯದ ಮುಂದೆ ಮಹಾದ್ವಾರವಿದೆ. ಈ ದ್ವಾರವು ಸುಮಾರು 25 ಅಡಿ ಎತ್ತರವಾಗಿದ್ದು ನಾಲ್ಕು ಕಂಬಗಳ ಮೇಲೆ ನಿಂತಿದೆ.

**ದೀಪಸ್ತಂಭ**:-ಈ ದೇವಾಲಯದ ಮುಂದೆ ಒಂದು ಸ್ತಂಭವನ್ನು ನಿಲ್ಲಿಸಲಾಗಿದೆ. ಈ ದೀಪಸ್ತಂಭವನ್ನು ರಚಿಸಿ ನಾಲ್ಕು ಅಡಿ ಎತ್ತರವಿರುವ ಚೌಕಾಕಾರದ ವೇದಿಕೆಯ ಮೇಲೆ ನಿಲ್ಲಿಸಲಾಗಿದೆ. ಇದು ಸುಮಾರು 30 ಅಡಿ ಎತ್ತರವಿರುವ ಈ ಕಂಬವನ್ನು ಚೌಕ ಅಷ್ಟಸ್ರ, ಷೋಡಶ ಮುಖಗಳ ರೀತಿಯಲ್ಲಿ ರಚಿಸಿ ನಿಲ್ಲಿಸಲಾಗಿದೆ. ಮೇಲ್ಭಾಗದಲ್ಲಿ ಗಾಲಿ ಪುಷ್ಪಬೋದಿಗೆ ಮತ್ತು ಫಲಗಳು ಕಂಡುಬರುತ್ತದೆ.**(ಚಿ.ಸಂ.171)**

**ವರದರಾಜಸ್ವಾಮಿ ದೇವಾಲಯ-ವರಕೋಡು**

ವರಕೋಡು ಮೈಸೂರು ಜಿಲ್ಲೆಯ ಮತ್ತು ತಾಲೂಕಿನ ಒಂದು ಗ್ರಾಮ. ಮೈಸೂರಿನಿಂದ ಸುಮಾರು 15 ಕಿ.ಮೀ ದೂರದಲ್ಲಿ ಟಿ. ನರಸೀಪುರಕ್ಕೆ ಹೋಗುವ ಮಾರ್ಗದ ಎಡಭಾಗದಲ್ಲಿ ಈ ಗ್ರಾಮ ಇದೆ. ಈ ಗ್ರಾಮದ ಮಧ್ಯಭಾಗದಲ್ಲಿರುವ ವರದರಾಜಸ್ವಾಮಿಯ ದೇವಾಲಯವನ್ನು ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಲಾಗಿದೆ.**(ಚಿ.ಸಂ.174)** ಈ ಗ್ರಾಮದ ಪ್ರಾಚೀನ ಹೆಸರು ಹೊಯ್ಸಳ ದೊರೆ ಇಮ್ಮಡಿ ಬಲ್ಲಾಳನ ಕಾಲದ ಕುಮಾರಬೀಡು ಶಾಸನದಲ್ಲಿ ಒರಕೋಡು ಎಂಬುದಾಗಿ ಉಲ್ಲೇಖಿತಗೊಂಡಿದ್ದು,[151] ಕಾಲಾನಂತರದಲ್ಲಿ ವರಕೋಡು ಎಂದು ಪ್ರಚಲಿತದಲ್ಲಿದೆ. ಈ ದೇವಾಲಯವನ್ನು ಗ್ರಾನೈಟ್ ಶಿಲೆಯಿಂದ ನಿರ್ಮಾಣ ಮಾಡಲಾಗಿದೆ. ದೇವಾಲಯದ ಮಧ್ಯದ ಎರಡು ಕಂಬಗಳಲ್ಲಿ ಕ್ರಿ.ಶ.1605 ಮತ್ತು ಕ್ರಿ.ಶ.1611ಶಾಸನಗಳಿವೆ.[152] ಈ ದೇವಾಲಯವು ಗರ್ಭಗೃಹ, ಶುಕನಾಸಿ, ನವರಂಗ, ಹಜಾರ, ಒಳಕೈಸಾಲೆಯನ್ನು ಹೊಂದಿದೆ.

**ಗರ್ಭಗೃಹ**:-ಗರ್ಭಗೃಹವು 10x10 ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಮಧ್ಯಭಾಗದಲ್ಲಿ ಗರುಡ ಪೀಠದ ಮೇಲೆ ಸಿಂಹಗಳಿವೆ.**(ಚಿ.ಸಂ.175)** ಅದರ ಮೇಲೆ ಸುಮಾರು 6 ಅಡಿ ಎತ್ತರದ ವರದರಾಜಸ್ವಾಮಿಯನ್ನು ಪ್ರತಿಷ್ಠಾಪಿಸಲಾಗಿದೆ.[153]ಚತುರ್ಭುಜವನ್ನು ಹೊಂದಿರುವ ವರದರಾಜಸ್ವಾಮಿಯು ಎಡ ಹಸ್ತದಲ್ಲಿ ಶಂಖ ಮತ್ತು ಗಧೆಯನ್ನು ಹಿಡಿದಿದ್ದು ಬಲ ಹಸ್ತದಲ್ಲಿ ಚಕ್ರ ಮತ್ತು ವರದಹಸ್ತವನ್ನು ಹೊಂದಿದ್ದಾನೆ. ವರದಹಸ್ತದಲ್ಲಿ ಚಿಕ್ಕದಾದ ಕಮಲ ಅಥವಾ ಪದ್ಮವನ್ನು ಹಿಡಿದಿರುವುದರಿಂದ ಇವನನ್ನು ವರದರಾಜ ಎಂದು ಗುರುತಿಸಲಾಗಿದೆ. ವರದರಾಜ ಎಂದರೆ ವರಗಳನ್ನು ಕೊಡುವವರಲ್ಲಿ ರಾಜ ಎಂದರ್ಥ. ಈ ವರದರಾಜ ಸ್ವಾಮಿಯ ಪೌರಾಣಿಕ ಹಿನ್ನೆಲೆಯು ಹೀಗಿದೆ. ಗಜೇಂದ್ರಮೊಕ್ಷ ಕಥೆಗೆ ಸಂಬಂಧಿಸಿರುವುದರಿಂದ"ಕರಿರಾಜವರದ" ಎಂದು ಸಹ ಹೇಳಲಾಗುತ್ತದೆ. ಸರೋವರದಲ್ಲಿ ಮೊಸಳೆಯು ಆನೆಯ ಕಾಲನ್ನು ಹಿಡಿಯಲಾಗಿ ಆನೆಯು ತನ್ನ ರಕ್ಷಣೆಗಾಗಿ ವಿಷ್ಣುವನ್ನು ಕರೆಯಿತು. ವಿಷ್ಣುವು ಬಂದು ತನ್ನ ಚಕ್ರದಿಂದ ಮೊಸಳೆಯನ್ನು ಕತ್ತರಿಸಿ ಆನೆಯನ್ನು ಕಾಪಾಡಿದನು. ಆಗ ಆನೆಯು ತನ್ನ ಸೊಂಡಿಲಿನಿಂದ ಒಂದು ಕಮಲದ ಪುಷ್ಪವನ್ನು ವಿಷ್ಣುವಿಗೆ ನೀಡಿತು. ಅದನ್ನು ವಿಷ್ಣು ಕೈಯಲ್ಲಿ ಧರಿಸಿದ್ದಾನೆ. ಇಲ್ಲಿ "ಕರಿರಾಜ" ಎಂದರೆ ಆನೆ. ಆನೆಗೆ ವರವನ್ನು ನೀಡಿದುದರಿಂದ ಇವನನ್ನು ಕರಿರಾಜವರದ ಎಂದು ಕರೆಯಲಾಗುತ್ತದೆ.[154] ವರದರಾಜನಿಗೂ ಮತ್ತು ವಿಷ್ಣುವಿಗೂ ಇವರ ವ್ಯತ್ಯಾಸ ಎಂದರೆ ವಿಷ್ಣುವಿನ ಮೂರ್ತಿಯ ಅಭಯಹಸ್ತದಲ್ಲಿ ಕಮಲವು ಇರುವುದಿಲ್ಲ. ಇಲ್ಲಿ ಕಮಲ ಪುಷ್ಪವಿರುವುದರಿಂದ ನಾವು ಸುಲಭವಾಗಿ ವರದರಾಜ ಎಂದು ಗುರುತಿಸಬಹುದು. ಮೇಲ್ಛಾವಣಿಯಲ್ಲಿ ಕಮಲದ ಆಕೃತಿಯಲ್ಲಿರುವ ಪುಷ್ಪ ಭುವನೇಶ್ವರಿಯನ್ನು ಬಿಡಿಸಲಾಗಿದೆ. ಗರ್ಭಗೃಹದ ದ್ವಾರವು ಸರಳ ವಾಗಿದೆ.

**ಸುಕನಾಸಿ**:-ಸುಕನಾಸಿಯು ಸುಮಾರು 6 ಅಡಿ ಅಗಲ ಹಾಗೂ 6ಅಡಿ ಉದ್ದವನ್ನು ಹೊಂದಿದ್ದು. ಚೌಕಾಕಾರವಾಗಿದೆ. ಸುಖನಾಸಿಯಲ್ಲಿ ಯಾವ ರೀತಿಯ ಕೆತ್ತೆನೆ ಕಂಡುಬರುವುದಿಲ್ಲ. ಇಲ್ಲಿಯ ಹೊರಭಿತ್ತಿಯನ್ನು ಅರೆಗಂಬಗಳಿಂದ ಅಲಂಕರಿಸಿದ್ದಾರೆ.

**ನವರಂಗ**:-ನವರಂಗದವು 25x25 ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ನವರಂಗದ ಎಡ ಮತ್ತು ಬಲ ಭಾಗಗಳಲ್ಲಿ ಎರಡು ಸಣ್ಣ ಗುಡಿಗಳಿವೆ. ಬಲಭಾಗದ ಗುಡಿಯಲ್ಲಿ ಯಾವ ಮೂರ್ತಿಯೂ ಇಲ್ಲ ಎಡಭಾಗದ ಗುಡಿಯಲ್ಲಿ ವಿಶ್ವಕ್ಸೇನ ದೇವರ ವಿಗ್ರಹವಿದೆ. ಈ ಮೂರ್ತಿಯು ನಾಲ್ಕು ಕೈಗಳನ್ನು ಹೊಂದಿದ್ದು ಶಂಖ, ಚಕ್ರ, ಗಧೆ, ಮತ್ತು ವೇತ್ರ ಹಸ್ತನಾಗಿರುತ್ತಾನೆ. ವೇತ್ರ ಎಂದರೆ ದಂಡ. ವಿಶ್ವಕ್ಸೇನನನ್ನು ವಿಷ್ಣುವಿನ ಸೇನಾಧಿಪತಿ ಎಂದು ಹೇಳಬಹುದು. ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳಿದ್ದು, ಈ ಕಂಬಗಳು ಉಪಪೀಠ, ಚೌಕಾಕಾರದಪೀಠ, ಅಷ್ಠ, ಆಧಾರ ಬೋದಿಗೆಯನ್ನು ಹೊಂದಿದೆ ಪ್ರತಿ ಕಂಬಗಳ ನಾಲ್ಕು ಭಾಗಗಳಲ್ಲಿಯೂ ವಿವಿಧ ರೀತಿಯ ಪೌರಾಣಿಕ ಕಥೆಗಳನ್ನು ತಿಳಿಸುವಂತಹ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಎಡ ಭಾಗದಲ್ಲಿ ಕೊಳಲನ್ನು ಹಿಡಿದು ನುಡಿಸುತ್ತಿರುವ ವೇಣುಗೋಪಾಲ, ಕುದುರೆಮುಖವನ್ನು ಹೊಂದಿರುವ ವ್ಯಕ್ತಿಯು ಢಮರುಗವನ್ನು ಬಾರಿಸುತ್ತಿರುವುದು, ಸ್ತ್ರೀ ಮುಖ ಪ್ರಾಣಿ ದೇಹವಿರುವ ಚಿತ್ರ, ನಾಟ್ಯಗಣಪತಿ, ಅರ್ಜುನನು ದ್ರೌಪದಿಯನ್ನು ವರಿಸಲು ಮತ್ಸ್ಯವನ್ನು ಭೇದಿಸುತ್ತಿರುವುದು, ಉಗ್ರನರಸಿಂಹ, ವಿಷ್ಣು, ನರ್ತಕಿಯರು ಹಾಗೂ ಇನ್ನಿತರ ಶಿಲ್ಪಗಳನ್ನು ಕೆತ್ತಲಾಗಿದೆ.[155] ನವರಂಗದ ಮೇಲ್ಛಾವಣಿಯನ್ನು ಕಲ್ಲುಚಪ್ಪಡಿಗಳಿಂದ ಮುಚ್ಚಲಾಗಿದೆ. ನವರಂಗದಿಂದ ಹೊರ ಹೋಗಲು ದಕ್ಷಿಣ ಹಾಗೂ ಪೂರ್ವದಲ್ಲಿ ದ್ವಾರಗಳಿವೆ.

ದೇವಾಲಯದ ಏರು ವಿನ್ಯಾಸದಲ್ಲಿ ಅಧಿಷ್ಠಾನ, ಭಿತ್ತಿ, ಕಪೋತ ಕಂಡುಬಂದಿದ್ದು, ಪ್ರಸ್ತರ, ಶಿಖರ ಇತ್ಯಾದಿಗಳು ಸಂಪೂರ್ಣವಾಗಿ ನಾಶವಾಗಿವೆ. ಗರ್ಭಗೃಹದ ಹೊರಭಾಗದಲ್ಲಿ ವಿಶಾಲವಾದ ದೇವಾಲಯದ ಕುರುಹುಗಳಿವೆ. ಈಗಿರುವ ಗರ್ಭಗೃಹದ ಹೊರ ರಚನೆಯಲ್ಲಿ ದಪ್ಪ ದಪ್ಪ ಉಂಡೆಕಲ್ಲುಗಳನ್ನು ಹಾಕಿ ಅದರ ಸುತ್ತಲೂ ಚಪ್ಪಡಿಗಳಿಂದ ಮುಚ್ಚಲಾಗಿದೆ

**ಕೈಸಾಲೆ**:-ದೇವಾಲಯದ ಸುತ್ತಲೂ ಅನೇಕ ಕಂಬಗಳಿಂದ ನಿರ್ಮಿತವಾಗಿರುವ ಒಳಮುಖದ ಕೈಸಾಲೆಯಿದೆ. ಈ ಎಲ್ಲಾ ಕಂಬಗಳು ವಿವಿಧ ಶೈಲಿಯಲ್ಲಿವೆ. ಕೆಲವು ಚೌಕಾಕಾರವಾಗಿವೆ. ಮತ್ತೆ ಕೆಲವು ದುಂಡಾಗಿವೆ. ಮತ್ತೆ ಕೆಲವು ಆರು ಮುಖ ಹಾಗೂ ಎಂಟು ಮುಖಗಳನ್ನು ಹೊಂದಿವೆ. ಕೆಲವು ಕಂಬಗಳಲ್ಲಿ ಶಿಲ್ಪವನ್ನು ಕೆತ್ತಲಾಗಿದೆ. ಇದನ್ನು ಬಹುಶಃ ಮೈಸೂರು ಅರಸರ ಕಾಲದಲ್ಲಿ ಕಟ್ಟಿರಬಹುದು. ದೇವಾಲಯದ ನೈರುತ್ಯ ಭಾಗದಲ್ಲಿ ಎರಡು ಸಣ್ಣ ಗುಡಿಗಳಿದ್ದು, ಒಂದರಲ್ಲಿ ಯಾವುದೇ ವಿಗ್ರಹವಿಲ್ಲದೆ ಒಂದು ಗರುಡಪೀಠವಿದೆ.**(ಚಿ.ಸಂ.176,177)** ಮತ್ತೊಂದು ಗುಡಿಯಲ್ಲಿ

ಗರುಡಪೀಠದಲ್ಲಿ ಲಕ್ಷ್ಮೀಯ (ಅಮ್ಮನವರ) ವಿಗ್ರಹವಿದೆ. ಲಕ್ಷ್ಮೀಯು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಪದ್ಮ, ಶಂಖ, ಅಭಯ ಹಾಗೂ ವರದ ಹಸ್ತಗಳನ್ನು ಹೊಂದಿದ್ದಾಳೆ. ಈ ದೇವಿಯ ಹಿಂಭಾಗದಲ್ಲಿ ಸರಳವಾದ ಪ್ರಭಾವಳಿಯಿದೆ. ವಾಯುವ್ಯ ಭಾಗದಲ್ಲಿ ಎರಡು ಸಣ್ಣ ಗುಡಿಗಳಿದ್ದು, ಅವುಗಳಲ್ಲಿಯೂ ವಿಗ್ರಹವಿಲ್ಲದ ಗರುಡಪೀಠವಿದೆ. ಆಗ್ನೇಯ ಭಾಗದಲ್ಲಿ ಪಾಕಶಾಲೆಯಿದ್ದು ಈಗ ಇದು ಶಿಥಿಲವಾಗಿದೆ. ಪಾಕಶಾಲೆ ಎಂದು ಹೇಳಲು ಕಲ್ಲಿನ ತೊಟ್ಟಿ, ಕಲ್ಲಿನ ಒರಳು ಮತ್ತು ಹೊಗೆಕಿಂಡಿಗಳು ಸಾಕ್ಷಿಯಾಗಿವೆ. ಮತ್ತೊಂದು ಮುಖ್ಯವಾದ ಅಂಶವೆಂದರೆ ಪಾಕಶಾಲೆಗೆ ಹೋಗಲು ಮಾಡಿರುವ ದ್ವಾರದ ಲಲಾಟಬಿಂಬದಲ್ಲಿ ಜಿನನ ವಿಗ್ರಹವಿದೆ. ಕ್ರಿ.ಶ. 1109-10ರ ಶಾಸನದಲ್ಲಿ ವರಕೋಡಿನ ಬಸದಿಗೆ ಹೊಯ್ಸಳ ರಾಜ ವಿಷ್ಣುವರ್ಧನನ ಸಂಧಿವಿಗ್ರಹಿಯಾದ ಪುಣಿಸಮಯ್ಯನು ಗದ್ದೆಯನ್ನು ನೀಡಿದ ಉಲ್ಲೇಖವಿದೆ.[156] ಹೊಯ್ಸಳರ ಕಾಲದಲ್ಲಿ ಕಟ್ಟಿರುವ ಬಸದಿಯು ನಾಶವಾಗಿದ್ದು ಅಲ್ಲಿ ಬಳಸಿದ ಕಲ್ಲುಚಪ್ಪಡಿ ಹಾಗೂ ಕಂಬಗಳನ್ನು ಈ ದೇವಾಲಯದ ನಿರ್ಮಾಣಕ್ಕೆ ಬಳಸಿರಬಹುದು.

ಈ ಎಲ್ಲ ಲಕ್ಷಣಗಳನ್ನು ನೋಡಿದರೆ ಶಿಥಿಲವಾದ ದೇವಾಲಯದ ಭಾಗಗಳು ಹಾಗೂ ಬಸದಿಯ ಭಾಗಗಳನ್ನು ತಂದು ಈ ದೇವಾಲಯದ ಜೀರ್ಣೋದ್ಧಾರ ಮಾಡಿದಂತೆ ಕಂಡುಬರುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ವಾಸ್ತು ಲಕ್ಷಣಗಳನ್ನು ಅಭ್ಯಸಿಸಿದರೆ ಚೋಳ, ಹೊಯ್ಸಳ, ವಿಜಯನಗರ ಹಾಗೂ ಮೈಸೂರು ಅರಸರ ವಾಸ್ತುಲಕ್ಷಣಗಳು ಒಂದಕ್ಕೊಂದು ಬೆಸೆದುಕೊಂಡಂತಿವೆ.[157]

**ವರದರಾಜ ಸ್ವಾಮಿ ದೇವಾಲಯ-ಹೆಚ್.ಡಿ.ಕೋಟೆ**

ಹೆಗ್ಗಡದೇವನ ಕೋಟೆ ಪಟ್ಟಣವು ಮೈಸೂರು ಜಿಲ್ಲಾ ಕೇಂದ್ರದಿಂದ 40ಕಿ.ಮೀ. ದೂರದಲ್ಲಿ ತಾರಕಾ ನದಿಯ ಎಡದಂಡೆಯ ಮೇಲಿದೆ. ಈ ಪಟ್ಟಣವು ಮೈಸೂರು ಜಿಲ್ಲಾ ವ್ಯಾಪ್ತಿಗೆ ಸೇರಿದ್ದು, ಕ್ರಿ.ಶ.1806ರ ಹಿಂದಿನಿಂದಲೇ ತಾಲೂಕು ಕೇಂದ್ರ ಘಟಕವಾಗಿ ಕಾರ್ಯನಿರ್ವಹಿಸುತ್ತಿದ್ದು, ಅದಕ್ಕೂ ಮೊದಲು ಇದು 1864-86ರ ಅವಧಿಯಲ್ಲಿ ಸರಗೂರು ತಾಲೂಕಿನ ವ್ಯಾಪ್ತಿಗೊಳಪಟ್ಟಿತು.[158]

ಈ ದೇವಾಲಯವು ಪಟ್ಟಣದ ಕೇಂದ್ರ ಭಾಗದಿಂದ ಸುಮಾರು 200ಮೀ. ಅಂತರದಲ್ಲಿ ಪಶ್ಚಿಮ ಭಾಗಕ್ಕೆ ಪ್ರಾಚೀನ ಕಾಲದ ಐತಿಹಾಸಿಕ ವರದರಾಜಸ್ವಾಮಿ ದೇವಾಲಯವನ್ನು ನಿರ್ಮಿಸಲಾಗಿದೆ. ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿ ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಲಾಗಿದೆ.**(ಚಿ.ಸಂ.178)** ಈ ದೇವಾಲಯದ ಬಗ್ಗೆ ಹೊಯ್ಸಳ ಅಧಿಕಾರಿ 'ಹೆಗ್ಗಡದೇವನುಕೋಟೆಯನ್ನು ಕಟ್ಟಿಸಿ ಈ ಸ್ಥಳವನ್ನು ತನ್ನ ಆಡಳಿತ

ಕೇಂದ್ರವನ್ನಾಗಿ ಮಾಡಿಕೊಂಡುದರಿಂದ 'ಹೆಗ್ಗಡದೇವನಕೋಟೆ' ಎಂಬ ಹೆಸರು ಇದಕ್ಕೆ ಬಂದಿರುವಂತೆ ತೋರುತ್ತದೆ. ಇಲ್ಲಿ ಹೊಯ್ಸಳರ ಕಾಲದ ಕೋಟೆಯ ಅವಶೇಷಗಳು ಹಾಗೂ ವಿಜಯನಗರ ಕಾಲದಲ್ಲಿ ವಿಸ್ತಾರಗೊಂಡಿರುವ ವರದರಾಜಸ್ವಾಮಿ ದೇವಾಲಯವಿದೆ.[159] ವರದರಾಜ ಗುಡಿಗೆ ಹೊಯ್ಸಳರ ಕಾಲದ ಗರ್ಭಗೃಹ, ಅಂತರಾಳ ಹಾಗೂ ಮುಖಮಂಟಪಗಳನ್ನು ಮಾತ್ರ ಕಾಣಬಹುದು. ನಂತರದ ಭಾಗವಾದ ತೆರೆದ ಮುಖಮಂಟಪಗಳನ್ನು ವಿಜಯನಗರ ಕಾಲದಲ್ಲಿ ವಿಸ್ತರಿಸಲಾಗಿದೆ.

**ಗರ್ಭಗೃಹ**:-ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಸುಮಾರು ಎರಡು ಅಡಿ ಎತ್ತರವಿರುವ ಗರುಡ ಪೀಠದ ಮೇಲೆ ಸುಮಾರು ಐದು ಅಡಿ ಎತ್ತರವಿರುವ ವರದರಾಜ ಸ್ವಾಮಿಯನ್ನು ಪ್ರತಿಷ್ಠಾಪಿಸಲಾಗಿದೆ. ಸಮಭಂಗಿಯಲ್ಲಿ ನಿಂತಿರುವ ದೇವನು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗದಾ ಹಸ್ತವನ್ನು ಹೊಂದಿದ್ದಾನೆ.[160] ಈ ದೇವತಾಮೂರ್ತಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖವನ್ನು ಸೂಕ್ಷ್ಮ ಕೆತ್ತನೆ ಮಾಡಿ ಬಿಡಿಸಲಾಗಿದೆ. ಗರ್ಭಗೃಹದ ಮೇಲ್ಚಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಇದನ್ನು ಮೂರು ಹಂತಗಳಲ್ಲಿ ರಚಿಸಲಾಗಿದೆ. ಮಧ್ಯದಲ್ಲಿ ಅರಳಿದ ಪದ್ಮಪುಷ್ಪ ಮೂಲೆಗಳಲ್ಲಿ ಸಹ ಅರಳಿದ ಪದ್ಮ ಪುಷ್ಪಗಳನ್ನು ಬಿಡಿಸಿ ಅಲಂಕರಿಸಲಾಗಿದೆ. ಗರ್ಭಗೃಹದ ದ್ವಾರವು ಸರಳವಾಗಿದೆ. ಪಟ್ಟಿಕೆಗಳಲ್ಲಿ ಯವುದೇ ಅಲಂಕರಣೆ ಕಂಡುಬರುವುದಿಲ್ಲ.

**ಸುಕನಾಸಿ**:-ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಇದರ ದಕ್ಷಿಣದ ಗೋಡೆಯ ಮುಂದೆ ಉತ್ಸವ ಮೂರ್ತಿಗಳನ್ನು ಇರಿಸಲಾಗಿದೆ. ಇದರ ಬಾಗಿಲು ಸಹ ಸರಳವಾಗಿದೆ.

**ನವರಂಗ**:-ನವರಂಗವು 25X25 ಅಡಿ ಉದ್ದ ಅಗಲವನ್ನು ಹೊಂದಿದ್ದು ಚೌಕಾಕಾರವಾಗಿದೆ. ಇದರ ಮದ್ಯದಲ್ಲಿ ವಿಜಯನಗರ ಶೈಲಿಯ ಕಣ ಶಿಲೆಯ ನಾಲ್ಕು ಕಂಬಗಳಿವೆ. ಇವುಗಳನ್ನು ಚೌಕ, ಅಷ್ಟ ಮತ್ತು ಷೋಡಶ ಮುಖಗಳನ್ನು ವೃತ್ತಾಕಾರವಾಗಿ ರಚಿಸಲಾಗಿದೆ.**(ಚಿ.ಸಂ.179)** ಕಪೋತವು ಸರಳವಾಗಿದೆ. ನವರಂಗದ ಮೇಲ್ಚಾವಣಿಯು ಕಣಶಿಲೆಯ ಕಲ್ಲು ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ. ಈ ನವರಂಗದ ಒಳಬಾಗದಲ್ಲಿ ಹಲವು ಶಿಲ್ಪಗಳು ಕಾಣಬರುತ್ತವೆ. ವಿಶ್ವಕ್ಷೇನರು, ರಾಮಾನುಜಾಚಾರ್ಯರು, ನಮ್ಮಾಳ್ವರರು, ಪಿಳ್ಳೆಲೋಕಚಾರ್ಯರು, ಮನುವಾಳ, ಮಹಾಮುನಿಯರು, ವೇದಾಂತ ದೇಶಿಕರ ಮೂರ್ತಿಗಳು ಇಲ್ಲಿ ಕಂಡುಬರುತ್ತವೆ. ನವರಂಗದ ಬಾಗಿಲು ಸರಳವಾಗಿದೆ. ಪಟ್ಟಿಕೆಗಳಲ್ಲಿ ಯಾವುದೇ ಮೂರ್ತಿಶಿಲ್ಪ ಕಾಣಬರುವುದಿಲ್ಲ.

**ಮುಖಮಂಟಪ**:-ಮುಖಮಂಟಪದಲ್ಲಿ ಎರಡು ಕಂಬಗಳಿದ್ದು ಈ ಕಂಬಗಳು ಸಹ ನವರಂಗದಲ್ಲಿರುವ ಕಂಬಗಳ ಮಾದರಿಯಲ್ಲಿವೆ. ಇದನ್ನು ಚೌಕಾಕಾರದ ವೇದಿಕೆಯ ಮೇಲೆ ನಿರ್ಮಿಸಲಾಗಿದೆ. ಈ ಮುಖಮಂಟಪದ ಎಡ ಮತ್ತು ಬಲ ಭಾಗದಲ್ಲಿ ಸೋಪಾನಗಳನ್ನು ಮಾಡಲಾಗಿದೆ. ಸೋಪಾನದ ಇಕ್ಕೆಲಗಳಲ್ಲಿ ರಚಿಸಲಾಗಿರುವ ಕಲ್ಲುಗಳು ಸಿಂಹದ ಬಾಯಿಯಿಂದ ಹೊರಟಂತೆ ಬಿಡಿಸಲಾಗಿರುವ ಸುರುಳಿ ಇದೆ.

**ಪಾತಾಳಾಂಕಣ**:-ಮುಖಮಂಟಪವು ಸೇರಿದಂತೆ ದೇವಾಲಯದ ಮುಂದೆ ವಿಜಯನಗರ ಶೈಲಿಯಲ್ಲಿರುವ ಸುಮಾರು ಮೂವತ್ತೆರಡು ಕಂಬಗಳುಳ್ಳ ಮಂಟಪವಿದೆ. ಈ ಮಂಟಪವು ಚತುರಸ್ರಕಾರವಾಗಿದ್ದು, ಕಂಬಗಳ ಮೇಲೆ ಕಣಶಿಲೆಯ ಕಲ್ಲಿನ ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ. ದೇವಾಲಯದ ಅಭಿಮುಖವಾಗಿ ನಾಲ್ಕು ಅಡಿ ಎತ್ತರದ ಪೀಠದ ಮಧ್ಯ ಧ್ವಜಸ್ತಂಭವನ್ನು ನಿಲ್ಲಿಸಲಾಗಿದೆ. ಇದರ ಮುಂದೆ ಬಲಿಪೀಠವಿದೆ.[161]**(ಚಿ.ಸಂ.180)**

**ಅಧಿಷ್ಠಾನ**:-ಅಧಿಷ್ಠಾನವು ಇಲ್ಲಿ ಐದು ಪಟ್ಟಿಕೆಗಳಿವೆ. ಇವುಗಳನ್ನು ಒಳಸರಿದಂತೆ ಹೊರಚಾಚಿದಂತೆ ಕ್ರಮಬದ್ಧವಾಗಿ ಅಧಿಷ್ಠಾನದ ಕಲ್ಲುಗಳನ್ನು ಜೋಡಿಸಿ ಭದ್ರಪಡಿಸಲಾಗಿದ. ಈ ಅಧಿಷ್ಠಾನಕ್ಕೆ ಮಂಚಬಂಧ ಅಧಿಷ್ಠಾನವೆಂದು ಕರೆಯಲಾಗಿದೆ. ಗರ್ಭಗೃಹದಲ್ಲಿರುವ ಅಧಿಷ್ಠಾನದ ಕಪೋತ. ಕಪೋತದ ಕೆಳಗಿನ ಪಟ್ಟಿಕೆಯ ಒಳಭಾಗದಲ್ಲಿ ಕಲ್ಲಿನ ಕಂಬಗಳನ್ನು ಭಿತ್ತಿಗೆ ನೇರವಾಗಿ ಮಾಡಲಾಗಿದೆ.**(ಚಿ.ಸಂ.182)**

**ಭಿತ್ತಿ**:-ಭಿತ್ತಿಯನ್ನು ಸಣ್ಣ ಸಣ್ಣ ಕಂಬಗಳನ್ನು ಜೋಡಿಸಿ ನಿರ್ಮಾಣ ಮಾಡಲಾಗಿದೆ. ಈ ರೀತಿಯ ಭಿತ್ತಿಯು ನಾಗಮಂಗಲದಲ್ಲಿರುವ ಪಂಚಕೂಟ ಬಸದಿಯ ಮಾದರಿಯನ್ನು ಹೋಲುತ್ತದೆ. ಈ ಭಿತ್ತಿಯು ನವರಂಗ ಸುಕನಾಸಿ ಗರ್ಭಗೃಹಗಳ ಮಧ್ಯದಲ್ಲಿ ಎರಡು ಕಂಬಗಳ ಮೇಲೆ ನಿರ್ಮಿಸಲಾದ ಗೋಪುರಗಳಿವೆ. ಒಳಗೆ ಸಿಂಹಮುಖಗಳು ಅಂತ್ಯದಲ್ಲಿ ಐದು ಕಳಸಗಳನ್ನು ಇಡಲಾಗಿದೆ. ಗರ್ಭಗೃಹ ಮತ್ತು ಸುಕನಾಸಿಯ ಮಧ್ಯದ ಭಿತ್ತಿಯಲ್ಲಿ ಕುಂಭಪಂಜರವನ್ನು ಮಾಡಲಾಗಿದೆ. ಚೋಳರ ಕಾಲದ ಕಲೆಯ ಅನುಕರಣೆಯನ್ನು ಕಾಣಬಹುದು.

**ಕಪೋತ**:-ಕಪೋತವು ಗೊಮ್ಮಟಕಾರವಾಗಿದ್ದು ಗೋಡೆಯಿಂದ 1.5 ಅಡಿ ಮುಂದೆ ಚಾಚಿದೆ. ಕಪೋತದ ಕೆಳಭಾಗದಲ್ಲಿ ಊರ್ಧ್ವಮುಖವಾಗಿ ಬಿಡಿಸಲಾಗಿರುವ ಪದ್ಮಪುಷ್ಪದ ದಳಗಳ ಅಲಂಕರಣೆ ಮಾಡಲಾಗಿದೆ. ಕಪೋತದ ಹೊರ ಅಂಚಿನಲ್ಲಿ ನಾಸಿಗಳ ಅಲಂಕರಣವನ್ನು ಮಾಡಲಾಗಿದೆ. ಈ ಕಪೋತದ ಮೇಲಿರುವ ದಿಂಡಿನ ಹೊರ ಅಂಚಿನ ಭಾಗದಲ್ಲಿ ಸಿಂಹಮುಖವನ್ನು ಬಿಡಿಸಲಾಗಿದೆ. ಹೀಗೆ ದೇವಾಲಯದ ಭಿತ್ತಿ ಕಪೋತ ದಿಂಡಿನ ಭಾಗದಲ್ಲಿ

ವಿವಿಧ ಬಗೆಯ ಅಲಂಕರಣೆಗಳನ್ನು ಮಾಡಿ ದೇವಾಲಯದ ಸೌಂದರ್ಯವನ್ನು ಹೆಚ್ಚಿಸಿದ್ದಾರೆ. ಈ ದೇವಾಲಯದ ಗರ್ಭಗೃಹದ ಮೇಲೆ ಯಾವುದೇ ಶಿಖರ ಕಂಡುಬರುವುದಿಲ್ಲ.**(ಚಿ.ಸಂ.183)**

**ಪೆರುಂದೇವಿ ಅಮ್ಮನ ಗುಡಿ:–** ಅಮ್ಮನವರ ಗುಡಿ ಪಾತಾಳಾಂಕಣದ ಉತ್ತರ ಭಾಗದಲ್ಲಿ ನಿರ್ಮಾಣ ಮಾಡಲಾಗಿದ್ದು ಸಾಮಾನ್ಯವಾಗಿ ಈ ದೇವಾಲಯದ ಲಕ್ಷಣವನ್ನೇ ಸೂಕ್ಷ್ಮವಾಗಿ ಗಮನಿಸಿದರೆ ಇದನ್ನು ವಿಜಯನಗರ ಅರಸರ ಕಾಲದಲ್ಲಿ ನಿರ್ಮಾಣ ಮಾಡಿದಂತೆ ಕಂಡು ಬರುತ್ತದೆ. ಇದರ ಒಳಭಾಗದ ಮಧ್ಯದಲ್ಲಿ ಒಂದು ಅಡಿ ಎತ್ತರವಿರುವ ಪೀಠದ ಮೇಲೆ ಪೆರಂದೇವಿ ಅಮ್ಮನವರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.180)** ಈ ದೇವಿಯು ಸುಮಾರು ಮೂರು ಅಡಿ ಎತ್ತರವಾಗಿದ್ದು ತುಂಬಾ ಆಕರ್ಷಕವಾಗಿದೆ. ಸುಖಾಸನದಲ್ಲಿ ಕುಳಿತಿರುವ ಈ ದೇವಿಯು ಚತುರ್ಭುಜವನ್ನು ಹೊಂದಿದ್ದು, ಕಮಲದ ಮೊಗ್ಗುಗಳು ಮತ್ತು ವರದಹಸ್ತ ಅಭಯಹಸ್ತವನ್ನು ಹೊಂದಿದ್ದಾಳೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿವೆ. ಈ ದೇವಿಯ ಮುಂಭಾಗದಲ್ಲಿ ಪೆರುಂದೇವಿಯ ಉತ್ಸವಮೂರ್ತಿ ಇದೆ. ಇದರ ಎಡಭಾಗದಲ್ಲಿ ಪಂಚಲೋಹದಿಂದ ಮಾಡಿದ ಮತ್ತೊಂದು ಉತ್ಸವಮೂರ್ತಿ ಇದೆ. ಈ ದೇವಿಯ ಕೋಣೆಯ ಪಕ್ಕದಲ್ಲಿ ಭಿತ್ತಿಯ ಮುಂಭಾಗದಲ್ಲಿ ಕಲ್ಲು ಚಪ್ಪಡಿಯನ್ನು ಹಾಸಿ ಅದರ ಮಂಟಪವನ್ನು ರಚಿಸಿ ಇದರ ಮೇಲೆ ರಾಮ ಲಕ್ಷ್ಮಣ ಸೀತೆಯರ ಶಿಲ್ಪಗಳನ್ನು ಎಡಭಾಗದಲ್ಲಿ ಇಡಲಾಗಿದೆ (ಪಂಚಲೋಹದಲ್ಲಿ ನಿರ್ಮಿಸಿ). ಈ ಶಿಲ್ಪಗಳ ಎಡಭಾಗದಲ್ಲಿ ಸುಮಾರು ನಾಲ್ಕು ಅಡಿ ಎತ್ತರವಿರುವ ಶ್ರೀರಾಮನ ಪಂಚಲೋಹದ ಮೂರ್ತಿಯನ್ನು ಇಡಲಾಗಿದೆ.

**ಮಹಾದ್ವಾರ ಮಂಟಪ:**–ಈ ದೇವಾಲಯಕ್ಕೆ ಮೂಲತಃ ಪ್ರಾಕಾರವಿದ್ದು, ಆ ಪ್ರಾಕಾರವು ನಶಿಸಿ ಹೋದ ಮೇಲೆ ಇತ್ತೀಚೆಗೆ ಕಲ್ಲಿನ ಪ್ರಕಾರವನ್ನು ದೇವಾಲಯದ ಸುತ್ತಲೂ ಸುಮಾರು 5 ಅಡಿ ಎತ್ತರವಾಗಿ ಕಟ್ಟಲಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ಮಹಾದ್ವಾರ ಮಂಟಪವಿದೆ. ಈ ಮಹಾದ್ವಾರದ ಇಕ್ಕೆಲಗಳಲ್ಲಿ ಸುಮಾರು 4 ಅಡಿ ಎತ್ತರವಿರುವ ವೇದಿಕೆಯನ್ನು ರಚಿಸಿ ಇದರ ಮುಂಭಾಗ ಮತ್ತು ಹಿಂಭಾಗದಲ್ಲಿ ಒಂದೊಂದು ಪಾರ್ಶ್ವದಲ್ಲಿ ಎರಡೆರಡು ಕಂಬಗಳಂತೆ ಒಟ್ಟು ಎಂಟು ಕಂಬಗಳಿವೆ. ಈ ಕಂಬಗಳು ವಿಜಯನಗರ ಶೈಲಿಯ ಮಾದರಿಯಲ್ಲಿವೆ. ಮಂಟಪದ ಎಡ ಮತ್ತು ಬಲಭಾಗದಲ್ಲಿ ಕಲ್ಲಿನ ಗೋಡೆಯನ್ನು ನಿರ್ಮಿಸಲಾಗಿದೆ. ಮೇಲ್ಛಾವಣಿಯು ಕಣಶಿಲೆಯ ಕಲ್ಲುಗಳನ್ನು ಹಾಸಿ ಮುಚ್ಚಲಾಗಿದೆ. ಗೋಪುರ ಮೇಲ್ಛಾವಣಿಯ ಮೇಲೆ ಸುಮಾರು ಎರಡು ಅಡಿ ಎತ್ತರವಿರುವ ಕೈಪಿಡಿ ಗೋಡೆ ಇದೆ. ಈ ಮಂಟಪದ ಮೇಲೆ ನಿರ್ಮಿಸಲಾಗಿದ್ದ ಗೋಪುರವು ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಶಿಥಿಲವಾದ್ದರಿಂದ ಅದನ್ನು ಈಗ ಸಂಪೂರ್ಣವಾಗಿ ತೆಗೆಯಲಾಗಿದೆ.

ಈ ದ್ವಾರಮಂಟಪದ ಮುಂಭಾಗದಲ್ಲಿ ಸೋಪಾನಗಳದಂತೆ ಕಂಡುಬರುತ್ತದೆ. ಏಕೆಂದರೆ ಈಗ ಸೋಪಾನದ ಕಲ್ಲುಗಳು ಭೂಮಿಯಲ್ಲಿ ಹೂತುಹೋಗಿದೆ. ಆದರೆ ಇಕ್ಕೆಲಗಳಲ್ಲಿ ಜೋಡಿಸಲಾಗಿದ್ದ ಕಲ್ಲುಗಳನ್ನು ಅನೆಯು ಸೇರಿದಂತೆ ರಚಿಸಿ ನಿಲ್ಲಿಸಲಾಗಿರುವ ಸೋಪಾನದ ಇಕ್ಕೆಲದ ಕಲ್ಲುಗಳು ಈಗಲೂ ಹಾಗೆ ಉಳಿದಿವೆ.ಈ ದ್ವಾರಮಂಟಪ ಮುಂಭಾಗದಲ್ಲಿ ತುಂಡಾಗಿ ಬಿದ್ದಿರುವ ನಾಲ್ಕು ಹೊಯ್ಸಳ ಶೈಲಿಯ ಕಂಬದ ಕಾಂಡದ ಭಾಗಗಳನ್ನು ಇಡಲಾಗಿದ್ದು, (ಈ ಕಂಬಗಳ ಬಳೆಗಳ ಆಕಾರ ಘಂಟಾ, ಗಟ, ಗಾಲಿ) ಇದರಿಂದ ನಮಗೆ ತಿಳಿದು ಬರುವುದೇನೆಂದರೆ ಮೂಲತಃ ಈ ದೇವಾಲಯವು ಹೊಯ್ಸಳ ಕಾಲದಲ್ಲಿ ನಿರ್ಮಾಣವಾಗಿದ್ದು, ಅದು ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಶಿಥಿಲಾವಾಗಿದ್ದರಿಂದ ಆ ದೇವಾಲಯದ ಕಂಬಗಳನ್ನು ಹೊರತೆಗೆದು ಆ ಭಾಗದಲ್ಲಿ ವಿಜಯನಗರ ಶೈಲಿಯ ಕಂಬಗಳನ್ನು ನಿಲ್ಲಿಸಿ, ಹೊಸದಾಗಿ ನವರಂಗವನ್ನು ಕಟ್ಟಿಸಿ ಜೀರ್ಣೋದ್ಧಾರ ಮಾಡಿದಂತೆ ಕಂಡುಬರುತ್ತದೆ.[162]

**ಲಕ್ಷ್ಮೀಕಾಂತ ದೇವಾಲಯದ-ಹೆಡತಲೆ**

ಈ ಗ್ರಾಮವು ಮೈಸೂರು ಜಿಲ್ಲಾ ಕೇಂದ್ರದಿಂದ 39ಕಿ.ಮೀ. ಹಾಗೂ ತಾಲೂಕು ಕೇಂದ್ರ ನಂಜನಗೂಡಿನಿಂದ ಆಗ್ನೇಯ ಭಾಗಕ್ಕೆ 14ಕಿ.ಮೀ. ದೂರದಲ್ಲಿದೆ. ಲಕ್ಷ್ಮೀಕಾಂತ ದೇವಾಲಯವು ಹೆಡತಲೆಯಿಲ್ಲಿರುವ ತ್ರಿಕೂಟ ದೇವಾಲಯವಾಗಿದೆ.**(ಚಿ.ಸಂ.184)** ಶಾಸನದಲ್ಲಿ ಹೆಡತಲೆ, ಯಡತಲೆ, ಎಡತ್ತಲೆ, ಎಂಬುದಾಗಿ ಉಲ್ಲೇಖವಾಗಿದೆ.[163]ಇದನ್ನು ಬಳಪದ ಕಲ್ಲು ಮತ್ತು ಕಣಶಿಲೆಯನ್ನು ಉಪಯೋಗಿಸಿ ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಲಾಗಿದೆ. ಇದರಲ್ಲಿ ಮೂರು ಗರ್ಭಗೃಹಗಳು, ಒಂದು ಸುಕನಾಸಿ, ಒಂದು ನವರಂಗ ಮತ್ತು ಮುಖಮಂಟಪ ಮತ್ತು ಪಾತಾಳಂಕಣವನ್ನು ಹೊಂದಿದೆ. ಈ ದೇವಾಲಯವನ್ನು ಹೊಯ್ಸಳರ ದೊರೆಯಾದ 3ನೇ ಬಲ್ಲಾಳನ ಕಾಲದಲ್ಲಿ ನಿರ್ಮಾಣ ಮಾಡಲಾಗಿದೆ.[164]

**ಪಶ್ಚಿಮದ ಗರ್ಭಗೃಹ:**-ಈ ಗರ್ಭಗೃಹವು 8X8 ಅಡಿಗಳ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಸುಮಾರು ಎರಡು ಅಡಿಗಳ ಎತ್ತರವಿರುವ ಗರುಡ ಪೀಠದ ಮೇಲೆ ಸುಮಾರು ನಾಲ್ಕು ಅಡಿಗಳ ಎತ್ತರವಿರುವ ಲಕ್ಷ್ಮೀಕಾಂತ ದೇವನನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ಸಮಭಂಗಿಯಲ್ಲಿ ನಿಂತಿದ್ದು, ಚತುರ್ಭುಜವನ್ನೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದುಕೊಂಡಿದ್ದಾನೆ.**(ಚಿ.ಸಂ.186)** ಚತುರ್ವಿಂಶತಿ ಪ್ರತಿಮಾಕೋಶದ ಪ್ರಕಾರ ಈ ಶಿಲ್ಪವು ಕೃಷ್ಣದ್ದಾಗಿದೆ. ಕೊರಳಲ್ಲಿ ಕಂಠಿಹಾರ ಧರಿಸಿರುವ ಈ ಮೂರ್ತಿಯು ಕರ್ಣಗಳಲ್ಲಿ ಮಕರಕುಂಡಲಗಳದ್ದು, ಹಣೆಯಲ್ಲಿ ತಿರುನಾಮ ಹೊಂದಿದ್ದಾನೆ.[165]ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಕಲಾತ್ಮಕ

ಕೆತ್ತನೆಯಿಂದ ಕೂಡಿದ್ದು, ಸುಂದರವಾಗಿವೆ. ಪ್ರಭಾವಳಿಯಲ್ಲಿ ವ್ಯಾಳನ ಬಾಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿಸುರುಳಿ ಕೀರ್ತಿಮುಖವಿದೆ. ಗರ್ಭಗೃಹದ ಬಾಗಿಲಿನ ಪಟ್ಟಿಕೆಗಳು ಸರಳವಾಗಿದ್ದು, ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಂಡುಬರುವುದಿಲ್ಲ. ಲಲಾಟಬಿಂಬದಲ್ಲಿ ಯಾವುದೇ ಮೂರ್ತಿ ಇಲ್ಲ. ಆದರೆ ತೋರಣದ ಭಾಗದಲ್ಲಿ ಶೇಷಾಯನದಲ್ಲಿರುವ ನಾರಾಯಣನ ಶಿಲ್ಪವಿದೆ. ಇಕ್ಕೆಲಗಳಲ್ಲಿ ಶಂಖ, ಚಕ್ರ ಮತ್ತು ಅಂಜಲಿ ಹನುಮಂತ ಗರುಡ ಶಿಲ್ಪಗಳಿವೆ. ಬಾಗಿಲ ಇಕ್ಕೆಲಗಳಲ್ಲಿ ಚಿಕ್ಕ ವೈಷ್ಣವ ದ್ವಾರಪಾಲಕರನ್ನು ಬಿಡಿಸಲಾಗಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದ್ದು, ಇದರ ಮಧ್ಯದಲ್ಲಿ ಪದ್ಮಪುಷ್ಪವನ್ನು ಬಹಳ ಸುಂದರವಾಗಿ ಬಿಡಿಸಲಾಗಿದೆ.

**ಸುಕನಾಸಿ:**-ಸುಕನಾಸಿಯು ಮೂಲ ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಪೂರ್ವದ ಗೋಡೆಯ ಮುಂದೆ ಒಂದು ವೇದಿಕೆಯನ್ನು ಮಾಡಿ ಇದರ ಮೇಲೆ ರಾಮಾನುಜಾಚಾರ್ಯರ ಮೂರ್ತಿಯನ್ನು ಇರಿಸಲಾಗಿದೆ. ಮತ್ತು ಉತ್ಸವ ಮೂರ್ತಿಗಳನ್ನು ಇಡಲಾಗಿದೆ. ಈ ಸುಕನಾಸಿಯ ಮೇಲ್ಛಾವಣಿಯಲ್ಲಿ ಚೌಕ, ಅಷ್ಟಮುಖ ಹೊಂದಿರುವ ಭುವನೇಶ್ವರಿ ಇದೆ. ಇದರ ಒಳಭಾಗದಲ್ಲಿ ದಿಕ್ಪಾಲಕರು ಮತ್ತು ಅಷ್ಟದಿಕ್ಪಾಲಕರ ಮೂರ್ತಿಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ಸುಕನಾಸಿಯ ದ್ವಾರದಲ್ಲಿರುವ ಪಟ್ಟಿಕೆಗಳು ಸರಳವಾಗಿವೆ. ಇದರಲ್ಲಿ ಯಾವುದೇ ಮಾದರಿಯ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ.

**ಉತ್ತರದ ಗರ್ಭಗೃಹ:**-ಇದು ಸುಮಾರು 8X8 ಅಡಿಗಳ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಸುಮಾರು ಎರಡು ಅಡಿಗಳ ಎತ್ತರವಾಗಿರುವ ನಕ್ಷತ್ರಾಕಾರದ ಗರುಡ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವ ಸುಮಾರು ನಾಲ್ಕು ಅಡಿ ಎತ್ತರವಾಗಿರುವ ಲಕ್ಷ್ಮೀನರಸಿಂಹನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.187)** ಈ ದೇವನು ಚತುರ್ಭುಜವನ್ನೊಂದಿದ್ದು, ತನ್ನ ಎಡತೊಡೆಯ ಮೇಲೆ ಲಕ್ಷ್ಮೀದೇವಿಯನ್ನು ಕೂರಿಸಿಕೊಂಡಿದ್ದಾನೆ. ಈ ದೇವಿಯು ಸುಖಾಸನದಲ್ಲಿ ಕುಳಿತು ಕೈಗಳಲ್ಲಿ ಪದ್ಮ ಮತ್ತು ನರಸಿಂಹ ದೇವನನ್ನು ಹಿಡಿದುಕೊಂಡಿದ್ದಾಳೆ. ನರಸಿಂಹದೇವನು ಕೈಗಳಲ್ಲಿ ಶಂಖ, ಚಕ್ರ, ಅಭಯಹಸ್ತ, ಲಕ್ಷ್ಮೀಯನ್ನು ತಬ್ಬಿ ಹಿಡಿದಿದ್ದಾನೆ. ಈ ದೇವದೇವತೆಯರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರ ಕೆತ್ತನೆಯಿಂದ ಕೂಡಿದ್ದು, ನಯನ ಮನೋಹರವಾಗಿದೆ. ಈ ದೇವನ ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖವನ್ನು ಸೂಕ್ಷ್ಮಕೆತ್ತನೆಯನ್ನು ಕೂಡಿದ್ದು ಸುಂದರವಾಗಿದೆ.

**ದಕ್ಷಿಣದ ಗರ್ಭಗೃಹ:-**ಈ ಗರ್ಭಗೃಹವು ಎತ್ತರದ ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಸುಮಾರು ಎರಡು ಅಡಿಗಳ ಎತ್ತರವಾಗಿರುವ ನಕ್ಷತ್ರಾಕಾರದ ಗರುಡ ಪೀಠದ ಮತ್ತು ಸುಮಾರು ಐದು ಅಡಿ ಎತ್ತರವಿರುವ ವೇಣುಗೋಪಾಲ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.185)** ಒಂಟಿ ಕಾಲಿನಲ್ಲಿ ನಿಂತಿರುವ ಈ ದೇವನು ತನ್ನ ಎರಡು ಕೈಗಳಲ್ಲಿ ಕೊಳಲನ್ನು ಹಿಡಿದು ನುಡಿಸುತ್ತಿರುವಂತೆ ರಚಿಸಲಾಗಿದೆ. ಸುಂದರವಾಗಿರುವ ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಇಕ್ಕೆಲಗಳಲ್ಲಿ ಗೋವುಗಳು, ಗೋಗಾಯಿಗಳು, ಭಕ್ತ ಜನರುಗಳನ್ನು ಬಿಡಿಸಲಾಗಿದೆ. ಪ್ರಭಾವಳಿಯಲ್ಲಿ ಬಳ್ಳಿಸುರುಳಿ ವಿಷ್ಣುವಿನ ದಶಾವತಾರದ ಮೂರ್ತಿಗಳನ್ನು ಬಿಡಿಸಲಾಗಿದೆ. ಅಂತ್ಯದಲ್ಲಿ ಕೀರ್ತಿಮುಖವಿದೆ. ಈ ದೇವನ ಬಲಭಾಗದಲ್ಲಿ ಪಂಚಲೋಹದ ಕೃಷ್ಣನ ಮೂರ್ತಿಯನ್ನು ಇಡಲಾಗಿದೆ. ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದ್ದು, ಇದರಲ್ಲಿ ದಿಕ್ಪಾಲಕರು ಮತ್ತು ಅಷ್ಟದಿಕ್ಪಾಲರ ಶಿಲ್ಪಗಳನ್ನು ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದ ಬಾಗಿಲ ಪಟ್ಟಿಕೆಗಳು ಸರಳವಾಗಿದ್ದು, ಯಾವುದೇ ರೀತಿಯ ಅಲಂಕರಣೆಗಳು ಕಂಡುಬರುವುದಿಲ್ಲ.

**ನವರಂಗ:-** ನವರಂಗವು 25X25 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ದೃಢವಾದ ನಾಲ್ಕು ಕಂಬಗಳಿವೆ. ಈ ಕಂಬಗಳನ್ನು ಚೌಕ, ಬಳೆಗಳು, ಗಂಟೆ, ಗಾಲಿ, ಘಟಾ, ಪುಷ್ಪ ಬೋಧಿಗೆ, ಚೌಕಾಕಾರದ ಫಲಗೈ ಮತ್ತು ಬೋದಿಗೆಯನ್ನು ಕಾಣಬಹುದಾಗಿದೆ. ಪೀಠದ ನಾಲ್ಕು ದಿಕ್ಕುಗಳಲ್ಲಿ ವೃತ್ತಾಕಾರವಾಗಿ ಬಿಡಿಸಲಾಗಿರುವ ಅರಳಿದ ಪದ್ಮಪುಷ್ಪಗಳಿವೆ. ನವರಂಗದ ಮೇಲ್ಛಾವಣಿಯನ್ನು 9 ಅಂಕಣಗಳಾಗಿ ಮಾಡಲಾಗಿದೆ. ಇವುಗಳಲ್ಲಿ ಭುವನೇಶ್ವರಿಗಳನ್ನು ರಚಿಸಲಾಗಿದೆ.**(ಚಿ.ಸಂ.189)**

**ಮಧ್ಯದ ಭುವನೇಶ್ವರಿ:-**ಈ ಭುವನೇಶ್ವರಿಯು ವಿಶಾಲವಾಗಿದ್ದು, ತುಂಬಾ ಕಲಾತ್ಮಕ ಕೆತ್ತನೆಯಿಂದ ಕೂಡಿದ್ದು, ಆಕರ್ಷಕವಾಗಿದೆ. ಇದನ್ನು ಚೌಕ, ಅಷ್ಟ, ವೃತ್ತಾಕಾರವಾಗಿ ರಚಿಸಲಾಗಿದೆ. ಮಧ್ಯದಲ್ಲಿ ಕಮಲದ ಮೊಗ್ಗು ಆಗ ತಾನೇ ಅರಳುತ್ತಿರುವಂತೆ ರಚಿಸಲಾಗಿದೆ. ಒಳಭಾಗದಲ್ಲಿ ದಿಕ್ಪಾಲಕರ, ಅಷ್ಟದಿಕ್ಪಾಲಕರ ಮೂರ್ತಿಗಳನ್ನು ಬಿಡಿಸಲಾಗಿದೆ. ಇವರ ಮಧ್ಯದಲ್ಲಿ ಸಂಗೀತಗಾರರ, ನೃತ್ಯಗಾರರ, ವೀರಯೋಧರ ಶಿಲ್ಪಗಳನ್ನು ಮತ್ತು ಕಮಲದ ಮೊಗ್ಗುಗಳನ್ನು ಬಿಡಿಸಿ ಅಲಂಕರಿಸಲಾಗಿದೆ. ಇಲ್ಲಿ ಲಕ್ಷ್ಮೀ ಮತ್ತು ಕೇಶವ ಶಿಲ್ಪಗಳಿವೆ.**(ಚಿ.ಸಂ.188)**

**ಪಶ್ಚಿಮದ ಭುವನೇಶ್ವರಿ:–**ಈ ಭುವನೇಶ್ವರಿಯು ಚೌಕ ನಕ್ಷತ್ರಾಕಾರವಾಗಿದೆ. ಇದರ ಒಳಗೆ ವೃತ್ತಾಕಾರ ಮತ್ತು ನಕ್ಷತ್ರಾಕಾರವಾಗಿ ಬಿಡಿಸಲಾಗಿರುವ ಪದ್ಮಪುಷ್ಪವಿದೆ ಮತ್ತು ದಿಕ್ಪಾಲಕರ ಮೂರ್ತಿಗಳನ್ನು ಬಿಡಿಸಿ ಅಲಂಕರಿಸಲಾಗಿದೆ.

**ಈಶಾನ್ಯ ಭುವನೇಶ್ವರಿ:–**ಇದನ್ನು ಚೌಕ ವೃತ್ತಾಕಾರವಾಗಿ ಬಿಡಿಸಲಾಗಿದೆ. ಇದನ್ನು ನೋಡಿದರೆ ವಿಷ್ಣುವಿನ ಚಕ್ರದ ಮಾದರಿಯಲ್ಲಿ ರಚಿಸಲಾಗಿದೆ. ಚೌಕಾಕಾರದ ಪಟ್ಟಿಕೆಯಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಿ ಅಲಂಕರಣಗೊಳಿಸಲಾಗಿದೆ. ಮತ್ತು ವೃತ್ತಾಕಾರವಾಗಿ ಕಮಲದ ಪುಷ್ಪಗಳನ್ನು ಬಿಡಿಸಲಾಗಿದೆ.

**ಉತ್ತರದ ಭುವನೇಶ್ವರಿ:–**ಈ ಭುವನೇಶ್ವರಿಯನ್ನು ದೀರ್ಘ ವೃತ್ತಾಕಾರವಾಗಿ ಬಿಡಿಸಲಾಗಿದೆ. ಇದರ ಮಧ್ಯದಲ್ಲಿ ಕಮಲದ ದಳಗಳ ಅಲಂಕರಣ ಮತ್ತು ದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ಬಿಡಿಸಲಾಗಿರುವ ಕಮಲದ ಮೊಗ್ಗು ಚಪ್ಪಟೆಯಾಕಾರವಾಗಿದೆ.

**ವಾಯುವ್ಯ ಭುವನೇಶ್ವರಿ:–**ಈ ಭುವನೇಶ್ವರಿಯನ್ನು ಚೌಕ ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಇದರಲ್ಲಿರುವ ಕಮಲದ ಪುಷ್ಪವನ್ನು ನಕ್ಷತ್ರಾಕಾರವಾಗಿ ಬಿಡಿಸಿ ಅಲಂಕರಣಗೊಳಿಸಲಾಗಿದೆ. ನಾಲ್ಕು ದಿಕ್ಕುಗಳಲ್ಲಿ ವಾಹನ ಸಮೇತರಾಗಿರುವ ದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ.

**ಪೂರ್ವದ ಭುವನೇಶ್ವರಿ:–**ಇದನ್ನು ಚೌಕ, ಅಷ್ಟ ಮುಖವಾಗಿ ರಚಿಸಲಾಗಿದೆ. ಒಳಭಾಗದ ಪಟ್ಟಿಕೆಗಳಲ್ಲಿ ದಿಕ್ಪಾಲಕರ ಮತ್ತು ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ. ಮೇಲ್ಭಾಗದಲ್ಲಿ ವೃತ್ತಾಕಾರವಾಗಿ ಬಿಡಿಸಿರುವ ಕಮಲದ ಪುಷ್ಪ ಮತ್ತು ಮೊಗ್ಗನ್ನು ಬಿಡಿಸಿ ಅಲಂಕರಣ ಮಾಡಲಾಗಿದೆ.

**ಆಗ್ನೇಯ ಭಾಗದ ಭುವನೇಶ್ವರಿ:–**ಈ ಭುವನೇಶ್ವರಿಯನ್ನು ಚೌಕ ವೃತ್ತಾಕಾರವಾಗಿ ಬಿಡಿಸಲಾಗಿದೆ. ಒದರ ಮೇಲ್ಭಾಗದಲ್ಲಿ ಅರಳಿದ ಪದ್ಮಪುಷ್ಪವಿದೆ. ಸುತ್ತಲೂ ಕಮಲದ ದಳಗಳನ್ನು ಬಿಡಿಸಲಾಗಿದೆ.

**ದಕ್ಷಿಣದ ಭುವನೇಶ್ವರಿ:–**ಈ ಭುವನೇಶ್ವರಿಯನ್ನು ನಕ್ಷತ್ರಾಕಾರವಾಗಿ ಮತ್ತು ಚೌಕಾಕಾರವಾಗಿ ಒಳಭಾಗದಲ್ಲಿ ಬಿಡಿಸಿ ಮಧ್ಯದ ಚೌಕದಲ್ಲಿ ವೃತ್ತಾಕಾರವಾಗಿ ಬಿಡಿಸಿರುವ ಪದ್ಮಪುಷ್ಪವಿದೆ.

**ನೈರುತ್ಯದ ಭುವನೇಶ್ವರಿ:–**ಈ ಭುವನೇಶ್ವರಿಯನ್ನು ಚೌಕ, ಅಷ್ಟ ಮತ್ತು ಒಳಭಾಗದಲ್ಲಿ ವೃತ್ತಾಕಾರವಾಗಿ ರಚಿಸಲಾಗಿದೆ. ಇದರಲ್ಲಿ ಅಷ್ಟದಿಕ್ಪಾಲಕರು ತಮ್ಮ ವಾಹನವನ್ನೇರಿ ಚಲಿಸುತ್ತಿರುವಂತೆ ರಚಿಸಲಾಗಿದೆ. ಒಳಭಾಗದಲ್ಲಿ ಸುತ್ತಲೂ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ.[166] ನವರಂಗದ ಬಾಗಿಲಲ್ಲಿ ಒಂದೇ ಪಟ್ಟಿಕೆ ಇದೆ. ಇದರಲ್ಲಿ ಯಾವುದೇ ಸೂಕ್ಷ್ಮ

ಕೆತ್ತನೆಯ ಅಲಂಕರಣೆ ಕಾಣಬರುವುದಿಲ್ಲ. ಲಲಾಟಬಿಂಬದಲ್ಲಿ ಮತ್ತು ಬಾಗಿಲ ಇಕ್ಕೆಲಗಳಲ್ಲಿ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ.

**ಮುಖಮಂಟಪ:**–ನವರಂಗದ ಮುಂಭಾಗದಲ್ಲಿ ಎರಡು ಸ್ವತಂತ್ರ ಕಂಬಗಳ ಆಧಾರದಲ್ಲಿ ರಚನೆಯಾಗಿರುವ ಮುಖಮಂಟಪವಿದೆ. ಈ ಮುಖಮಂಟಪದ ಸುತ್ತಲೂ ಕಕ್ಷಾಸನವಿದೆ. ಮುಖಮಂಟಪದ ಮುಂಭಾಗದಲ್ಲಿ ಮೂರು ಅಡಿ ಕೋಷ್ಠಪೀಠದ ಮೇಲೆ ರಚನೆಯಾಗಿರುವ ೨೦ ಅಡಿ ಎತ್ತರದ ಗರುಡ ಸ್ತಂಭವಿದೆ. ಈ ಗರುಡಗಂಬದ ಕೆಳಭಾಗದ ಕೋಷ್ಠದಲ್ಲಿ ಎರಡೂವರೆ ಅಡಿ ಎತ್ತರದ ಆಂಜಲೀಬದ್ಧನಾಗಿ ಸಮಭಂಗಿಯಲ್ಲಿ ನಿಂತಿರುವ ಗರುಡನ ಶಿಲ್ಪವನ್ನು ಮೂಲ ಗರ್ಭಗುಡಿಯಲ್ಲಿರುವ ಲಕ್ಷ್ಮೀಕಾಂತ ಮೂರ್ತಿಗೆ ಅಭಿಮುಖವಾಗಿ ಪ್ರತಿಷ್ಠಾಪಿಸಲಾಗಿದೆ.

**ಅಧಿಷ್ಠಾನ:**–ಈ ಲಕ್ಷ್ಮೀಕಾಂತ ದೇವಾಲಯವು ನಕ್ಷತ್ರಾಕಾರದ ಅಧಿಷ್ಠಾನವನ್ನು ಹೊಂದಿದ್ದು, ನಾಲ್ಕು ಅಡಿ ಎತ್ತರವಾಗಿದೆ. ಅಧಿಷ್ಠಾನದಲ್ಲಿ ಆರು ಪಟ್ಟಿಕೆಗಳಿದ್ದು, ಉಪಾನ, ಜಗತಿ, ಪದ್ಮಪಟ್ಟಿಕಾ, ತ್ರಿಪಟ್ಟಕುಮುದ, ಪ್ರತಿ, ಹಾರ, ಕಪೋತಗಳಿವೆ. ಇವುಗಳಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ. ಆದರೆ ದೇವಾಲಯದ ಸುತ್ತಲೂ ಈ ಪಟ್ಟಿಕೆಗಳನ್ನು ಒಳಗೆ ಮತ್ತು ಹೊರಗೆ ಸರಿದಂತೆ ಕ್ರಮಬದ್ಧವಾಗಿ ಜೋಡಿಸಲಾಗಿದೆ. ಅಧಿಷ್ಠಾನದ ಒಂದು ಪಟ್ಟಿಕೆಯಲ್ಲಿ ಶಾಸನವಿದೆ.

**ಭಿತ್ತಿ**:–ಭಿತ್ತಿಯನ್ನು ಎರಡು ಭಾಗ ಮಾಡಲಾಗಿದೆ. ಕೆಳಭಿತ್ತಿ ಮತ್ತು ಮೇಲಿನ ಭಿತ್ತಿಯಲ್ಲಿ ಸಣ್ಣ ಸಣ್ಣ ಅರೆಗಂಬಗಳನ್ನು ಒಂದರ ಪಕ್ಕದಲ್ಲಿ ಒಂದರಂತೆ ಸರಿಯಾಗಿ ಜೋಡಿಸಿ ಭಿತ್ತಿಯನ್ನು ನಿರ್ಮಿಸಲಾಗಿದೆ. ಮೇಲ್ಭಾಗದಲ್ಲಿ ಸಣ್ಣ ಸಣ್ಣ ಅರೆಗಂಬಗಳನ್ನು ನಿರ್ಮಿಸಿ ಸುಂದರವಾಗಿ ಕಾಣುವಂತೆ ಮಾಡಲಾಗಿದೆ. ಈ ದೇವಾಲಯವನ್ನು ನಕ್ಷತ್ರಾಕಾರದಲ್ಲಿ ರಚಿಸಿರುವುದರಿಂದ ಮೂಲೆಗಳಲ್ಲಿ ಭಿತ್ತಿಯ ಭದ್ರತೆಗಾಗಿ ನಿಲ್ಲಿಸಿರುವ ಭದ್ರಕ ಸ್ತಂಭಗಳಿವೆ. ದೇವಾಲಯದ ಸುತ್ತಲೂ ಸಹ ಒಂದೇ ರೀತಿಯಲ್ಲಿ ಕೋಷ್ಠ ಪಂಜರಗಳು ಹಾಗೂ ಭಿತ್ತಿಪಾದಗಳ ಕೆತ್ತನೆಗಳನ್ನು ಕಾಣಬಹುದಾಗಿದೆ.

**ಕಪೋತ**:–ಮಧ್ಯದ ಕಪೋತ ಮತ್ತು ಅಂತ್ಯದ ಕಪೋತಗಳು ಒಂದೇ ರೀತಿಯಲ್ಲಿವೆ. ಈ ಕಪೋತಗಳು ಕಮಾನಿನಾಕೃತಿಯಲ್ಲಿದ್ದು, ಹೊರ ಅಂಚಿನ ಭಾಗದಲ್ಲಿ ದಂತದ ರೀತಿ ಕೆತ್ತನೆ ಮಾಡಲಾಗಿದೆ. ಕಪೋತದ ಮೇಲೆ ನಿರ್ಮಿಸಲಾಗಿದ್ದ ಹಾರ ಕಂಡುಬರುತ್ತದೆ. ಮುಖ್ಯ ಗರ್ಭಗೃಹದ ಭಾಗದಲ್ಲಿ ಕೆಲವು ಮಂಟಪಗಳನ್ನು ಮಾಡಲಾಗಿದೆ.

**ಶಿಖರ**:–ಸಾಮಾನ್ಯವಾಗಿ ದೇವಾಲಯಗಳು ಅಧಿಷ್ಠಾನ, ಭಿತ್ತಿ, ಪ್ರಸ್ತರ, ಶಿಖರ, ಸ್ತೂಪಿ, ಕಳಶ ಎಂಬ ಷಡ್ವರ್ಗಗಳನ್ನು ಹೊಂದಿರುತ್ತವೆ. ಕೆಲವು ದೇವಾಲಯಗಳಲ್ಲಿ ಅಧಿಷ್ಠಾನ ಭಿತ್ತಿ ಪ್ರಸ್ತರ ಎಂಬ ತ್ರಿವರ್ಗಗಳನ್ನು ಮಾತ್ರ ಕಾಣಬಹುದು. ಆದರೆ ಈ ದೇವಾಲಯದಲ್ಲಿ ಪ್ರಧಾನ ಗರ್ಭಗುಡಿ ಮಾತ್ರ ಷಡ್ವರ್ಗಗಳಿಂದ ಕೂಡಿದ್ದು, ಉಳಿದೆರಡು ಗರ್ಭಗುಡಿಗಳು ತ್ರಿವರ್ಗದಿಂದ ಕೂಡಿವೆ. ಆದುದ್ದರಿಂದ ಇಲ್ಲಿ ಪ್ರಧಾನ ಗರ್ಭಗುಡಿಯ ಮೇಲ್ಭಾಗದಲ್ಲಿರುವ ಶಿಖರವನ್ನು ಮಾತ್ರ ನೋಡಬಹುದಾಗಿದ್ದು, ಈ ಶಿಖರವು ತ್ರಿತಲಗಳಿಂದ ಕೂಡಿದೆ. ಮುಖ್ಯ ಗರ್ಭಗೃಹದ ಮೇಲೆ ಏಕತಲ ಶಿಖರವಿದೆ. ತಲಗಳಲ್ಲಿ ಶಿಲ್ಪಗಳನ್ನು ಬಿಡಿಸಲು ಜೋಡಿಸಲಾಗಿರುವ ಕಲ್ಲುಗಳು ಹಾಗೆ ಉಳಿದಿವೆ. ಚೌಕಾಕಾರದ ಚಪ್ಪಟೆಯಾದ ಸ್ತೂಪಿ ಮಾಡಿ ಅದರ ಮೇಲೆ ಕಮಲದ ದಳಗಳನ್ನು ಬಿಡಿಸಲಾಗಿದೆ. ಅಂತ್ಯದಲ್ಲಿ ಲೋಹದ ಕಳಸವನ್ನು ಇಡಲಾಗಿದೆ.

**ಹದಿನಾರು ಕಂಬಗಳ ಚಾವಡಿ**

ಈ ಚಾವಡಿಯನ್ನು ದೇವಾಲಯದ ಪರಿಸರದಲ್ಲಿಯೇ ಮಾಡಲಾಗಿದೆ. ಇದನ್ನು 1292ರಲ್ಲಿ ಆಗ ಈ ಪ್ರದೇಶವನ್ನು ಆಳ್ವಿಕೆ ಮಾಡುತ್ತಿದ್ದ ಭೀಮಣ್ಣ ದಂಡನಾಯಕನು ನಿರ್ಮಿಸಿದನೆಂದು ಹೇಳಲಾಗುತ್ತದೆ. ಭೀಮಣ್ಣನಿಗೆ ಮೂರು ಜನ ಹೆಂಡತಿಯರಿದ್ದರು. ಇವರಿಗೆ 16 ಜನ ಮಕ್ಕಳಿದ್ದರು ಇವರು ವಿವಾಹವಾದ ಬಳಿಕ ತಮ್ಮ ತಮ್ಮ ಗಂಡಂದಿರ ಜೊತೆಯಲ್ಲಿ ಏಕಕಾಲದಲ್ಲಿ ಕುಳಿತುಕೊಳ್ಳಲು ವ್ಯವಸ್ಥೆ ಮಾಡಿ ಅವರಿಗಾಗಿ ಚಾವಡಿಗಳನ್ನು ಕಟ್ಟಿಸಿ ಅವರೆಲ್ಲರನ್ನು ದರ್ಬಾರ್ ಹಾಲಿನಲ್ಲಿ ಕುಳಿತು ನೋಡಲು ದರ್ಬಾರ್ ಅಂಕಣ ಅಥವಾ ಚಾವಡಿಯನ್ನು ಇಲ್ಲಿರುವ ಲಕ್ಷ್ಮೀಕಾಂತ ದೇವಾಲಯದ ಮುಂಭಾಗದಲ್ಲಿ ಅವನು ಕಟ್ಟಿಸಿದನೆಂದು ಹೇಳಲಾಗಿದೆ.[167] ಇಂದಿಗೂ ಇವು ಹೊಯ್ಸಳ ಶೈಲಿಯಲ್ಲಿರುವುದು ಕಂಡುಬರುತ್ತದೆ. ದಣ್ಣಾಯಕ ದಂಪತಿಗಳು ಕುಳಿತುಕೊಳ್ಳುತ್ತಿದ್ದ ಈ ಚಾವಡಿ ಉತ್ತರದಿಕ್ಕಿನಲ್ಲಿ ಜಗುಲಿಯಂತಿರುವ ಇವುಗಳ ದಕ್ಷಿಣ ದಿಕ್ಕಿಗೆ ಮುಖ ಮಾಡಿ ಕುಳಿತರೆ ಸುತ್ತಲಿರುವ 16 ಚಾವಡಿ (ಜಗುಲಿ) ಸ್ಪಷ್ಟವಾಗಿ ಕಾಣುತ್ತವೆ.**(ಚಿ.ಸಂ.190)** ಪ್ರತಿಯೊಂದು ಚಾವಡಿ ಮಂಟಪದಲ್ಲೂ ಹೆಣ್ಣು ಮಕ್ಕಳು ತನ್ನ ಗಂಡನೊಂದಿಗೆ ಕುಳಿತುಕೊಳ್ಳಲು ಅವಕಾಶ ಮಾಡಿ ಕೊಟ್ಟಿದ್ದನಂತೆ, ಆಗಿನ ಕಾಲದಲ್ಲಿ ಅತ್ತೆಯಾದವಳು ಅಳಿಯಂದಿರ ಮುಖವನ್ನು ನೋಡುತ್ತಿರಲಿಲ್ಲವಂತೆ, ಆದಕಾರಣ ಮಂಟಪಗಳನ್ನು ರಾಣಿಗೆ ಅಳಿಯಂದಿರು ಕಾಣದಂತೆ ಕಟ್ಟಲಾಗಿದೆ ಎಂದು ಸ್ಥಳೀಯರು ಮಾಹಿತಿ ನೀಡುತ್ತಾರೆ.

ಈ ಸಭಾ ಮಂಟಪದ ಮೇಲ್ಛಾವಣಿಯಲ್ಲಿ ವಿಶಾಲವಾಗಿ ರಚಿಸಲಾಗಿರುವ 12 ಭುವನೇಶ್ವರಿಗಳಿವೆ. ಈ ಭುವನೇಶ್ವರಿಯು ವೃತ್ತಾಕಾರ, ಕೀರ್ತಿಮುಖಗಳ ಕೆತ್ತನೆ, ಪದ್ಮ ದಳಗಳ ಕೆತ್ತನೆ, ಮಧ್ಯದಲ್ಲಿ ಕಮಲದ ಮೊಗ್ಗಿನ ದಳಗಳು ಹೊರ ಹೊಮ್ಮುತ್ತಿರುವಂತೆ ರಚನೆ

ಮಾಡಲಾಗಿದೆ.**(ಚಿ.ಸಂ.191)** ಈ ಸಭಾಮಂಟಪವು ಏರು ವಿನ್ಯಾಸದಲ್ಲಿ ಅಧಿಷ್ಠಾನ, ಭಿತ್ತಿ, ಪ್ರಸ್ತರದ ಭಾಗಗಳನ್ನು ಹೊಂದಿದೆ. ಅಧಿಷ್ಠಾನವು ಉಪಾನ, ಜಗತಿ, ಕಟಕಾವೃತ ಕುಮುದ, ಗಳ, ಕಂಠ, ಪ್ರತಿಯ ಭಾಗಗಳನ್ನು ಹೊಂದಿದೆ. ಕಂಠದ ಭಾಗದಲ್ಲಿ ಸಣ್ಣ ಸಣ್ಣ ಮಂಟಪಗಳ ಕೆತ್ತನೆಗಳನ್ನು ಮಾಡಲಾಗಿದೆ. ಭಿತ್ತಿಯ ಭಾಗವು ಸುತ್ತಲೂ ತೆರೆದು ಕೊಂಡಿದ್ದು, ಒಳಭಾಗದ ಕಕ್ಷಾಸನಗಳು ಮಾತ್ರ ಕಂಡುಬರುತ್ತವೆ. ಇದೇ ರೀತಿ ಈ ಸಭಾಮಂಟಪದ ಸುತ್ತಲಿನ ನಾಲ್ಕು ದಿಕ್ಕಿಗೂ ಸಹ ದ್ವಾರ ಮಂಟಪಗಳಿದ್ದು, ದ್ವಾರ ಮಂಟಪಗಳ ಮುಂದೆ ಸೋಪಾನಗಳೂ ಕಂಡುಬರುತ್ತವೆ. ಪ್ರಸ್ತರದ ಭಾಗದಲ್ಲಿ ಕಪೋತ ಹಾಗೂ ಹಾರದ ಭಾಗಗಳಿವೆ. ಈ ಮಹಾಮಂಟಪ ಅಥವಾ ಸಭಾಮಂಟಪದ ಮುಂಭಾಗದಲ್ಲಿ ನಾಲ್ಕು ಅಡಿ ಎತ್ತರದ ಬಲಿಪೀಠವಿದೆ. ಈ ಬಲೀಪೀಠದ ಮುಂಭಾಗದ ಬಲಪಾರ್ಶ್ವದಲ್ಲಿ ಒಂದು ಶಾಸನದ ಕಲ್ಲನ್ನು ನಿಲ್ಲಿಸಲಾಗಿದೆ. ದೇವಾಲಯದ ಸುತ್ತಲೂ ಐದು ಅಡಿ ಎತ್ತರದ ಪ್ರಕಾರ ಗೋಡೆಯನ್ನು ನಿರ್ಮಿಸಲಾಗಿದೆ.**(ಚಿ.ಸಂ.192,193)**

**ಚಲುವ ಚನ್ನಿಗರಾಯ ದೇವಾಲಯ-ಹೆಡತಲೆ**

ಈ ದೇವಾಲಯವು ಲಕ್ಷ್ಮೀಕಾಂತ ದೇವಾಲಯದ ಸಮೀಪದಲ್ಲಿ ನಿರ್ಮಾಣ ಮಾಡಲಾಗಿದೆ. ಇದೊಂದು ಏಕಕೂಟ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ. ಈ ದೇವಾಲಯವನ್ನು ಕಣಶಿಲೆಯಿಂದ ನಿರ್ಮಾಣ ಮಾಡಿದ್ದು, ಈಗ ಸಂಪೂರ್ಣ ಶಿಥಿಲಾವಸ್ಥೆಯಲ್ಲಿದೆ.**(ಚಿ.ಸಂ.194)** ಈ ದೇವಾಲಯದ ನಿರ್ಮಾಣದ ಮಾಡಿದ ಬಗ್ಗೆ ನವರಂಗದಲ್ಲಿರುವ ಕಂಬದ ಚೌಕಾಕಾರ ಪೀಠದಲ್ಲಿ ಬರೆಸಲಾಗಿರುವ ಕ್ರಿ.ಶ.1314ರ ಒಂದು ಶಾಸನವು ತಿಳಿಸುವುದೇನೆಂದರೆ ಮುಮ್ಮಡಿ ಬಲ್ಲಾಳನ ದಂಡನಾಯಕನಾದ ಪೆರುಮಾಳ ದೇವನ ಮಗ ಮಾದವ ದಂಡನಾಯಕನು ಈ ದೇವಾಲಯವನ್ನು ಕಟ್ಟಿಸಿ ದೇವಾಲಯದ ಪೂಜಾ ಕಾರ್ಯಕ್ರಮಗಳು ಸುಗಮವಾಗಿ ಜರುಗಲೆಂದು ದೇವಾಲಯದ ಹೆಸರಿನಲ್ಲಿ ಸ್ವಲ್ಪ ಜಮೀನನ್ನು ದಾನವಾಗಿ ನೀಡಿದನೆಂದು ತಿಳಿಸುತ್ತದೆ.[168] ಈ ದೇವಾಲಯದ ವಾಸ್ತು ಶೈಲಿಯು ಇದೇ ಗ್ರಾಮದ ಲಕ್ಷ್ಮೀಕಾಂತ ದೇವಾಲಯವನ್ನು ಹೋಲುತ್ತದೆ. ಇದರಲ್ಲಿ ಒಂದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪ ಕಂಡುಬರುತ್ತವೆ.

**ಗರ್ಭಗೃಹ:-**ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಆದರೆ ಗರ್ಭಗೃಹವು ಶಿಥಿಲಾವಸ್ಥೆಯಲ್ಲಿದ್ದುದರಿಂದ ಇದರಲ್ಲಿ ಪ್ರತಿಷ್ಠಾಪಿಸಲಾಗಿದ್ದ ಚನ್ನಿಗರಾಯ ಮೂರ್ತಿಯನ್ನು ಲಕ್ಷ್ಮೀಕಾಂತ ದೇವಾಲಯಕ್ಕೆ ಸ್ಥಳಾಂತರಿಸಿದ್ದಾರೆ. ಈ ದೇವನು ಸುಮಾರು ಎರಡು ಅಡಿಗಳ ಎತ್ತರವಿರುವ ಗರುಡ ಪೀಠದ ಮೇಲೆ ಸಮಭಂಗಿಯಲ್ಲಿರುವಂತೆ ರಚಿಸಿ ಪ್ರತಿಷ್ಠಾಪಿಸಲಾಗಿದೆ. ಈ ದೇವನು ನಾಲ್ಕು ಅಡಿ ಎತ್ತರವಾಗಿದ್ದು, ಚತುರ್ಭುಜವನ್ನು

ಹೊಂದಿದ್ದಾನೆ. ಸುಂದರವಬಾಗಿರುವ ಈ ದೇವನ ಕೈಗಳಲ್ಲಿ ಶಂಖ, ಚಕ್ರ, ಗಧಾ, ಹಸ್ತವನ್ನೊಂದಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖ ಬಿಡಿಸಲಾಗಿದೆ. ಈ ದೇವನ ಇಕ್ಕೆಲಗಳಲ್ಲಿ ದೇವಿಯರು ಫಲ ಮತ್ತು ಪದ್ಮವನ್ನು ಹಿಡಿದು ನಿಂತಿದ್ದಾರೆ. ಇತ್ತೀಚೆಗೆ ಲೋಹದ ಪ್ರಭಾವಳಿಯನ್ನು ಮಾಡಿ ನಿಲ್ಲಿಸಲಾಗಿದೆ. ಗರ್ಭಗೃಹದ ಬಾಗಿಲು ಶಿಥಿಲಾವಸ್ಥೆಯಲ್ಲಿದೆ. ಪಟ್ಟಿಕೆಗಳು ಸರಳವಾಗಿವೆ.

**ಸುಕನಾಸಿ:-**ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರಲ್ಲಿ ಯಾವುದೇ ರೀತಿಯ ಮೂರ್ತಿ ಶಿಲ್ಪಗಳನ್ನು ಕಾಣಬರುವುದಿಲ್ಲ. ಇದರ ಮೇಲ್ಛಾವಣಿಯಲ್ಲಿ ವೃತ್ತಾಕಾರವಾಗಿ ಮತ್ತು ನಕ್ಷತ್ರಾಕಾರವಾಗಿ ರಚಿಸಲಾಗಿದೆ. ಇದರ ಮೇಲ್ಭಾಗದ ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಬಾಗಿಲ ಪಟ್ಟಿಕೆಗಳಲ್ಲಿ ಅಲಂಕಾರಿಕ ಕೆತ್ತನೆ ಮಾಡಲಾಗಿದೆ. ಸುಕನಾಸಿಯ ದ್ವಾರವು ಗರ್ಭಗೃಹದ ದ್ವಾರದ ಮಾದರಿಯಲ್ಲಿದ್ದು, ದ್ವಾರದ ಪಾರ್ಶ್ವಗಳಲ್ಲಿ ಅಸ್ಪಷ್ಟವಾದ ಉಬ್ಬು ಚಿತ್ರಗಳಿವೆ. ಇದು ಕೇಶವನ ದೇವಾಲಯವಾದ್ದರಿಂದ ಈ ಅಸ್ಪಷ್ಟ ಚಿತ್ರಗಳು ವಿಷ್ಣುವಿನ ದ್ವಾರಪಾಲಕರಾದ ಜಯ–ವಿಜಯರದ್ದಾಗಿವೆ. ಎಂದು ಹೇಳಬಹುದಾಗಿದೆ. ಲಲಾಟಬಿಂಬದಲ್ಲಿ ಯಾವುದೇ ರೀತಿಯ ಶಿಲ್ಪಗಳು ಕಾಣಬರುವುದಿಲ್ಲ.

**ನವರಂಗ:-**ನವರಂಗವು 20X20 ಅಡಿಗಳ ಉದ್ದ ಅಗಲವಾಗಿದೆ. ಇದರ ಮಧ್ಯದಲ್ಲಿ ನಾಲ್ಕು ಹೊಯ್ಸಳ ಶೈಲಿಯಲ್ಲಿರುವ ಕಂಬಗಳಿವೆ. ಇವುಗಳನ್ನು ಉಪಪೀಠ, ಚೌಕಾಕಾರದ ಪೀಠ, ಬಳೆಗಳ ಅಲಂಕರಣ, ಗಂಟೆಯಾಕಾರ, ಘಟಾಕಾರ, ವೃತ್ತಾಕಾರದ ಗಾಲಿ, ಪುಷ್ಪಬೋಧಿಗೆ ಇದರ ಮೇಲೆ ಫಲಗೈ ಮತ್ತು ಕಪೋತವಿದೆ.(**ಚಿ.ಸಂ.195**) ಇದರ ಮೇಲ್ಛಾವಣಿಯಲ್ಲಿ 9 ಅಂಕಣಗಳಿದ್ದು, ಈ ಅಂಕಣಗಳಲ್ಲಿ ಭುವನೇಶ್ವರಿಗಳನ್ನು ಮಾಡಲಾಗಿದೆ. ಚೌಕ, ವೃತ್ತಾಕಾರ, ನಕ್ಷತ್ರಾಕಾರ, ಅಷ್ಟಾಕಾರದ ವಿವಿಧ ರೀತಿಯಲ್ಲಿ ರಚಿಸಿ ಮಧ್ಯದಲ್ಲಿ ಅರಳಿದ ಪದ್ಮಪುಷ್ಪ ಮತ್ತು ಕಮಲದ ಮೊಗ್ಗನ್ನು ಬಿಡಿಸಲಾಗಿದೆ. ನವರಂಗದ ದ್ವಾರವು ಗರ್ಭಗೃಹ ಹಾಗೂ ಶುಕನಾಸಿಯ ದ್ವಾರಗಳ ಮಾದರಿಯ ಹೊಯ್ಸಳ ಶೈಲಿಯ ದ್ವಾರಬಂಧವಾಗಿದೆ.

**ಮುಖಮಂಟಪ:-**ಮುಖಮಂಟಪದಲ್ಲಿ ಎರಡು ಕಂಬಗಳು ಹೊಯ್ಸಳ ಶೈಲಿಯಲ್ಲಿವೆ. ಈ ಕಂಬಗಳ ಮೇಲ್ಛಾವಣಿಯಲ್ಲಿ ವಿಶಾಲವಾಗಿ ರಚಿಸಲಾಗಿರುವ ಭುವನೇಶ್ವರಿ ಇದೆ. ಚೌಕ,ಅಷ್ಟ, ವೃತ್ತಾಕಾರವಾಗಿ ರಚಿಸಲಾಗಿದೆ. ಒಳಭಾಗದಲ್ಲಿ ದಿಕ್ಪಾಲಕರು ಮತ್ತು ಅಷ್ಟದಿಕ್ಪಾಲಕರ ಮೂರ್ತಿಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ವಿಶಾಲವಾಗಿ ಅರಳಿರುವ ಕಮಲದ ಮೊಗ್ಗನ್ನು

ನಯವಾದ ಕೆತ್ತನೆಯಿಂದ ಕೂಡಿದ್ದು, ಒಂದು ಅಡಿ ಮುಂದೆ ಬಂದಿದೆ. ಈ ಮುಖಮಂಟಪದ ಕಂಬಗಳು ಉಪಪೀಠ, ಚತುರಸ್ರಾಕಾರ, ಅಷ್ಟಸ್ರ ಹಾಗೂ ಷೋಡಶ ಮುಖಗಳನ್ನು ಹೊಂದಿದ್ದು, ಮೇಲ್ಭಾಗದಲ್ಲಿ ಮುಷ್ಠಿಬಂಧ ಪೋತಿಕೆಗಳನ್ನು ಹೊಂದಿವೆ. ಮುಖಮಂಟಪದ ಮುಂಭಾಗದಲ್ಲಿರುವ ಸೋಪಾನಗಳು ಪ್ರಕೃತಿ ವಿಕೋಪಕ್ಕೆ ತುತ್ತಾಗಿ ನಾಶವಾಗಿವೆ.

**ಅಧಿಷ್ಠಾನ:**–ಅಧಿಷ್ಠಾನವು ಚೌಕಾಕಾರವಾಗಿದೆ. ಇದರಲ್ಲಿ ಐದು ಪಟ್ಟಿಕೆಗಳಿವೆ. ಇವುಗಳನ್ನು ಹಿನ್ಸರಿತ ಮತ್ತು ಮುನ್ಸರಿತಗಳಲ್ಲಿ ಕ್ರಮಬದ್ಧವಾಗಿ ಜೋಡಿಸಲಾಗಿದೆ. ಪ್ರತಿಯ ಹೊರ ಅಂಚಿನಲ್ಲಿ ದಂತ ಪಂಕ್ತಿಯ ಅಲಂಕರಣೆಯಿದೆ.

**ಭಿತ್ತಿ:**–ಅಧಿಷ್ಠಾನದ ಮೇಲೆ ನಿರ್ಮಿಸಲಾಗಿರುವ ಭಿತ್ತಿಯನ್ನು ಕಲ್ಲಿನ ಅರೆಗಂಬಗಳನ್ನು ಅಲ್ಲಲ್ಲಿ ದೇವಾಲಯದ ಸುತ್ತಲು ನಿಲ್ಲಿಸಿ ಅಲಂಕರಣೆ ಮಾಡಲಾಗಿದೆ. ಇದರ ಮೇಲಿರುವ ಕಪೋತವು ಇಳಿಜಾರಾಗಿದ್ದು ಕಮಾನಿನಾಕಾರವಾಗಿದೆ. ಹಾಗೂ ಗೋಡೆಯಿಂದ ಎರಡು ಅಡಿ ಮುಂಚಾಚಿದ್ದು ಅಂಚಿನಲ್ಲಿ ಕಮಲದ ಮೊಗ್ಗುಗಳನ್ನು ಬಿಡಿಸಲಾಗಿದೆ.[169] **(ಚಿ.ಸಂ.196)**

**ಲಕ್ಷ್ಮೀಕಾಂತ ದೇವಾಲಯ–ಕ್ಯಾತನಹಳ್ಳಿ**

ಕ್ಯಾತನಹಳ್ಳಿ ಹೆಗ್ಗಡದೇವನಕೋಟೆಗೆ ಸೇರಿರುವ ಒಂದು ಗ್ರಾಮವಾಗಿದೆ. ಇದು ಹೆಗ್ಗಡದೇವನ ಕೋಟೆಯಿಂದ ಪೂರ್ವಕ್ಕೆ ಸುಮಾರು 34ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿ ನಿರ್ಮಿಸಲಾಗಿರುವ ಲಕ್ಷ್ಮೀಕಾಂತ ದೇವಾಲಯವನ್ನು ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ[170] **(ಚಿ.ಸಂ.197)** ಮತ್ತು ಈ ಗ್ರಾಮದ ಪಶ್ಚಿಮ ಭಾಗದಲ್ಲಿದೆ. ಈ ದೇವಾಲಯ ನಿರ್ಮಾಣ ಮಾಡಿದ ಬಗ್ಗೆ ಕ್ರಿ.ಶ.1322ರಲ್ಲಿ ಬರೆಸಲಾದ ಈ ಶಾಸನವು ಹೊಯ್ಸಳ ದೊರೆ ಮೂರನೇ ಬಲ್ಲಾಳನ ಕಾಲದಲ್ಲಿ ತಗಡೂರಿನ ಕೊರವರ ಕೇತೆಗೌಡನು ಕ್ರಿ.ಶ.1164ರಲ್ಲಿ ಕೇತನಹಳ್ಳಿಯನ್ನು ನಿರ್ಮಿಸಿ ಮಲ್ಲಿನಾಥ ದೇವಾಲಯವನ್ನು ಹಾಗೂ ಒಂದು ಕೆರೆಯನ್ನು ನಿರ್ಮಿಸಿದನೆಂದು ತಿಳಿಸುತ್ತದೆ. ತರುವಾಯ ಆತನ ಮಗನಾದ ಹೊಯ್ಸಳಗೌಡನು ಲಕ್ಷ್ಮೀನಾರಾಯಣ ಹಾಗೂ ಒಂದು ಮಂಟಪವನ್ನು ಮಾಡಿಸಿ ಅದನ್ನು 156 ವರ್ಷಗಳ ನಂತರ ಅಂದರೆ, ಕ್ರಿ.ಶ.1322ರಲ್ಲಿ ಸಮಸ್ತ ಪ್ರಭುಗಳು ಪುನಃ ಒಟ್ಟುಗೂಡಿ ಪುನರ್ ಪ್ರತಿಷ್ಠಾಪನೆ ಮಾಡಿಸಿ ಈ ದೇವಾಲಯಕ್ಕೆ ದತ್ತಿ ಬಿಟ್ಟ ವಿಚಾರ ತಿಳಿಸುತ್ತದೆ.[171] ಈ ದೇವಾಲಯದಲ್ಲಿ ಎರಡು ಗರ್ಭಗೃಹಗಳು ಎರಡು ಸುಕನಾಸಿ ಎರಡು ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ.

**ಗರ್ಭಗೃಹ**:-ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಮಧ್ಯದಲ್ಲಿ ನಕ್ಷತ್ರಾಕಾರವಾಗಿರುವ ಎರಡು ಅಡಿ ಎತ್ತರದ ಗರುಡ ಪೀಠದ ಮೇಲೆ ಸುಮಾರು ಐದು ಅಡಿಗಳ ಎತ್ತರವಾಗಿರುವ ಲಕ್ಷ್ಮೀಕಾಂತ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವನು ಸಮಭಂಗಿಯಲ್ಲಿ ನಿಂತಿದ್ದು ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಕೀರ್ತಿಮುಖವನ್ನು ಕೆತ್ತನೆ ಮಾಡಿ ಬಿಡಿಸಲಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ದೇವತೆಯರಿದ್ದಾರೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಈ ಭುವನೇಶ್ವರಿಯನ್ನು ಎರಡು ಅಡಿ ಆಳವಾಗಿ ಒಳ ಸರಿದಂತೆ ರಚಿಸಲಾಗಿದ್ದು, ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಒಳಭಾಗದಲ್ಲಿ ಅಷ್ಟದಿಕ್ಪಾಲಕರನ್ನು ಮತ್ತು ಕೀರ್ತಿಮುಖಗಳನ್ನು ಬಿಡಿಸಿ ಅಲಂಕರಿಸಲಾಗಿದೆ.

ಗರ್ಭಗೃಹದ ದ್ವಾರವು ಅಲಂಕರಣೆಯಿಂದ ಕೂಡಿದ್ದು, ಸುಂದರವಾಗಿದೆ.**(ಚಿ.ಸಂ.198)** ಇದರಲ್ಲಿ ಐದು ಪಟ್ಟಿಕೆಗಳಿವೆ. ಇವುಗಳ ಮಧ್ಯದಲ್ಲಿ ನಕ್ಷತ್ರಾಕಾರವಾಗಿರುವ ಅರೆಗಂಭಗಳಿವೆ. ಪಟ್ಟಿಕೆಗಳ ಮೇಲೆ ಬಳ್ಳಿ ಸುರುಳಿ ಪದ್ಮಪುಷ್ಪ ಕಮಲದ ದಳಗಳ ಅಲಂಕರಣವನ್ನು ಸೂಕ್ಷ್ಮ ಕೆತ್ತನೆ ಮಾಡಿ ಬಿಡಿಸಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಉಬ್ಬು ಕೆತ್ತನೆ ಇದೆ. ಈ ಗಜಲಕ್ಷ್ಮೀಯ ಮೇಲ್ಭಾಗದಲ್ಲಿ ಸಂಗೀತಗಾರ, ನೃತ್ಯಗಾರರ ಶಿಲ್ಪಗಳನ್ನು ಬಿಡಿಸಲಾಗಿದೆ. ಇದರ ಎರಡು ಕಡೆ ಕುಬ್ಜ ಶಿಲ್ಪಗಲನ್ನು ಬಿಡಿಸಲಾಗಿದೆ. ಬಾಗಿಲ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರಿದ್ದಾರೆ. ಈ ದ್ವಾರಪಾಲಕರು ಚತುರ್ಭುಜವನ್ನು ಹೊಂದಿದ್ದು ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಇಡಿದುಕೊಂಡಿದ್ದಾರೆ. ಇವರ ಮೈಮೇಲೆ ಬಿಡಿಸಲಾಗಿರುವ ವಸ್ತ್ರಭರಣವು ಸುಂದರವಾಗಿದೆ.

**ಸುಕನಾಸಿ**:-ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಉತ್ತರ ಮತ್ತು ದಕ್ಷಿಣಭಾಗದ ಗೋಡೆಯ ಮುಂದೆ ನಮ್ಮಾಳ್ವರರ ಶಿಲ್ಪವಿದೆ. ಸುಕನಾಸಿಯ ಮೇಲ್ಛಾವಣಿಯಲ್ಲಿ ಭುವನೇಶ್ವರಿಯನ್ನು ರಚಿಸಲಾಗಿದ್ದು, ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪ ಕೀರ್ತಿಮುಖ, ಅರಳಿದ ಪದ್ಮಗಳನ್ನು ಬಿಡಿಸಿ ಅಲಂಕರಿಸಲಾಗಿದೆ. ಸುಕನಾಸಿಯ ದ್ವಾರವು ಸರಳವಾಗಿದೆ.**(ಚಿ.ಸಂ.199)** ದ್ವಾರದ ಪಟ್ಟಿಕೆಗಳಲ್ಲಿ ಯಾವುದೆ ಸೂಕ್ಷ್ಮ ಕೆತ್ತನೆ ಕಾಣಬರುವುದಿಲ್ಲ. ತೋರಣದ ಭಾಗದಲ್ಲಿ ಪದ್ಮ ಪುಷ್ಪಗಲನ್ನು ಬಿಡಿಸಲಾಗಿದೆ. ಈ ದ್ವಾರಕ್ಕೆ ಇತ್ತೀಚೆಗೆ ಮರದಲ್ಲಿ ಮಾಡಲಾದ ದ್ವಾರ ಪಟ್ಟಿಕೆಯ ಮೇಲೆ ಅಷ್ಟಲಕ್ಷ್ಮೀಯರ ಶಿಲ್ಪಗಳನ್ನು ಬಿಡಿಸಲಾಗಿದೆ.

ಲಲಾಟಬಿಂಬದಲ್ಲಿ ಶಂಖ. ಚಕ್ರ, ತಿರುನಾಮವಿದೆ. ಅದರ ಮೇಲೆ ಐದು ಕಳಸಗಳಿದ್ದು, ಇಕ್ಕೆಲಗಳಲ್ಲಿ ಹಸುವಿನ ಕೊಂಬಿನ ಅಲಂಕರಣವಿದೆ.

**ನವರಂಗ:-**ಲಕ್ಷ್ಮೀಕಾಂತ ಸುಕನಾಸಿಯ ಮುಂದಿರುವ ನವರಂಗವು 25X25 ಉದ್ದ ಅಗಲ ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಯವಾದ ಕೆತ್ತನೆಯಿಂದ ಕೂಡಿದ 4 ಶ್ರೀಕಾರ ಕಂಬಗಳಿವೆ. ಇವುಗಳು ಉಪಪೀಠದ ಮೇಲೆ ನಿಂತಿದೆ. ಪೀಠವು ಚೌಕಾ ಕಾಂಡದ ಭಾಗ ಬಳೆಗಳ ಗಾಲಿಯನ್ನು ಕೊರೆದು ಬಿಡಿಸಲಾಗಿದೆ.**(ಚಿ.ಸಂ.200)** ನಂತರ ಘಂಟೆ, ಘಟಾ, ಗಾಲಿ, ಗಾಲಿಯಲ್ಲಿ ನಾಲ್ಕು ದಿಕ್ಕುಗಳಲ್ಲಿ ಮುಗುಟಗಳನ್ನು ಪ್ರಾಯಶಃ ಮದನಿಕ ಶಿಲ್ಪಗಲನ್ನು ಕೊರಿಸಲು ಮಾಡಿರಬಹುದು. ಆದರೆ ಕಾರಣಾಂತರದಿಂದ ಮುಗುಟಗಳ ಮೇಲೆ ಮದನಿಕ ಶಿಲ್ಪಗಳನ್ನು ಕೋರಿಸದೇ ಹಾಗೆ ಬಿಡಿಸಲಾಗಿದೆ. ಇದರ ಮೇಲೆ ಪುಷ್ಪ ಬೋದಿಗೆ ಫಲಗ್ಯೆ ಉರುಳೆ ಕಾರದ ಕಪೋತವಿದೆ. ನವರಂಗದ ಮೇಲ್ಛಾವಣಿಯಲ್ಲಿ ಭುವನೇಶ್ವರಿಗಳನ್ನು ಮಾಡಲಾಗಿದ್ದು, ಇವುಗಳನ್ನು ವಿವಿಧ ಆಕಾರವಾಗಿ ರಚಿಸಲಾಗಿದೆ. ಮಧ್ಯದ ಭುವನೇಶ್ವರಿಯು ಚೌಕಾಕಾರವಾಗಿದ್ದು, ಇದರ ಮಧ್ಯದಲ್ಲಿ 9 ಪದ್ಮ ಪುಷ್ಪಗಳನ್ನು ಬಿಡಿಸಲಾಗಿದೆ. ಪಟ್ಟಿಕೆಗಳಲ್ಲಿ ದಿಕ್ಪಾಲಕರು ತಮ್ಮ ತಮ್ಮ ವಾಹನದ ಮೇಲೆ ಕುಳಿತಿರುವಂತೆ ಬಿಡಿಸಲಾಗಿದೆ. ಇನ್ನುಳಿದ 8 ಭುವನೇಶ್ವರಿಯನ್ನು ನಕ್ಷತ್ರಾಕಾರವಾಗಿ, ವೃತ್ತಾಕಾರವಾಗಿ, ಅಷ್ಟಮುಖವಾಗಿ. ಚೌಕಾಕಾರವಾಗಿ ರಚಿಸಲಾಗಿದೆ. ಇವೆಲ್ಲವುಗಳಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ. ಈ ನವರಂಗದ ನಾಲ್ಕು ಕಂಬಗಳ ಮಧ್ಯೆ ಕೆಳಭಾಗದಲ್ಲಿ ವೃತ್ತಾಕಾರವಾಗಿರುವ ರಂಗವೇದಿಕೆಯನ್ನು ಮಾಡಲಾಗಿದ್ದು, ಇದು ಸುಮಾರು ಒಂದು ಅಡಿ ಎತ್ತರವಾಗಿದೆ. ಇದರ ಹಂಚಿನಲ್ಲಿ ಸುತ್ತಲೂ ಪದ್ಮ ಪುಷ್ಪಗಳ ದಳಗಳನ್ನು ಬಿಡಿಸಲಾಗಿದೆ. ನವರಂಗದ ವಾಯುವ್ಯ ಮೂಲೆಯಲ್ಲಿ ಪಂಚಲೋಹದ ಗರುಡವಾಹನವನ್ನು ಇಡಲಾಗಿದೆ. ನವರಂಗದ ಪೂರ್ವಭಾಗದಲ್ಲಿರುವ ಎರಡು ಕಂಬದಗಳ ಪೀಠಗಳ ಮೇಲೆ ಶಾಸನವನ್ನು ಬರೆಸಲಾಗಿದೆ. ನವರಂಗದ ಬಾಗಿಲು ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿದೆ. ಬಾಗಿಲಲ್ಲಿ ಸುಮಾರು 7 ಪಟ್ಟಿಕೆಗಳಿದ್ದು, ಈ 7 ಪಟ್ಟಿಕೆಗಳ ಮೇಲೂ ಸುರುಳಿಯ ಒಳಗಿರುವ ಅರಳಿದ ಪದ್ಮಪುಷ್ಪಗಳ ಅಲಂಕರಣೆ, ವಜ್ರದ ರೀತಿಯ ಅಲಂಕರಣೆ, ಹೊಯ್ಸಳ ಶೈಲಿಯ ಅಲಂಕರಣೆ, ಬಳ್ಳಿಸುರುಳಿಗಳ ಅಲಂಕರಣೆ ಇದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಈ ಗಜಲಕ್ಷ್ಮೀಯ ಎಡ ಮತ್ತು ಬಲಬಾಗದಲ್ಲಿ ಸಂಗೀತಗಾರರ, ನೃತ್ಯಗಾರರ ಶಿಲ್ಪಗಳನ್ನು ಬಿಡಿಸಲಾಗಿದೆ. ಬಾಗಿಲ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ದ್ವಾರಪಾಲಕರಿದ್ದಾರೆ. ಇವರು ಚತುರ್ಭುಜ ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದುಕೊಂಡಿದ್ದಾರೆ. ಇವರ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು

ನಿಂತಿರುವ ಸೇವಕಿಯರು ನಿಂತಿದ್ದಾರೆ. ಪ್ರಭಾವಳಯಲ್ಲಿ ಬಳ್ಳಿಸುರುಳಿ ಕೀರ್ತಿಮುಖವಿದೆ. ಬಲಭಾಗದಲ್ಲಿರುವ ದ್ವಾರಪಾಲಕನ ಪ್ರಭಾವಳ ತೃಟಿತವಾಗಿದೆ.

**ಮುಖಮಂಟಪ:**-ಮುಖಮಂಟಪವು ಆಯತಕಾರವಾಗಿದೆ. ಇದನ್ನು ಸುಮಾರು ಮೂರು ಅಡಿ ಎತ್ತರವಿರುವ ಜಗತಿಯ ಮೇಲೆ ಸಾಲಾಗಿ ಮುಂದೆ. ನಿಲ್ಲಿಸಲಾಗಿದೆ. ಹೊಯ್ಸಳ ಶೈಲಿಯ ನಕ್ಷತ್ರಾಕಾರದ ನಾಲ್ಕು ಕಂಬಗಳವೆ. ಇವುಗಳನ್ನು ಉಪಪೀಠದ ಮೇಲೆ ಚೌಕ, ಬಳೆಗಳ ಗಾಲಿ, ಗಂಟೆ, ಘಟ, ಗಾಲಿ, ಪುಷ್ಪಬೋದಿಗೆ ಮತ್ತು ಉರುಳೆಯಾಕಾರದ ಕಪೋತ, ಕಪೋತದ ಮುಂದೆ ಒಂದರಲ್ಲಿ ವೀರಪುರುಷನ ಶಿಲ್ಪವನ್ನು ಬಿಡಿಸಲಾಗಿದೆ. ಮುಖಮಂಟಪದ ಮೇಲ್ಛಾವಣಿಗೆ ಕಲ್ಲನ್ನು ಹಾಸಿ ಮುಚ್ಚಲಾಗಿದೆ. ಮುಖಮಂಟಪದ ಕಪೋತವು ಇಳಿಜಾರಾಗಿರುವಂತೆ ರಚಿಸಲಾಗಿದೆ. ಈ ಮುಖಮಂಟಪದ ಮುಂದೆ ಸೋಪಾನವನ್ನು ಮಾಡಲಾಗಿದೆ. ಸೋಪಾನದ ಇಕ್ಕೆಲಗಳಲ್ಲಿ ಎರಡು ಆನೆಗಳು ನಿಂತಿರುವಂತೆ ರಚಿಸಲಾಗಿದೆ. ಇದರ ಮುಂದೆ ಮೂರು ಅಡಿ ಎತ್ತರವಿರುವ ಚೌಕಾಕಾರದ ಕಂಬದ ಮೇಲೆ ಬಲಿಪೀಠವನ್ನು ಇಡಲಾಗಿದೆ.

**ಗಂಗಾಧರೇಶ್ವರನ ಪಶ್ಚಿಮ ಗರ್ಭಗೃಹ:**-ಈ ಗರ್ಭಗೃಹವು ಸಹ 8X8 ಅಡಿ ಉದ್ದ ಅಗಲವನ್ನು ಹೊಂದಿದ್ದು, ಚೌಕಾಕಾರವಾಗಿದೆ. ಇದರ ಮಧ್ಯಭಾಗದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ನಕ್ಷತ್ರಾಕಾರವಾಗಿರುವ ಪಾಣಿಪೀಠದ ಮೇಲೆ ಗಂಗಾಧರೇಶ್ವರನ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.201)** ಈ ಗರ್ಭಗೃಹದ ಮೇಲ್ಛಾವಣಿಯಲ್ಲಿ ಯಾವುದೇ ರೀತಿಯ ಭುವನೇಶ್ವರಿ ಕಂಡುಬರುವುದಿಲ್ಲ ಹಾಗೂ ಗರ್ಭಗೃಹದ ದ್ವಾರವು ಸರಳವಾಗಿದೆ. ಗಂಗಾಧರೇಶ್ವರ ದೇವಾಲಯದ ಕಂಬಗಳು ನಕ್ಷತ್ರಾಕಾರವಾಗಿದ್ದು, ಲಕ್ಷ್ಮೀಕಾಂತ ದೇವಾಲಯದ ಕಂಬಗಳು ಶ್ರೀಕಾರ ಕಂಬಗಳಾಗಿದ್ದು, ಬಹಳ ಸುಂದರವಾಗಿವೆ. ಹಾಗೂ ಗಂಗಾಧರೇಶ್ವರ ಲಿಂಗಕ್ಕೆ ಪ್ರತಿ ಯುಗಾದಿಯಂದು ಸೂರ್ಯನ ಕಿರಣಗಳು ನೇರವಾಗಿ ಬೀಳುತ್ತದೆ ಇದೊಂದು ವಿಶೇಷವಾಗಿದೆ ಎಂದು ತಿಳಿಸಿದ್ದಾರೆ.[172]

**ಸುಕನಾಸಿ:**-ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವನ್ನು ಹೊಂದಿದ್ದು, ಚೌಕಾಕಾರವಾಗಿದೆ. ಇದರ ವಾಯುವ್ಯ ಮೂಲೆಯಲ್ಲಿ ಗಣಪತಿಯನ್ನು ಪ್ರತಿಷ್ಠಾಪಿಸಲಾಗಿದೆ. ಪದ್ಮಾಸನದಲ್ಲಿ ಕುಳಿತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೊಡಲಿ ಮತ್ತು ಫಲವನ್ನು ಹಿಡಿದುಕೊಂಡಿದ್ದಾನೆ. ಉಳಿದೆರಡು ಕೈಗಳಲ್ಲಿ ಫಲ ಮತ್ತು ಮುರಿದ ದಂತವನ್ನು ಹಿಡಿದುಕೊಂಡಿದ್ದಾನೆ. ಈತನು ತನ್ನ ಹೊಟ್ಟೆಗೆ ಸರ್ಪವನ್ನು ಸುತ್ತಿಕೊಂಡಿದ್ದಾನೆ. ಸುಕನಾಸಿಯ ದ್ವಾರವು ಸುಂದರವಾದ ಅಲಂಕರಣ ಪಟ್ಟಿಕೆಯಿಂದ ಕೂಡಿದೆ. ಪಟ್ಟಿಕೆಗಳಲ್ಲಿ ಕಮಲದ ಪುಷ್ಪಗಳನ್ನು ಬಿಡಿಸಲಾಗಿದೆ. ಉಳಿದೆರಡು ಪಟ್ಟಿಕೆಗಳು ಹಾಗೇ ಉಳಿದಿವೆ ಬಾಗಿಲ ಇಕ್ಕೆಲಗಳಲ್ಲಿ

ಜಾಲಂಧ್ರಗಳವನ್ನು ಜೋಡಿಸಲಾಗಿದೆ. ಈ ಜಾಲಂಧ್ರಗಳ ಒಳಭಾಗದಲ್ಲಿ ಅರಳಿದ ಪದ್ಮಪುಷ್ಪದ ಅಲಂಕರಣೆ ಮಾಡಲಾಗಿದ್ದು, ಇದನ್ನು ಪುಷ್ಪಜಾಲಂಧ್ರವೆಂದು ಕರೆಯಬಹುದು. ಲಲಾಟಬಿಂಬದಲ್ಲಿ ಗಜಲಕ್ಷ್ಮೀಯನ್ನು ಬಿಡಿಸಲಾಗಿದೆ. ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಶೈವ ದ್ವಾರಪಾಲಕರಿದ್ದಾರೆ. ಇವರು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ತ್ರಿಶೂಲ, ಢಮರು, ಗಧಾ, ಮತ್ತು ಫಲವನ್ನು ಹಿಡಿದುಕೊಂಡಿದ್ದಾರೆ.[173] (ಚಿತ್ರ ಸಂ.)

**ನವರಂಗ**:-ನವರಂಗವು ಎರಡು ಗರ್ಭಗೃಹಗಳ ಮುಂದೆ ನಿರ್ಮಿಸಲಾಗಿದ್ದು, 25X25 ಅಡಿ ಉದ್ದ ಅಗಲವಾಗಿ ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ವೃತ್ತಾಕಾರದ ಕಂಬಗಳಿವೆ. ಈ ಕಂಬಗಳು ಚೌಕ, ಬಳೆಗಳ ಅಲಂಕರಣ, ಗಾಲಿ, ಘಂಟೆ, ಘಟಾ, ಗಾಲಿ, ಪುಷ್ಪಬೋದಿಗೆ, ಫಲಗೈ ಅದರ ಮೇಲೆ ಉರುಳೆಯಾಕಾರದ ಕಪೋತವಿದೆ.**(ಚಿ.ಸಂ.202)** ಇದರ ಮೇಲೆ ಆಧಾರ ಬೋದಿಗೆ ಇದೆ. ಕೆಳಭಾಗದಲ್ಲಿ ಶಿವನಿಗೆ ಎದುರಾಗಿ ನಂದಿಯನ್ನು ಇರಿಸಲಾಗಿದೆ. ನವರಂಗದ ಮೇಲ್ಭಾವಣಿಯ ಮಧ್ಯದ ಅಂಕಣದಲ್ಲಿ ವಿಶಾಲವಾಗಿ ರಚಿಸಲಾಗಿರುವ ಭುವನೇಶ್ವರಿ ಇದೆ.**(ಚಿ.ಸಂ.203)** ಇದು ಎರಡು ಅಡಿ ಒಳಸರಿದಂತೆ ಗುಮ್ಮಟಾಕಾರವಾಗಿ ಮಾಡಿ ಇದನ್ನು ಚೌಕ ಮತ್ತು ವೃತ್ತಾಕಾರವಾಗಿ ರಚಿಸಲಾಗಿದೆ. ಮಧ್ಯದಲ್ಲಿ ಮೂರು ಸುತ್ತು ವಿಶಾಲವಾಗಿ ಅರಳಿದಂತೆ ಬಿಡಿಸಲಾಗಿರುವ ಪದ್ಮಪುಷ್ಪವನ್ನು ಹಾಗೂ ಒಳಭಾಗದಲ್ಲಿ ವೃತ್ತಾಕಾರವಾಗಿ ಬಿಡಿಸಲಾಗಿರುವ ಕಮಲದ ಮೊಗ್ಗುಗಳು, ಕೀರ್ತಿಮುಖಗಳು ಮತ್ತು ಕಮಲದ ದಳಗಳ ಅಲಂಕರಣ ಮಾಡಿ ಬಿಡಿಸಲಾಗಿದೆ.

ನವರಂಗದ ಪಶ್ಚಿಮ ಭಾಗದಲ್ಲಿ ಪೂರ್ವಾಭಿಮುಖವಾಗಿ ಪ್ರತಿಷ್ಠಾಪಿಸಲಾಗಿರುವ ಎಡಮುರಿ ಗಣಪತಿ. ಈ ಗಣಪತಿಯು ಸುಮಾರು ಮೂರು ಅಡಿ ಎತ್ತರವಾಗಿದ್ದು, ಪದ್ಮಾಸನದಲ್ಲಿ ಕುಳಿತಿದ್ದಾನೆ. ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಪಾಶ, ಅಂಕುಶ, ಫಲ, ದಂತವನ್ನು ಹಿಡಿದುಕೊಂಡಿದ್ದಾನೆ. ಈ ದೇವನು ತನ್ನ ಉದರಕ್ಕೆ ಸರ್ಪವನ್ನು ಕಟ್ಟಿಕೊಂಡಿದ್ದಾನೆ. ಪಶ್ಚಿಮ ಸುಕನಾಸಿಯ ದ್ವಾರದ ಎಡಭಾಗದಲ್ಲಿ ಕೇಶವಮೂರ್ತಿಯನ್ನು ಇರಿಸಲಾಗಿದೆ. ಈ ದೇವನು ಸಮಭಂಗಿಯಲ್ಲಿ ನಿಂತಿದ್ದು, ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದು ನಿಂತಿದ್ದಾನೆ. ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಸುಂದರವಾಗಿವೆ. ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ನಿಂತಿರುವ ಶ್ರೀದೇವಿ ಮತ್ತು ಭೂದೇವಿಯರಿದ್ದಾರೆ. ಈ ದೇವನ ಎಡಭಾಗದಲ್ಲಿ ಸುಮಾರು ಎರಡು ಅಡಿ ಎತ್ತರವಿರುವ ನಾಗಶಿಲ್ಪವಿದೆ. ಇದರ ಎಡಭಾಗದಲ್ಲಿ ಪಂಚಲೋಹದಲ್ಲಿ ತಯಾರಿಸಲಾದ ಶಿವಲಿಂಗವಿದೆ. ಶಿವಲಿಂಗದ ಹಿಂದೆ ಸರ್ಪ ಮತ್ತು

ಪ್ರಭಾವಳಯನ್ನು ಮಾಡಿಸಿ ಇರಿಸಲಾಗಿದೆ. ಹಾಗೂ ನೈರುತ್ಯ ಮೂಲೆಯಲ್ಲಿ ಪಾಣಿಪೀಠದ ಮೇಲೆ ಕೂರಿಸಲಾಗಿರುವ ಮತ್ತೊಂದು ಶಿವಲಿಂಗವಿದೆ. ಉತ್ತರದ ಗೋಡೆಯ ಮುಂಭಾಗದಲ್ಲಿ ಸುಮಾರು ನಾಲ್ಕು ಅಡಿ ಎತ್ತರವಿರುವ ವೀರಭದ್ರನ ಶಿಲ್ಪವಿದೆ. ಈ ದೇವನು ನಾಲ್ಕು ಕೈಗಳನ್ನು ಹೊಂದಿದ್ದು, ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಬಿಕ್ಷಾಟನಾ ಪಾತ್ರೆ, ಇದರ ಕೆಳಗೆ ರುಂಡವಿದೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸರಳವಾಗಿದೆ.[174]

ದಕ್ಷಿಣ ಗೋಡೆಯ ಮುಂದೆ ಸುಮಾರು ಮೂರು ಅಡಿ ಎತ್ತರವಿರುವ ಗಣಪತಿಯನ್ನು ಇರಿಸಲಾಗಿದೆ. ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಪಾಶ, ಅಂಕುಶ, ಫಲ, ದಂತವನ್ನು ಹಿಡಿದುಕೊಂಡಿದ್ದಾನೆ. ಈ ದೇವನು ತನ್ನ ಉದರಕ್ಕೆ ಸರ್ಪವನ್ನು ಸುತ್ತಿಕೊಂಡಿದ್ದಾನೆ. ಇದರ ಪಕ್ಕದಲ್ಲಿ ಸುಮಾರು ನಾಲ್ಕು ಅಡಿ ಎತ್ತರವಿರುವ ನಾರಾಯಣನ ಶಿಲ್ಪವನ್ನು ಇರಿಸಲಾಗಿದೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದುಕೊಂಡಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಫಲ ಮತ್ತು ಪದ್ಮವನ್ನು ಹಿಡಿದು ಒಂಟಿ ಕಾಲಿನಲ್ಲಿ ನಿಂತಿರುವ ದೇವಿಯರಿದ್ದಾರೆ. ಉತ್ತರ ಗೋಡೆಯ ಮಧ್ಯದಲ್ಲಿ ಸೂರ್ಯದೇವನ ಶಿಲ್ಪವನ್ನು ಇರಿಸಲಾಗಿದೆ. ಸಮಭಂಗಿಯಲ್ಲಿ ನಿಂತಿರುವ ಈ ದೇವನು ತನ್ನ ಕೈಗಳಲ್ಲಿ ಕಮಲದ ಮೊಗ್ಗನ್ನು ಹಿಡಿದುಕೊಂಡಿದ್ದಾನೆ. ಈತನ ತಲೆಯ ಹಿಂಬದಿಯಲ್ಲಿ ಅರಳಿದ ಪುಷ್ಪದ ಕೆತ್ತನೆಯಿದೆ. ಇಕ್ಕೆಲಗಳಲ್ಲಿ ಫಲ ಮತ್ತು ಪುಷ್ಪಗಳನ್ನು ಹಿಡಿದು ನಿಂತಿರುವ ದೇವಿಯರಿದ್ದಾರೆ. ಈ ದೇವನ ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಈ ದೇವನ ಪೀಠದಲ್ಲಿ ಐದು ಕುದುರೆಗಳಿವೆ.

ನವರಂಗದ ದ್ವಾರವು ಸರಳವಾಗಿ ಇದರಲ್ಲಿ ಐದು ಪಟ್ಟಿಕೆಗಳಿದ್ದು, ಪಟ್ಟಿಕೆಗಳ ಮೇಲೆ ಯಾವುದೇ ಕೆತ್ತನೆ ಕಂಡುಬರುವುದಿಲ್ಲ. ಲಲಾಟಬಿಂಬದಲ್ಲಿ ಗಜಲಕ್ಷ್ಮೀಯನ್ನು ಬಿಡಿಸಲಾಗಿದೆ. ಬಾಗಿಲುವಾಡದಲ್ಲಿ ಹೊಯ್ಸಳ ಶೈಲಿಯ ಐದು ಚಿಕ್ಕ ಶಿಖರಗಳಿವೆ ಇಕ್ಕೆಲಗಳಲ್ಲಿ ದ್ವಾರಪಾಲಕರು ಕಣ್ಮರೆಯಾಗಿದ್ದಾರೆ.

ಶಿವನ ನವರಂಗದ ಮುಂದೆ ಮುಖಮಂಟಪವನ್ನು ಮಾಡಲಾಗಿದೆ. ಈ ಮುಖಮಂಟಪದಲ್ಲಿ ನಕ್ಷತ್ರಾಕಾರದ ನಾಲ್ಕು ಕಂಬಗಳಿವೆ ಈ ಕಂಬಗಳನ್ನು ಚೌಕ, ಬಳೆಗಳ ಅಲಂಕರಣ ಗಾಲಿ, ಘಂಟೆ, ಘಟಾ, ಗಾಲಿ ಪುಷ್ಪಬೋದಿಗೆ, ಫಲಗೈ, ಕಪೋತ ಇವುಗಳೆಲ್ಲವು ಸಹ ನಕ್ಷತ್ರಕಾರವಾಗಿ ರಚಿಸಲ್ಪಟ್ಟಿವೆ.

ಕಾಂಡದ ಭಾಗ ಮೂವತ್ತೆರಡು ಮೂಲೆಗಳಿಂದ ಕೂಡಿದೆ. ಇದರ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ. ಇದರಲ್ಲಿ ಕಮಲದ ಮೊಗ್ಗುಗಳು ಕೀರ್ತಿಮುಖ ಮತ್ತು

ದಿಕ್ಪಾಲಕರ ಶಿಲ್ಪಗಳನ್ನು ಬಿಡಿಸಲಾಗಿದೆ. ಮಧ್ಯದಲ್ಲಿ ಮೂರು ಸುತ್ತು ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ.

ನವರಂಗದ ಮಧ್ಯದಲ್ಲಿ ಶಿವನಿಗೆ ಎದುರಾಗಿ ಒಂದು ಸರಳವಾದ ಬಾಗಿಲನ್ನು ಮಾಡಲಾಗಿದೆ. ಈ ಬಾಗಿಲ ಮುಂದೆ ಸೋಪಾನಗಳಿವೆ. ನವರಂಗದಿಂದ ಸ್ವಲ್ಪ ಮುಂದಕ್ಕೆ ಅಂದರೆ ಹೊರಭಾಗದಲ್ಲಿ ಬೇರೆ ಪ್ರದೇಶಗಳಿಂದ ಸ್ಥಳಾಂತರಿಸಿ ತಂದ ಅಥವಾ ಮೂಲನಂದಿ ಭಿನ್ನವಾಗಿರುವುದರಿಂದ ಅದನ್ನು ಹೊರಬಾಗದಲ್ಲಿ ಶಿವನಿಗೆ ಎದುರಾಗಿ ಇರುವಂತೆ ಕಲ್ಲಿನ ದಿಮ್ಮಿಗಳನ್ನು ಜೋಡಿಸಿ ಅದರ ಮೇಲೆ ಕೂಡಿಸಲಾಗಿದೆ.

**ಅಧಿಷ್ಠಾನ:**-ಶಿವನ ದೇವಾಲಯದ ಅಧಿಷ್ಠಾನದಲ್ಲಿ ಎರಡು ಪಟ್ಟಿಕೆಗಳು ಮಾತ್ರ ಕಾಣಬರುತ್ತವೆ. ಇನ್ನುಳಿದ ಪಟ್ಟಿಕೆಗಳು ಭೂಮಿಯಲ್ಲಿ ಹೂತುಹೋಗಿವೆ.**(ಚಿ.ಸಂ.204)**

**ಭಿತ್ತಿ**:-ಭಿತ್ತಿಯನ್ನು ತೆಳುವಾದ ಜೋಡಿಅರೆಗಂಬಗಳನ್ನು ದೇವಾಲಯದ ಸುತ್ತಲೂ ಸೇರಿಸಿ ಅಲಂಕರಣಗೊಳಿಸಲಾಗಿದೆ. ಈ ಭಿತ್ತಿಯ ಉತ್ತರದ ನವರಂಗದ ಮಧ್ಯದಲ್ಲಿ ಒಂದು ಕೋಷ್ಠವಿದೆ. ಈ ಕೋಷ್ಠವನ್ನು ಎರಡು ಕಂಬಗಳ ಮೇಲೆ ಶಿಖರವನ್ನು ರಚನೆ ಮಾಡಲಾಗಿದೆ. ಮೂಲ ಭಿತ್ತಿಯು ಶಿಥಿಲಾವಾಗಿರುವುದರಿಂದ ಇದನ್ನು ಕಾಲ ನಂತರದಲ್ಲಿ ಪಶ್ಚಿಮ ಮತ್ತು ದಕ್ಷಿಣದ ಭಿತ್ತಿಯನ್ನು ಕಲ್ಲುಗಳನ್ನು ಜೋಡಿಸಿ ನಿರ್ಮಿಸಲಾಗಿದೆ. ಜೀರ್ಣೋದ್ಧಾರ ಮಾಡಲಾಗಿದೆ.**(ಚಿ.ಸಂ.205)**

**ಕಪೋತ:**-ಭಿತ್ತಿಯ ಮೇಲೆ ಇರುವ ಕಪೋತವು ಒಂದು ಅಡಿ ಮುಂಚಾಚಿದ್ದು, ಕಮಾನಿನಾಕಾರದಲ್ಲಿ ರಚಿಸಲಾಗಿದೆ. ಹೊರಭಾಗದ ಅಂಚಿನಲ್ಲಿ ದಂತದ ಅಲಂಕರಣ ಮಾಡಲಾಗಿದೆ. ಕಪೋತದ ಮೇಲೆ ದೇವಾಲಯದ ಸುತ್ತಲೂ ಶಿಲ್ಪಗಳನ್ನು ರಚಿಸಲು ಸಜ್ಜು ಮಾಡಿಕೊಂಡಿರುವ ಕಲ್ಲುಗಳಿವೆ. ಆದರೆ ಇವುಗಳಲ್ಲಿ ಯಾವುದೇ ರೀತಿಯ ಕೆತ್ತನೆಯನ್ನು ಮಾಡದೆ ಹಾಗೇ ಉಳಿಸಲಾಗಿದೆ. ಗರ್ಭಗೃಹ ಭಾಗವನ್ನು ಬಿಟ್ಟು ಅದರ ಮುಂದಿನ ಭಾಗದಲ್ಲಿ ಎರಡು ಎತ್ತರವಿರುವ ಕೈಪಿಡಿ ಗೋಡೆಗಳಿವೆ.

**ಶಿಖರ:**-ಗರ್ಭಗೃಹದ ಮೇಲೆ ನಿರ್ಮಿಸಲಾಗಿರುವ ಶಿಖರವು ಮೂಲತಃ ದೇವಾಲಯವನ್ನು ನಿರ್ಮಾಣ ಮಾಡಿದಾಗ ಕಟ್ಟಿಸಿರುವಂತಹ ಶಿಖರವಾಗಿದೆ. ಈ ಶಿಖರವು ನೋಡುವುದಕ್ಕೆ ಚೌಕಾಕಾರದ ಸ್ತೂಪಿಯಂತೆ ಕಂಡುಬರುತ್ತದೆ. ಈ ರೀತಿ ಇರುವಂತಹ ಶಿಖರವು ಹೊಯ್ಸಳರ ಕಾಲದಲ್ಲಿ ಕಂಡುಬರುವುದು. ಬಹಳ ವಿರಳ. ಆದ್ದರಿಂದ ಇದೊಂದು ವಿಶೇಷತೆಯಾಗಿದೆ. ಇದರ ಮೇಲೆ ಪದ್ಮಪುಷ್ಪದ ದಳಗಳು ಅದರ ಮೇಲೆ ಕಳಸ, ಕಳಸದ ಮೇಲೆ ಪಂಚಲೋಹದ

ಕಳಸವನ್ನು ಇರಿಸಲಾಗಿದೆ. ಈ ಶಿಖರದ ನಾಲ್ಕು ದಿಕ್ಕುಗಳಲ್ಲಿ ಬಿಡಿಸಲಾಗಿರುವ ನಂದಿಗಳಿವೆ. ಸ್ತೂಪಿಯ ನಾಲ್ಕು ದಿಕ್ಕುಗಳಲ್ಲಿ ಕೀರ್ತಿಮುಖಗಳಿವೆ. ಈ ಗರ್ಭಗೃಹದ ವಾಯುವ್ಯ ಮೂಲೆಯಲ್ಲಿ ಚಂಡಿಕೇಶ್ವರನ ಚಿಕ್ಕದೊಂದು ಗುಡಿ ಇದೆ. ಈ ಚಂಡಿಕೇಶ್ವರನು ಸುಮಾರು ನಾಲ್ಕು ಅಡಿ ಎತ್ತರವಿದ್ದು, ಸಮಭಂಗಿಯಲ್ಲಿ ನಿಂತಿದ್ದಾನೆ. ಈ ದೇವನು ದ್ವಿಭುಜವನ್ನು ಹೊಂದಿದ್ದು, ಎಡಗೈಯಲ್ಲಿ ಕಮಂಡಲ, ಬಲಗೈಯಲ್ಲಿ ಅಭಯಹಸ್ತ, ಮೈಮೇಲೆ ಬಿಡಿಸಿರುವ ವಸ್ತ್ರಾಭರಣ ಸುಂದರವಾಗಿದೆ. ಪ್ರಭಾವಳಿಯನ್ನು ಅರ್ಧವೃತ್ತಾಕಾರವಾಗಿ ರಚಿಸಿ ಇದರಲ್ಲಿ ಪದ್ಮಪುಷ್ಪದ ದಳ ಮೊಗ್ಗು ಮತ್ತು ಸುರುಳಿಯಾಕಾರವಾಗಿ ಮಾಡಿ ಮೇಲ್ಭಾಗದಲ್ಲಿ ಕಮಲ ಪುಷ್ಪದಂತೆ ಬಿಡಿಸಿ. ಕೆಳಭಾಗವನ್ನು ಕೀರ್ತಿಮುಖದಂತೆ ರಚಿಸಲಾಗಿದೆ. ಲಕ್ಷ್ಮೀಕಾಂತ ದೇವಾಲಯದ ಅಧಿಷ್ಠಾನ, ಭಿತ್ತಿ, ಕಪೋತ ಇವುಗಳೆಲ್ಲವು ವಿಜಯನಗರ ಶೈಲಿಯ ವಾಸ್ತು ಲಕ್ಷಣವಾಗಿದೆ.

ಲಕ್ಷ್ಮೀಕಾಂತ ದೇವಾಲಯದ ಗರ್ಭಗೃಹದ ಮೇಲೆ ಇತ್ತೀಚೆಗೆ ನಿರ್ಮಿಸಲಾಗಿರುವ ಇಟ್ಟಿಗೆ ಮತ್ತು ಗಾರೆಯ ಶಿಖರವಿದೆ. ಇದು ಮೂರು ತಲಗಳಿಂದ ಕೂಡಿದ್ದು, ಸಣ್ಣ ಸಣ್ಣ ಕಂಬಗಳ ಅಲಂಕರಣ ಮಾಡಲಾಗಿದೆ. ಮೇಲ್ಭಾಗದಲ್ಲಿ ಗರುಡ, ಆಂಜನೇಯ, ರಾಮ, ಸೀತೆ, ಲಕ್ಷ್ಮಣ, ವಾಲ್ಮೀಕಿ, ಕೃಷ್ಣ, ಶಿಲ್ಪ ಬಿಡಿಸಲಾಗಿದೆ. ಸ್ತೂಪಿಯು ಚೌಕಾಕಾರವಾಗಿದೆ. ಸ್ತೂಪಿಯ ಎರಡು ಮೂಲೆಗಳಲ್ಲಿ ಭದ್ರತೆಗೋಸ್ಕರವಾಗಿ ಆನಿಕೆಗಳನ್ನು ಜೋಡಿಸಲಾಗಿದೆ. ಸ್ತೂಪಿಯ ಮೇಲೆ ಪಂಚಲೋಹದ ಕಳಸವಿದೆ. ಈ ದೇವಾಲಯದ ಈಶಾನ್ಯ ಭಾಗದಲ್ಲಿ ಕಲ್ಲಿನ ತುಳಸಿ ಕಟ್ಟೆ ಇದೆ.

**ದ್ವಾರಮಂಟಪ:**-ಈ ದೇವಾಲಯಕ್ಕೆ ಮೂಲತಃ ಪ್ರಕಾರವಿದ್ದಂತೆ ಕಾಣಬರುತ್ತದೆ ಮತ್ತು ಈ ಪ್ರಕಾರವನ್ನು ಮತ್ತು ದ್ವಾರಮಂಟಪವನ್ನು ವಿಜಯನಗರದ ಕಾಲದಲ್ಲಿ ರಚಿಸಿದಂತೆ ಕಂಡುಬರುತ್ತದೆ. ಆದರೆ, ಈಗ ಪ್ರಾಕಾರ ಇಲ್ಲವಾಗಿದೆ. ಆದರೆ ದ್ವಾರಮಂಟಪ ಉಳಿದು ಬಂದಿದೆ. ದ್ವಾರಮಂಟಪದಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಜಗತಿ, ಜಗತಿಯ ಮೇಲೆ ಸಾಲಾಗಿ ನಿಲ್ಲಿಸಿರುವ ಚೌಕ, ಅಷ್ಟಮುಖದ ಕಣಶಿಲೆಯ ನಾಲ್ಕು ಕಂಬಗಳಿವೆ. ಈ ಕಂಬಗಳ ಮೇಲೆ ಸರಳವಾದ ಕಪೋತವಿದೆ. ಕಪೋತದ ಮೇಲೆ ಅಡ್ಡ ಪಟ್ಟಿಕೆಗಳನ್ನು ಹಾಕಿ ಅದರ ಮೇಲೆ ಕಲ್ಲು ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ. ಈ ದ್ವಾರಮಂಟಪದ ಕಂಬಗಳ ಮೇಲೆ ಕೈ ಮುಗಿದು ನಿಂತಿರುವ ಆಂಜನೇಯ ಶಿಲ್ಪಗಳನ್ನು ಮತ್ತು ಅರಳಿದ ಪದ್ಮಪುಷ್ಪಗಳನ್ನು ಕಂಬದ ಮೇಲೆ ರಚಿಸಲಾಗಿದೆ. ಈ ದ್ವಾರಮಂಟಪದ ಮುಂದೆ ಎರಡೂವರೆ ಅಡಿ ಎತ್ತರವಿರುವ ಚೌಕಾಕಾರದ ವೇದಿಕೆಯ ಮೇಲೆ ಬಲಿಪೀಠವನ್ನು ಇಡಲಾಗಿದೆ.**(ಚಿ.ಸಂ.206)**

**ಲಕ್ಷ್ಮೀನಾರಾಯಣ ದೇವಾಲಯ-ಹಂಪಾಪುರ**

ಹಂಪಾಪುರ ಗ್ರಾಮವು ಕೃಷ್ಣರಾಜನಗರದಿಂದ 5 ಕಿ.ಮೀ ದೂರದಲ್ಲಿ ಹಾಗೂ ಕಾವೇರಿ ದಂಡೆಯ ಮೇಲಿದೆ. ಈ ಗ್ರಾಮವು ಚಾರಿತ್ರಿಕವಾಗಿ ಸಂಪದ್ಭರಿತವಾಗಿದೆ. ಇಲ್ಲಿನ ಲಕ್ಷ್ಮೀನಾರಾಯಣ ದೇವಾಲಯವು ಏಕಕೂಟ ವೈಷ್ಣವ ದೇವಾಲಯವಾಗಿದ್ದು, ಪೂರ್ವಾಭಿಮುಖವಾಗಿದೆ.**(ಚಿ.ಸಂ.207)** ಈ ದೇವಾಲಯವು ಹೊಯ್ಸಳರ ಕಾಲದಾಗಿದ್ದು ದೇವಾಲಯವು ಗರ್ಭಗುಡಿ, ತೆರೆದ ಅಂತರಾಳ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಈ ಊರಿಗೆ ವ್ಯಾಘ್ರಪದ ಕ್ಷೇತ್ರವೆಂದು ಕರೆಯುತ್ತಾರೆ. ಹಾಗೂ ಈ ದೇವಾಲಯವನ್ನು ಕ್ರಿ.ಶ.13ನೇ ಶತಮಾನದಲ್ಲಿ ನಿರ್ಮಾಣ ಮಾಡಲಾಗಿದೆ. ಈ ದೇವಾಲಯವನ್ನು ಹೊಯ್ಸಳರ ಕೊನೆಯ ಆಳ್ವಿಕೆಯಲ್ಲಿ ನಿರ್ಮಾಣ ಮಾಡಲಾಗಿದೆ.[175]

**ಗರ್ಭಗೃಹ:-** ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಗರ್ಭಗುಡಿಯ ಮಧ್ಯಭಾಗದಲ್ಲಿ ನಾಲ್ಕು ಅಡಿ ಎತ್ತರದ ಲಕ್ಷ್ಮಿನಾರಾಯಣ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.208)** ಈ ಮೂರ್ತಿಯು ಚತುರ್ಭುಜಧಾರಿಯಾಗಿದ್ದು, ಶಂಖ, ಚಕ್ರ, ಗದೆ, ಪದ್ಮವನ್ನು ಹಿಡಿದಿದ್ದಾನೆ. ಈ ಮೂರ್ತಿಯ ಹಿಂಭಾಗದಲ್ಲಿ ಸುತ್ತಲು ಬಳ್ಳಿ ಸುರುಳಿಗಳ ಸೂಕ್ಷ್ಮ ಕೆತ್ತನೆ ಮಾಡಿದೆ. ಮೇಲ್ಛಾವಣಿಯಲ್ಲಿ ಮೂರು ಹಂತದ ತೆರೆದ ಕಮಲಾಕೃತಿಯ ಭುವನೇಶ್ವರಿಯನ್ನು ಕಾಣಬಹುದು.

**ಸುಕನಾಸಿ:-**ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಮೇಲ್ಛಾವಣಿಯಲ್ಲಿ ತೆರದ ಕಮಲಾಕೃತಿಯ ಭುವನೇಶ್ವರಿಯನ್ನು ಕಾಣಬಹುದು.

**ನವರಂಗ:-**ನವರಂಗವು 20X20 ಅಡಿ ಸುತ್ತಳತೆಯನ್ನು ಮಧ್ಯಭಾಗದಲ್ಲಿ ಹೊಯ್ಸಳ ಶೈಲಿಯ ವೃತ್ತಾಕಾರದ ನಾಲ್ಕು ಕಂಬಗಳು ಕಂಡುಬರುತ್ತವೆ. ಈ ಕಂಬಗಳ ಮಧ್ಯದಲ್ಲಿ ರಂಗಮಂಟಪವಿದ್ದು, ನವರಂಗದ ಮೇಲ್ಭಾಗದಲ್ಲಿ ತೆರೆದ ಕಮಲಾಕೃತಿಯ ಭುವನೇಶ್ವರಿಯು ಮೂರು ಪಟ್ಟಿಕಗಳಿಂದ ಕೂಡಿದೆ. ದೇವಾಲಯದ ಮುಂಭಾಗ ಸುಮಾರು 14 ಅಡಿ ಎತ್ತರದ ದೀಪಸ್ತಂಭವಿದೆ. ನವರಂಗ ದ್ವಾರವು ಸರಳವಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಕೆತ್ತನೆಯಿದ್ದು, ಇದರ ಇಕ್ಕೆಲಗಳಲ್ಲಿ ಗಜಗಳು ತಮ್ಮ ಸೊಂಡಿಲನ್ನು ಎತ್ತಿ ನಿಂತಿವೆ. ದೇವಾಲಯದ ಮುಂಭಾಗದಲ್ಲಿ ಸುಮಾರು 14 ಅಡಿ ಎತ್ತರದ ದೀಪಸ್ತಂಭವಿದೆ.**(ಚಿ.ಸಂ.209)**

**ಅಧಿಷ್ಠಾನ**:–ಹೊಯ್ಸಳ ಶೈಲಿಯ ಅಧಿಷ್ಠಾನವಾಗಿದ್ದು ಭಿತ್ತಿ ಸಾಧಾರಣವಾಗಿದೆ. ಶಿಖರವು ಪ್ರಸ್ತುತವಾಗಿ ಇಲ್ಲವಾಗಿದೆ. ದೇವಾಲಯದ ಭಿತ್ತಿಯಲ್ಲಿ ದ್ರಾವಿಡ ಶೈಲಿಯ ಅರೆಗಂಬಗಳು ಹಾಗೂ ದೇವಕೋಷ್ಟಗಳಿವೆ.

**ಗೋಪುರಮಂಟಪ:**–ಮಂಟಪಕ್ಕೆ ಹೊಯ್ಸಳ ಕಾಲದ ಸೋಪು ಕಲ್ಲಿನಿಂದ ನಿರ್ಮಾಣ ಮಾಡಿರುವ ಐದು ಅಡಿ ಎತ್ತರದ ವೃತ್ತಾಕಾರದ ನಾಲ್ಕು ಕಂಬಗಳಿದ್ದು, ಈ ಕಂಬಗಳು ಚತುರಸ್ರ, ಅಷ್ಟಶ್ರ, ಷೋಡಶ ಮುಖವನ್ನು ಹೊಂದಿದೆ. ಇದರ ಮೇಲ್ಭಾಗದಲ್ಲಿ ಆಧಾರ ಪೋತಿಕೆಯಿದೆ. ಇದರ ಇಕ್ಕೆಲಗಳಲ್ಲಿ ಕಕ್ಷಾಸನವಿದೆ.**(ಚಿ.ಸಂ.210)**

**ಯೋಗನರಸಿಂಹ ದೇವಾಲಯ–ಸಾಲಿಗ್ರಾಮ**

ಸಾಲಿಗ್ರಾಮವು ಕೃಷ್ಣರಾಜನಗರಕ್ಕೆ ಸೇರಿರುವ ಒಂದು ಗ್ರಾಮ ಮತ್ತು ಹೋಬಳಿಯ ಕೇಂದ್ರವಾಗಿದೆ. ಇದು ಕಸಬಾದಿಂದ ವಾಯುವ್ಯಕ್ಕೆ ಸುಮಾರು 28ಕಿ.ಮೀ. ದೂರದಲ್ಲಿದೆ. ಇದೊಂದು ಪ್ರಾಚೀನ ಕಾಲದಲ್ಲಿ ವೈಷ್ಣವ ಧರ್ಮೀಯರ ಪವಿತ್ರ ಸ್ಥಳವಾಗಿತ್ತೆಂದೂ, ರಾಮಾನುಜಾಚಾರ್ಯರು ಈ ಗ್ರಾಮದಲ್ಲಿ ಕೆಲಕಾಲ ನೆಲೆಸಿದ್ದರೆಂದು ಹೇಳಲಾಗಿದೆ. ಈ ಗ್ರಾಮದಲ್ಲಿ ಹೊಯ್ಸಳ ದೊರೆಗಳ ಆಳ್ವಿಕೆಯ ಕಾಲದಲ್ಲಿ ನಿರ್ಮಾಣ ಮಾಡಲಾದ ಕೆಲವು ದೇವಾಲಯಗಳಿವೆ. ಗಂಗರ ಕಾಲದಲ್ಲಿ ಈ ಗ್ರಾಮವು ಅವರ ರಾಜ್ಯದ ಒಂದು ಭಾಗವಾಗಿತ್ತೆಂದು ಹೇಳಲಾಗಿದೆ. ಈ ಗ್ರಾಮದಲ್ಲಿ ನಿರ್ಮಾಣ ಮಾಡಲಾಗಿರುವ ಯೋಗಾನರಸಿಂಹ ದೇವಾಲಯವಿದೆ.[176] ಇದೊಂದು ಏಕಕೂಟ ದೇವಾಲಯವಾಗಿದ್ದು, ಸಂಪೂರ್ಣವಾಗಿ ಕಣಶಿಲೆಯ ಕಲ್ಲನ್ನು ಬಳಸಿ ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಲಾಗಿದೆ.**(ಚಿ.ಸಂ.211)** ಇದರಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ. ಈ ದೇವಾಲಯವನ್ನು ನಿರ್ಮಾಣ ಮಾಡಿದ ಬಗ್ಗೆ ಯಾವುದೇ ರೀತಿಯ ಮೂಲ ಆಧಾರಗಳು ಕಂಡುಬರುವುದಿಲ್ಲ. ಇದರ ವಾಸ್ತು ಲಕ್ಷಣವನ್ನು ಗಮನಿಸಿದಾಗ ಇದನ್ನು ಹೊಯ್ಸಳರ ಕಾಲದಲ್ಲಿ ಕಟ್ಟಿರಬಹುದೆಂದು ನಂಬಲಾಗಿದೆ. ಮೂಲ ದೇವಾಲಯವು ಕಾಲಾನಂತರದಲ್ಲಿ ಶಿಥಿಲಾವಸ್ಥೆಯಲ್ಲಿದ್ದುದರಿಂದ ಈ ದೇವಾಲಯವು ಸಾಕಷ್ಟು ಬಾರಿ ಜೀರ್ಣೋದ್ಧಾರ ಮಾಡಿದಂತೆ ಕಾಣಬರುತ್ತದೆ. ಕ್ರಿ.ಶ.1674ರಲ್ಲಿ ಸ್ಥಳೀಯ ಪಾಳೇಗಾರನು ಇದನ್ನು ಜೀರ್ಣೋದ್ಧಾರ ಮಾಡಿದನೆಂದು ತಿಳಿದುಬರುತ್ತದೆ ತದನಂತರ ಈ ದೇವಾಲಯವನ್ನು ಕ್ರಿ.ಶ.2011ರಲ್ಲಿ ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯವರು ಈ ದೇವಾಲಯದ ಕೆಲವು ಭಾಗಗಳನ್ನು ಹೊರತೆಗೆದು ಮತ್ತು ಕ್ರಿ.ಶ.2013ರಲ್ಲಿ ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಿದ್ದಾರೆ.

**ಗರ್ಭಗೃಹ**:-ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಸರಳವಾಗಿರುವ ಈ ಗರ್ಭಗೃಹದ ಮಧ್ಯದಲ್ಲಿ ಒಂದು ಅಡಿ ಎತ್ತರವಿರುವ ಗರುಡ ಪೀಠದ ಮೇಲೆ ಸುಮಾರು ನಾಲ್ಕು ಅಡಿ ಎತ್ತರವಿರುವ ಯೋಗಾನರಸಿಂಹ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.212)** ಈ ದೇವನು ಯೋಗ ಮುದ್ರೆಯಲ್ಲಿ ಕುಳಿತಿದ್ದು ತನ್ನ ಎರಡೂ ಕೈಗಳನ್ನು ಮೊಣಕಾಲಿನ ಮೇಲೆ ನೀಳವಾಗಿ ಇರಿಸಿದ್ದಾನೆ. ನಯವಾದ ಕೆತ್ತನೆಯಿಂದ ಕೂಡಿರುವ ಈ ದೇವನ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣಗಳು ಸುಂದರವಾಗಿವೆ ಮತ್ತು ಹಿಂದಿನ ಎರಡು ಕೈಗಳಲ್ಲಿ ಶಂಖ, ಚಕ್ರವನ್ನು ಹಿಡಿದುಕೊಂಡಿದ್ದಾನೆ. ಈ ಮೂರ್ತಿಯ ಭಾಗದಲ್ಲಿ ಕಮಾನಿನಾಕೃತಿಯ ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ ಮತ್ತು ಮೇಲ್ಭಾಗದಲ್ಲಿ ಕೀರ್ತಿಮುಖವನ್ನು ಬಹಳ ಸುಂದರವಾಗಿ ಬಿಡಿಸಲಾಗಿದೆ. ಗರ್ಭಗೃಹದ ಮೇಲ್ಛಾವಣಿಯು ನಕ್ಷತ್ರಾಕಾರದ ಭುವನೇಶ್ವರಿಯನ್ನು ಹೊಂದಿದ್ದು, ಇದರ ಮಧ್ಯದಲ್ಲಿ ಅರಳಿದ ಪದ್ಮ ಪುಷ್ಪವನ್ನು ಬಿಡಿಸಲಾಗಿದೆ. ಗರ್ಭಗೃಹದಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಂಡುಬರದೆ ಸರಳವಾಗಿದೆ.

**ಸುಕನಾಸಿ**:-ಸುಕನಾಸಿಯು 6x6 ಅಗಲವನ್ನು ಹೊಂದಿದ್ದು, ಚೌಕಾಕಾರವಾಗಿದೆ. ಇದರಲ್ಲಿ ಉತ್ಸವಮೂರ್ತಿಯನ್ನು ಇಡಲಾಗಿದೆ. ಪಂಚಲೋಹದ ಈ ಮೂರ್ತಿ ಸುಮಾರು ಮೂರು ಅಡಿಗಳ ಎತ್ತರವಾಗಿದೆ. ಮಧ್ಯದಲ್ಲಿ ಕೇಶವ ಎಡ ಮತ್ತು ಬಲಭಾಗದಲ್ಲಿ ಶ್ರೀದೇವಿ ಭೂದೇವಿಯವರು ಕಮಲದ ಮೊಗ್ಗನ್ನು ಹಿಡಿದುನಿಂತಿದ್ದಾರೆ. ಕೇಶವನು ಚತುರ್ಭುಜ ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಅಭಯಹಸ್ತವನ್ನು ಹೊಂದಿದ್ದಾನೆ. ಸುಕನಾಸಿಯ ಮೇಲ್ಛಾವಣಿಯು ನಕ್ಷತ್ರಾಕಾರವಾಗಿದ್ದು, ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಸುಕನಾಸಿಯ ದ್ವಾರವು ಸರಳವಾಗಿದೆ. ಲಲಾಟಬಿಂಬದಲ್ಲಿ ಯಾವುದೇ ಮೂರ್ತಿ ಕಾಣಬರುವುದಿಲ್ಲ. ಇದರಲ್ಲಿರುವ ಪಟ್ಟಿಕೆಗಳ ಮೇಲೆ ಯಾವುದೇ ರೀತಿಯನ್ನು ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ. ಅದರ ದ್ವಾರದ ಎಡಬಲದಲ್ಲಿ ವೈಷ್ಣವ ದ್ವಾರಪಾಲಕರು ನಿಂತಿದ್ದಾರೆ. **(ಚಿ.ಸಂ.213)**

**ನವರಂಗ**:-ನವರಂಗವು ಸುಮಾರು ಸುಮಾರು 25X15 ಅಡಿಗಳ ಉದ್ದ ಮತ್ತು ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ಕಣಶಿಲೆಯಲ್ಲಿ ನಿರ್ಮಾಣ ಮಾಡಲಾಗಿರುವ ವೃತ್ತಾಕಾರದ ನಾಲ್ಕು ಪ್ರಧಾನ ಕಂಬಗಳಿವೆ. ಈ ಕಂಬಗಳು ಆರು ಅಡಿ ಎತ್ತರವಿದ್ದು, ಇವುಗಳನ್ನು ತಿರುಗಣೆಯಂತ್ರದಲ್ಲಿ ತಯಾರಿಸದೆ ಉಳಿಯಿಂದ ಕೆತ್ತನೆ ಮಾಡಲಾಗಿದೆ. ಇವುಗಳನ್ನು ಉಪಪೀಠದ ಮೇಲೆ ನಿಲ್ಲಿಸಲಾಗಿದೆ. ಇವುಗಳ ಮಧ್ಯದ ಭಾಗವು ಚೌಕ, ಸಿಲಿಂಡರಿನಾಕಾರ, ಗಾಲಿಯಾಕಾರದ ಬೋದಿಗೆ ವೃತ್ತಾಕಾರದ ಮೇಲೆ ಚೌಕಾಕಾರದ

ಫಲಗೈ ಅದರ ಮೇಲೆ ಸರಳವಾದ ಕಪೋತವಿದೆ. ಇಲ್ಲಿರುವ ನವರಂಗದ ಎಲ್ಲಾ ಕಂಬಗಳು ಹೊಳೆನರಸೀಪುರದ ದೇವಾಲಯದ ಹಾಗೂ ತೊಣ್ಣೂರಿನ ದೇವಾಲಯಗಳ ಮಾದರಿಯಲ್ಲಿದೆ.[177] ನವರಂಗದ ಮೇಲ್ಛಾವಣಿಯಲ್ಲಿ ವಿವಿಧಾಕಾರದಲ್ಲಿ ರಚಿಸಲಾಗಿರುವ 9 ಭುವನೇಶ್ವರಿಗಳಿವೆ. ಇವುಗಳನ್ನು ಸರಳವಾದ ನಕ್ಷತ್ರಾಕಾರ, ಚೌಕಾಕಾರ ವೃತ್ತಾಕಾರವಾಗಿ ರಚಿಸಿ ಮಧ್ಯದಲ್ಲಿ ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ನವರಂಗದ ದಕ್ಷಿಣದಲ್ಲಿ ಒಂದು ಚೌಕಾಕಾರದ ಕೋಣೆಯಲ್ಲಿ ಲಕ್ಷ್ಮಿದೇವಿಯನ್ನು ಇರಿಸಲಾಗಿದೆ. ಈ ದೇವಿಯು ಸುಮಾರು ಎರಡೂವರೆ ಅಡಿ ಎತ್ತರವಾಗಿದ್ದು, ಚತುರ್ಭುಜ ಹೊಂದಿದ್ದಾಳೆ. ಕೈಗಳಲ್ಲಿ ಶಂಖ, ಚಕ್ರ, ಅಭಯಹಸ್ತ ಮತ್ತು ವರದ ಹಸ್ತವನ್ನು ಹೊಂದಿದ್ದಾಳೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಇದೇ ನವರಂಗದ ಉತ್ತರದಲ್ಲಿ ಗೋಡೆಯ ಮುಂದೆ ಸುಮಾರು ಮೂರು ಅಡಿ ಎತ್ತರವಿರುವ ವಿಷ್ಣುವನ್ನು ಇರಿಸಲಾಗಿದೆ. ಈ ದೇವನು ಸಮಭಂಗಿಯಲ್ಲಿ ನಿಂತಿದ್ದು, ಚತುರ್ಭುಜವನ್ನು ಹೊಂದಿದ್ದಾನೆ. ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮ ಹಿಡಿದುಕೊಂಡಿದ್ದಾನೆ. ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿವೆ.

ಇದೇ ನವರಂಗದ ದಕ್ಷಿಣ ಅಂದರೆ ಆಗ್ನೇಯ ಮೂಲೆಯಿಂದ ಸ್ವಲ್ಪ ದಕ್ಷಿಣದಲ್ಲಿ ರಾಮಾನುಜಾಚಾರ್ಯರ ಶಿಲ್ಪ ಮತ್ತು ನಮ್ಮಾಳ್ವರರುಗಳ ಹನ್ನೊಂದು ಶಿಲ್ಪಗಳನ್ನು ಇರಿಸಲಾಗಿದೆ. ಇವರೆಲ್ಲರೂ ಕೈಮುಗಿದು ಪದ್ಮಾಸನದಲ್ಲಿ ಕುಳಿತಿರುವಂತೆ ರಚಿಸಿ ಪ್ರತಿಷ್ಠಾಪಿಸಲಾಗಿದೆ. ನವರಂಗದ ದ್ವಾರವು ಸರಳವಾಗಿದೆ. ಇದರಲ್ಲಿರುವ ಪಟ್ಟಿಕೆಗಳ ಮೇಲೆ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಾಣಬರುವುದಿಲ್ಲ. ನವರಂಗದ ದ್ವಾರದ ಇಕ್ಕೆಲಗಳಲ್ಲಿ ಜಯ-ವಿಜಯ ದ್ವಾರಪಾಲಕರ ಶಿಲ್ಪಗಳನ್ನು ಕಾಣಬಹುದು.

**ಮುಖಮಂಟಪ**:-ಈ ಮುಖಮಂಟಪದಲ್ಲಿ ಆರು ಅಡಿ ಎತ್ತರದ ನಾಲ್ಕು ಕಂಬಗಳಿದ್ದು, ಈ ಕಂಬಗಳನ್ನು ಮೂರು ಅಡಿ ಎತ್ತರವಿರುವ ಚೌಕಾಕಾರದ ವೇದಿಕೆಯ ಮೇಲೆ ನಿಲ್ಲಿಸಲಾಗಿದೆ. ಮುಖಮಂಟಪದ ಮೇಲ್ಛಾವಣಿಗೆ ಕಲ್ಲು ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ. ಈ ಮುಖಮಂಟಪಕ್ಕೆ ಉತ್ತರ ಮತ್ತು ದಕ್ಷಿಣದಲ್ಲಿ ಸೋಪಾನಗಳನ್ನು ಮಾಡಲಾಗಿದೆ. ಮುಖಮಂಟಪದ ಮುಂಭಾಗದಲ್ಲಿ 30 ಅಡಿ ಎತ್ತರವಿರುವ ಗರುಡಗಂಬವನ್ನು ಇತ್ತೀಚೆಗೆ ನಿರ್ಮಿಸಿಲಾಗಿದೆ. ಈ ಮಂಟಪದ ಇಕ್ಕೆಲಗಳಲ್ಲಿ ಕಕ್ಷಾಸನವಿದೆ.[178]

**ಅಧಿಷ್ಠಾನ**:-ಅಧಿಷ್ಠಾನವು 3.5 ಅಡಿ ಎತ್ತರವಿದ್ದು, ಉಪಾನ, ಜಗತಿ, ತ್ರಿಪಟ್ಟಕುಮುದ, ಕಂಟದ ಭಾಗಗಳನ್ನು ಹೊಂದಿದೆ. ಅಧಿಷ್ಠಾನದಲ್ಲಿ ನಾಲ್ಕು ಪಟ್ಟಿಕೆಗಳಿವೆ. ಈ ಪಟ್ಟಿಕೆಗಳು ಗರ್ಭಗೃಹದಲ್ಲಿ

ಮಾತ್ರ ಕಂಡುಬರುತ್ತವೆ. ಉಳಿದಂತೆ ನವರಂಗ ಮುಖಮಂಟಪದಲ್ಲಿ ಈ ಪಟ್ಟಿಕೆಗಳು ಕಾಣಬರುವುದಿಲ್ಲ. ಗರ್ಭಗೃಹದ ಅಧಿಷ್ಠಾನ ಹೊಯ್ಸಳರ ಶೈಲಿಯದ್ದಾಗಿದೆ.

**ಭಿತ್ತಿ**:-ಅಧಿಷ್ಠಾನದ ಮೇಲೆ ನಿರ್ಮಾಣ ಮಾಡಲಾಗಿರುವ ಭಿತ್ತಿಯನ್ನು ನವರಂಗ ಮತ್ತು ಮುಖಮಂಟಪದಲ್ಲಿ ಕಲ್ಲಿನ ದಿಮ್ಮಿಗಳನ್ನು ಒಂದರ ಮೇಲೊಂದರಂತೆ ಇಟ್ಟು ನಿರ್ಮಾಣ ಮಾಡಲಾಗಿದೆ. ಆದರೆ ಗರ್ಭಗೃಹ ಮತ್ತು ಸುಕನಾಸಿಯ ಭಿತ್ತಿಯು ಸ್ವಲ್ಪ ಮಟ್ಟಿಗೆ ಮೂಲ ಸ್ವರೂಪ ಉಳಿಸಿಕೊಂಡಿದೆ. ಈ ಭಿತ್ತಿಯಲ್ಲಿ ತೆಳುವಾದ ಅರೆಗಂಬಗಳಲ್ಲಿ ಅಲಂಕರಣ ಉತ್ತರ ದಕ್ಷಿಣ ಪಟ್ಟಿಕೆಗಳ ಭಾಗದಲ್ಲಿ ಕೋಷ್ಠಗಳಿವೆ. ಇಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಾಣಬರುವುದಿಲ್ಲ. ಭಿತ್ತಿಯ ಮೇಲಿರುವ ಕಪೋತ ಸುಮಾರು 2 ಅಡಿ ಮುಂಚಾಚಿದ್ದು ಕಮಾನಿನಾಕಾರವನ್ನು ಹೊಂದಿದೆ. ಇದರ ಅಂಚಿನ ಭಾಗದಲ್ಲಿದಂತಹ ರೀತಿ ಕೆತ್ತನೆ ಮಾಡಲಾಗಿದೆ. ಕಪೋತದ ಮೇಲಿರುವ ಹಾರದ ಭಾಗದ ಸುತ್ತಲೂ ಇತ್ತೀಚೆಗೆ ಇಟ್ಟಿಗೆ ಮತ್ತು ಗಾರೆ ಉಪಯೋಗಿಸಿ ಕೈಪಿಡಿ ಗೋಡೆಯನ್ನು ನಿರ್ಮಾಣ ಮಾಡಲಾಗಿದೆ.

**ಶಿಖರ**:-ಶಿಖರವು 15 ಅಡಿ ಎತ್ತರವಿದ್ದು, ಇದು ವಿಜಯನಗರ ಅರಸರ ನಿರ್ಮಾಣವಾಗಿದೆ. ಶಿಖರದ ಮುಂಭಾಗದಲ್ಲಿ ಮುಂಚಾಚಿರುವ ಸುಕನಾಸವಿದೆ. ಗರ್ಭಗೃಹದ ಮೇಲಿದ್ದ ಮೂಲ ಶಿಖರವು ಪ್ರಕೃತಿ ವಿಕೋಪಕ್ಕೆ ತುತ್ತಾಗಿರುವುದರಿಂದ ಇತ್ತೀಚೆಗೆ ಇಟ್ಟಿಗೆ ಮತ್ತು ಸಿಮೆಂಟ್ ಉಪಯೋಗಿಸಿ ನಿರ್ಮಿಸಲಾಗಿರುವ ಶಿಖರವಿದೆ. ಇದರ ನಾಲ್ಕು ದಿಕ್ಕುಗಳಲ್ಲಿ ಕೋಷ್ಠಗಳನ್ನು ಮಾಡಿ ಕೋಷ್ಠದ ಒಳಗೆ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಶಿಲ್ಪಗಳನ್ನು ಇರಿಸಲಾಗಿದೆ. ಸ್ತೂಪದ ಭಾಗ ಗುಮ್ಮಟಾಕಾರವಾಗಿದ್ದು, ಇದರ ನಾಲ್ಕು ದಿಕ್ಕುಗಳಲ್ಲಿ ಕೀರ್ತಿಮುಖವನ್ನು ರಚನೆ ಮಾಡಲಾಗಿದ್ದು, ಮೇಲೆ ಪಂಚಲೋಹದ ಕಳಸ ಇರಿಸಲಾಗಿದೆ.

**ಪ್ರಾಕಾರ**:-ಈ ದೇವಾಲಯದ ಸುತ್ತಲೂ ಸುಮಾರು 15 ಅಡಿ ಎತ್ತರವಿರುವ ಕಲ್ಲಿನ ಪ್ರಕಾರವನ್ನು ಮಾಡಲಾಗಿದೆ. ಇದರ ವಾಸ್ತು ಲಕ್ಷಣವನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಿಜಯನಗರ ಅರಸರು ಈ ಪ್ರಾಕಾರವನ್ನು ಮಾಡಿಸಿದಂತೆ ಕಂಡುಬರುತ್ತದೆ. ಇದರ ಒಳಭಾಗದಲ್ಲಿ ಸುತ್ತಲೂ ಕೈಸಾಲೆಯನ್ನು ಮಾಡಲಾಗಿದೆ. ಈ ಕೈಸಾಲೆಯನ್ನು ಮೂರು ಅಡಿ ಎತ್ತರವಿರುವ ಕಲ್ಲಿನ ವೇದಿಕೆಯ ಮೇಲೆ ಕಂಬಗಳನ್ನು ನಿಲ್ಲಿಸಿ ರಚಿಸಲಾಗಿದೆ. ಈ ಕಂಬಗಳ ಮೇಲೆ ಇಳಿಜಾರಾದ ಮೇಲ್ಛಾವಣಿಯನ್ನು ಮಾಡಲಾಗಿದೆ.**(ಚಿ.ಸಂ.214)**

ಈ ಪ್ರಾಕಾರದ ದಕ್ಷಿಣದ ಭಾಗದಲ್ಲಿ ಈ ದೇವಾಲಯದ ಮೂಲ ವಿಗ್ರಹವಾದ ಯೋಗಾನರಸಿಂಹ ಮೂರ್ತಿಯ ಗರ್ಭಗೃಹದಿಂದ ಬೇರ್ಪಡಿಸಿ ತಂದಿರಿಸಲಾಗಿದೆ. ಇದಕ್ಕೆ ಕಾರಣ ತಿಳಿದಿಲ್ಲ. ಈ ನರಸಿಂಹದೇವನು ಸುಮಾರು ಎರಡು ಅಡಿ ಎತ್ತರವಿರುವ ಗರುಡ ಪೀಠದ

ಮೇಲೆ ಯೋಗ ಮುದ್ರೆಯಲ್ಲಿ ಕುಳಿತಿದ್ದಾನೆ. ಚತುರ್ಭುಜ ಹೊಂದಿರುವ ಈ ದೇವನು ಕೈಗಳಲ್ಲಿ ಶಂಖ, ಚಕ್ರ, ಇನ್ನೆರಡು ಕೈಗಳಲ್ಲಿ ಮೊಣಕಾಲಿನ ಮೇಲೆ ನೀಳವಾಗಿರಿಸಿದ್ದಾನೆ. ಈ ದೇವನ ಇಕ್ಕೆಲಗಳಲ್ಲಿ ಕಮಲದ ಮೊಗ್ಗು ಹಿಡಿದು ನಿಂತಿರುವ ದೇವಿಯರಿದ್ದಾರೆ. ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖವಿದೆ. ಕೀರ್ತಿಮುಖದ ಬಾಯಲ್ಲಿ ಹೊರಟಿರುವ ಹಾರವು ನರಸಿಂಹ ದೇವನ ಕಿರೀಟಕ್ಕೆ ತಾಕಿದಂತೆ ಇದೆ. ಇದೇ ಪ್ರಾಕಾರದ ಈಶಾನ್ಯ ಮೂಲೆಯಲ್ಲಿ ಅಮ್ಮನವರನ್ನು ಒಂದು ಕೋಣೆಯಲ್ಲಿಟ್ಟು ಪ್ರತಿಷ್ಠಾಪಿಸಲಾಗಿದೆ. ಈ ದೇವಿಯು ಸುಖಾಸನದಲ್ಲಿ ಕುಳಿತಿದ್ದಾಳೆ. ಚತುರ್ಭುಜ ಹೊಂದಿರುವ ಈ ದೇವಿಯು ಶಂಖ, ಚಕ್ರ, ವರದಹಸ್ತ, ಅಭಯಹಸ್ತ ಹೊಂದಿದ್ದಾಳೆ. ಈ ದೇವಿಯ ಮೈಮೇಲೆ ಬಿಡಿಸಲಾಗಿರುವ ವಸ್ತ್ರಾಭರಣ ಸುಂದರವಾಗಿದೆ. ಪ್ರಭಾವಳಿಯನ್ನು ಪಂಚಲೋಹದಲ್ಲಿ ಮಾಡಿಸಿ ಇತ್ತೀಚೆಗೆ ಇರಿಸಿದ್ದಾರೆ. ಈ ದೇವಾಲಯದ ಮುಂಭಾಗದಲ್ಲಿ ನಿಲ್ಲಿಸಲಾಗಿರುವ ಸುಮಾರು 45 ಅಡಿ ಎತ್ತರವಿರುವ ಗರುಡಗಂಬವಿದೆ. ಇದನ್ನು ಚೌಕಾಕಾರದ ವೇದಿಕೆಯ ಮೇಲೆ ನಿಲ್ಲಿಸಲಾಗಿದೆ. ಪೀಠದ ಭಾಗವು ಚೌಕಾಕಾರವಾಗಿದ್ದು, ಮೇಲೆ ಹೋದಂತೆ ಅಷ್ಟಮುಖ ಹೊಂದಿ ಚಿಕ್ಕದಾಗುತ್ತಾ ಮೇಲೆ ಹೋಗಿದೆ. ಮೇಲೆ ಚೌಕಾಕಾರದ ಫಲಗೈ ಇದೆ. ಈ ಗರುಡಗಂಬದ ಮುಂದೆ ಸುಮಾರು 4 ಅಡಿ ಎತ್ತರವಿರುವ ಬಲಿಪೀಠವನ್ನು ಇರಿಸಲಾಗಿದೆ.

**ರಾಮಾನುಜಚಾರ್ಯರ ಗುಡಿ – ಸಾಲಿಗ್ರಾಮ**

ಯೋಗಾನರಸಿಂಹಸ್ವಾಮಿ ದೇವಾಲಯಕ್ಕೆ ಸ್ವಲ್ಪ ದೂರಕ್ಕೆ ಕಾಲುವೆಯ ದಡದಲ್ಲಿ ಭಾಸ್ಕರ ರಾಮಾನುಜಚಾರ್ಯರ ದೇವಾಲಯವನ್ನು ಒಂದು ದೊಡ್ಡ ಪ್ರಾಕಾರದಲ್ಲಿ ನಿರ್ಮಿಸಲಾಗಿದೆ. ಇದು ಏಕಕೂಟ ವೈಷ್ಣವ ದೇವಾಲಯವಾಗಿದ್ದು, ಇದನ್ನು ರಾಮಾನುಜಚಾರ್ಯರು ಸಾಲಿಗ್ರಾಮಕ್ಕೆ ಸಂದರ್ಶನ ನೀಡಿದ ಜ್ಞಾಪಕಾರ್ಥಕವಾಗಿ ಕಟ್ಟಲಾಗಿದೆ.**(ಚಿ.ಸಂ.215)** ಇದರ ಕಟ್ಟಡದ ರಚನೆ ತುಂಬ ಸರಳವಾಗಿದೆ. ಗರ್ಭಗುಡಿ, ಅರ್ಧಮಂಟಪ ಹಾಗೂ ಎರಡು ನವರಂಗಗಳಿಂದ ಕೂಡಿದೆ. ಗೋಲಾಕಾರದ ಗ್ರಾನೈಟ್ ಕಲ್ಲುಕಂಬಗಳಿವೆ. ಗರ್ಭಗೃಹದಲ್ಲಿ ಪಾದಪೀಠದಲ್ಲಿ(ವೇದಿ) ನಿರ್ಮಿಸಿ ಅದರ ಸುತ್ತ ರಾಮಾನುಜರ ಎಂಟು ಜನ ಶಿಷ್ಯರ ಮೂರ್ತಿಗಳನ್ನು ಬಿಡಿಸಲಾಗಿದೆ. ಪಾದ ಪೀಠದ ಮೇಲೆ ರಾಮಾನುಜರ ಪಾದಗಳನ್ನು ಕೆತ್ತಲಾಗಿದೆ. ಇದರ ಎದುರು ಒಂದು ಸಣ್ಣ ಕೊಳವಿದೆ. ಅದನ್ನು 'ಶ್ರೀಪಾದತೀರ್ಥ'ವೆಂದು ಕರೆಯುತ್ತಾರೆ. ಈ ತೀರ್ಥದ ನೀರನ್ನು ಅಭಿಷೇಕಕ್ಕೆ ಉಪಯೋಗಿಸುತ್ತಾರೆ.[179]

**ಗರ್ಭಗೃಹ:**–ಗರ್ಭಗೃಹವು ಸುಮಾರು 6x6 ಉದ್ದ ಅಗಲವನ್ನು ಹೊಂದಿದ್ದು, ಪಾದಪೀಠವನ್ನು ನಿರ್ಮಿಸಿ, ರಾಮಾನುಜಚಾರ್ಯರ ಪಾದಗಳನ್ನು ಕೆತ್ತನೆ ಮಾಡಿ ಅದರ ಸುತ್ತಲೂ ಇವರ

ಶಿಷ್ಯಂದಿರಾದ ಎಂಟು ಜನರ ಮೂರ್ತಿಯನ್ನು ಬಿಡಿಸಲಾಗಿದೆ. ಇದಕ್ಕೆ ಪೂಜೆಯನ್ನು ಪ್ರತಿದಿನವು ನೆರವೇರಿಸುತ್ತಾರೆ. ಗರ್ಭಗೃಹದ ಒಳಭಾಗದಲ್ಲಿ ಗೋಡೆಯ ಸುತ್ತಲೂ ವೈಷ್ಣವ ಧರ್ಮದ ಚಿಹ್ನೆಗಳನ್ನು ಕಾಣಬಹುದು. ಮೇಲ್ಛಾವಣಿಯಲ್ಲಿ ಭುವನೇಶ್ವರಿಯನ್ನು ಕಾಣಬಹುದು. ಭುವನೇಶ್ವರಿ ಸುಂದರವಾಗಿದ್ದು, ಹೂ ಅರಳಿದ ರೀತಿಯಲ್ಲಿ ಕೆತ್ತನೆಯಾಗಿದೆ. ಇಲ್ಲಿ ದೇವ ಮೂರ್ತಿ ಬದಲಿಗೆ ಪಾದಗಳನ್ನು ದೇವರೆಂದು ಪೂಜಿಸುತ್ತಾರೆ.

**ಸುಕನಾಸಿ**:-ಸುಕನಾಸಿಯ ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಸುಕನಾಸಿಯಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಾಣಬರುವುದಿಲ್ಲ. ಮೇಲ್ಛಾವಣಿಯಲ್ಲಿ ತೆರೆದ ಭುವನೇಶ್ವರಿಯನ್ನು ಕಾಣಬಹುದು. ಈ ಸುಕನಾಸಿಯಲ್ಲಿ ಒಂದು ಶಾಸನವಿದ್ದು, ಈ ಶಾಸನವು ತೆಲುಗು ಚಿತ್ರಗಳು ಇವೆ. ಬಹುಶಃ ಹೊಳೆನರಸೀಪುರದ ವೆಂಕಟನಾಯಕ ಇರಬಹುದು.

**ನವರಂಗ**:-ನವರಂಗದಲ್ಲಿ ನಾಲ್ಕು ಕಂಬಗಳಿದ್ದು, ಅತಿ ಸರಳ ಕೆತ್ತನೆಯಿಂದ ಕೂಡಿವೆ. ನವರಂಗದ ಭುವನೇಶ್ವರಿಯು ಅತಿಯಾದ ಅಂದರೆ ಹೆಚ್ಚಿನ ಪ್ರಮಾಣದಲ್ಲಿ ಅಲಂಕೃತವಾಗಿ ಕಂಡುಬರುವುದಿಲ್ಲ. ಇಲ್ಲಿಯು ಸಹ ಜಾಲಾಂಧ್ರಗಳನ್ನು ಕಾಣಬಹುದು. ಈ ಕಂಬಗಳು ಸುರುಳಿ ರೀತಿಯ ಕೆತ್ತನೆಯಿಂದ ಕೂಡಿದೆ ಜೊತೆಗೆ ಬಾಗಿಲ ಮೇಲೆ ಶಾಸನವನ್ನು ನೋಡಬಹುದು.

**ಮುಖಮಂಟಪ**:-ಮುಖಮಂಟಪವು 12 ಕಂಬಗಳನ್ನು ಹೊಂದಿದ್ದು, ಬಹಳ ಸುಂದರವಾಗಿ ಕಾಣುತ್ತದೆ. ಇದರಲ್ಲಿ ಜಾಲಾಂಧ್ರಗಳನ್ನು ಬೆಳಕಿಗಾಗಿ ಅಳವಡಿಸಲಾಗಿದೆ. ಇದರಲ್ಲಿ ಕಂಬಗಳು ಮುಖ್ಯವಾಗಿದ್ದು, ಇವು ಸರಳ ಅಲಂಕಾರಿಕ ಕೆತ್ತನೆಯಿಂದ ಕೂಡಿದೆ. ಇದರಲ್ಲಿ ಕಂಡುಬರುವ ಬಾಗಿಲುವಾಡಗಳು ಸಹ ಸರಳವಾಗಿದ್ದು ಯಾವುದೇ ಶಿಲ್ಪ ಕಲೆಗಳು ಕಂಡುಬಂದಿಲ್ಲ.

ದೇವಾಲಯದ ಬಾಗಿಲ ತೋಲೆಯ ಮೇಲೆ ಕ್ರಿ.ಶ.12ನೇ ಶತಮಾನದ ಶಾಸನವಿದ್ದು, (51ನೇ ಶಾಸನ) ಸಾಲಿಗ್ರಾಮದ ಶ್ರೀವೈಷ್ಣವರಿಗೆ ಎಂಬಾರ, ಅಲಾನ ಮತ್ತು ಆಚನ ಎಂಬ ಸ್ಥಳೀಯ ಅಧಿಕಾರಿಗಳು ವಿಶೇಷ ಸೌಲಭ್ಯವನ್ನು ಶ್ರೀರಂಗಮಠದಲ್ಲಿ ನೀಡಿದ ಬಗ್ಗೆ ಉಲ್ಲೇಖವಿದೆ ಹಾಗೂ ಶಾಸನ 50ರಲ್ಲಿ ವೀರ ರಾಮರಾಯದೇವನ ಕಾಲದಲ್ಲಿ ರಾಮಾನುಜಚಾರ್ಯರ ದೇವಾಲಯಕ್ಕೆ ದತ್ತಿ ಕೊಟ್ಟಿರುವ ಬಗ್ಗೆ ಉಲ್ಲೇಖವಿದೆ.

ಈ ದೇವಾಲಯವು ತಳವಿನ್ಯಾಸವನ್ನು ಹೊಂದಿದ್ದು ವಿಶಾಲವಾದ ಪ್ರದೇಶದಲ್ಲಿ ಕಂಡುಬರುತ್ತದೆ. ದೇವಾಲಯದ ಶಿಖರವು ತುಂಬಾ ಆಕರ್ಷಕವಾಗಿದ್ದು ವೇಸರ ಶೈಲಿಯಿಂದ ಕೂಡಿದೆ. ಇದರಲ್ಲಿ ವೈಷ್ಣವ ಧರ್ಮದ ಚಿನ್ಹೆಗಳು ಮತ್ತು ವಿಷ್ಣುವಿನ ಶಿಲ್ಪಗಳನ್ನು ಕಾಣಬಹುದು.

ವಿಮಾನ 18 ಅಡಿ ಎತ್ತರವಾಗಿದ್ದು, ಗರ್ಭಗುಡಿಯ ಕೆಳಭಾಗದಿಂದ ಶಿಖರದ ತುದಿಯವರೆಗೆ ಸರಳವಾಗಿದ್ದು, ಆಕರ್ಷಕವಾಗಿ ಕಾಣುತ್ತದೆ.**(ಚಿ.ಸಂ.216)**

**ಪ್ರಾಕಾರ**:–ದೇವಾಲಯದ ಹೊರಭಾಗವಾದ ಪ್ರಾಕಾರದಲ್ಲಿ ರಾಮಾನುಜಚಾರ್ಯರ ಶಿಷ್ಯರ ಮೂರ್ತಿಗಳಿರುವ ಗುಡಿಗಳನ್ನು ಕಾಣಬಹುದು. ಪ್ರಾಕಾರದ ಗೋಡೆಗಳ ಮೇಲೆ ಕುದುರೆ, ಮತ್ಸ್ಯ, ಹೂ ಬಳ್ಳಿ ಚಿತ್ರಗಳನ್ನು ಕಾಣಬಹುದು. ಇದರ ಒಳಭಾಗದಲ್ಲಿಯೇ ಒಂದು ಕೊಳವಿದ್ದು ಅದಕ್ಕೆ 'ಶ್ರೀಪಾದತೀರ್ಥ'ವೆಂದು ಕರೆಯುತ್ತಾರೆ.[180] ಇದು ದೇವಾಲಯದ ಎದುರಿಗೆ ಕಂಡುಬರುತ್ತದೆ. ಇದು ಆಳವಾಗಿದ್ದು ಸದಾ ನೀರು ತುಂಬಿರುತ್ತದೆ. ಈ ಕೊಳದ ನೀರನ್ನು ಅಭಿಷೇಕಕ್ಕೆ ಮಾತ್ರ ಉಪಯೋಗಿಸುತ್ತಾರೆ ಈ ದೇವಾಲಯದ ಸುತ್ತಲೂ ಮರಳಿರುವುದರಿಂದ ತುಂಬಾ ಸುಂದರವಾಗಿ ಕಾಣುತ್ತದೆ.

**ಚೆನ್ನಕೇಶವ ದೇವಾಲಯ–ಪಿರಿಯಾಪಟ್ಟಣ**

ಈ ದೇವಾಲಯವು ಪಿರಿಯಾಪಟ್ಟಣದ ಕೇಂದ್ರ ಭಾಗದಿಂದ 2ಕಿ.ಮೀ. ದೂರದಲ್ಲಿ ಪಶ್ಚಿಮ ಭಾಗದಲ್ಲಿದೆ. ಇದನ್ನು ಪಿರಿಯಾಪಟ್ಟಣದ ಕೋಟೆಯ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.**(ಚಿ.ಸಂ.217)** ಈ ದೇವಾಲಯದ ಸುತ್ತಲೂ ಗ್ರಾನೈಟ್ ಶಿಲೆಯಿಂದ ನಿರ್ಮಿಸಲ್ಪಟ್ಟಿದ್ದು, ಏಕಕೂಟ ದೇವಾಲಯವಾಗಿದ್ದು, ಗರ್ಭಗೃಹ, ಸುಕನಾಸಿ, ನವರಂಗ ಹಾಗೂ ಮುಖಮಂಟಪದ ಭಾಗಗಳನ್ನು ಹೊಂದಿದೆ.

ಪಿರಿಯಾಪಟ್ಟಣವು ಚಂಗಾಳ್ವರ ರಾಜಧಾನಿಯಾಗಿಯು ಐತಿಹಾಸಿಕ ಮನ್ನಣೆಯನ್ನು ಗಳಿಸಿತ್ತು. ಇದರ ಮೊದಲ ಹೆಸರು 'ಸಿಂಹಪಟ್ಟಣ' (ಸಿಂಗಪಟ್ಟಣ) ಎಂಬುದಾಗಿತ್ತು. ಸಿಂಹಪಟ್ಟಣದಲ್ಲಿ ಚಂಗಾಳ್ವ ಅರಸ 'ಪೆರಿಯರಾಜದೇವ'ನು ಕಲ್ಲಿನಕೋಟೆ ಕಟ್ಟಿಸಿ ಈ ತಾಲೂಕಿನಾದ್ಯಂತ ಕೀರ್ತಿಯನ್ನು ಹೆಚ್ಚಿಸಿಕೊಂಡು ಆಳ್ವಿಕೆ ಮಾಡ ತೊಡಗಿದನು. ಅಂದಿನಿಂದ "ಪೆರಿಯರಾಜಪಟ್ಟಣ"ವೆಂಬ ಹೆಸರು ರೂಢಿಗೆ ಬಂದಿತು. ತದನಂತರದ ಅವಧಿಯಲ್ಲಿ ಕಾಲಕ್ರಮೇಣವಾಗಿ ಪೆರಿಯಾರಾಜಪಟ್ಟಣಕ್ಕೆ ಬದಲಾಗಿ 'ಪಿರಿಯಾಪಟ್ಟಣ' ಎಂಬುದಾಗಿ ಪ್ರಚಲಿತದಲ್ಲಿದೆ. ಪಿರಿಯಾಪಟ್ಟಣದ ಚನ್ನಿಗರಾಯ ದೇವಸ್ಥಾನದ ಬಾಗಿಲುವಾಡದಲ್ಲಿರುವ ಕ್ರಿ.ಶ.1590ರ ಶಾಸನ ಶ್ರೀಕಂಠರಾಜಯ್ಯನ ಮಗನಾದ ಶ್ರೀಪಿರಿಯಾರಾಜ ದೇವನು ಪ್ರಾಚೀನ ರಾಜಧಾನಿ 'ಸಿಂಹಪುರ'ವನ್ನು ಜೀರ್ಣೋದ್ಧಾರ ಮಾಡಿ ಅದಕ್ಕೆ 'ಪೆರಿಯಾರಾಜಪಟ್ಟಣ' ಎಂದು ಪುನರ್‌ನಾಮಕರಣ ಮಾಡಿದನೆಂದು ತಿಳಿಸುತ್ತದೆ.[181]

**ಗರ್ಭಗೃಹ:-**ಗರ್ಭಗೃಹವು 8X8 ಅಡಿ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಚೌಕಾಕಾರವಾಗಿರುವ ಗರುಡ ಪೀಠದ ಮೇಲೆ ಎರಡು ಅಡಿ ಎತ್ತರವಿರುವ ಪದ್ಮಪೀಠ, ಪದ್ಮಪೀಠದ ಮೇಲೆ ಸುಮಾರು ಐದು ಅಡಿ ಎತ್ತರವಿರುವ ಚೆನ್ನಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.218)** ಈ ದೇವನು, ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮವನ್ನು ಹಿಡಿದು ಕೊಂಡಿದ್ದಾನೆ. ಈ ದೇವನ ಪ್ರಭಾವಳಯಲ್ಲಿ ಹಂಸದ ಬಾಯಿಯಿಂದ ಹೊರಟಂತೆ ಬಿಡಿಸಲಾಗಿರುವ ಬಳ್ಳಿ ಸುರುಳಿಗಳಿವೆ. ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಈ ಭುವನೇಶ್ವರಿಯ ಮಧ್ಯದಲ್ಲಿ ಮೂರು ಸುತ್ತು ಅರಳಿದ ಪದ್ಮಪುಷ್ಪವಿದೆ. ಗರ್ಭಗೃಹದ ದ್ವಾರವು ಸರಳವಾಗಿದೆ. ಇದರಲ್ಲಿ ಯಾವುದೇ ರೀತಿಯ ಅಲಂಕರಣಾ ಪಟ್ಟಿಕೆಗಳು ಕಾಣಬರುವುದಿಲ್ಲ.

**ಸುಕನಾಸಿ:-**ಸುಕನಾಸಿಯು ಗರ್ಭಗೃಹದಷ್ಟೇ ಉದ್ದ ಅಗಲವಾಗಿದೆ. ಚೌಕ ಇದರಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡು ಬರುವುದಿಲ್ಲ ಮೇಲ್ಛಾವಣಿಯು ನಕ್ಷತ್ರಾಕಾರದ ಭುವನೇಶ್ವರಿಯನ್ನು ಹೊಂದಿದ್ದು, ಇದರ ಮಧ್ಯದಲ್ಲಿ ಅರಳಿದ ಪದ್ಮಪುಷ್ಪವನ್ನು ಬಿಡಿಸಲಾಗಿದೆ. ಸುಕನಾಸಿಯ ದ್ವಾರವು ಅಲಂಕಾರಿಕ ಪಟ್ಟಿಕೆಗಳಿಂದ ಕೂಡಿದ್ದು, ಪಟ್ಟಿಕೆಗಳಲ್ಲಿ ಪದ್ಮಪುಷ್ಪಗಳ ದಳಗಳು, ಕಮಲದ ಮೊಗ್ಗುಗಳು ಮತ್ತು ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಲಲಾಟಬಿಂಬದಲ್ಲಿ ಅರಳಿದ ಪದ್ಮಪುಷ್ಪವಿದೆ. ಬಾಗಿಲುವಾಡದಲ್ಲಿ ಅರಳಿದ ಪದ್ಮಪುಷ್ಪ ಮತ್ತು ನಾಗಬಂಧ ಶಿಲ್ಪಗಳನ್ನು ಬಿಡಿಸಲಾಗಿದೆ. ಅದರ ಮೇಲೆ ಮಣಿಹಾರಗಳ ಅಲಂಕರಣೆ ಮಾಡಲಾಗಿದೆ.

**ನವರಂಗ:-**ನವರಂಗವು 25X25 ಅಡಿ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಇದರ ಮಧ್ಯದಲ್ಲಿ ಹೊಯ್ಸಳ ಶೈಲಿಯ ನಾಲ್ಕು ಕಂಬಗಳಿವೆ. ಈ ಕಂಬದ ಕೆಳಗೆ ಉಪಪೀಠವಿದೆ. ಉಪಪೀಠದ ಮೇಲೆ ಚೌಕ, ಬಳೆಗಳ, ಗಂಟೆ, ಘಟಾ, ಗಾಲಿ, ಪುಷ್ಪಬೋದಿಗೆ, ಫಲಗೈ ಮತ್ತು ಕಪೋತವಿದೆ. ಬಳೆಗಳ ಮತ್ತು ಗಂಟೆಯ ಮೇಲ್ಭಾಗದಲ್ಲಿ ಪದ್ಮಪುಷ್ಪಗಳ, ಬಳ್ಳಿಸುರಳಿಗಳ ಅಲಂಕರಣ ಮಾಡಲಾಗಿದೆ.**(ಚಿ.ಸಂ.219)** ನವರಂಗದ ಮೇಲ್ಛಾವಣಿಯ ಅಡ್ಡ ತೊಲೆಯ ಮೇಲೆ ಶಾಸನವನ್ನು ಬರೆಯಲಾಗಿದೆ.**(ಚಿ.ಸಂ.220)** ಇದರ ಮೇಲ್ಛಾವಣಿಯು 9 ಅಂಕಣಗಳಿಂದ ಕೂಡಿದ್ದು, ಮೇಲ್ಛಾವಣಿಯಲ್ಲಿ ಅರಳಿದ ಪದ್ಮಪುಷ್ಪಗಳನ್ನು ಬಿಡಿಸಲಾಗಿದೆ. ಇವು ಅಷ್ಟೇನು ಕಲಾತ್ಮಕವಾಗಿಲ್ಲ, ನವರಂಗದ ಪಶ್ಚಿಮ ಭಾಗದಲ್ಲಿರುವ ಮೇಲ್ಛಾವಣಿಯನ್ನು ತೆಗೆದು ಹಾಕಿ ಗಾಳಿ ಬೆಳಕಿಗೆ ವ್ಯವಸ್ಥೆ ಮಾಡಲಾಗಿದೆ. ಈ ದೇವಾಲಯದ ಕಂಬ, ಮೇಲ್ಛಾವಣಿ, ಶಿಲ್ಪಗಳಿಗೆಲ್ಲ ಹಳದಿ ಬಣ್ಣವನ್ನು ಬಳಿಯಲಾಗಿದೆ. ನವರಂಗದ ಬಾಗಿಲು ಸರಳವಾಗಿದ್ದು, ಮೇಲ್ಭಾಗದಲ್ಲಿ

ಗಜಲಕ್ಷ್ಮೀಯ ಶಿಲ್ಪವನ್ನು ಬಿಡಿಸಲಾಗಿದೆ. ಈ ಬಾಗಿಲ ಮುಂದೆ ಸೋಪಾನವಿದೆ. ಈ ಸೋಪಾನದ ಮುಂಭಾಗದಲ್ಲಿ ಎರಡು ಕಡೆ ಸುಮಾರು ಮೂರು ಅಡಿ ಎತ್ತರದ ಜಗತಿಯನ್ನು ಮಾಡಿ ಈ ಜಗತಿಯ ಮೇಲೆ ನಾಲ್ಕು ಹೊಯ್ಸಳ ಶೈಲಿಯ ಸಿಲಿಂಡರಿನಾಕಾರದ ನಾಲ್ಕು ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳ ಮೇಲೆ ಅಡ್ಡ ಪಟ್ಟಿಕೆಗಳನ್ನು ಹಾಕಿ ಮೇಲ್ಛಾವಣಿಗೆ ಕಲ್ಲಿನ ಚಪ್ಪಡಿಗಳನ್ನು ಹಾಸಲಾಗಿದೆ.

ಈ ದೇವಾಲಯದ ಮುಖಮಂಟಪದ ಮುಂದೆ ಚಂಗಾಳ್ವರ ಕಾಲದಲ್ಲಿ ನಿರ್ಮಿಸಿದಂತಹ ಒಂದು ಮಂಟಪವಿದೆ. ಈ ಮಂಟಪವು ಎರಡು ಅಡಿ ಎತ್ತರವಿರುವ ಜಗತಿಯನ್ನು ಮಾಡಿ ಅದರ ಮೇಲೆ ಚೌಕ, ಅಷ್ಟಮುಖವುಳ್ಳ ಸುಮಾರು ಎಂಟು ಕಂಬಗಳಿವೆ. ಈ ಕಂಬಗಳ ಮೇಲೆ ಕಲ್ಲು ಚಪ್ಪಡಿಗಳನ್ನು ಹಾಸಿ ಮೇಲ್ಛಾವಣಿಯನ್ನು ಮುಚ್ಚಿ ಮುಕ್ತಗೊಳಿಸಲಾಗಿದೆ.

**ಅಧಿಷ್ಠಾನ:**–ಈ ದೇವಾಲಯದ ಅಧಿಷ್ಠಾನವು ಮಂಚಬಂಧ ಅಧಿಷ್ಠಾನವಾಗಿದ್ದು, ಈ ಅಧಿಷ್ಠಾನದ ಮೇಲೆ ಮತ್ತೊಂದು ಅಧಿಷ್ಠಾನವನ್ನು ಮಾಡಲಾಗಿದೆ. ಇವುಗಳಲ್ಲಿರುವ ಪಟ್ಟಿಕೆಗಳನ್ನು ಒಳ ಮತ್ತು ಹೊರ ಸರಿದಂತೆ ಭದ್ರವಾಗಿ ಜೋಡಿಸಲಾಗಿದೆ. ಅಧಿಷ್ಠಾನದ ಉತ್ತರ ಭಾಗದಲ್ಲಿ ಅಭಿಷೇಕದ ನೀರು ಹೋಗಲು ಪ್ರನಾಳವನ್ನು ಮಾಡಲಾಗಿದೆ. ಇದು ಪುಷ್ಪ ಪ್ರನಾಳಿಕೆಯಾಗಿದೆ. ಅಧಿಷ್ಠಾನದಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆ ಕಂಡು ಬರುವುದಿಲ್ಲ.**(ಚಿ.ಸಂ.223)**

**ಭಿತ್ತಿ:**–ಭಿತ್ತಿಯನ್ನು ಎರಡು ರೀತಿಯಲ್ಲಿ ನಿರ್ಮಾಣ ಮಾಡಲಾಗಿದೆ. ಚಂಗಾಳ್ವರ ಕಾಲದಲ್ಲಿ ನಿರ್ಮಿಸಲಾದ ಭಿತ್ತಿಯು ಕಲ್ಲಿನಿಂದ ಜೋಡಿಸಿ ನಿರ್ಮಿಸಿದ್ದು ಸರಳವಾಗಿದೆ. ಆದರೆ ಹಿಂಭಾಗದಲ್ಲಿರುವ ಭಿತ್ತಿಯ ಸುತ್ತಲೂ ತೆಳುವಾದ ಅರೆಗಂಬಗಳು ಹಾಗೂ ಅವುಗಳ ಮಧ್ಯ ಎರಡು ಕಂಬಗಳ ಮೇಲಿರುವ ಕೋಷ್ಠಗುಡಿಗಳು ಕಂಡು ಬರುತ್ತವೆ. ಭಿತ್ತಿಯ ಮೇಲ್ಭಾಗದಲ್ಲಿ ಮಾಡಿರುವ ಕಪೋತವು ಗೋಡೆಯಿಂದ ಒಂದೂವರೆ ಅಡಿ ಮುಂಚಾಚಿದ್ದು ಕಮಾನಿನಾಕಾರವಾಗಿದೆ. ಈ ಕಪೋತದ ಹೊರ ಅಂಚಿನಲ್ಲಿ ಕೂಡುಗಳನ್ನು ಬಿಡಿಸಲಾಗಿದೆ. ಇದರ ಮೇಲೆ ಮತ್ತೊಂದು ಕಪೋತವಿದ್ದು, ಈ ಕಪೋತದ ಮೇಲೆ ನಿರ್ಮಿಸಲಾಗಿದ್ದ ಹಾರ ಶಿಖರ ಇವುಗಳಲ್ಲವೂ ಸಹ ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಸಂಪೂರ್ಣವಾಗಿ ಬಿದ್ದು ಹೋಗಿವೆ. ಈ ದೇವಾಲಯದ ಮೇಲ್ಛಾವಣಿ ಮತ್ತು ಗರ್ಭಗೃಹದ ಮೇಲೆ ನಿರ್ಮಿಸಲಾಗಿದ್ದ ಶಿಖರದ ಭಾಗದಲ್ಲಿ ಗಿಡಗಂಟೆಗಳು ಬೆಳೆದು ದೇವಾಲಯದ ದುಸ್ಥಿತಿಗೆ ಕಾರಣವಾಗಿದೆ.

**ದ್ವಾರಮಂಟಪ:**–ಈ ದೇವಾಲಯಕ್ಕೆ ಮೂಲತಃ ವಿಜಯನಗರ ಕಾಲದಲ್ಲಿ ನಿರ್ಮಾಣ ಮಾಡಿದಂತಹ ಪ್ರಕಾರವಿದ್ದಂತೆ ಕಾಣಬರುತ್ತದೆ.[182] ಈಗ ಉಳಿದು ಬಂದಿರುವುದು ದ್ವಾರಮಂಟಪ ಮಾತ್ರ. ಪ್ರಾಕರದ ಯಾವುದೇ ಅವಶೇಷಗಳು ಕಂಡುಬರದೇ ಇರುವುದು,

ದ್ವಾರಮಂಟಪವು ಚೌಕಾಕಾರವಾಗಿದ್ದು, ಹಿಂಭಾಗದಲ್ಲಿ ನಾಲ್ಕು ಕಂಬಗಳನ್ನು ಸುಮಾರು ಮೂರು ಅಡಿ ಎತ್ತರವಿರುವ ಜಗತಿ ಮೇಲೆ ನಿಲ್ಲಿಸಿ ಮೇಲ್ಛಾವಣಿಯನ್ನು ಮಾಡಲಾಗಿದೆ. ದ್ವಾರದ ಮುಂಭಾಗದಲ್ಲಿ ಸರಳವಾದ ಕಲ್ಲು ಚಪ್ಪಡಿಗಳನ್ನು ಹಾಸಿ ಮುಚ್ಚಲಾಗಿದೆ. ಈ ದ್ವಾರಮಂಟಪದ ಬಾಗಿಲು ಕಣಶಿಲೆಯಲ್ಲಿ ನಿರ್ಮಿಸಲಾಗಿರುವುದರಿಂದ ಪಟ್ಟಿಕೆಗಳಲ್ಲಿರುವ ಅಲಂಕರಣ ಇನ್ನು ಉಳಿದು ಬಂದಿದೆ, ಪಟ್ಟಿಕೆಗಳಲ್ಲಿ ಪದ್ಮದ ದಳಗಳು ಅರಳಿದ ಪದ್ಮಪುಷ್ಪ, ಲಲಾಟಬಿಂಬದಲ್ಲಿ ಲಕ್ಷ್ಮೀದೇವಿ ಶಿಲ್ಪವಿದೆ. ಬಾಗಿಲುವಾಡದಲ್ಲಿ ಅರಳಿದ ಪದ್ಮಪುಷ್ಪಗಳಿವೆ. ಬಾಗಿಲ ಇಕ್ಕೆಲಗಳನ್ನು ಕುಂಭಪಂಜರದ ಅಲಂಕರಣದ ಕೆತ್ತನೆ ಇದೆ. ಅಂತ್ಯದಲ್ಲಿ ಸಿಂಹಗಳು ಕುಳಿತಿವೆ. ಬಾಗಿಲ ಇಕ್ಕೆಲಗಳಲ್ಲಿ ಗಂಗೆ-ಯಮುನೆಯರು, ಆಂಜನೇಯ, ಭಕ್ತ ಮತ್ತು ದುಂಡು ಶಿಲ್ಪಗಳನ್ನು ಬಿಡಿಸಲಾಗಿದೆ.

ಮಂಟಪದ ಒಳಗಿರುವ ಕಂಬಗಳ ಮೇಲೆ ಯೋಗಾನರಸಿಂಹ, ವಿಷ್ಣು, ಭಕ್ತ, ಹಂಸ, ಸಿಂಹಗಳ ಚಿತ್ರಗಳನ್ನು ಮತ್ತು ಟಗರು, ಗಣೇಶ, ಅರಳಿದ ಪದ್ಮಪುಷ್ಪ, ಬಿಲ್ಲುದಾರಿ ಕಂಡುಬಂದಿದೆ. ಮಂಟಪದ ಗೋಡೆಯ ಮೇಲೆ ಹುಲಿಯ ಶಿಲ್ಪವನ್ನು ಬಿಡಿಸಲಾಗಿದೆ. ಮಂಟಪದ ಹೊರಭಾಗದಲ್ಲಿ ಬಾಗಿಲ ಪಟ್ಟಿಕೆಯಲ್ಲಿ ಒಂಟಿ ಕಾಲಿನಲ್ಲಿ ನಿಂತಿರುವ ದ್ವಾರಪಾಲಕರಿದ್ದಾರೆ. ಚತುರ್ಭುಜವನ್ನು ಹೊಂದಿರುವ ಇವರು ಕೈಗಳಲ್ಲಿ ಶಂಖ, ಚಕ್ರ, ಗಧಾ, ಹಸ್ತವನ್ನು ಹೊಂದಿದ್ದಾರೆ. ಇವರ ಮೇಲೆ ಕೀರ್ತಿ ಮುಖಗಳಿವೆ. ಬಾಗಿಲ ಪಟ್ಟಿಕೆಗಳಲ್ಲಿ ಅರಳಿದ ಪದ್ಮಪುಷ್ಪ ಮೊಗ್ಗುಗಳನ್ನು ಬಿಡಿಸಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವನ್ನು ಬಿಡಿಸಲಾಗಿದೆ. ಇಕ್ಕೆಲಗಳಲ್ಲಿ ಕಂಬಗಳ ಹೊರಮುಖದಲ್ಲಿ ಎರಡು ಕಂಬಗಳ ಮೇಲೆ ರಚಿಸಲಾಗಿರುವ ಶಿಖರಗಳ ಉಬ್ಬು ಕೆತ್ತನೆಯನ್ನು ಬಿಡಿಸಲಾಗಿದೆ. ಆದರೆ ಈ ಮಂಟಪದ ಭಿತ್ತಿಯು ಹೊರಮೈಯಲ್ಲಿ ಸಿಂಹ ಮತ್ತು ಪುರುಷನ ಶಿಲ್ಪವನ್ನು ಬಿಡಿಸಲಾಗಿದೆ.[183]

**ವೇಣುಗೋಪಾಲಸ್ವಾಮಿ ದೇವಾಲಯ–ಮರದೂರು**

ಮರದೂರು ಹುಣಸೂರು ತಾಲೂಕಿಗೆ ಸೇರಿದ ಒಂದು ಗ್ರಾಮ. ಇದು ಹುಣಸೂರಿನಿಂದ ಪೂರ್ವಕ್ಕೆ ಸುಮಾರು 7ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಉತ್ತರಭಾಗದಲ್ಲಿ ಲಕ್ಷ್ಮಣತೀರ್ಥ ನದಿಯ ಬಲದಂಡೆಯ ಮೇಲೆ ವೇಣುಗೋಪಾಲಸ್ವಾಮಿಯ ದೇವಾಲಯವನ್ನು ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಲಾಗಿದೆ.**(ಚಿ.ಸಂ.224)** ಈ ಗ್ರಾಮದಲ್ಲಿ ಮಧ್ಯಶಿಲಾಯುಗ, ನವಶಿಲಾಯುಗ ಮತ್ತು ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಅವಶೇಷಗಳು ಲಭ್ಯವಾಗಿದ್ದು, ಈ ಅವಶೇಷಗಳನ್ನು ಡಾ.ಜಿ.ರಾಮದಾಸರೆಡ್ಡಿಯವರು ಇಲ್ಲಿ ಪತ್ತೆ ಮಾಡಿದ್ದಾರೆ.[184] ಪೌರಾಣಿಕ ಐತಿಹ್ಯದ ಪ್ರಕಾರ ಈ ಗ್ರಾಮಕ್ಕೆ ಮೊದಲು ವನವಾಸ ನಿಮಿತ್ತ

ರಾಮ, ಸೀತೆ, ಮತ್ತು ಲಕ್ಷ್ಮಣರು ಈ ಪ್ರದೇಶದಲ್ಲಿ ಬಂದು ಸಂಚರಿಸಿ ಇಲ್ಲಿ ತಂಗಿದ್ದ ಸ್ಥಳವೇ ರಾಮಪಟ್ಟಣವೆಂದು ಹಾಗೂ ಲಕ್ಷ್ಮಣನು ಬಿದಿರು ಅಕ್ಕಿಯನ್ನು ಮರೆತು ಬಿಟ್ಟು ಬಂದ ಸ್ಥಳವು ಮರೆತ ಊರಾಗಿ ಕಾಲಕ್ರಮೇಣ ಇದು ಜನರ ಆಡು ಭಾಷೆಯಲ್ಲಿ ಮರದೂರು ಎಂದು ಕರೆಯಲ್ಪಟ್ಟಿತ್ತೆಂದು ಹೇಳಲಾಗಿದೆ.[185]

ಇಲ್ಲಿ ನಿರ್ಮಿಸಲಾಗಿರುವ ವೇಣುಗೋಪಾಲಸ್ವಾಮಿ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಇದರಲ್ಲಿ ಒಂದು ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳು ಕಂಡುಬರುತ್ತವೆ. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಮುಖಮಂಟಪದ ಅಡ್ಡತೊಲೆಯ ಮೇಲೆ ಬರೆಯಲಾಗಿರುವ ಒಂದು ಶಾಸನವಿದೆ. ಈ ಶಾಸನವು 15ನೇ ಶತಮಾನದಲ್ಲಿ ಬರೆಯಲಾಗಿರುವಂತಹ ಶಾಸನವಾಗಿದ್ದು, ಇದರಲ್ಲಿ ಪಟ್ಟಣಸ್ವಾಮಿ ನಾಗಶೆಟ್ಟಿಯ ಮಗನಾದ ಗೋಪಿಶೆಟ್ಟಿಯು ಗೋಪಿನಾಥ ದೇವಾಲಯಕ್ಕೆ ಕಾಣಿಕೆ ನೀಡಿದ ವಿಷಯವನ್ನು ತಿಳಿಸುತ್ತದೆ.[186]

ಈ ದೇವಾಲಯ ಮೂಲತಃ ಹೊಯ್ಸಳ ಕಾಲದ ದೇವಾಲಯವಾಗಿದೆ. ತದನಂತರ ವಿಜಯನಗರದ ಅರಸರ ಕಾಲದಲ್ಲಿ ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದಂತೆ ಕಾಣುತ್ತದೆ. ಈ ದೇವಾಲಯವು ಸಂಪೂರ್ಣವಾಗಿ ಈಗ ಉಳಿದು ಬಂದಿಲ್ಲ. ಆದರೆ ಇದನ್ನು ಕಣಶಿಲೆಯ ಕಲ್ಲಿನಲ್ಲಿ ನಂತರದ ಕಾಲದಲ್ಲಿ ಕಟ್ಟಿದಂತೆ ಕಾಣಬರುತ್ತದೆ.

**ಗರ್ಭಗೃಹ:-**ಗರ್ಭಗೃಹ 8X8ಅಡಿಗಳ ಉದ್ದ ಅಗಲವಾಗಿದ್ದು, ಚೌಕಕಾರವಾಗಿದೆ. ಇದರ ಮಧ್ಯದಲ್ಲಿ ಗರುಡ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದ್ದ ವೇಣುಗೋಪಾಲಸ್ವಾಮಿ ಮೂರ್ತಿ ಈಗ ಇಲ್ಲಿ ಗರ್ಭಗೃಹ ಸಂಪೂರ್ಣವಾಗಿ ಶಿಥಿಲಾವಸ್ಥೆಯಲ್ಲಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರವಾಗಿರುವ ಭುವನೇಶ್ವರಿ ಇದೆ. ಮಧ್ಯದಲ್ಲಿ ಅರಳಿದ ಕಮಲದ ಪುಷ್ಪ ಬಿಡಿಸಲಾಗಿದೆ.

**ಸುಕನಾಸಿ:-** ಸುಕನಾಸಿ ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು, ಚೌಕಕಾರವಾಗಿದೆ. ಇದರಲ್ಲಿ ಈಗ ಯಾವುದೆ ಶಿಲ್ಪ ಕಂಡುಬರುವುದಿಲ್ಲ, ಸುಕನಾಸಿಯ ಎಡಭಾಗದಲ್ಲಿ ಎರಡು ಅಡಿ ಎತ್ತರವಿರುವ ಗರುಡ ಪೀಠ ಮಾತ್ರಬಿದ್ದಿದೆ.

**ನವರಂಗ:-**ನವರಂಗವು 25X25 ಅಡಿಗಳ ಉದ್ದ ಅಗಲವಾಗಿದು, ಚೌಕಕಾರವಾಗಿದೆ. ಇದರ ಮಧ್ಯದಲ್ಲಿರುವ ನಾಲ್ಕು ಕಂಬಗಳು ಚೌಕ ಅಷ್ಟ ಮುಖವನ್ನು ಹೊಂದಿದೆ. ಮೇಲ್ಭಾಗ ಹೊಯ್ಸಳ ಶೈಲಿಯಲ್ಲಿ ಸಿಲಿಂಡರಿನಾಕಾರವಾಗಿದೆ. ಅದರ ಮೇಲೆ ಗಾಲಿ, ಪುಷ್ಪಬೋದಿಗೆ, ಕಪೋತವನ್ನು

ಹೊಂದಿದೆ. ಮೇಲ್ಛಾವಣಿಯಲ್ಲಿ ಚೌಕಕಾರದ ಭುವನೇಶ್ವರಿ ಇದೆ. ಇದರ ಮಧ್ಯದಲ್ಲಿ ಅರಳಿದ ಕಮಲದ ಪುಷ್ಪವನ್ನು ಬಿಡಿಸಲಾಗಿದೆ. ನವರಂಗದ ಬಾಗಿಲು ಸರಳವಾಗಿದೆ.

**ಮುಖಮಂಟಪ:–** ನವರಂಗದ ಮುಂದಿರುವ ಮುಖಮಂಟಪದಲ್ಲಿ ಎರಡು ಕಂಬಗಳ ಮೇಲೆ ನಿಂತಿರುವ ಮೇಲ್ಛಾವಣಿ ಇದೆ. ಇದರಲ್ಲಿ ಭುವನೇಶ್ವರಿಯನ್ನು ನಕ್ಷತ್ರಾಕಾರವಾಗಿ ರಚಿಸಿ ಮಧ್ಯದಲ್ಲಿ ಅರಳಿದ ಕಮಲವನ್ನು ವೃತ್ತಾಕಾರವಾಗಿ ಬಿಡಿಸಲಾಗಿದೆ.

**ಅಧಿಷ್ಠಾನ:–**ಈ ದೇವಾಲಯದ ಅಧಿಷ್ಠಾನದಲ್ಲಿ ಐದು ಪಟ್ಟಿಕೆಗಳಿವೆ. ಉಪಾನ, ಜಗತಿ, ತ್ರಿಪಟ್ಟಕುಮುದ, ಪ್ರತಿ ಹಾಗೂ ಹಾರವನ್ನೊಳಗೊಂಡಿದ್ದು, ಇವುಗಳನ್ನು ಒಳ ಮತ್ತು ಹೊರಗೆ ಚಾಚಿಕೊಂಡಿರುವಂತೆ ಕ್ರಮಬದ್ಧವಾಗಿ ಜೋಡಿಸಿ ಭದ್ರಪಡಿಸಲಾಗಿದೆ.

**ಭಿತ್ತಿ:–**ಭಿತ್ತಿಯು ಸರಳವಾಗಿದೆ. ಭಿತ್ತಿಗೆ ಕಲ್ಲಿನ ಚೌಕಾಕಾರದ ಆಯತಾಕಾರದ ಕಲ್ಲುಗಳನ್ನು ಮಧ್ಯದಲ್ಲಿ ಅರೆಗಂಬಗಳನ್ನು ಸೇರಿಸಿ ನಿರ್ಮಿಸಲಾಗಿದೆ. ಭಿತ್ತಿಯ ಮೇಲೆ ಇಳಿಜಾರಾಗಿರುವ ಕಪೋತವಿದೆ.

**ಶಿಖರ:–**ಗರ್ಭಗೃಹದ ಮೇಲೆ ವಿಜಯನಗರ ಶೈಲಿಯ ಶಿಖರವಿದೆ. ಇದನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದ್ದು, ಈಗ ಶಿಥಿಲಾವಸ್ಥೆಯಲ್ಲಿದೆ.

**ದ್ವಾರಮಂಟಪ**:–ದೇವಾಲಯದ ಮುಂದೆ ದ್ವಾರ ಮಂಟಪವಿದೆ. ಬಹುಶಃ ಇದನ್ನು ವಿಜಯನಗರದ ಶೈಯಲಿಯಲ್ಲಿ ನಿರ್ಮಿಸಲಾಗಿದೆ. ಈ ದೇವಾಲಯದ ಸುತ್ತಲೂ ನಿರ್ಮಿಸಲಾದ ಪ್ರಾಕಾರ ಈಗ ಕಾಣಬರುವುದಿಲ್ಲ. ಈ ದ್ವಾರ ಮಂಟಪವು ಸುಮಾರು. 10 ಅಡಿ ಎತ್ತರವಾಗಿದೆ. ಇದನ್ನು ಎತ್ತರವಾದ ಅಧಿಷ್ಠಾನವನ್ನು ನಿರ್ಮಿಸಿ ಅದರ ಮೇಲೆ ಭಿತ್ತಿಯನ್ನು ನಿರ್ಮಿಸಲಾಗಿದೆ. ಇದರ ಮೇಲೆ ಇದ್ದ ಗೋಪುರ ಈಗ ಇಲ್ಲವಾಗಿದೆ. ದ್ವಾರಮಂಟಪದ ಒಳಗೆ ಚೌಕಾಕಾರದ ನಾಲ್ಕು ಕಂಬಗಳಿವೆ. ಇಕ್ಕೆಲಗಳಲ್ಲಿ ಜಗತಿ ಮಾಡಿ ಮಧ್ಯದಲ್ಲಿ ಪ್ರವೇಶ ಮಾರ್ಗವನ್ನು ಕಲ್ಪಿಸಲಾಗಿದೆ.

**ವಸಂತಮಂಟಪ**:–ಈ ಮಂಟಪವು ದೇವಾಲಯದ ಬಲಭಾಗದಲ್ಲಿದೆ. ಇದನ್ನು ಮೂರು ಅಡಿ ಎತ್ತರವಿರುವ ಚೌಕಕಾರದ ವೇದಿಕೆ ನಿರ್ಮಿಸಿ ಅದರ ಮೇಲೆ ಚೌಕಕಾದ 10 ಕಂಬಗಳಿವೆ. ಇದರಲ್ಲಿರುವ ನಾಲ್ಕು ಕಂಬಗಳು ಹೊಯ್ಸಳ ಶೈಲಿಯಲ್ಲಿವೆ. ಇನ್ನುಳಿದ ಆರು ಕಂಬಗಳು ವಿಜಯನಗರ ಶೈಲಿಯಲ್ಲಿವೆ. ಈ ಮಂಟಪವನ್ನು ಈಗ ಹಬ್ಬ ಹರಿದಿನ ಮತ್ತು ಮದುವೆ ಸಮಾರಂಭಗಳಿಗೆ ಬಳಸಿಕೊಳ್ಳಲಾಗುತ್ತಿದೆ. ಬರಿಕಂಬಗಳ ಮೇಲೆ ನಿಂತಿರುವ ಮೇಲ್ಛಾವಣಿಯ ಸೂರನ್ನು ಇಳಿಜಾರಾಗಿ ಮಾಡಲಾಗಿದೆ.[187]**(ಚಿ.ಸಂ.225)**

## ಜೈನ ಬಸದಿಗಳು

ಜೈನಧರ್ಮ ವಿಶ್ವದ ಪ್ರಾಚೀನ ಧರ್ಮಗಳಲ್ಲೊಂದಾಗಿದೆ. ಜೈನ ಮತ್ತು ಜೈನೇತರ ಗ್ರಂಥಗಳು, ಶಿಲಾಶಾಸನಗಳು, ಪ್ರಾಚ್ಯ ವಸ್ತುಗಳು, ಸ್ಮಾರಕಗಳು ಮತ್ತು ಮೊಹೆಂಜೋದಾರೋ, ಹರಪ್ಪ ಈ ಪ್ರಾಚೀನ ನಗರಗಳ ಅವಶೇಷಗಳಲ್ಲಿ ದೊರೆತ ಪ್ರತಿಮೆಗಳಲ್ಲಿ ಮತ್ತು ಅವುಗಳ ಪೀಠದಲ್ಲಿ ಕೆತ್ತಿರುವ ಶಾಸನಗಳು ಇವೆಲ್ಲವೂ ಜೈನಧರ್ಮದ ಪ್ರಾಚೀನತೆಯನ್ನು ತಿಳಿಸುತ್ತದೆ.[188]ಜಿನ ಎಂದರೆ ಗೆಲ್ಲುವುದು ಎಂದು ಅರ್ಥ. ಮಾನವನು ತನ್ನ ಕರ್ಮಗಳನ್ನು ಗೆದ್ದು ಜಿನನಾಗಬಲ್ಲನು. ಇವನಿಂದ ಬೋಧಿಸಲ್ಪಟ್ಟ ಧರ್ಮವೇ ಜೈನಧರ್ಮವೆಂದು ವಿದ್ವಾಂಸರು ಹೇಳಿದ್ದಾರೆ. ಜೈನಧರ್ಮದ ವಿಚಾರವು ಭೂಮಿಕೆಯ ಮೇಲೆ ನಿಂತಿದೆ. ಈ ಧರ್ಮದಲ್ಲಿ ವಿಚಾರ ಸ್ವಾತಂತ್ರ್ಯವಿದೆ. ಯಾರೊಬ್ಬರ ಮೇಲೂ ಒತ್ತಾಯದಿಂದ ತನ್ನ ಸಿದ್ಧಾಂತವನ್ನು ಹೇರುವುದಿಲ್ಲ.

ಜೈನಧರ್ಮವು ಕ್ರಿಸ್ತಪೂರ್ವದಲ್ಲಿ ಉತ್ತರಭಾರತದಿಂದ ಕರ್ನಾಟಕಕ್ಕೆ ಬಂದು ಹೊಸಪಂಥವನ್ನು ನಿರ್ಮಿಸಿತು ಹಾಗೂ ಸಾವಿರ ವರ್ಷಗಳವರೆಗೆ ಪ್ರಬಲ ಪಂಥವಾಗಿ ಬೆಳೆಯಿತು.[189] ಮೌರ್ಯ ವಂಶದ ಚಕ್ರವರ್ತಿ ಚಂದ್ರಗುಪ್ತ ಮತ್ತು ಆತನ ಗುರು ಭದ್ರಬಾಹು ಹಾಗೂ ಹನ್ನೆರಡು ಸಾವಿರ ಜಿನಮುನಿಗಳು ಕರ್ನಾಟಕಕ್ಕೆ ಆಗಮಿಸಿ ಈಗಿನ ಶ್ರವಣ ಬೆಳಗೊಳದಲ್ಲಿ ತಪಸ್ಸು ಮಾಡಿದರೆಂಬುದಾಗಿ ತಿಳಿದುಬರುತ್ತದೆ.[190] ಶ್ರವಣಬೆಳಗೊಳದಲ್ಲಿ ಇಂದಿಗೂ ಬಸದಿಗಳು ಮತ್ತು ಭದ್ರಬಾಹು ಗುಹೆಗಳಿವೆ. ಕರ್ನಾಟಕದಲ್ಲಿ ಜೈನಧರ್ಮ ಅದಕ್ಕೂ ಮೊದಲು ಇದ್ದಿರಬಹುದು. ಆದರೆ ಅಲ್ಲಿಂದೀಚೆಗೆ ಅದರ ಇತಿಹಾಸ ಅಖಂಡವಾಗಿದೆ. ಎರಡು ಸಾವಿರ ವರ್ಷಗಳ ಹಿಂದಿನಿಂದಲೂ ಜೈನಧರ್ಮ ಕರ್ನಾಟಕದಲ್ಲಿ ಜೀವಂತವಾಗಿ ಉಳಿದುಬಂದಿದೆ. ಜೈನಧರ್ಮ ನೆಲೆಗೊಳಿಸಿದ ಮೂಲಪುರುಷರಾದ ಪ್ರಸಾರಕರಾದ ತೀರ್ಥಂಕರರೆಲ್ಲ ಉತ್ತರಭಾರತದವರು. ಆದರೆ ಜೈನಧರ್ಮದ ಪ್ರಚಾರಕರು, ವ್ಯಾಖ್ಯಾನಕಾರರು, ಆಚಾರ್ಯರು ಬಹುವಾಗಿ ಕರ್ನಾಟಕದವರೆಂಬುದು ವೈಶಿಷ್ಟವಾಗಿದೆ.[191]

ಜೈನಧರ್ಮದ ಪ್ರಧಾನ ಪಂಥಗಳು ಮೂರು ಶ್ವೇತಾಂಬರ, ದಿಗಂಬರ ಮತ್ತು ಯಾಪನೀಯ. ಈ ಮೂರು ಪಂಗಡಗಳಲ್ಲಿ ಕರ್ನಾಟಕ ಎರಡನ್ನು ಮಾತ್ರ ವಿಶೇಷವಾಗಿ ಪೋಷಿಸಿತು. ದಿಗಂಬರ ಮತ್ತು ಯಾಪನೀಯ ಪಂಥದ ಪ್ರಸಾರ ಮಾತ್ರ ವ್ಯಾಪಕವಾಗಿ ಆಯಿತು. ಕರ್ನಾಟಕದಲ್ಲಿ ಸಿಗುವ ಎರಡು ಸಾವಿರ ವರ್ಷಗಳ ಜೈನಧರ್ಮದ ಮಾಹಿತಿಯ ಬಹುಪಾಲು ದಿಗಂಬರ ಶಾಖೆಗೆ ಸೇರಿಸಿದ್ದಾಗಿದೆ. ಇಲ್ಲಿನ ಶಿಲ್ಪ, ಸಾಹಿತ್ಯ, ವಾಸ್ತು ಎಲ್ಲವು ದಿಗಂಬರರಿಗೆ ಸಂಬಂಧಪಟ್ಟವಾಗಿವೆ. ಎಂಟನೆಯ ಶತಮಾನದಿಂದ ಹನ್ನೊಂದನೆಯ ಶತಮಾನದವರೆಗೆ ಸುಮಾರು ಮುನ್ನೂರು ವರ್ಷಗಳ ಕಾಲ ಜನಪ್ರಿಯತೆ ಗಳಿಸಿದ್ದ

ಜೈನಧರ್ಮದ ಶಾಖೆಯಾದ ಯಾಪನೀಯ ಪಂಥ ಹುಟ್ಟಿದ್ದು, ಬೆಳೆದದ್ದು ಮತ್ತು ಬಿದ್ದದ್ದು ಎಲ್ಲವೂ ಕರ್ನಾಟಕದಲ್ಲೇ ಎಂಬುದು ಉಲ್ಲೇಖನೀಯವಾಗಿದೆ.

ಮೌರ್ಯರ ಕಾಲದಲ್ಲಿ ಕ್ರಿಸ್ತ ಪೂರ್ವದ ಕೊನೆಯ ಶತಮಾನಗಳಲ್ಲಿ ಕರ್ನಾಟಕಕ್ಕೆ ಕಾಲಿರಿಸಿದ ಜೈನಧರ್ಮ ಬಹು ಬೇಗ ಪ್ರಜಾಧರ್ಮವಾಗಿ ಪ್ರಸಾರ ಪಡೆಯಿತು. ಕದಂಬರು, ಗಂಗರು, ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಮುಂತಾದ ರಾಜಮನೆತನಗಳು ಕರ್ನಾಟಕದಲ್ಲಿ ಜೈನಧರ್ಮ ಪ್ರಬಲವಾಗಲು ನೆರವಾದರು.

**ಆದಿನಾಥ ಬಸದಿ – ಚಿಕ್ಕಹನಸೋಗೆ**

ಚಿಕ್ಕಹನಸೋಗೆ ಕೃಷ್ಣರಾಜನಗರ ತಾಲೂಕಿಗೆ ಸೇರಿರುವ ಒಂದು ಗ್ರಾಮ. ಇದು ಕೃಷ್ಣರಾಜನಗರದಿಂದ ರಾಮನಾಥಪುರಕ್ಕೆ ಹೋಗುವ ರಸ್ತೆ ಮಾರ್ಗದಲ್ಲಿ ಕಂಡುಬರುತ್ತದೆ. ಅಲ್ಲದೆ ಕೃಷ್ಣರಾಜನಗರದಿಂದ 18ಕಿ.ಮೀ. ದೂರದಲ್ಲಿದೆ. ಈ ಗ್ರಾಮವನ್ನು 10ನೇ ಶತಮಾನದಲ್ಲಿ 'ಪನಸೋಗೆ' ಎಂದು ಕರೆಯಲಾಗುತ್ತಿತ್ತೆಂದು ಶಾಸನವೊಂದು ತಿಳಿಸುತ್ತದೆ.[192] ನಂತರದ ಕಾಲದಲ್ಲಿ ಪನಸೋಗೆ ಎಂಬ ಹೆಸರು ಹನಸೋಗೆ, ಚಿಕ್ಕಹನಸೋಗೆ ಎಂದು ಕರೆಯಲ್ಪಟ್ಟಿತೆಂದು ತಿಳಿಯಲಾಗಿದೆ.

ಈ ಗ್ರಾಮದ ಮಧ್ಯದಲ್ಲಿ ನಿರ್ಮಿಸಲಾಗಿರುವ ತ್ರಿಕೂಟ ಬಸದಿ ಇದೆ. ಈ ಬಸದಿಯಲ್ಲಿ ಇದರಲ್ಲಿ ಮೂರು ಗರ್ಭಗೃಹಗಳು, ಮೂರು ಅಂತರಾಳಗಳು, ಒಂದು ನವರಂಗ ಮತ್ತು ಮುಖಮಂಟಪಗಳು ಕಾಣಬರುತ್ತವೆ. ಈ ಬಸದಿಯನ್ನು ಸಂಪೂರ್ಣವಾಗಿ ಬಳಪದ ಕಲ್ಲನ್ನು ಉಪಯೋಗಿಸಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿದೆ.**(ಚಿ.ಸಂ.226)** ಈ ತ್ರಿಕೂಟ ಬಸದಿಯನ್ನು ಹೊಯ್ಸಳ ಸಾಮಂತ ದೊರೆಗಳಾಗಿ ಆಳ್ವಿಕೆ ಮಾಡುತ್ತಿದ್ದ ಚೆಂಗಾಳ್ವರ ದೊರೆಯಾದ ವೀರರಾಜೇಂದ್ರ ನನ್ನೀಚೆಂಗಾಳ್ವನು ಈ ತ್ರಿಕೂಟ ಬಸದಿಯನ್ನು ಕ್ರಿ.ಶ.11–12ನೇ ಶತಮಾನದಲ್ಲಿ ಕಟ್ಟಿಸಿದನೆಂದು ಶಾಸನವೊಂದು ತಿಳಿಸುತ್ತದೆ.[193] ಈ ಗ್ರಾಮವು ಕ್ರಿ.ಶ.11ನೇ ಶತಮಾನದ ವೇಳೆಗೆ ಹನಸೋಗೆ ಎಂದು ಕರೆಯಲ್ಪಟ್ಟಿತ್ತೆಂದು ತಿಳಿದುಬರುತ್ತದೆ. ಇದು ಆಗಿನ ಕಾಲದಲ್ಲಿ ಜೈನಧರ್ಮಿಯರ ಒಂದು ಪ್ರಮುಖ ಕೇಂದ್ರವಾಗಿತ್ತೆಂದು, ಅಲ್ಲದೇ ಈ ಗ್ರಾಮದಲ್ಲಿ ಹಲವು ಜೈನ ಸಂಘಗಳು ಇಲ್ಲಿ ನೆಲೆಯೂರಿದ್ದವೆಂದು ಶಾಸನೋಕ್ತ ಆಧಾರಗಳು ನಮಗೆ ದೊರೆಯುತ್ತವೆ.

ಮೂಲಸಂಘ, ದೇಶಗಣ, ಪುಸ್ತಕಗಚ್ಛ ಮತ್ತು ಕುಂದ, ಕಂದಾನ್ವಯ ಸಾಲಿಗೆ ಸೇರಿದಂತಹ ಜೈನಗುರುಗಳು ಇಲ್ಲಿ ನೆಲೆಸಿದ್ದರೆಂದು ತಿಳಿದುಬರುತ್ತದೆ. ಈ ಎಲ್ಲಾ ಆಧಾರಗಳನ್ನು

ಸೂಕ್ಷ್ಮವಾಗಿ ಗಮನಿಸಿದಾಗ ಚಿಕ್ಕಹನಸೋಗೆ ಆಗಿನ ಕಾಲದಲ್ಲಿ ಜೈನಧರ್ಮೀಯರ ಸುಪ್ರಸಿದ್ಧ ಸ್ಥಳವಾಗಿತ್ತೆಂದು ತಿಳಿಯಬಹುದಾಗಿದೆ. ಅಲ್ಲದೆ ಇಲ್ಲಿ ಜೈನ ತೀರ್ಥಂಕರರು ಮತ್ತು ಆಚಾರ್ಯರು ಹಲವಾರು ಕೈಂಕರ್ಯಗಳನ್ನು ನಡೆಸಿದ ವಿವರಣೆಗಳು ದಾಖಲೆಯ ರೂಪದಲ್ಲಿ ಲಭ್ಯವಾಗುತ್ತವೆ.[194]

**ಮುಖ್ಯಗರ್ಭಗೃಹ**:-ಈ ಗರ್ಭಗೃಹವು ಸುಮಾರು 8X8 ಅಡಿ ಉದ್ದವಾಗಿದ್ದು, ಚೌಕಾಕಾರವಾಗಿದೆ. ಇದರ ಪಶ್ಚಿಮದ ಗೋಡೆಯ ಮುಂದೆ ಸುಮಾರು ಮೂರು ಅಡಿಗಳ ಎತ್ತರವಿರುವ ಸಿಂಹ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತು ಧ್ಯಾನ ಮುದ್ರೆಯಲ್ಲಿರುವಂತೆ ರಚಿಸಿ ಪ್ರತಿಷ್ಠಾಪಿಸಲಾಗಿರುವ ಸುಮಾರು ನಾಲ್ಕು ಅಡಿಗಳ ಎತ್ತರವಿರುವ ಅದಿನಾಥ ತೀರ್ಥಂಕರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.[195]**(ಚಿ.ಸಂ.227)** ಈ ದೇವಮೂರ್ತಿಯು ನಯವಾದ ಕತ್ತನೆಯಿಂದ ಕೂಡಿದ್ದು ಬಹಳ ಸುಂದರವಾಗಿದೆ. ಈ ದೇವನ ಇಕ್ಕೆಲಗಳಲ್ಲಿ ಚಾಮರ ಮತ್ತು ಫಲವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಸುಮಾರು ನಾಲ್ಕು ಅಡಿಗಳ ಎತ್ತರವಿರುವ ಚಾಮರಧಾರಿಣಿಯರಿದ್ದಾರೆ. ನಯವಾದ ಕೆತ್ತನೆಯಿಂದ ಕೂಡಿರುವ ಈ ಚಾಮರಧಾರಿಣಿಯರು ಮೈಮೇಲೆ ವಿವಿಧ ಬಗೆಯ ವಸ್ತ್ರಾಭರಣ ಧರಿಸಿದ್ದು, ಸುಂದರವಾಗಿರುವಂತೆ ರಚಿಸಲಾಗಿದೆ. ಇವರ ಶಿರದ ಮೇಲೆ ಕೀರ್ತಿಮುಖವುಳ್ಳ ಪ್ರಭಾವಳಿಗಳಿವೆ. ಈ ದೇವನ ಹಿಂಭಾಗದಲ್ಲಿ ಸುಂದರವಾಗಿ ಬಿಡಿಸಲಾಗಿರುವ ಬಳ್ಳಿ ಸುರುಳಿ ಮತ್ತು ಕೀರ್ತಿಮುಖವುಳ್ಳ ಪ್ರಭಾವಳಿ ಇದೆ.

ಗರ್ಭಗೃಹದ ಮೇಲ್ಛಾವಣಿಯನ್ನು ನಕ್ಷತ್ರಾಕಾರವಾಗಿ ರಚಿಸಿ ಮಧ್ಯದಲ್ಲಿ ಎರಡು ಸುತ್ತು ವೃತ್ತಾಕಾರವಾಗಿ ಬಿಡಿಸಲಾಗಿರುವ ಭುವನೇಶ್ವರಿಯನ್ನು ಮಾಡಲಾಗಿದೆ. ಗರ್ಭಗೃಹದ ಮೂಲ ಬಾಗಿಲು ಭಿನ್ನವಾಗಿದ್ದರಿಂದ ಜೀರ್ಣೋದ್ಧಾರ ಕಾರ್ಯ ಮಾಡುವಾಗ ಬಾಗಿಲ ಇಕ್ಕೆಲಗಳಿಗೆ ಕಲ್ಲಿನ ಕಂಬಗಳನ್ನು ನಿಲ್ಲಿಸಿ ದ್ವಾರವನ್ನು ಮಾಡಲಾಗಿದೆ. ಇದರಲ್ಲಿ ಯಾವುದೇ ರೀತಿಯ ಅಲಂಕರಣದ ಕೆತ್ತನೆಗಳು ಕಂಡುಬರುವುದಿಲ್ಲ. ಈ ಗರ್ಭಗೃಹದ ಮುಂದಿರುವ ಅಂತರಾಳವು ಸರಳವಾಗಿದೆ.

**ಉತ್ತರದ ಗರ್ಭಗೃಹ**:-ಈ ಗರ್ಭಗೃಹವು ಮೂಲ ಮುಖ್ಯ ಗರ್ಭಗೃಹದಷ್ಟೇ ಉದ್ದ ಅಗಲವಾಗಿದ್ದು ಚೌಕಾಕಾರವಾಗಿದೆ. ಸುಮಾರು ಮೂರು ಅಡಿ ಎತ್ತರವಿರುವ ಸಿಂಹಪೀಠದ ಮೇಲೆ ಮುಕ್ಕೊಡೆಯ ಕೆಳಗೆ ಕಾಯೋತ್ಸರ್ಗ ಭಂಗಿಯಲ್ಲಿ ನಿಂತಿರುವ ನೇಮಿನಾಥಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.**(ಚಿ.ಸಂ.228)** ನಯವಾದ ಕೆತ್ತನೆಯಿಂದ ಕೂಡಿರುವ ಈ ತೀರ್ಥಂಕರರ ಹಿಂಬದಿಯಲ್ಲಿ ಪ್ರಭಾವಳಿ ಇದೆ. ಈ ಪ್ರಭಾವಳಿಯಲ್ಲಿ ಬಳ್ಳಿಸುರುಳಿ ಕೀರ್ತಿಮುಖವಿದೆ. ಈ ಗರ್ಭಗೃಹದ ದ್ವಾರವನ್ನು ಬಳ್ಳಿಸುರುಳಿಗಳಿಂದ ಕೂಡಿದ ಪಟ್ಟಿಕೆಗಳನ್ನು ಜೋಡಿಸಿ

ಸೇರಿಸಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯನ್ನು ಕೆತ್ತನೆ ಮಾಡಲಾಗಿದೆ.**(ಚಿ.ಸಂ.231,232)** ಅಂತರಾಳದಲ್ಲಿ ಯಾವುದೇ ಮೂರ್ತಿಶಿಲ್ಪ ಕಾಣಬರುವುದಿಲ್ಲ.

**ದಕ್ಷಿಣದ ಗರ್ಭಗೃಹ;-**ದಕ್ಷಿಣದ ಗರ್ಭಗೃಹದಲ್ಲಿ ಸಿಂಹಪೀಠದ ಮೇಲೆ ಮುಕ್ಕೊಡೆಯ ಕೆಳಗೆ ಕಾಯೋತ್ಸರ್ಗ ಭಂಗಿಯಲ್ಲಿ ನಿಂತಿರುವ ಶಾಂತಿನಾಥ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. **(ಚಿ.ಸಂ.229)** ನಯವಾದ ಕೆತ್ತನೆಯಿಂದ ಕೂಡಿರುವ ಈ ದೇವನ ಹಿಂಬದಿಯಲ್ಲಿರುವ ಪ್ರಭಾವಳಿಯಲ್ಲಿ ಬಳ್ಳಿ ಸುರುಳಿ-ಕೀರ್ತಿಮುಖಗಳ ಕೆತ್ತನೆ ಮಾಡಲಾಗಿದೆ.**(ಚಿ.ಸಂ.233)** ಗರ್ಭಗೃಹದ ಬಾಗಿಲ ಪಟ್ಟಿಕೆಗಳನ್ನು ಬಳ್ಳಿ ಸುರುಳಿಗಳಂತೆ ಕೆತ್ತನೆ ಮಾಡಿ ಜೋಡಿಸಲಾಗಿದೆ. ಲಲಾಟಬಿಂಬದಲ್ಲಿ ಯಾವುದೇ ಮೂರ್ತಿ ಕಾಣಬರುವುದಿಲ್ಲ. ಅಂತರಾಳ ಸರಳವಾಗಿದ್ದು ಮುಕ್ತವಾಗಿದೆ. ಇದರಲ್ಲಿ ಯಾವುದೇ ಶಿಲ್ಪಗಳು ಕಾಣಬರುವುದಿಲ್ಲ.

**ನವರಂಗ:-**ಈ ಮೂರು ಗರ್ಭಗೃಹಗಳ ಮುಂದೆ ಮಧ್ಯದಲ್ಲಿ ನವರಂಗವನ್ನು ಮಾಡಲಾಗಿದೆ. ಈ ನವರಂಗದ ಮಧ್ಯದಲ್ಲಿರುವ ಕಂಬಗಳು ಬೆಣಚುಕಲ್ಲಿನಲ್ಲಿ ಮಾಡಲಾಗಿರುವಂತಹ ಕಂಬಗಳಾಗಿವೆ. ಇವುಗಳನ್ನು ಶಿಲ್ಪಿಯು ಉಳಿಯಿಂದ ಕೆತ್ತನೆ ಮಾಡಲಾಗಿದ್ದು, ತಿರುಗಣೆ ಯಂತ್ರದ ಸಹಾಯದಿಂದ ತಯಾರು ಮಾಡಲಾಗಿರುವ ಕಂಬಗಳಂತೆ ನಯವಾಗಿ ಇವೆ. **(ಚಿ.ಸಂ.230)** ಇವುಗಳ ಪೀಠವು ಚೌಕಾಕಾರವಾಗಿದ್ದು, ಕಾಂಡದ ಭಾಗದಲ್ಲಿ ಘಂಟೆ, ಗಾಲಿ, ಘಟ ರೀತಿ ಇದ್ದು, ಬೋದಿಗೆಯ ಭಾಗವನ್ನು ಗಾಲಿಯಂತೆ ರಚಿಸಲಾಗಿದೆ. ಅದರ ಮೇಲಿರುವ ಫಲಗೈ ಪದ್ಮ ಪುಷ್ಪಾಕಾರದಲ್ಲಿದ್ದು, ಅದರ ಮೇಲೆ ಚೌಕಾಕಾರದ ಪಲಗೈಯನ್ನು ಮಾಡಲಾಗಿದೆ. ಬೋದಿಗೆಯ ಮೇಲಿರುವ ಕಪೋತವು ಸರಳವಾಗಿದೆ. ಈ ನವರಂಗದ ಮಧ್ಯದಲ್ಲಿ ಚಪ್ಪಟೆಯಾಕಾರವಾಗಿ ಬಿಡಿಸಲಾಗಿರುವ ಪದ್ಮಪುಷ್ಪವಿದೆ.[196]

ನವರಂಗದ ಬಾಗಿಲು ಅಲಂಕರಣದ ಕೆತ್ತನೆಯಿಂದ ಕೂಡಿದ್ದು, ಬಾಗಿಲ ಪಟ್ಟಿಕೆಗಳಲ್ಲಿ ಬಳ್ಳಿ ಸುರಳಿ ಪದ್ಮಪುಷ್ಪದ ರೀತಿ ಕೆತ್ತನೆ ಮಾಡಿ ಜೋಡಿಸಲಾಗಿದೆ. ಅಂತ್ಯದ ಪಟ್ಟಿಕೆಗಳಲ್ಲಿ ಸಿಂಹಗಳನ್ನು ಕೆತ್ತನೆ ಮಾಡಲಾಗಿದೆ.

ಬಾಗಿಲ ಇಕ್ಕೆಲಗಳಲ್ಲಿ ಗಂಗೆಯಮುನೆಯರ ಶಿಲ್ಪಗಳನ್ನು ಬಿಡಿಸಲಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಶಿಲ್ಪವಿದೆ. ಅದರ ಮೇಲೆ ಸಿಂಹಗಳ ಮುಖಗಳು ಮತ್ತು ಹಂಸಗಳ ಸಾಲುಗಳನ್ನು ಬಿಡಿಸಲಾಗಿದೆ. ನವರಂಗದ ಪಶ್ಚಿಮದ ಅಡ್ಡ ಪಟ್ಟಿಕೆಯ ಮೇಲೆ ಶಾಸನವನ್ನು ಬರೆಯಲಾಗಿದೆ.

**ಮುಖಮಂಟಪ**:-ನವರಂಗದ ಮುಂದಿರುವ ಮುಖಮಂಟಪದಲ್ಲಿ ಸುಮಾರು ಆರು ಕಂಬಗಳಿವೆ. ಈ ಕಂಬಗಳು ಸಹ ನವರಂಗದ ಒಳಗಿರುವ ಕಂಬದ ರೀತಿಯಲ್ಲಿಯೇ ಇವೆ. ಮೇಲ್ಛಾವಣಿಯ ಮಧ್ಯದಲ್ಲಿ ಚಪ್ಪಟೆಯಾಕಾರದ ಅರಳಿದ ಪದ್ಮಪುಷ್ಪವಿದೆ.

**ಅಧಿಷ್ಠಾನ**:-ಅಧಿಷ್ಠಾನವು ಸುಮಾರು ಮೂರು ಅಡಿ ಎತ್ತರವಾಗಿದ್ದು, ಉಪಾನ, ಜಗತಿ, ದುಂಡಾದ ಕುಮುದ, ಕಂಠ ಮತ್ತು ಅಲ್ಲಲ್ಲಿ ಕೂಡುಗಳನ್ನು ಮಾಡಲಾಗಿದೆ. ಗರ್ಭಗೃಹದ ಮೇಲಿರುವ ಭಿತ್ತಿಯು ಪ್ರಕೃತಿಯ ವಿಕೋಪಕ್ಕೆ ತುತ್ತಾಗಿದ್ದರಿಂದ ಭಿತ್ತಿಯ ಭಾಗವನ್ನು ಈಗ ಸಂಪೂರ್ಣವಾಗಿ ಜೀರ್ಣೋದ್ಧಾರ ಮಾಡಲಾಗಿದೆ. ಭಿತ್ತಿಗೆ ಕಣಶಿಲೆಯ ಕಲ್ಲುಚಪ್ಪಡಿಗಳನ್ನು ಜೋಡಿಸಿ ಮುಚ್ಚಲಾಗಿದೆ. ಈ ಭಿತ್ತಿಯ ಮೇಲಿರುವ ಕಪೋತವು ಸರಳವಾಗಿದ್ದು, ದೇವಾಲಯದ ಸುತ್ತಲೂ ಕಲ್ಲಿನ ದಿಂಡನ್ನು ಸ್ವಲ್ಪ ಮುಂಚಾಚಿದಂತೆ ನಿರ್ಮಿಸಲಾಗಿದೆ. ಈ ಬಸದಿಯಲ್ಲಿ ಯಾವುದೇ ರೀತಿಯ ಶಿಖರಗಳು ಪ್ರಸ್ತುತವಾಗಿ ಕಾಣಬರುವುದಿಲ್ಲ. ಈ ಬಸದಿಯನ್ನು ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯವರು ಜೀರ್ಣೋದ್ಧಾರಗೊಳಿಸಿದ್ದಾರೆ.[197] **(ಚಿ.ಸಂ.234)**

**ಪಾರ್ಶ್ವನಾಥ ಜೈನ ಬಸದಿ-ಮಾಕೋಡು**

ಮಾಕೋಡು ಗ್ರಾಮವು ಪಿರಿಯಾಪಟ್ಟಣ ತಾಲೂಕಿನ ರಾವಂದೂರು ಹೋಬಳಿಗೆ ಸೇರಿದೆ. ಇದು ತಾಲೂಕು ಕೇಂದ್ರದಿಂದ ಈಶಾನ್ಯ ಭಾಗಕ್ಕೆ 18 ಕಿ.ಮೀ.ದೂರದಲ್ಲಿದೆ. ಈ ಬಸದಿಯು ಸಂಪೂರ್ಣವಾಗಿ ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದೆ. ಇದು ಗ್ರಾಮದ ಮಧ್ಯಭಾಗದಲ್ಲಿರುವ ಬಸವೇಶ್ವರ ದೇವಾಲಯದ ಅನತಿ ದೂರದಲ್ಲಿದೆ. ಈ ಜೈನ ಬಸದಿಯು ಏಕಕೂಟ ಬಸದಿಯಾಗಿದ್ದು. ಪೂರ್ವಾಭಿಮುಖವಾಗಿ ನಿರ್ಮಾಣ ಮಾಡಲಾಗಿದೆ.**(ಚಿ.ಸಂ.235)** ಇದು ಗರ್ಭಗೃಹ, ಸುಕನಾಸಿ, ನವರಂಗ, ಮುಖಮಂಟಪಗಳನ್ನು ಒಳಗೊಂಡಿದೆ.

**ಗರ್ಭಗೃಹ**:-ಗರ್ಭಗೃಹವು 8X8 ಅಡಿ ಉದ್ದ ಅಗಲವನ್ನು ಹೊಂದಿದ್ದು, ಗರ್ಭಗೃಹದ ಮಧ್ಯಭಾಗದಲ್ಲಿರುವ ಪೀಠವು ಮಣ್ಣಿನಲ್ಲಿ ಹುದುಗಿಹೋಗಿದೆ. ಒಂದು ಅಡಿ ಎತ್ತರದ ನಕ್ಷತ್ರಾಕಾರದ ಪೀಠದ ಮೇಲೆ ಕಾಯೋತ್ಸರ್ಗ ಮುದ್ರೆಯಲ್ಲಿ ನಿಂತಿರುವ ಎಂಟು ಅಡಿ ಎತ್ತರದ ಧ್ಯಾನಾಸಕ್ತವಾಗಿರುವ ಪಾರ್ಶ್ವನಾಥನ ವಿಗ್ರಹವಿದ್ದು,**(ಚಿ.ಸಂ.236)** ಪಾರ್ಶ್ವನಾಥನ ಮುಖದಲ್ಲಿ ಸೌಮ್ಯತೆ ಎದ್ದು ಕಾಣುತ್ತದೆ. ತಲೆಯ ಮೇಲೆ ಏಳುಹೆಡೆಯ ಸರ್ಪವಿದ್ದು, ಸರ್ಪಗಳಲ್ಲಿ ರೌದ್ರತೆಯನ್ನು ಶಿಲ್ಪಿಸಲಾಗಿದೆ. ಅದರ ಮೇಲ್ಭಾಗದಲ್ಲಿ ಸುಂದರ ಅಲಂಕಾರಿಕ ಕೆತ್ತನೆಯುಳ್ಳ ಛತ್ರಿ ಕಂಡುಬರುತ್ತದೆ. ಈ ಮೂರ್ತಿಯ ಸುತ್ತಲೂ ಕಮಾನಿನಾಕಾರದ ಪ್ರಭಾವಳಿ ಇದ್ದು, ಪ್ರಭಾವಳಿಯ ಕೆಳಭಾಗದ ಎರಡೂ ಪಾರ್ಶ್ವಗಳಲ್ಲಿ ಪಾರ್ಶ್ವನಾಥನ

ಸೇವಕರಾದ ಧರಣೇಂದ್ರ ಮತ್ತು ಪದ್ಮಾವತಿಯರ ಒಂದು ಅಡಿ ಎತ್ತರದ ಉಬ್ಬು ಕೆತ್ತನೆಗಳಿವೆ. ಪ್ರಭಾವಳಿಯ ಬಲ ಪಾರ್ಶ್ವದ ಪಾದದ ಭಾಗದಲ್ಲಿ ಪದ್ಮಾವತಿಯು ದ್ವಿಭಂಗಿಯಲ್ಲಿ ನಿಂತಿದ್ದು, ಸರ್ವಾಲಂಕರಣ ಭೂಷಿತೆಯಾಗಿದ್ದಾಳೆ. ಈಕೆ ಚತುರ್ಭುಜವನ್ನು ಹೊಂದಿದ್ದು, ತನ್ನ ಕೈಗಳಲ್ಲಿ ಕ್ರಮವಾಗಿ ವರದಹಸ್ತ, ಅಂಕುಶ, ಪಾಶ ಹಾಗೂ ಬಹುಬೀಜ ಫಲಗಳನ್ನು ಹಿಡಿದಿದ್ದಾಳೆ. ಈಕೆಯ ತಲೆಯಲ್ಲಿ ಸೂಕ್ಷ್ಮ ಕೆತ್ತನೆಗಳನ್ನೊಂದಿರುವ ಕಿರೀಟವಿದೆ. ಅದರ ಮೇಲೆ ಮೂರು ಹೆಡೆಯ ಸರ್ಪದ ಕೆತ್ತನೆ ಇದೆ. ಪಾರ್ಶ್ವನಾಥನ ಎಡ ಪಾರ್ಶ್ವದಲ್ಲಿರುವ ಧರಣೇಂದ್ರ ಉಬ್ಬುಶಿಲ್ಪವು ದ್ವಿಭಂಗಿಯಲ್ಲಿದ್ದು, ಈತನು ಸರ್ವಾಲಂಕರಣ ಭೂಷಿತನಾಗಿದ್ದಾನೆ. ಈತನು ಚತುರ್ಭುಜಧಾರಿಯಾಗಿದ್ದು, ಕೈಗಳಲ್ಲಿ ಕ್ರಮವಾಗಿ ವರದಹಸ್ತ, ಅಂಕುಶ, ಪಾಶ, ಹಾಗೂ ಬಹುಬೀಜ ಫಲಗಳನ್ನು ಹಿಡಿದಿದ್ದಾನೆ. ತಲೆಯಲ್ಲಿ ಸೂಕ್ಷ್ಮ ಕೆತ್ತನೆಗಳಿಂದ ಕೂಡಿದ ಸುಂದರವಾದ ಕಿರೀಟವಿದ್ದು, ಅದರ ಮೇಲ್ಭಾಗದಲ್ಲಿ ಮೂರು ಹೆಡೆಗಳನ್ನೊಂದಿರುವ ಸರ್ಪವಿದೆ. ಪ್ರಭಾವಳಿಯ ಮಧ್ಯಭಾಗದ ಎರಡೂ ಪಾರ್ಶ್ವಗಳಲ್ಲಿ ಎರಡೆರಡು ಸೂಕ್ಷ್ಮ ಕೆತ್ತನೆಗಳನ್ನೊಂದಿರುವ ಅರೆಗಂಬಗಳಿದ್ದು, ಈ ಕಂಬಗಳ ಮೇಲ್ಭಾಗದಲ್ಲಿ ವ್ಯಾಳಗಳ ಕೆತ್ತನೆ ಇದೆ. ಈ ವ್ಯಾಳಗಳ ಬಾಯಿಂದ ಹೊರಬರುವ ಲತಾಬಳ್ಳಿ ಸುರುಳಿಗಳು ಕಮಾನಿನಾಕಾರದ ಮೇಲ್ಭಾಗದಲ್ಲಿ ಸೇರಿದ್ದು, ತುದಿಯಲ್ಲಿ ಅಲಂಕಾರಿಕ ಕೆತ್ತನೆಗಳಿಂದ ಕೂಡಿರುವ ಕೀರ್ತಿಮುಖವಿದೆ.

ಒಟ್ಟಾರೆಯಾಗಿ ಈ ಶಿಲ್ಪವು ಸೂಕ್ಷ್ಮ ಕೆತ್ತನೆಗಳಿಂದ ಕೂಡಿರುವ ಸುಂದರ ಮತ್ತು ಆಕರ್ಷಕ ಕಲಾಕೃತಿಯಾಗಿದ್ದು, ಸೋಪುಗಲ್ಲಿನಲ್ಲಿ ಕಂಡರಿಸಲ್ಪಟ್ಟಿದೆ. ಗರ್ಭಗೃಹವು ಶಿಥಿಲಾವಸ್ಥೆಯಲ್ಲಿದ್ದು, ಮಳೆಯ ನೀರು ನೇರವಾಗಿ ಶಿಲ್ಪದ ಮೇಲೆ ಬೀಳುವುದರಿಂದ ಈ ಶಿಲ್ಪವು ದುಸ್ಥಿತಿಯಲ್ಲಿದೆ. ಗರ್ಭಗೃಹದ ಮೇಲ್ಛಾವಣಿಯಲ್ಲಿ ಮೂರು ಹಂತಗಳಲ್ಲಿ ನಿರ್ಮಾಣವಾದ ನಕ್ಷತ್ರಾಕಾರದ ಭುವನೇಶ್ವರಿ ಇದ್ದು,**(ಚಿ.ಸಂ.237)** ಭುವನೇಶ್ವರಿಯ ಮಧ್ಯಭಾಗದಲ್ಲಿ ಕಮಲದ ಹೂವಿನ ರಚನೆ ಇದೆ. ಗರ್ಭಗೃಹದ ದ್ವಾರಬಂಧವು ಪದ್ಮದಳಗಳ ಅಲಂಕಾರಗಳಿಂದ ಕೂಡಿದ್ದು, ಲಲಾಟದಲ್ಲಿರುವ ಬಿಂಬವು ಅಸ್ಪಷ್ಟವಾಗಿದೆ.

**ಸುಕನಾಸಿ:**-ಸುಕನಾಸಿಯು ಗರ್ಭಗೃಹದಷ್ಟೆ ಉದ್ದ ಅಗಲವಾಗಿದ್ದು, ಚೌಕಾಕಾರವಾಗಿದೆ. ಇಲ್ಲಿ ಯಾವುದೇ ಶಿಲ್ಪಗಳಾಗಲಿ, ಅಲಂಕರಣೆಗಳಾಗಲಿ ಕಂಡುಬರುವುದಿಲ್ಲ. ಅದರ ಮೇಲ್ಛಾವಣಿಯಲ್ಲಿ ನಕ್ಷತ್ರಾಕಾರದ ಭುವನೇಶ್ವರಿ ಇದೆ.(ಚಿತ್ರ) ಈ ಭುವನೇಶ್ವರಿಯನ್ನು ಬಹಳ ಸುಂದರವಾಗಿ ರಚಿಸಿ ಮೂಲೆಗಳಲ್ಲಿ ಅರಳಿದ ಪದ್ಮಪುಷ್ಪ, ಮಧ್ಯದಲ್ಲಿ ಮೂರು ಸುತ್ತು

ವಿಷ್ಣುವಿನ ಚಕ್ರದಂತೆ ಬಿಡಿಸಲಾಗಿರುವ ಪದ್ಮಪುಷ್ಪವಿದೆ. ಸುಕನಾಸಿಯ ದ್ವಾರವು ಅಲಂಕೃತ ಪಟ್ಟಿಕೆಗಳಿಂದ ಕೂಡಿದ್ದು, ಪದ್ಮದ ದಳಗಳ ಮತ್ತು ಅರಳಿದ ಪುಷ್ಪಗಳ ಅಲಂಕರಣೆ ಇದೆ.

**ನವರಂಗ**:-ನವರಂಗವು 20X20 ಅಡಿ ಉದ್ದ ಅಗಲವಾಗಿದೆ. ಮಧ್ಯಭಾಗದಲ್ಲಿ ಒಂದು ಅಡಿ ರಂಗಮಂಟಪದ ಮೇಲೆ ನಾಲ್ಕು ಪ್ರಧಾನ ಹೊಯ್ಸಳ ಶೈಲಿಯ ಕಂಬಗಳಿದ್ದು, ಇವುಗಳು ಉಪಪೀಠ, ಚತುರಸ್ರಾಕಾರದ ಪೀಠ, ಅಷ್ಟಸ್ರ ಮತ್ತು ಷೋಡಶ ಮುಖಗಳನ್ನು ಹೊಂದಿದ್ದು, ಮಧ್ಯಭಾಗದಲ್ಲಿ ಉರುಳಿ ದಿಂಡಿನಾಕಾರದಲ್ಲಿವೆ. ಅದರ ಮೇಲ್ಭಾಗದಲ್ಲಿ ತಡಿ, ಮಂಡಿ ಫಲಕಗಳನೊಂದಿರುವ ಆಧಾರ ಪೋತಿಕೆಗಳಿವೆ. ನವರಂಗದ ಮೇಲ್ಛಾವಣಿಯಲ್ಲಿ ಮೂರು ಹಂತಗಳಲ್ಲಿ ನಿರ್ಮಾಣವಾಗಿರುವ ಸುಂದರವಾದ ಭುವನೇಶ್ವರಿ ಇದೆ. ನವರಂಗದ ಭಿತ್ತಿಯು ಚಪ್ಪಡಿ ಕಲ್ಲುಗಳಿಂದ ಜೋಡಿಸಲ್ಪಟ್ಟಿದೆ.**(ಚಿ.ಸಂ.238)**

ಈ ದೇವಾಲಯವು ಸಂಪೂರ್ಣವಾಗಿ ಸೋಪುಗಲ್ಲು ಮತ್ತು ಗ್ರಾನೈಟ್ ಕಲ್ಲಿನ ನಿರ್ಮಾಣವಾಗಿದೆ. ಈ ಎರಡು ಶಿಲೆಗಳನ್ನು ಬಳಸಿ ನಿರ್ಮಿಸಿರುವುದನ್ನು ಕಾಣಬಹುದು, ಗರ್ಭಗೃಹದಲ್ಲಿರುವ ಮೂರ್ತಿಶಿಲ್ಪ ಗರ್ಭಗೃಹದ ಮೇಲ್ಛಾವಣಿ, ದ್ವಾರಬಂಧ ಮತ್ತು ಶುಕನಾಸಿಯ ದ್ವಾರಬಂಧ ಹಾಗೂ ನವರಂಗದಲ್ಲಿರುವ ನಾಲ್ಕು ಪ್ರಧಾನ ಸ್ತಂಭಗಳು ಮಾತ್ರ ಸೋಪುಗಲ್ಲಿನಲ್ಲಿದ್ದು, ದೇವಾಲಯದ ಉಳಿದ ಭಾಗಗಳೆಲ್ಲವೂ ಸಹ ಗ್ರಾನೈಟ್ ಶಿಲೆಯಾಗಿವೆ.

**ಅಧಿಷ್ಠಾನ**:-ಈ ಬಸದಿಯು ನಾಲ್ಕು ಅಡಿ ಎತ್ತರದ ಅಧಿಷ್ಠಾನವನ್ನು ಹೊಂದಿದ್ದು, ಗರ್ಭಗೃಹದ ಅಧಿಷ್ಠಾನದಲ್ಲಿ ಉಪಾನ, ಜಗತಿ, ಚೂಪು ಕುಮುದ, ಗಳ, ಪ್ರತಿಯ ಭಾಗಗಳನ್ನೊಂದಿದೆ. ಆದರೆ ನವರಂಗದ ಅಧಿಷ್ಠಾನವು ಮಂಚಬಂಧ ಅಧಿಷ್ಠಾನವಾಗಿದ್ದು, ಒಂದೇ ಬಸದಿಯಲ್ಲಿ ಎರಡು ರೀತಿಯ ಅಧಿಷ್ಠಾನಗಳಿರುವುದನ್ನು ಕಾಣಬಹುದು.**(ಚಿ.ಸಂ.239)**

**ಭಿತ್ತಿ**:-ದೇವಾಲಯದ ಭಿತ್ತಿಯ ಭಾಗದಲ್ಲಿ ಭದ್ರಕಸ್ತಂಭ ಹಾಗೂ ಬಾರಿ ಗಾತ್ರದ ಚಪ್ಪಡಿಗಳನ್ನು ಜೋಡಿಸಲ್ಪಟ್ಟಿದ್ದು, ಯಾವುದೇ ರೀತಿಯ ಕೆತ್ತನೆಗಳಿಲ್ಲದೆ ಅಪೂರ್ಣಗೊಂಡಿದೆ. ಈ ಬಸದಿಯಲ್ಲಿ ಅಪೂರ್ಣಗೊಂಡಿರುವ ಭಿತ್ತಿ ಹಾಗೂ ಪ್ರಸ್ತರದ ಭಾಗಗಳಿಂದ ದೇವಾಲಯ ಅಥವಾ ಬಸದಿಗಳನ್ನು ಹೊಯ್ಸಳರ ಕಾಲದಲ್ಲಿ ನಿರ್ಮಿಸುತ್ತಿದ್ದ ರೀತಿಯನ್ನು ತಿಳಿದುಕೊಳ್ಳಬಹುದಾಗಿದೆ. ಈ ದೇವಾಲಯದ ನವರಂಗದ ಬಲ ಪಾರ್ಶ್ವದ ಭಿತ್ತಿಯು ಸಂಪೂರ್ಣವಾಗಿ ನಾಶಗೊಂಡಿದ್ದು, ಈ ಭಿತ್ತಿಯಲ್ಲಿ ಅಳವಡಿಸಿದ ಕಲ್ಲಿನ ಅವಶೇಷಗಳು ಈ ಬಸದಿಯ ಪಾರ್ಶ್ವಗಳಲ್ಲಿ ಬಿದ್ದಿರುವುದನ್ನು ಕಾಣಬಹುದು. ಒಟ್ಟಾರೆಯಾಗಿ ಈ ಬಸದಿಯು ಭಾಗಶಃ ನಾಶವಾಗಿದ್ದು ಶೀಘ್ರವಾಗಿ ಜೀರ್ಣೋದ್ಧಾರಗೊಳ್ಳಬೇಕಿದೆ.[198]**(ಚಿ.ಸಂ.240)**

## ಅಡಿ ಟಿಪ್ಪಣಿಗಳು

1. ಮೈಸೂರು ನಾಗರಾಜ್ ಶರ್ಮ- ಹೊಯ್ಸಳ ಶಿಲ್ಪದಲ್ಲಿ ಶಿವ, ಪು.ಸಂ.16-17
2. ಚಿದಾನಂದ ಮೂರ್ತಿ ಎಂ- ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, 2014, ಪು.ಸಂ.140
3. ದಿವಾಕರ ಆರ್ ಆರ್.- ಕರ್ನಾಟಕ ಪರಂಪರೆ, ಸಂ.1, ಪು.ಸಂ.180
4. ಮೈಸೂರು ನಾಗರಾಜ್ ಶರ್ಮ- ಹೊಯ್ಸಳ ಶಿಲ್ಪದಲ್ಲಿ ಶಿವ, ಪು.ಸಂ.35
5. ಕೆ.ವಸಂತ ಲಕ್ಷ್ಮೀ- ಕರ್ನಾಟಕ ಶೈವ ಶಿಲ್ಪಗಳು, ಪು.ಸಂ.203
6. ಕೃ.ನ.ತಾ.ಗ್ಯಾ.,2011, ಪು.ಸಂ.174
7. ಎ.ಕ.ಸಂ.5, ಕೃ.ನ., ಶಾ.ಸಂ.9, ಪು.ಸಂ.8
8. ಕ್ಷೇತ್ರಕಾರ್ಯ ವರದಿ
9. ಎ.ಕ.ಸಂ.5, ಕೃ.ನ., ಶಾ.ಸಂ.10, ಪು.ಸಂ.8
10. ಎ.ಕ.ಸಂ.5, ತಿ.ನ., ಶಾ.ಸಂ.96, ಪು.ಸಂ.481
11. ಡಿ.ವಿ.ದೇವರಾಜು- ಹಿಸ್ಟರಿ ಆಫ್ ಸೋಮನಾಥಪುರ, 1994, ಪು.ಸಂ.12
12. ಶ್ರೀಕಂಠಶಾಸ್ತ್ರೀ-ಹೊಯ್ಸಳ ವಾಸ್ತುಶಿಲ್ಪ, ಪು.ಸಂ.59
13. ಎ.ಕ.ಸಂ.5, ತಿ.ನ., ಶಾ.ಸಂ.96, ಪು.ಸಂ.481
14. ಎಂ.ಎ.ಆರ್., 1943, ಪು.ಸಂ.39
15. ಡಿ.ವಿ.ದೇವರಾಜು- ಹಿಸ್ಟರಿ ಆಫ್ ಸೋಮನಾಥಪುರ, 1994, ಪು.ಸಂ.14-15
16. ಎಂ.ಎ.ಆರ್., 1942, ಪು.ಸಂ.59
17. ಕ್ಷೇತ್ರಕಾರ್ಯ ವರದಿಯನ್ನು ಆಧರಿಸಿ ಬರೆಯಲಾಗಿದೆ
18. ಪಿ.ಪ.ತಾ.ಗ್ಯಾ. 2010, ಪು.ಸಂ.175
19. ಎ.ಕ.ಸಂ.4, ಪಿ.ಪಂ., ಶಾ.ಸಂ.118, ಪು.ಸಂ.567
20. ಕ್ಷೇತ್ರಕಾರ್ಯ ವರದಿ
21. ಕೆ.ವಸಂತ ಲಕ್ಷ್ಮೀ- ಕರ್ನಾಟಕ ಶೈವ ಶಿಲ್ಪಗಳು, 2008, ಪು.ಸಂ.32
22. ಕ.ರಾ.ಗ್ಯಾ. ಮೈಸೂರು, 1988, ಪು.ಸಂ.866
23. ಕ್ಷೇತ್ರಕಾರ್ಯ ವರದಿ
24. ಎ.ಕ.ಸಂ.4, ಪಿ.ಪಂ., ಶಾ.ಸಂ.13, ಪು.ಸಂ.580
25. ಪಿ.ಪ.ತಾ.ಗ್ಯಾ. 2010, ಪು.ಸಂ.184
26. ಕೂ.ಸ.ಅಪರ್ಣ- ದೇವಾಲಯಗಳ ವಾಸ್ತುಶಿಲ್ಪ ಪರಿಚಯ, 1999, ಪು.ಸಂ.174

27. ಕ್ಷೇತ್ರಕಾರ್ಯ ವರದಿ

28. ಎ.ಕ.ಸಂ.3, ಮೈ., ಶಾ.ಸಂ.216, ಪು.ಸಂ.318

29. ಅದೇ, ಶಾ.ಸಂ.214, ಪು.ಸಂ.316

30. ಎ.ಕ.ಸಂ.3, ಮೈ., ಶಾ.ಸಂ.214, ಪು.ಸಂ.316

31. ಮೈ.ತಾ.ಗ್ಯಾ.2010, ಪು.ಸಂ.15

32. ಧರ್ಮಸ್ಥಳ ಧರ್ಮೋತ್ಥಾನ ಟ್ರಸ್ಟ್- ಶಿಲಾ ಫಲಕ ಬರೆಯಲಾಗಿದೆ.

33. ಸ್ಥಳೀಯರಿಂದ ಸಂಗ್ರಹಿಸಿದ ಮಾಹಿತಿ.

34. ಕ್ಷೇತ್ರಕಾರ್ಯ ವರದಿ

35. ಎ.ಕ.ಸಂ.03, ನ.ಗೂ., ಶಾ.ಸಂ.213, ಪು.ಸಂ.310

36. ಕ.ರಾ.ಗ್ಯಾ. ಮೈಸೂರು, 1988, ಪು.ಸಂ.917

37. ಎಂ.ಎ.ಆರ್., 1944, ಪು.ಸಂ.20

38. ಕ.ರಾ.ಗ್ಯಾ. ಮೈಸೂರು, 1988, ಪು.ಸಂ.917

39. ಎಂ.ಎ.ಆರ್., 1944, ಪು.ಸಂ.20

40. ಕ್ಷೇತ್ರಕಾರ್ಯ ವರದಿ

41. ನ.ಗೂ.ತಾ.ಗ್ಯಾ., 2011, ಪು.ಸಂ.270

42. ಕ್ಷೇತ್ರಕಾರ್ಯ ವರದಿ

43. ನ.ಗೂ ತಾ.ಗ್ಯಾ., 2011, ಪು.ಸಂ.182

44. ಪೂರ್ವೋಕ್ತ

45. ಎ.ಕ.ಸಂ.3, ನ.ಗೂ., ಶಾ.ಸಂ.156, ಪು.ಸಂ.270

46. ಎ.ಕ.ಸಂ.3, ಹೆ.ಕೋ., ಶಾ.ಸಂ.74, ಪು.ಸಂ.472

47. ಕ.ರಾ.ಗ್ಯಾ. ಮೈಸೂರು, 1988, ಪು.ಸಂ.865

48. ಪೂರ್ವೋಕ್ತ, ಪು.ಸಂ.865

49. ಹೆ.ಕೋ.ತಾ.ಗ್ಯಾ., 2011, ಪು.ಸಂ.151.

50. ಕ್ಷೇತ್ರಕಾರ್ಯ ವರದಿ

51. ಕ.ರಾ.ಗ್ಯಾ. ಮೈಸೂರು, 1988, ಪು.ಸಂ.865

52. ಪೂರ್ವೋಕ್ತ, ಪು.ಸಂ.850

53. ಕ್ಷೇತ್ರಕಾರ್ಯ ವರದಿ

54. ಕನ್ನಡ ವಿಷಯ ವಿಶ್ವಕೋಶ, ಮೈ.ವಿ.ವಿ., ಪು.ಸಂ.843

55. ಎ.ಕ.ಸಂ.3, ನ.ಗೂ., ಶಾ.ಸಂ.340, ಪು.ಸಂ.398

56. ಕ್ಷೇತ್ರಕಾರ್ಯ ವರದಿ

57. ಕ.ರಾ.ಗ್ಯಾ. ಮೈಸೂರು, 1988, ಪು.ಸಂ.835-856

58. ಕೆ.ವಸಂತ ಲಕ್ಷ್ಮೀ- ಕರ್ನಾಟಕ ಶೈವ ಶಿಲ್ಪಗಳು, 2008, ಪು.ಸಂ.32

59. ಡಾ.ಜಿ.ಮನೋಜ್-ದೇವಾಲಯ ವಿಜ್ಞಾನ, ಚಿತ್ರದುರ್ಗ, 2015, ಪು.ಸಂ.20

60. ಕ.ರಾ.ಗ್ಯಾ. ಮೈಸೂರು, 1988, ಪು.ಸಂ.856

61. ಅದೇ,

62. ಕ್ಷೇತ್ರಕಾರ್ಯ ವರದಿ

63. ಕೃ.ರಾ.ತಾ.ಗ್ಯಾ. ಮೈಸೂರು, 2011, ಪು.ಸಂ.171

64. ಅದೇ,

65. ಕ.ರಾ.ಗ್ಯಾ. ಮೈಸೂರು, 1988, ಪು.ಸಂ.846

66. ಕ್ಷೇತ್ರಕಾರ್ಯ ವರದಿ

67. ಕೃ.ರಾ.ತಾ.ಗ್ಯಾ. ಮೈಸೂರು, 2011, ಪು.ಸಂ.175-176

68. ಎಂ.ಎ.ಆರ್.19., ಪು.ಸಂ.

69. ಎ.ಕ.ಸಂ.5, ಕೃ.ನ., ಶಾ.ಸಂ.52, ಪು.ಸಂ.60

70. ಡಾ.ಜಿ.ಮನೋಜ್-ದೇವಾಲಯ ವಿಜ್ಞಾನ, ಚಿತ್ರದುರ್ಗ, 2015, ಪು.ಸಂ.16

71. ಕ್ಷೇತ್ರಕಾರ್ಯ ವರದಿ

72. ಕ.ರಾ.ಗ್ಯಾ. ಮೈಸೂರು, 1988, ಪು.ಸಂ.909

73. ಎ.ಕ.ಸಂ.04, ಪಿ.ಪ., ಶಾ.ಸಂ.147, ಪು.ಸಂ.584

74. ಮೈಸೂರು ನಾಗರಾಜ್ ಶರ್ಮ- ಹೊಯ್ಸಳ ಶಿಲ್ಪದಲ್ಲಿ ಶಿವ, ಪು.ಸಂ.223

75. ಡಾ.ಜಿ.ಮನೋಜ್-ದೇವಾಲಯ ವಿಜ್ಞಾನ, ಚಿತ್ರದುರ್ಗ, 2015, ಪು.ಸಂ.107

76. ಎ.ಕ.ಸಂ.4, ಪಿ.ಪ., ಶಾ.ಸಂ.147, ಪು.ಸಂ.584

77. ಕ್ಷೇತ್ರಕಾರ್ಯ ವರದಿ

78. ಡಾ.ಜಿ.ಮನೋಜ್-ದೇವಾಲಯ ವಿಜ್ಞಾನ, ಚಿತ್ರದುರ್ಗ, 2015, ಪು.ಸಂ.126

79. ಕ್ಷೇತ್ರಕಾರ್ಯ ವರದಿ

80. ಎ.ಕ.ಸಂ.4, ಪಿ.ಪ., ಶಾ.ಸಂ.147, ಪು.ಸಂ.584

81. ಕ್ಷೇತ್ರಕಾರ್ಯದಲ್ಲಿ ಸ್ಥಳೀಯರಿಂದ ಸಂಗ್ರಿಹಿಸಿದ ಮಾಹಿತಿ

82. ಎ.ಕ.ಸಂ.4, ಹು.ಣ., ಶಾ.ಸಂ.32, ಪು.ಸಂ.503

83. ಡಾ.ಜಿ.ಮನೋಜ್-ದೇವಾಲಯ ವಿಜ್ಞಾನ, ಚಿತ್ರದುರ್ಗ, 2015, ಪು.ಸಂ.126

84. ಕ್ಷೇತ್ರಕಾರ್ಯ ವರದಿ

85. ಹು.ಣ.ತಾ.ಗ್ಯಾ.2011, ಪು.ಸಂ.09

86. ಎ.ಕ.ಸಂ.4, ಹು.ಣ., ಶಾ.ಸಂ.26, ಪು.ಸಂ.501

87. ಎಂ.ಎ.ಆರ್., 1932, ಪು.ಸಂ.26

**ವೈಷ್ಣವ ದೇವಾಲಯಗಳು**

88. ಎದುರ್ಕಳ ಕೆ. ಶಂಕರನಾರಾಯಣ ಭಟ್ಟ – ಹಿಂದೂ ಧರ್ಮದ ಪರಿಚಯ, ಪು.ಸಂ.360

89. ಕನ್ನಡ ರತ್ನಕೋಶ–ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು, ಪು.ಸಂ.311

90. ದಿವಾಕರ್ ಆರ್.ಆರ್.–ಕರ್ನಾಟಕದ ಪರಂಪರೆ, ಸಂ.1, ಪು.ಸಂ.185.

91. ಚಿದಾನಂದ ಮೂರ್ತಿ ಎಂ–ಕ.ಶಾ.ಸಾಂ.ಅ., ಪು.ಸಂ.139.

92. ಘೋಷ್ ಎ.– ಜೈನ ಆರ್ಟ್ ಅಂಡ್ ಆರ್ಕಿಟೆಕ್ಚರ್, ಸಂ.1, ಪು.ಸಂ.25

93. ಎಂ.ಎ.ಆರ್.–1936, ಪು.ಸಂ.73

94. ದಿವಾಕರ್ ಆರ್.ಆರ್. – ಪೂರ್ವೋಕ್ತ, ಸಂ.1, ಪು.ಸಂ.258

95. ಪೂರ್ವೋಕ್ತ, ಪು.ಸಂ.389

96. ಸಿಂದಗಿ ರಾಜಶೇಖರ – ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಪು.ಸಂ.127.

97. ಸೂರ್ಯನಾಥ್ ಯು ಕಾಮತ್-ಕ.ರಾ.ಗ್ಯಾ. 1988, ಪು.ಸಂ.920

98. ಎಂ.ಎ. ಆರ್. – 1932, ಪು.ಸಂ.03

99. ತಲಕಾಡು ಪಂಚಲಿಂಗೇಶ್ವರ ದರ್ಶನ ಮಹಾತ್ಮೆ, ಪು.ಸಂ.03

100. ಎಂ.ಎಸ್.ಕೃಷ್ಣಮೂರ್ತಿ– ತಲಕಾಡು ಪರಂಪರೆ ಮಾಲಿಕೆ, 2012, ಪು.ಸಂ.06

101. ಎಸ್.ಶ್ರೀಕಂಠಶಾಸ್ತ್ರಿ – ಹೊಯ್ಸಳ ವಾಸ್ತುಶಿಲ್ಪ, ಎರಡನೇ ಮುದ್ರಣ, 2014, ಪು.ಸಂ.69

102. ಎಂ.ಎ. ಆರ್.–1932, ಪು.ಸಂ.05

103. ಕ್ಷೇತ್ರಕಾರ್ಯ ವರದಿ

104. ಹು.ಣ.ತಾ.ಗ್ಯಾ.–2011, ಪು.ಸಂ.09

105. ಎ.ಕ.ಸಂ.04, ಹು.ಣ., ಶಾ.ಸಂ.25, ಪು.ಸಂ.500–501

106. ಎಂ.ಎ. ಆರ್. 1932, ಪು.ಸಂ.26

107. ಎಸ್.ಕೆ.ರಾಮಚಂದ್ರ ರಾವ್- ಪ್ರತಿಮಾಕೋಶ, ಪು.ಸಂ.211,

108. ಕ್ಷೇತ್ರಕಾರ್ಯ ವರದಿ.

109. ಕ.ರಾ.ಗ್ಯಾ. 1988, ಪು.ಸಂ.914

110. ಎಸ್.ಶ್ರೀಕಂಠಶಾಸ್ತ್ರಿ-ಹೊಯ್ಸಳ ವಾಸ್ತುಶಿಲ್ಪ, 2014, ಪು.ಸಂ.49

111. ಎಸ್.ಶ್ರೀಕಂಠಶಾಸ್ತ್ರಿ-ಪೂರ್ವೋಕ್ತ, ಪು.ಸಂ.52

112. ಕ.ರಾ.ಗ್ಯಾ. 1988, ಪು.ಸಂ.915

113. ಜಯದೇವಪ್ಪ ಜೈನಕೇರಿ-ಕರ್ನಾಟಕ ಶಿಲ್ಪ ಸಂಸ್ಕೃತಿ, ಪು.ಸಂ. 101.

114. ಪೂರ್ವೋಕ್ತ-ಪು.ಸಂ.101

115. ಎಸ್.ಶ್ರೀಕಂಠಶಾಸ್ತ್ರಿ - ಪೂರ್ವೋಕ್ತ, ಪು.ಸಂ.57

116. ಕ್ಷೇತ್ರಕಾರ್ಯ ವರದಿ

117. ಕ.ರಾ.ಗ್ಯಾ. 1988, ಪು.ಸಂ.915

118. ಎಸ್.ಶ್ರೀಕಂಠಶಾಸ್ತ್ರಿ - ಪೂರ್ವೋಕ್ತ, ಪು.ಸಂ.52

119. ಎಂ.ಎ. ಆರ್. 1932, ಪು.ಸಂ.23

120. ಎಂ.ಎ. ಆರ್. 1932, ಪು.ಸಂ.37

121. ಜಯದೇವಪ್ಪ ಜೈನಕೇರಿ-ಕರ್ನಾಟಕ ಶಿಲ್ಪ ಸಂಸ್ಕೃತಿ, ಪು.ಸಂ.100

122. ಷ. ಶೆಟ್ಟರ್-ಸೋಮನಾಥಪುರ, ಪು.ಸಂ.114-118

123. ದೇವರಾಜ್ ಡಿ.ವಿ. - ಹಿಸ್ಟರಿ ಆಫ್ ಸೋಮನಾಥಪುರ, ಪು.ಸಂ.112-113

124. ಕ್ಷೇತ್ರಕಾರ್ಯ ವರದಿ.

125. ಎ.ಕ.ಸಂ.5, ತಿ.ನ., ಶಾ.ಸಂ.88, ಪು.ಸಂ.475

126. ಕ್ಷೇತ್ರಕಾರ್ಯ ವರದಿ.

127. ಅದೇ

128. ಅದೇ

129. ಅದೇ

130. ಅದೇ

131. ಅದೇ

132. ಅದೇ

133. ಅದೇ

134. ಎ.ಕ.ಸಂ.5, ಕೃ.ನ., ಶಾ.ಸಂ.89, ಪು.ಸಂ.92

135. ಕ.ರಾ.ಗ್ಯಾ. 1988, ಪು.ಸಂ.885

136. ಕ್ಷೇತ್ರಕಾರ್ಯ ವರದಿ.

137. ಅದೇ

138. ಅದೇ

139. ಅದೇ

140. ಕ.ರಾ.ಗ್ಯಾ. 1988, ಪು.ಸಂ.841

141. ಎ.ಕ.ಸಂ.3, ಹೆ.ಕೋ., ಶಾ.ಸಂ.87, ಪು.ಸಂ.90

142. ಕ.ರಾ.ಗ್ಯಾ. 1988, ಪು.ಸಂ.124

143. ಎಂ.ಎ. ಆರ್. 1945, ಪು.ಸಂ.53

144. ಕ.ರಾ.ಗ್ಯಾ. 1988, ಪು.ಸಂ.841.

145. ಕ್ಷೇತ್ರಕಾರ್ಯ ವರದಿ

146. ಎ.ಕ.ಸಂ.3, ಮೈ., ಶಾ.ಸಂ.97, ಪು.ಸಂ.501–502.

147. ಎಂ.ಎ. ಆರ್. 1937, ಪು.ಸಂ.11

148. ರಾಮಚಂದ್ರ ರಾವ್ ಎಸ್.ಕೆ.–ಪ್ರತಿಮಾಕೋಶ, ಪು.ಸಂ.216.

149. ಕ.ರಾ.ಗ್ಯಾ. 1988, ಪು.ಸಂ.888

150. ಎ.ಕ.ಸಂ.3, ಮೈ., ಶಾ.ಸಂ.206, ಪು.ಸಂ.310

151. ಎ.ಕ.ಸಂ.3, ಹೆ.ಕೋ., ಶಾ.ಸಂ.24–25, ಪು.ಸಂ.271

152. ಗೋಪಾಲ್ ಆರ್.– ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.ಸಂ.379

153. ಪೂರ್ವೋಕ್ತ, ಪು.ಸಂ.379

154. ಕ.ರಾ.ಗ್ಯಾ. 1988, ಪು.ಸಂ.929

155. ಎ.ಕ.ಸಂ.03, ಹೆ.ಕೋ., ಶಾ.ಸಂ.130, ಪು.ಸಂ.273

156. ಕ್ಷೇತ್ರಕಾರ್ಯ ವರದಿ

157. ಹೆ.ಕೋ.ತಾ.ಗ್ಯಾ. ಪು.ಸಂ.159

158. ಕ.ರಾ.ಗ್ಯಾ. 1988, ಪು.ಸಂ.856

159. ಪೂರ್ವೋಕ್ತ, ಪು.ಸಂ.857

160. ಎಂ.ಎ. ಆರ್. 1937, ಪು.ಸಂ.05

161. ಕ್ಷೇತ್ರಕಾರ್ಯ ವರದಿ.

162. ಅದೇ

163. ಎ.ಕ.ಸಂ.3, ಹೆ.ಕೋ., ಶಾ.ಸಂ.340, ಪು.ಸಂ.390

164. ರಾಮಚಂದ್ರ ರಾವ್ ಎಸ್.ಕೆ.-ಪ್ರತಿಮಾಕೋಶ, ಪು.ಸಂ.218.

165. ಕ.ರಾ.ಗ್ಯಾ. 1988, ಪು.ಸಂ.856.

166. ಕನ್ನಡ ವಿಷಯ ವಿಶ್ವಕೋಶ, ಪು.ಸಂ.522-523.

167. ಎ.ಕ.ಸಂ.3, ಹೆ.ಕೋ., ಶಾ.ಸಂ.347, ಪು.ಸಂ.402

168. ಕ್ಷೇತ್ರಕಾರ್ಯ ವರದಿ

169. ಕ.ರಾ.ಗ್ಯಾ. 1988, ಪು.ಸಂ.876

170. ಎ.ಕ.ಸಂ.3, ಹೆ.ಕೋ., ಶಾ.ಸಂ.14, ಪು.ಸಂ.439.

171. ಪ್ರಜಾವಾಣಿ, ಮೇ.13.2014, ಪು.ಸಂ.14

172. ಕ.ರಾ.ಗ್ಯಾ. 1988, ಪು.ಸಂ.876

173. ಕ್ಷೇತ್ರಕಾರ್ಯ ವರದಿ.

174. ಕೃ.ರಾ.ನ. ತಾ.ಗ್ಯಾ., 2011, ಪು.ಸಂ.178.

175. ರಘೋತ್ತಮ ತೀರ್ಥ- ವೈಷ್ಣವ ದರ್ಶನ, 1999, ಪು.ಸಂ.12

176. ಎಂ.ಎ. ಆರ್. 1936, ಪು.ಸಂ.5-6

177. ಕ್ಷೇತ್ರಕಾರ್ಯ ವರದಿ

178. ಎಂ.ಎ. ಆರ್. 1936, ಪು.ಸಂ.6

179. ಎ.ಕ.ಸಂ.4, ಹು.ಣ., ಶಾ.ಸಂ.51, ಪು.ಸಂ.60

180. ಎ.ಕ.ಸಂ.4, ಪಿ.ಪ, ಶಾ.ಸಂ.1, ಪು.ಸಂ.509

181. ಕ.ರಾ.ಗ್ಯಾ. 1988, ಪು.ಸಂ.905

182. ಕ್ಷೇತ್ರಕಾರ್ಯ ವರದಿ

183. ರಾಮದಾಸ್ ರೆಡ್ಡಿಯವರನ್ನು ಸಂದರ್ಶಿಸಿ ಬರೆಯಲಾಗಿದೆ.

184. ಹು.ಣ.ತಾ.ಗ್ಯಾ. 2011, ಪು.ಸಂ.8

185. ಎ.ಕ.ಸಂ.4, ಹು.ಣ., ಶಾ.ಸಂ.14, ಪು.ಸಂ.488

186. ಕ್ಷೇತ್ರಕಾರ್ಯ ವರದಿ

187. ಕ್ಷೇತ್ರಕಾರ್ಯ ವರದಿ

**ಜೈನ ಬಸದಿಗಳು**

188. ಕನ್ನಡ ವಿಶ್ವಕೋಶ, ಸಂ.8, ಪು.ಸಂ.342
189. ದಿವಾಕರ್, ಆರ್.ಆರ್. – ಕರ್ನಾಟಕದ ಪರಂಪರೆ ಸಂ.1, ಪು.354
190. ರೈಸ್, ಬಿ.ಎಲ್.–ಮೈಸೂರು ಅಂಡ್ ಕೂರ್ಗ್ ಫ್ರಮ್ ದ ಇನ್ಸ್‌ಕ್ರಿಪಷನ್, ಪು.23
191. ಕೃಷ್ಣಸ್ವಾಮಿ ಐಯ್ಯಂಗಾರ್, ಎಚ್.ಎಚ್.(ಸಂ), ಅವಲೋಕನ–ಕರ್ನಾಟಕ ಪರಂಪರೆಯ ಸಮೀಕ್ಷೆ, ಕಮಲಾ ಹಂಪನಾ ಲೇಖಕರು, ಕರ್ನಾಟಕದಲ್ಲಿ ಜೈನಧರ್ಮ, ಪು.ಸಂ.163
192. ಕೃ.ನ.ತಾ.ಗ್ಯಾ.–2011, ಪು.ಸಂ.171
193. ಎ.ಕ.ಸಂ.5.ಕೃ.ನ. ಶಾ.ಸಂ.30, ಪು.ಸಂ.18
194. ಪ.ನಾಗರಾಜಯ್ಯ – ಲೇಖನ: ಸಾಲಿಗ್ರಾಮ ಜಿನಾಲಯಗಳು, ಸಾಲಿಗ್ರಾಮ, 1999, ಪು.ಸಂ.65
195. ಎಂ.ಎ.ಆರ್., 1937, ಪು.ಸಂ.40
196. ಕ.ರಾ.ಗ್ಯಾ. 1988, ಪು.ಸಂ.846
197. ಕ್ಷೇತ್ರಕಾರ್ಯ ವರದಿ
198. ಕ್ಷೇತ್ರಕಾರ್ಯ ವರದಿ

# ಅಧ್ಯಾಯ –5

# ಬಿಡಿ ಶಿಲ್ಪಗಳು ಹಾಗೂ ಶಾಸನೋಕ್ತ ವೀರಗಲ್ಲುಗಳು

**ಬಿಡಿಶಿಲ್ಪಗಳು**

ಭಾರತವು ದೇವಾಲಯಗಳ ಅಗರವಾಗಿದೆ. ಭಾರತದಲ್ಲಿ ದೇವಾಲಯ ಮತ್ತು ವಿಗ್ರಹಾರಾಧನೆಗಳ ಕಲ್ಪನೆ ಮೂಡಿದ ಮೇಲೆ ಶಿಲ್ಪಕಲೆಗೆ ವಿಶೇಷ ಪ್ರೋತ್ಸಾಹ ದೊರೆಯಿತು. ನಮ್ಮ ದೇಶದಲ್ಲಿ ಮೂರ್ತಿಶಿಲ್ಪದ ಬೆಳವಣಿಗೆಯಾದ ರೀತಿಯಲ್ಲಿ ಬೇರೆ ಯಾವ ದೇಶದಲ್ಲಿಯೂ ಬೆಳವಣಿಗೆಯಾಗಲಿಲ್ಲ ಮತ್ತು ನಮ್ಮ ದೇಶದಲ್ಲಿರುವಷ್ಟು ದೇವಾಲಯಗಳು ಬೇರೆಲ್ಲೂ ಕಂಡುಬರುವುದಿಲ್ಲ. ಎಷ್ಟೇ ಸಣ್ಣ ಗ್ರಾಮವಾದರೂ ಸಹ ಯಾವುದಾದರೊಂದು ಗುಡಿ ಕಂಡುಬರುತ್ತದೆ. ಪೂಜೆ ಇಲ್ಲದೆ ಪಾಳುಬಿದ್ದ ಗುಡಿಯಾದರೂ ಶಿಲ್ಪಗಳು ಸೊಗಸಾಗಿಯೇ ಇರುತ್ತವೆ.[1] ದೇವಾಲಯದಲ್ಲಿರುವ ಮುಖ್ಯವಸ್ತುವಿಗೆ ದೇವತೆ ಎಂದು ಕರೆಯಲಾಗುತ್ತದೆ. ಇವುಗಳನ್ನು ಒಂದು ರೂಪದಲ್ಲಿ ತಯಾರಿಸಿರುವ ದೇವತೆಗಳ ಬಿಂಬವನ್ನು ಶಿಲ್ಪ ಎಂದು ಕರೆಯುತ್ತಾರೆ. ದೇವಾಲಯಗಳು ಬೆಳೆದಂತೆ ಶಿಲ್ಪಗಳು ರೂಪುಗೊಂಡು ವಾಸ್ತುವಿನ ಶ್ರೀಮಂತಿಕೆಯನ್ನು ಎಚ್ಚರವಹಿಸಿದವು. ವಾಸ್ತುಶಿಲ್ಪವು ಬಹಳ ವರ್ಷಗಳ ಕಾಲ ಉಳಿಯಬೇಕು, ಆಕರ್ಷಣೀಯವಾಗಿರಬೇಕು, ಗಾಂಭೀರ್ಯತೆಯ ಜೊತೆಗೆ ಚೆಲುವು ಮೈಗೂಡಿಸಿಕೊಂಡಿರಬೇಕು ಇತ್ಯಾದಿ ಉದಾತ್ತ ಭಾವನೆಗಳಿಂದ ವಾಸ್ತುಶಿಲ್ಪಗಳು ಹೆಚ್ಚಾಗಿ ದೇವಾಲಯಗಳ ವಾಸ್ತುವಿನ ಜೊತೆಗೆ ಶಿಲ್ಪಕ್ಕೂ ಹೆಚ್ಚಿನ ಆದ್ಯತೆ ನೀಡಿ ಬೆಳೆಸಿದ್ದಾರೆ.[2]

ಮೈಸೂರು ಜಿಲ್ಲೆಯಲ್ಲಿ ಗಂಗ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಮತ್ತು ಮೈಸೂರು ಒಡೆಯರ ಕಾಲದ ಶಿಲ್ಪಗಳು ದೊರೆಯುತ್ತವೆ. ಗಂಗರ ಕಾಲದಲ್ಲಿ ನಿರ್ಮಾಣವಾದಂತಹ ಶಿಲ್ಪಗಳು ಅಷ್ಟೇನು ದುಂಡಗಿಲ್ಲದೆ ಕುಬ್ಜವಾಗಿದ್ದವು. ಪ್ರಾಚೀನ ಕಾಲದಲ್ಲಿನ ಭಾರತದ ಶಿಲ್ಪಗಳು ಕೋನಾಕೃತಿಯಾಗಿ ಮತ್ತು ಎದುರಿಗೆ ಮುಖ ಮಾಡಿದಂತೆ ಇರುತ್ತಿದ್ದವೆಂದು ಸಾಮಾನ್ಯವಾಗಿ ಹೇಳಬಹುದು. ಅನಂತರದ ಕಾಲಘಟ್ಟದಲ್ಲಿ ಪ್ರಾಚೀನ ರಾಷ್ಟ್ರ ಗ್ರಂಥಗಳ ಪ್ರಕಾರ ಒಂದು ನಿರ್ದಿಷ್ಟ ಆಕಾರವನ್ನು ಪಡೆದುಕೊಂಡವು. ಹೊಯ್ಸಳರ ಕಾಲದಲ್ಲಿ ನಿರ್ಮಿತವಾದಂತಹ ದೇವಾಲಯಗಳಲ್ಲಿ ಶಿಲ್ಪಗಳ ರಚನೆ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಹೊಯ್ಸಳರ ಕಾಲಕ್ಕಿಂತ ಪೂರ್ವದಲ್ಲಿ ಆಳಿದ ಮನೆತನಗಳ ದೇವಾಲಯಗಳು ಹಾಗೂ ವಿಜಯನಗರದ ಸಮಕಾಲೀನ ರಾಜರುಗಳು ಅವರ ಅನಂತರದ ರಾಜರುಗಳು ನಿರ್ಮಿಸಿದ ದೇವಾಲಯಗಳಲ್ಲೂ ಇದೇ ರೀತಿಯ ಬೆಳವಣಿಗೆಯನ್ನು ಕಾಣಬಹುದು. ಹಾಗೆಂದ ಮಾತ್ರಕ್ಕೆ ಹೊಯ್ಸಳರ ಎಲ್ಲಾ ದೇವಾಲಯಗಳಲ್ಲೂ ಹೆಚ್ಚಿನ ಶಿಲ್ಪಗಳನ್ನು ಕಾಣಬಹುದೆಂಬ ಅರ್ಥವಲ್ಲ.

ಆದರೆ ಉಳಿದ ಕಾಲಘಟ್ಟಕ್ಕಿಂತ ಶಿಲ್ಪಗಳ ಸಂಖ್ಯೆ ಸ್ವಲ್ಪ ಹೆಚ್ಚಿನದೆಂದು ಹೇಳಬಹುದು. ಅದರಲ್ಲಿ ಈ ಜಿಲ್ಲೆಯಲ್ಲಿ ನಿರ್ಮಾಣವಾದಂತಹ ಹೆಚ್ಚಿನ ಸಂಖ್ಯೆಯ ವೈಭವಯುತವಾದ ದೇವಾಲಯಗಳು ಹೊಯ್ಸಳರ ಕಾಲದ್ದವಾಗಿವೆ.

ಶಿಲ್ಪಗಳು ದುಂಡು ಮುಖ, ವಿಫುಲ ಅಲಂಕರಣ, ಮುಖ ಭಾವದಲ್ಲಿ ಸಾಮ್ಯತೆ ಹಾಗೂ ಸ್ನಿಗ್ಧತೆ ಎದ್ದು ಕಾಣುವಂತಹ ಶಿಲ್ಪಗಳು ಗಂಗ ಮತ್ತು ಹೊಯ್ಸಳರ ಕಾಲದಲ್ಲಿ ಕಂಡುಬಂದರೆ, ದಷ್ಟಪುಷ್ಟವಾದ ಮೈಮಾಟ, ಕೃಶವಾದ, ನೀಳಕಾಯ, ಕೋಲುಮುಖ, ಅರ್ಧವೃತ್ತಾಕಾರದ ಕೆಳಮುಖ, ಚೂಪಾದ ಶಂಖುವಿನಾಕಾರದ ಎತ್ತರವಾದ ಕಿರೀಟ, ಹಿತಮಿತ ಅಲಂಕರಣ ಮುಂತಾದ ಲಕ್ಷಣಗಳನ್ನು ಹೊಂದಿರುವ ಶಿಲ್ಪಗಳು ವಿಜಯನಗರ ಕಾಲದವು.[3] ಎಲ್ಲಾ ಕಾಲದ ಶಿಲ್ಪಗಳಲ್ಲೂ ನವರಸಗಳ ಅಭಿವ್ಯಕ್ತಿಯನ್ನು ಕಾಣಬಹುದು. ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಹೆಚ್ಚಾಗಿ ವಿಷ್ಣುವಿನ ಮತ್ತು ಶಿವನ ವಿವಿಧ ಭಂಗಿಯ ಮೂರ್ತಿಶಿಲ್ಪಗಳು, ಗಣಪತಿ ಮತ್ತು ಮಹಿಷಮರ್ದಿನಿ ಶಿಲ್ಪಗಳು ದೊರೆತಿವೆ. ಇವುಗಳ ಜೊತೆಗೆ ಇತರೆ ಉಪದೇವತೆಗಳ, ಪರಿವಾರ ದೇವತೆಗಳ ಶಿಲ್ಪಗಳು ಇಲ್ಲಿ ಕಂಡುಬರುತ್ತವೆ.

**ಗಣಪತಿ**

ವಿಘ್ನವಿನಾಶಕ ಗಣಪತಿಯನ್ನು ವಿಷ್ಣುರಾಜ, ವಿಘ್ನ ನಿವಾರಕ, ಸಿದ್ಧಿ ವಿನಾಯಕ ಎಂದು ಜನರು ಪ್ರಾಚೀನ ಕಾಲದಿಂದಲೂ ಪೂಜಿಸುತ್ತಿದ್ದಾರೆ. ಯಜ್ಞವಲ್ಕ್ಯ ಸ್ಮೃತಿಯು ವಿನಾಯಕನನ್ನು ಅಂಬಿಕೆಯ ಮಗನೆಂದು, ಇವನಿಗೆ ಇಡುವ ನೈವೇದ್ಯದಲ್ಲಿ ಮೀನು, ಮಾಂಸ, ಮೂಲಂಗಿ, ಮೋದಕ ಮತ್ತು ಮದ್ಯಗಳಿರಬೇಕೆಂದು ತಿಳಿಸಿದೆ. ಶೈವಪಂಥವು ಬಹಳ ಪ್ರಾಚೀನವಾದುದಾಗಿದ್ದು, ಇದಕ್ಕೆ ಸಂಬಂಧಿಸಿದ ನಾಗಪತ್ಯ, ಕೌಮಾರ ಪಂಥಗಳು ಅಷ್ಟು ಪ್ರಾಚೀನವಲ್ಲದಿದ್ದರೂ ಇವೆರಡೂ ಪಂಥಗಳು ಅನೇಕ ಶತಮಾನಗಳಿಂದಲೂ ಪ್ರಚಾರದಲ್ಲಿವೆ. ಕ್ರಿ.ಶ.೮ನೆಯ ಶತಮಾನದಲ್ಲಿ ಪಂಚಾಯತನ ಪೂಜೆ ಹೆಚ್ಚು ಪ್ರಚಾರಕ್ಕೆ ಬಂದಂತೆ ಗರ್ಭಗುಡಿಯ ಎಡಬದಿಗೆ ಮಹಿಷಮರ್ದಿನಿಯನ್ನು, ಬಲಬದಿಗೆ ಗಣೇಶನನ್ನು ಇಟ್ಟು ಪೂಜಿಸುವ ಪದ್ಧತಿ ಆರಂಭವಾಯಿತು. (ಆದರೆ ವೇದಗಳ ಕಾಲದಲ್ಲಿ ಗಣಪತಿಗೆ ದೇವತೆಯ ಸ್ಥಾನಮಾನವಿರಲಿಲ್ಲ) ಅನಂತರದಲ್ಲಿ ಗಣಪತಿಯ ಬೇರೆ ಬೇರೆ ಆಕಾರದ ಅವತಾರಗಳು ರೂಢಿಗೆ ಬಂದಿದ್ದು, ಬಹುಕಾಲದ ತರುವಾಯ ಕರ್ನಾಟಕದಲ್ಲಿ ವಿಘ್ನೇಶ್ವರನ ಗುಡಿಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಇತ್ತೀಚೆಗೆ ಒಂದು ಸಣ್ಣ ಹಳ್ಳಿಯಲ್ಲೂ ಒಂದು ಗಣಪತಿ ಗುಡಿ ಇದ್ದೇ ಇರುತ್ತದೆ. ಸಾಮಾನ್ಯವಾಗಿ ಗಣಪತಿ ವಿಗ್ರಹವು ನಾಲ್ಕು ಪುಟ್ಟ ಕೈ, ಪುಟ್ಟ ಕಾಲುಗಳನ್ನು ಹೊಂದಿರುತ್ತದೆ. ಮಹಾಕಾಯ ಎಂಬ ಹೆಸರಿಗೆ ತಕ್ಕಂತೆ ದೊಡ್ಡ ಗುಡಾಣದಂತಹ ಹೊಟ್ಟೆಯಿರುತ್ತದೆ. ಸೊಂಡಿಲುಳ್ಳ ಆನೆಯ

ಮುಖವೂ, ಅಗಲವಾದ ಕಿವಿಗಳೂ, ಯಜ್ಞೋಪವೀತ, ಉದರಬಂಧ ಮತ್ತು ಕೆಯೂರದ ಅಲಂಕರಣವನ್ನು ಹೊಂದಿರುತ್ತದೆ.[4] ಗಣೇಶನಿಗೆ ಪರ್ಯಾಯ ಪದವಾದ ವಿನಾಯಕ ಎಂಬುದು ಅಥರ್ವಶಿರಸ್ ಉಪನಿಷತ್ತಿನಲ್ಲಿ ಕಂಡುಬರುತ್ತದೆ.[5] ಈ ಜಿಲ್ಲೆಯ ಶಿವ–ವಿಷ್ಣು ದೇವಾಲಯಗಳ ನವರಂಗದಲ್ಲಿ ಗಣಪತಿಯ ಶಿಲ್ಪಗಳು ಹೆಚ್ಚಾಗಿ ಕಂಡುಬರುತ್ತವೆ. ಹೊಯ್ಸಳರ ಕಾಲದಲ್ಲಿ ನಿರ್ಮಿತವಾದಂತಹ ಕೆಲವು ದೇವಾಲಯಗಳ ಭಿತ್ತಿ ಶಿಲ್ಪಗಳಲ್ಲಿ ಹಾಗೂ ಶಿಖರದ ಭದ್ರಶಾಲಗಳಲ್ಲಿ ಗಣಪತಿ ಶಿಲ್ಪಗಳನ್ನು ಬಿಡಿಸಲಾಗಿದೆ. ಇಲ್ಲಿ ವಿಶೇಷ ಲಕ್ಷಣಗಳನ್ನುಳ್ಳ ಗಣಪತಿಯನ್ನು ಗುರುತಿಸಬಹುದು. ಅವುಗಳೆಂದರೆ, ಬಲಮುರಿ ಗಣಪತಿ (ಬಲಕ್ಕೆ ಸೊಂಡಿಲನ್ನು ಸುತ್ತಿಕೊಂಡಿರುವುದು) ಎಡಮುರಿ ಗಣಪತಿ (ಎಡಕ್ಕೆ ಸೊಂಡಿಲನ್ನು ಸುತ್ತಿಕೊಂಡಿರುವುದು) ಉಚ್ಚಿಷ್ಟ ಗಣಪತಿ,[6] (ಶಕ್ತಿಯ ಜನನಾಂಗಕ್ಕೆ ಸೊಂಡಿಲನ್ನು ಹಾಕಿಕೊಂಡಿರುವುದು) ಇಂತಹ ಶಿಲ್ಪಗಳು ಇರುವುದು ಬಹಳ ಕಡಿಮೆ. ನಂಜನಗೂಡು ಮತ್ತು ತಮಿಳುನಾಡಿನ ಕುಂಭಕೋಣಂಗಳಲ್ಲಿರುವ ದೇವಾಲಯಗಳಲ್ಲಿ ಇಂತಹ ಶಿಲ್ಪಗಳನ್ನು ಕಾಣಬಹುದು. ಸಿದ್ಧಿವಿನಾಯಕ (ಶಕ್ತಿಯನ್ನು ಸೊಂಡಿಲಿನಿಂದ ಅಪ್ಪಿಕೊಂಡಿರುವುದು) ಇವುಗಳಲ್ಲದೇ ದ್ವಿಭುಜ ಗಣಪತಿ, ಷಡ್ಭುಜ ಗಣಪತಿ, ಶಂಖವನ್ನು ಹಿಡಿದಿರುವ ಗಣೇಶ, ನಾಟ್ಯ ಗಣೇಶ, ಬಾಲಗಣಪತಿ ಹೀಗೆ ವಿವಿಧ ಭಂಗಿಗಳ ಗಣೇಶನನ್ನು ಇಲ್ಲಿ ಕಾಣಬಹುದಾಗಿದೆ. ಗಣೇಶನ ಬಿಡಿಶಿಲ್ಪಗಳು ಎಡೆಮುರಿ ಗಣಪ ಮತ್ತು ಬಲಮುರಿ ಗಣಪಗಳು ಮಾಕೋಡಿನ ಬಸವೇಶ್ವರ ದೇವಾಲಯ ಹಾಗೂ ಕಲ್ಲಂಬಾಳಿನ ಕಾಮೇಶ್ವರ ದೇವಾಲಯದ ನವರಂಗದಲ್ಲಿ ಕಂಡುಬರುತ್ತದೆ. ಹಾಗೆಯೇ ಕ್ಯಾತನಹಳ್ಳಿಯ ಲಕ್ಷ್ಮೀಕಾಂತ ದೇವಾಲಯ, ಹೆಡತಲೆಯ ಲಕ್ಷ್ಮೀಕಾಂತ ದೇವಾಲಯ, ಸಾಲಿಗ್ರಾಮದ ಜೋರ್ತಿಮಹೇಶ್ವರ ದೇವಾಲಯಗಳಲ್ಲಿ ಕಂಡುಬರುತ್ತದೆ.**(ಚಿ.ಸಂ.241)**

**ವಿಷ್ಣು**

ವಿಷ್ಣುವಿನ ಶಿಲ್ಪದ ಲಕ್ಷಣಗಳೆಂದರೆ, ಸಮಭಂಗಿಯಲ್ಲಿದ್ದು ಚತುರ್ಭುಜನಾಗಿರುತ್ತಾನೆ. ಬಲ ಕೆಳಗೈಯಲ್ಲಿ ಶಂಖ, ಬಲ ಮೇಲ್ಗೈಯಲ್ಲಿ ಚಕ್ರ, ಎಡ ಮೇಲ್ಗೈಯಲ್ಲಿ ಪದ್ಮ, ಎಡ ಕೆಳಗೈಯಲ್ಲಿ ಗದೆಯನ್ನು ಹಿಡಿದಿರುತ್ತಾನೆ.[9] ಮತ್ತೆ ಕೆಲವು ಶಿಲ್ಪಗಳಲ್ಲಿ ಬಲ ಮುಂಗೈಯಲ್ಲಿ ಫಲ, ಹಿಂಗೈಯಲ್ಲಿ ಪ್ರಯಾಗ ಚಕ್ರ, ಎಡ ಹಿಂಗೈಲಿ ಶಂಖ, ಮುಂಗೈಯಲ್ಲಿ ಕಠಿಹಸ್ತ ಹಾಗೂ ಕಿರೀಟ ಕೊಳಗದಂತಿರುತ್ತದೆ. ಕರ್ಣಕುಂಡಲ, ಕೊರಳಲ್ಲಿ ಅಗಲವಾದ ದಪ್ಪ ಅಡ್ಡಿಗೆ, ಎಡಭುಜದಿಂದ ಹಾದು ಬಲ ತೋಳ ಮೇಲೆ ಇಳಿದಿರುವ ಯಜ್ಞೋಪವೀತ, ಮೊಣಕಾಲವರೆಗೆ ಇಳಿಬಿದ್ದಿರುವ ಆರೋಪ್ಯಮಾಲೆ, ನಡುವನ್ನು ಬಿಗಿದು ಮುಂಭಾಗದಲ್ಲಿ ಗಂಟುಬಿದ್ದಿರುವ ನಡುಬಂಧ, ನಡುವಿನ ಎರಡೂ ಕಡೆಗಳಲ್ಲಿ ಇಳಿಬಿಟ್ಟಿರುವ ಬಟ್ಟೆಯನ್ನು ಸೇರಿಸುವಂತೆ ಮಧ್ಯೆ ಅರ್ಧಚಂದ್ರಾಕಾರದ

ಇಳಬಟ್ಟೆ, ಕೈಗಳಲ್ಲಿ ದಪ್ಪ ಕಡಗಗಳನ್ನು ಕಾಣುತ್ತೇವೆ. ವಿಷ್ಣುವಿನ ಅವತಾರಗಳು, ಋಷಿಗಳು, ಮನುಗಳು, ದೇವರುಗಳು, ಮನುವಿನ ಪುತ್ರರು, ಪ್ರಜಾಪತಿಗಳು ಎಲ್ಲರೂ ಅವನ ವಂಶ ಹತ್ತು ಬಾರಿ ರಾಕ್ಷಸ ಸಂಹಾರಕ್ಕಾಗಿ ವಿಷ್ಣು ಅವತಾರ ತಾಳಿ ಲೋಕ ರಕ್ಷಣೆ ಮಾಡಿದ್ದಾನೆ. ಇವನ ವಾಹನ ಗರುಡ, ಕ್ರಿ.ಶ.8–9ನೇ ಶತಮಾನದಿಂದ ವಿಷ್ಣುವಿನ 24 ರೂಪಗಳನ್ನು ತೋರಿಸುವ ಪದ್ಧತಿ ಅಲ್ಲಲ್ಲಿ ಕಂಡುಬಂದರೂ, 10ನೆಯ ಶತಮಾನದಿಂದ ಇದು ವ್ಯಾಪಕವಾಗಿ ಶಿಲ್ಪಗಳಲ್ಲಿ ಪ್ರಚಾರಕ್ಕೆ ಬಂದಿತು.[10] ವಿಷ್ಣುವನ್ನು ಕೇವಲ ವೈಷ್ಣವ ದೇವಾಲಯಗಳಲ್ಲಿಯೇ ಅಲ್ಲದೇ ಶೈವ ದೇವಾಲಯಗಳಲ್ಲೂ ಕಾಣಬಹುದು. ಗಂಗರ ಶಿವದೇವಾಲಯಗಳಲ್ಲಿನ ಶಿವ ಪಂಚಾಯತನದಲ್ಲಿ ವಿಷ್ಣು ಶಿಲ್ಪ ಕಂಡುಬರುತ್ತದೆ.[11] ಈ ವಿಷ್ಣುವಿನ ಬಿಡಿಶಿಲ್ಪಗಳು ಧರ್ಮಾಪುರದ ಚನ್ನಕೇಶವ ದೇವಾಲಯದ ನವರಂಗದಲ್ಲಿ ಕಂಡುಬರುತ್ತದೆ ಸೋಮನಾಥಪುರದ ಸುಕನಾಸಿಯಲ್ಲಿ, ಕ್ಯಾತನಹಳ್ಳಿಯ ಲಕ್ಷ್ಮೀಕಾಂತ ದೇವಾಲಯದ ಭಿತ್ತಿ ಹಾಗೂ ನವರಂಗದಲ್ಲಿ, ಹೆಡತಲೆಯ ಲಕ್ಷ್ಮೀಕಾಂತ ದೇವಾಲಯದ ಸಭಾಮಂಟಪದಲ್ಲಿ ಕಂಡುಬರುತ್ತದೆ.

**ಕೇಶವ**

ವೈಷ್ಣವ ದೇವರಲ್ಲಿ ಪ್ರಮುಖನಾದವನು ಇವನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳಿರುತ್ತವೆ. ಅನೇಕ ಶಿಲ್ಪಗಳಲ್ಲಿ ಅಭಯಹಸ್ತವನ್ನು ಹೊಂದಿರುತ್ತಾನೆ. ಶಿಲ್ಪಗಳಲ್ಲಿ ಇವನ ಮುಖಭಾವ ಅತ್ಯಂತ ಸುಂದರವಾಗಿ ಕೆತ್ತಿರುವುದರಿಂದ ಇವನನ್ನು ಸೌಮ್ಯಕೇಶವ, ಚನ್ನಕೇಶವ, ಪ್ರಸನ್ನ ಕೇಶವ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ಇವನಿಗಾಗಿ ಪ್ರತ್ಯೇಕ ದೇವಾಲಯಗಳನ್ನು ನಿರ್ಮಿಸಲಾಗಿದೆ. ಕೇಶವನ ಶಿಲ್ಪಗಳು ಸಾಮಾನ್ಯವಾಗಿ ಸುಂದರ ಪ್ರಭಾವಳಿಯನ್ನು ಹೊಂದಿರುತ್ತವೆ. ಕೆಲವು ಪ್ರಭಾವಳಿಗಳಲ್ಲಿ ವಿಷ್ಣುವಿನ ದಶಾವತಾರಗಳನ್ನು ಕೆತ್ತಲಾಗಿದೆ. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಇವುಗಳಲ್ಲಿ ಬುದ್ಧ ಮತ್ತು ಕಲ್ಕಿ ಅವತಾರಗಳನ್ನು ಕೆಲವರು ಅವತಾರಗಳೆಂದು ಕರೆಯುವುದಿಲ್ಲ. ಇದಕ್ಕೆ ಬದಲಾಗಿ ಬಲರಾಮನನ್ನು ಸೇರಿಸುತ್ತಾರೆ. ಪುರಾಣಗಳಲ್ಲಿ ಈ ಅವತಾರಗಳ ಕಥೆಗಳು ವಿಶೇಷವಾಗಿ ಕಾಣಬರುತ್ತವೆ. ಈ ಕೇಶವನ ಶಿಲ್ಪಗಳು ಸೋಮನಾಥಪುರದ ಕೇಶವ ದೇವಾಲಯ, ಧರ್ಮಾಪುರದ ಚನ್ನಕೇಶವ, ಭೆರ್ಯದ ಚನ್ನಕೇಶವ, ಹೆಡತಲೆಯ ಚಲುವ ಚನ್ನಿಗರಾಯ, ಪಿರಿಯಾಪಟ್ಟಣದ ಚನ್ನಕೇಶವ, ಕಂಪಲಾಪುರ ಕರಕಂಠೇಶ್ವರ ದೇವಾಲಯಗಳಲ್ಲಿ ಕಂಡುಬರುತ್ತದೆ.

**ಸೂರ್ಯ**

ಹೆಗ್ಗಡದೇವನಕೋಟೆ ತಾಲೂಕಿನ ಕಲ್ಲಂಬಾಳು ಕಾಮೇಶ್ವರ ದೇವಾಲಯದಲ್ಲಿ ಸೂರ್ಯನಿಗಾಗಿ ಒಂದು ಗುಡಿಯನ್ನು ಕಟ್ಟಲಾಗಿದೆ. ಶಿವ ಪಂಚಾಯತನದಲ್ಲಿ ಬರುವ ವಿಗ್ರಹಗಳಲ್ಲಿ ಸೂರ್ಯ ವಿಗ್ರಹವೂ ಒಂದು. ಇದು ಸಮಭಂಗಿಯಲ್ಲಿದ್ದು, ಕೈಗಳಲ್ಲಿ ತಾವರೆಯ ಮೊಗ್ಗುಗಳನ್ನು ಹಿಡಿದಿರುವಂತೆ ಶಿಲ್ಪಿಸಿರಲಾಗುತ್ತದೆ. ಕರ್ನಾಟಕದಲ್ಲಿ ಸೌರಮತದವರ ಪ್ರಭಾವ ಅಲ್ಲಲ್ಲಿ ಕಂಡುಬಂದರೂ ತೀರಾ ಕಡಿಮೆ, ಗೌರಮತದ ಪ್ರಭಾವಕ್ಕೆ ಒಳಗಾಗಿದ್ದ ವ್ಯಾಪಾರಿಗಳದ್ದು, ಸೂರ್ಯೋಪಾಸನೆ ಗಂಗವಾಡಿಗೆ ಬಂದಿರಬಹುದು. ಸೂರ್ಯಬಿಂಬವು ವಸ್ತ್ರಾಲಂಕಾರಗಳಲ್ಲಿ ಮತ್ತು ಆಭರಣಗಳ ಅಲಂಕಾರದಲ್ಲಿ ವಿಷ್ಣು ಶಿಲ್ಪದಂತೆ ಇರುತ್ತದೆ. ಸೂರ್ಯನ ಬಿಂಬಗಳು ಶಿವಲಿಂಗಕ್ಕೆ ಎದುರಾಗಿರುವುದರಿಂದ ಪೂರ್ವಕ್ಕೆ ಬೆನ್ನು ಮಾಡಿ ಪಶ್ಚಿಮಕ್ಕೆ ಮುಖ ಮಾಡಿರುತ್ತವೆ.

ಸಪ್ತಾಶ್ವಗಳನ್ನು ಹೂಡಿದ ರಥದಲ್ಲಿ ಸಾರಥಿಯಾದ ಅರುಣ ಇರುವ ಪೀಠದ ಮೇಲೆ ದ್ವಿಬಾಹುವುಳ್ಳ ಸೂರ್ಯ ದಪ್ಪನಾದ ಮತ್ತು ದುಂಡಾದ ಎರಡು ಕೈಯಲ್ಲಿ ಕಮಲದ ಮೊಗ್ಗನ್ನು ಹಿಡಿದು ನಿಂತಿರುತ್ತಾನೆ.[12] ಎರಡು ಕೈಗಳಿದ್ದರೆ ಮೊಗ್ಗನ್ನು, ನಾಲ್ಕು ಕೈಗಳಿದ್ದರೆ ಅರಳಿದ ಕಮಲವನ್ನು ತೋರಿಸಬೇಕು ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. (ಚಿತ್ರಕರ್ಮೀಯ ಬ್ರಹ್ಮಶಾಸ್ತ್ರ) ಸೂರ್ಯನ ಸುತ್ತಲೂ ಪ್ರಭಾವಳಿಯಿದ್ದು, ಪ್ರಭಾವಳಿಯ ಕೆಳಸ್ತರಗಳಲ್ಲಿ ಅರೆಗಂಬಗಳನ್ನು ಕೆತ್ತಿದ್ದು, ಈ ಕಂಬಗಳ ಮುಂದೆ ಬಿಲ್ಲು ಬಾಣಗಳನ್ನು ಹಿಡಿದು ನಿಂತಿರುವ ಉಷೆ ಮತ್ತು ಪ್ರತ್ಯೂಷೆಯರಿದ್ದಾರೆ. ಶಿಲ್ಪಕ್ಕೆ ಮೆರುಗು ನೀಡುವಂತೆ ಅಲಂಕಾರಿಕ ಕಿರೀಟ, ಮಕರಕುಂಡಲಗಳು, ಮಣಿಸರಗಳು, ಯಜ್ಞೋಪವೀತ, ಉದರಬಂಧ, ಭುಜಸರಗಳು, ಸಿಂಹಮುಖದಿಂದ ಕೂಡಿದ ಮೇಖಲಾ ಹಾಗೂ ಮಾಲಾಲಂಕಾರ ಮತ್ತು ನೆರಿಗೆಗಳಿಂದ ಕೂಡಿದ ಪಂಚೆ ಹಾಗೂ ಆಕರ್ಷಕವಾಗಿ ಕಲಾತ್ಮಕವಾದ ಗಂಟುಗಳನ್ನುಳ್ಳ ಕಟಿವಸ್ತ್ರ ಮತ್ತು ವಸ್ತ್ರದ ಗುಚ್ಛಗಳು ಸೂರ್ಯಶಿಲ್ಪಗಳಲ್ಲಿ ಕಂಡುಬರುತ್ತವೆ. ಕೆಲವು ಶಿಲ್ಪಗಳ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾವತಾರಗಳನ್ನು ಶಿಲ್ಪಿಸಿರುತ್ತಾರೆ. ಸುತ್ತೂರಿನ ಸೋಮೇಶ್ವರ ದೇವಾಲಯ, ಕ್ಯಾತನಹಳ್ಳಿಯ ಲಕ್ಷ್ಮೀಕಾಂತ ದೇವಾಲಯದ ನವರಂಗದಲ್ಲಿ ಹಾಗೂ ಧರ್ಮಾಪುರದ ಚನ್ನಕೇಶವ ದೇವಾಲಯದ ಆವರಣದಲ್ಲಿ ಕಂಡುಬರುತ್ತದೆ.**(ಚಿ.ಸಂ.242)**

**ನರಸಿಂಹ**

ನರಸಿಂಹನಿಗೆ ಪ್ರತ್ಯೇಕವಾದ ಕೆಲವು ದೇವಾಲಯಗಳಿವೆ. ಇವನನ್ನು ವಿವಿಧ ರೂಪದಲ್ಲಿ ಶಿಲ್ಪಿಸಲಾಗಿದೆ. ಇವನ ಅವತಾರಗಳು ಒಂದೊಂದು ಪುರಾಣದಲ್ಲಿ ಒಂದೊಂದು ರೀತಿಯಿದೆ.ಮತ್ಸ್ಯ ಪುರಾಣದಲ್ಲಿ ಹತ್ತು ಅವತಾರಗಳಲ್ಲಿ ಅತ್ಯಂತ ಪ್ರಚಲಿತವಾದ ನರಸಿಂಹ,

ವಾಮನ, ಪರಶುರಾಮ, ರಾಮ, ಬುದ್ಧ ಮತ್ತು ಕಲ್ಕಿಯನ್ನು ಮಾತ್ರ ಹೇಳಿದೆ. ಭಾಗವತ ಪುರಾಣದಲ್ಲಿ 22 ಅವತಾರಗಳನ್ನು ವರ್ಣಿಸಿದ್ದರೂ, ಸಹ ಪರಶುರಾಮ ಅವತಾರದ ಉಲ್ಲೇಖವಿಲ್ಲ.[13] ಮತ್ತೆ ಕೆಲವು ಗ್ರಂಥಗಳಲ್ಲಿ 24 ಅವತಾರಗಳನ್ನು ಉಲ್ಲೇಖಿಸಿದೆ. ನರಸಿಂಹನು ಮುಖ್ಯ ದೈವವಾಗಿ ದೇವಾಲಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಲಕ್ಷ್ಮೀನರಸಿಂಹ, ಉಗ್ರನರಸಿಂಹ ಮತ್ತು ಯೋಗನರಸಿಂಹನನ್ನು ಕಾಣಬಹುದು. ಇವನ ವಿವಿಧ ರೂಪಗಳನ್ನು ಗುಡಿಯಲ್ಲಿರುವ ಬಿಡಿಶಿಲ್ಪಗಳು ಹಾಗೂ ದೇವಾಲಯದ ಭಿತ್ತಿ ಶಿಲ್ಪಗಳಲ್ಲೂ ಕಾಣಬಹುದು. ಕಾಲನ್ನು ಮಡಚಿ ಯೋಗಮುದ್ರೆಯಲ್ಲಿ ಕುಳಿತಿದ್ದು, ಮಂಡಿಯ ಕೆಳಭಾಗದ ಸುತ್ತಲೂ ಯೋಗಪಟ್ಟಿ ಇದ್ದರೆ ಅದು ಯೋಗನರಸಿಂಹ. ಲಕ್ಷ್ಮಿಯನ್ನು ಎಡತೊಡೆಯ ಮೇಲೆ ಕುಳ್ಳಿರಿಸಿಕೊಂಡಿದ್ದರೆ, ಅದು ಲಕ್ಷ್ಮೀನರಸಿಂಹ, ಉಗ್ರರೂಪದಲ್ಲಿ ಹಿರಣ್ಯಕಶ್ಯಪುವಿನ ಸಂಹಾರ ಮಾಡುತ್ತಿರುವವನು ಉಗ್ರನರಸಿಂಹ, ಎಡ ಮತ್ತು ಬಲಭಾಗದಲ್ಲಿ ಶ್ರೀದೇವಿ ಮತ್ತು ಭೂದೇವಿಯರಿದ್ದರೆ ಭೋಗನರಸಿಂಹ, ಶಂಖ, ಚಕ್ರ ಹಿಡಿದು ಸಮಭಂಗಿಯಲ್ಲಿ ನಿಂತಿರುವವನು ಸ್ಥಾನಕ ನರಸಿಂಹ. ಹೀಗೆ ಅನೇಕ ಹೆಸರುಗಳಿಂದ ನರಸಿಂಹನನ್ನು ಕರೆಯಲಾಗುತ್ತದೆ. ಕ್ಯಾತನಹಳ್ಳಿಯ ಲಕ್ಷ್ಮೀಕಾಂತ ದೇವಾಲಯ, ಮಿರ್ಲೆ ಮತ್ತು ಸಾಲಿಗ್ರಾಮದ ಯೋಗಾನರಸಿಂಹ ದೇವಾಲಯ, ಮುಳ್ಳೂರಿನ ಲಕ್ಷ್ಮೀಕಾಂತ, ಹೆಡತಲೆಯ ಲಕ್ಷ್ಮೀಕಾಂತ, ಚಿಕ್ಕಹನಸೋಗೆಯ ಅವಿಮುಕ್ತೇಶ್ವರ ದೇವಾಲಯದ ನವರಂಗದಲ್ಲಿ ಹಾಗೂ ಮಾಕೋಡಿನ ಬಸವೇಶ್ವರ ದೇವಾಲಯದ ಭಿತ್ತಿಯಲ್ಲಿ ಕಂಡುಬರುತ್ತದೆ.

**ಕಾರ್ತಿಕೇಯ ಅಥವಾ ಸುಬ್ರಹ್ಮಣ್ಯ**

ಶಿವಪಾರ್ವತಿಯರ ಮತ್ತೊಬ್ಬ ಮಗನಾದ ಸುಬ್ರಹ್ಮಣ್ಯನನ್ನು ಪ್ರಾಚೀನ ಕಾಲದಿಂದಲೂ ಪೂಜಿಸಲಾಗುತ್ತಿದೆ. ಸುಬ್ರಹ್ಮಣ್ಯನನ್ನು ನಾಗರೂಪದಿಂದಲೂ ಪೂಜಿಸುತ್ತಾರೆ.[14] ತಮಿಳುನಾಡು ಮತ್ತು ತುಳುನಾಡಿನಲ್ಲಿ ಸುಬ್ರಹ್ಮಣ್ಯನ ಆರಾಧನೆ ವಿಶೇಷವಾಗಿದೆ. ಸ್ಕಂದಪುರಾಣವು ಸುಬ್ರಹ್ಮಣ್ಯನ ಮಹತ್ವದ ಧ್ಯೋತಕವಾಗಿದೆ. ಈ ಪುರಾಣವು ತಿಳಿಸುವಂತೆ ಸ್ಕಂದನ ಜನನದ ಕಥೆ ಈ ಕೆಳಕಂಡಂತಿದೆ. ಶಿವನ ಮುಖಗಳಿಂದ ಹೊರಹೊಮ್ಮಿದ ಆರು ಕಲೆಗಳನ್ನು ಅಗ್ನಿ ಮತ್ತು ವಾಯುವು ಹೊತ್ತು ತಂದು ಸರವಣ ಸರೋವರದಲ್ಲಿ ಹಾಕಿದರು. ಗಂಗೆಯು ಶಿವನ ಕಳೆಗಳ ತೇಜಸ್ಸನ್ನು ಸಹಿಸಲಾರದೆ ತೆರೆಗಳ ಮೂಲಕ ಬಳಿಯಲ್ಲಿದ್ದ ವನದೆಡೆಗೆ ತಳ್ಳಿದಳು. ಈ ವನದಲ್ಲಿ ಜನಿಸಿದ ಕುಮಾರನು ಸರವಣನಾದನು. ಅಲ್ಲಿದ್ದ ಆರು ಜನ ಕೃತ್ತಿಕೆಯರು ಮೊದಲು ಮಗುವನ್ನು ಕಂಡು ಪೋಷಿಸಿದರು. ಕೃತ್ತಿಕೆಯರ ಪೋಷಣೆ ಪಡೆದವನು

ಕಾರ್ತಿಕೇಯನಾದನು.[15] ಈತನನ್ನು ಕುಮಾರ, ಮುರುಗ, ಸ್ಕಂದ, ಷಣ್ಮುಖ, ಗುಹ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ.[16]**(ಚಿ.ಸಂ.243)**

ಕಾರ್ತಿಕೇಯನು ಚತುರ್ಭುಜ ಹಸ್ತನಾಗಿದ್ದು, ನವಿಲಿನ ವಾಹನದ ಮೇಲೆ ಕುಳಿತಿರುತ್ತಾನೆ. ಇವನ ಹಿಂದಿನ ಎರಡು ಕೈಗಳು ಅಗಲವಾಗಿ ಹರಡಿ ಬಲಗೈಯಲ್ಲಿ ಭರ್ಜಿಯನ್ನು, ಎಡಗೈಯಲ್ಲಿ ತ್ರಿಶೂಲವನ್ನು ಹಿಡಿದಿರುತ್ತಾನೆ. ಮುಂದಿನ ಬಲಗೈ ಅಭಯ ಹಸ್ತವಾಗಿದ್ದು, ಎಡಗೈ ಕಟಿಹಸ್ತದಲ್ಲಿರುತ್ತದೆ. ತಲೆಗೆ ಕಿರೀಟ, ಮಕರಕುಂಡಲಗಳು, ಸರಳಕಂಠಿಹಾರ, ಕೇಯೂರ, ಉದರಬಂಧ, ಕಟಿಬಂಧ ಮತ್ತು ಬಿಗಿಯಾಗಿ ಧರಿಸಿರುವ ವಸ್ತ್ರದ ಅಲಂಕಾರವಿರುತ್ತದೆ. ಕೆಲವು ದೇವಾಲಯಗಳಲ್ಲಿ ಏಕಮುಖ ಶಿಲ್ಪವಿದ್ದರೆ ಮತ್ತೆ ಕೆಲವು ದೇವಾಲಯಗಳಲ್ಲಿ ತ್ರಿಮುಖ ಹೊಂದಿರುವ ಶಿಲ್ಪಗಳು ಕಂಡುಬರುತ್ತವೆ. ಕಾರ್ತಿಕೇಯನು ಸಮಭಂಗಿಯಲ್ಲಿದ್ದರೆ, ಅವನ ವಾಹನವಾದ ನವಿಲು ಆಕರ್ಷಕವಾಗಿ ಹಿಂಭಾಗದಲ್ಲಿ ನಿಂತಿರುತ್ತದೆ. ಕೆಲವು ಕಡೆ ಅಭಯ ಹಸ್ತವು ನವಿಲಿನ ತಲೆಯ ಮೇಲೆ ಆಸರೆಯಾಗಿ ಇರಿಸಿರುವಂತೆಯೂ ಇರುತ್ತದೆ. ಕಂಪಲಾಪುರದ ಕರಕಂಠೇಶ್ವರ ದೇವಾಲಯದ ಆವರಣದಲ್ಲಿ ಸುತ್ತೂರಿನ ಸೋಮೇಶ್ವರ ದೇವಾಲಯದ ಎಡಭಾಗದಲ್ಲಿ ಹಾಗೂ ಕಲ್ಲಂಬಾಳಿನ ಕಾಮೇಶ್ವರ ದೇವಾಲಯದ ನವರಂಗದಲ್ಲಿ ಈ ಶಿಲ್ಪಗಳು ಕಂಡುಬರುತ್ತವೆ.

**ವೀರಭದ್ರ**

ದಕ್ಷಬ್ರಹ್ಮನು ನಡೆಸಿದ ಯಜ್ಞವನ್ನು ನಾಶಮಾಡಲು ರೂಪಿಸಿದ ಶಿವನ ಮೂರ್ತಿಯನ್ನು ವೀರಭದ್ರಮೂರ್ತಿ ಎನ್ನುವರು. ಕೂರ್ಮ ಪುರಾಣವು ಈ ಪ್ರಸಂಗದ ಬಗ್ಗೆ ತಿಳಿಸಿದೆ. ಒಮ್ಮೆ ದಕ್ಷ ಪ್ರಜಾಪತಿ ಮತ್ತು ಅವನ ರಾಣಿಯು ಕೈಲಾಸಕ್ಕೆ ಹೋದಾಗ ಶಿವನು ತಪೋನಿರತನಾಗಿದ್ದ ಕಾರಣ, ದಕ್ಷ ಪ್ರಜಾಪತಿಯನ್ನು ಬಂದ ಕೂಡಲೇ ಸ್ವಾಗತಿಸಲಾಗಲಿಲ್ಲ. ಇದರಿಂದ ಅವಮಾನಿತನಾದನೆಂದು ತಿಳಿದು ದಕ್ಷನು ಕೂಡಲೇ ಹಿಂತಿರುಗಿದನು. ಕೆಲಕಾಲದ ನಂತರ ದಕ್ಷ ಪ್ರಜಾಪತಿಯ ಮನೆಗೆ ಶಿವಪಾರ್ವತಿಯರು ಬಂದಾಗ, ದಕ್ಷನು ಶಿವ ಪಾರ್ವತಿಯರನ್ನು ನಾನಾ ರೀತಿಯಲ್ಲಿ ಜರಿದನು. ನೊಂದ ಪಾರ್ವತಿಯು ಅಗ್ನಿ ಪ್ರವೇಶ ಮಾಡಿದಳು. ಇದರಿಂದ ಶಿವನು ಕೋಪಗೊಂಡು ದಕ್ಷನಿಗೆ ಕ್ಷತ್ರಿಯನಾಗಿ ಜನಿಸಿ ಮಗಳೊಂದಿಗೆ ಅಗಮ್ಯಗಮನ ಮಾಡು ಎಂದು ಶಾಪ ನೀಡಿದನು. ಇದರಂತೆ ದಕ್ಷನು ಪ್ರಚೇತಸ ಎಂಬ ಹೆಸರಿನ ರಾಜನಾದನು. ಗಂಗಾದ್ವಾರದಲ್ಲಿ ಪ್ರಚೇತನು ಯಾಗವೊಂದನ್ನು ಆರಂಭಿಸಿ, ಅದರಲ್ಲಿ ಶಿವನ ಭಾಗವನ್ನು ನೀಡುವುದಿಲ್ಲ ಎನ್ನುವನು ಆಗಿಂದೀಚಿಗೆ ಮಹರ್ಷಿಯು ಆ ಅನ್ಯಾಯವನ್ನು ಆಕ್ಷೇಪಿಸುವುದಲ್ಲದೆ, ಅಲ್ಲಿದ್ದವರನ್ನೆಲ್ಲಾ ವೇದಬಾಹ್ಯರಾಗಿ ಎಂದು ಶಪಿಸುತ್ತಾನೆ. ಇದರಿಂದ

ಅವರೆಲ್ಲರಲ್ಲಿಯೂ ಇದ್ದ ವೈಷ್ಣವ ಪ್ರೀತಿಯು ದೂರವಾಗಿ ಧರ್ಮದ ಕನಿಷ್ಠ ಪದ್ಧತಿಗಳನ್ನು ಅನುಸರಿಸಿದರು. ಇವೆಲ್ಲವನ್ನು ಕಂಡ ಪಾರ್ವತಿಯು ಶಿವನ ಬಳಿ ಹೋಗಿ ಅನುಚಿತವಾದ ಯಾಗವನ್ನು ನಿಲ್ಲಿಸಬೇಕೆಂದು ಪ್ರಾರ್ಥಿಸಿದಳು. ಆಗ ಶಿವನು ವೀರಭದ್ರನನ್ನು ಸೃಷ್ಟಿಸಿದನು. ಪ್ರಳಯ ಕಾಲದ ತೇಜೋವಂತನಾದ ಇವನಿಗೆ ಕೋರೆಹಲ್ಲುಗಳು ಇದ್ದವು. ಶರೀರವು ಭಸ್ಮಧಾರಣೆಯಿಂದ ಕೂಡಿದ್ದು, ಕೈಗಳಲ್ಲಿ ಶಂಖ, ಚಕ್ರ ಮತ್ತು ಧನಸ್ಸನ್ನು ಹಿಡಿದಿದ್ದನು. ಈ ವೀರಭದ್ರನು ಪ್ರಚೇತಸನ ಯಜ್ಞಧ್ವಂಸ ಕಾರ್ಯಕ್ಕೆ ಸಿದ್ಧನಾದನು. ಆಗ ಪಾರ್ವತಿಯು ಭದ್ರಕಾಳಿಯನ್ನು ಸೃಷ್ಠಿಸಿ ಅವಳನ್ನು ಆಕೆಯ ಗಣಪರಿವಾರವನ್ನು ವೀರಭದ್ರನೊಂದಿಗೆ ಕಳುಹಿಸಿದಳು. ವೀರಭದ್ರನು ದಕ್ಷನ ಯಜ್ಞವನ್ನು ಧ್ವಂಸ ಮಾಡಿ ಆತನ ತಲೆಯನ್ನು ಕತ್ತರಿಸಿದನೆಂದು[17] ತಿಳಿದುಬರುತ್ತದೆ. **(ಚಿ.ಸಂ.244)**

ಸಾಮಾನ್ಯವಾಗಿ ವೀರಭದ್ರನ ಶಿಲ್ಪವು ನಾಲ್ಕು ಕೈಗಳು, ಮೂರು ಕಣ್ಣು ಹೊಂದಿದ್ದು, ಜ್ವಾಲೆಯಿಂದ ಕೂಡಿದ ಕೆದರಿದ ಜಟಾಭಾರವಿರುತ್ತದೆ. ಇವನು ಗಂಟೆಗಳ ಹಾರ ಮತ್ತು ರುಂಡಮಾಲೆಯನ್ನು, ಚೇಳಿನ ಆಭರಣಗಳನ್ನು ಧರಿಸಿರುತ್ತಾನೆ. ನಾಗ ಯಜ್ಞೋಪವೀತ ಧರಿಸಿದ ವೀರಭದ್ರನ ಕಾಲುಗಳಲ್ಲಿ ಪಾದಜಾಲಕ, ಪಾದುಕೆಗಳಿರುತ್ತವೆ. ಇವನ ಮುಖವು ಉಗ್ರರೂಪದ್ದಾಗಿದ್ದು, ಕೈಗಳಲ್ಲಿ ಖಡ್ಗ, ಖೇಟಕ, ಧನಸ್ಸು, ಕಪಾಲ, ಬಿಂಡಿಪಾಲ ಮತ್ತು ಬಾಣಗಳನ್ನು ಹಿಡಿದಿರುತ್ತಾನೆ.[18] ಇವನ ಶಿಲ್ಪವನ್ನು ಪ್ರತಿಷ್ಠಾಪಿಸುವುದರಿಂದ ಸಕಲಪಾಪಗಳೂ ಪರಿಹಾರವಾಗುತ್ತವೆಂದೂ, ಸಕಲರೋಗಗಳೂ ನಿವಾರಣೆಯಾಗುತ್ತವೆಂಬ ನಂಬಿಕೆ ಇದೆ.

ವೀರಭದ್ರನ ದೇವಾಲಯಗಳು ಕರ್ನಾಟಕದಲ್ಲಿ ಹೊಯ್ಸಳ ಆಳ್ವಿಕೆಯ ಕೊನೆಯ ಕಾಲದಲ್ಲಿ ಅಂದರೆ ಕ್ರಿ.ಶ.13ನೇ ಶತಮಾನದ ನಂತರದಲ್ಲಿ ನಿರ್ಮಾಣವಾಗಿದೆ. ಹಾಗೆಯೇ ನಲ್ಲಿ ಕಂಡು ಮೈಸೂರು ಜಿಲ್ಲೆಯಲ್ಲಿರುವ ವೀರಭದ್ರನ ಬಿಡಿಶಿಲ್ಪಗಳ ಬಗ್ಗೆ ಈ ಕೆಳಗೆ ತಿಳಿಸಲಾಗಿದೆ. ಕಂಪಲಾಪುರದ ಕರಕಂಠೇಶ್ವರ ದೇವಾಲಯದ ಆವರಣದಲ್ಲಿ, ಸುತ್ತೂರಿನ ಸೋಮೇಶ್ವರ ದೇವಾಲಯದ ಎಡಭಾಗದಲ್ಲಿ, ಕ್ಯಾತನಹಳ್ಳಿಯ ಲಕ್ಷ್ಮೀಕಾಂತ ದೇವಾಲಯದ ನವರಂಗದ ಎಡಭಾಗದಲ್ಲಿ, ಕಲ್ಲಂಬಾಳಿನ ಕಾಮೇಶ್ವರ ದೇವಾಲಯದ ನವರಂಗದಲ್ಲಿ ಈ ಶಿಲ್ಪಗಳು ಕಂಡುಬರುತ್ತವೆ.

**ಭೈರವ**

ಭೈರವ ಎಂಬ ಪದದ ಅರ್ಥವು ಯಾರ ಧ್ವನಿಯು ಭೀಕರವಾಗಿದೆಯೋ ಅವನು ಭೈರವ ಎಂದು ತಿಳಿದುಬರುತ್ತದೆ. ಈ ಮಾತು ರುದ್ರನಿಗೆ ಅನ್ವಯಿಸುತ್ತದೆ. ವರಾಹ ಪುರಾಣವು ಬ್ರಹ್ಮನ ಐದನೇ ಶಿರವನ್ನು ಶಿವನು ಕತ್ತರಿಸಿದನೆಂದು ತಿಳಿಸುತ್ತದೆ. ಬ್ರಹ್ಮನು ರುದ್ರನನ್ನು ಸೃಷ್ಠಿಸಿ

ಅವನನ್ನು ಕಪಾಲಿ ಎಂದು ಕರೆದು ಜಗತ್ತನ್ನು ರಕ್ಷಿಸಲು ಹೇಳಿದನಂತೆ. ಆದರೆ ರುದ್ರನು ತನ್ನನ್ನು ಕಪಾಲಿ ಎಂದು ಕರೆದು ಅಪಮಾನ ಮಾಡಿದನೆಂದು ಕೋಪಗೊಂಡು ತನ್ನ ಎಡಗೈ ಹೆಬ್ಬರಳಿನ ಉಗುರಿನಿಂದ ಬ್ರಹ್ಮನ ಐದನೆಯ ತಲೆಯನ್ನು ಚಿವುಟಿ ಹಾಕಿದನು. ಆದರೆ ಕತ್ತರಿಸಿದ ಈ ತಲೆಯು ಶಿವನ ಕೈಗೆ ಅಂಟಿಕೊಂಡಿತು. ರುದ್ರನು ಬ್ರಹ್ಮನಲ್ಲಿ ಈ ತಲೆಯನ್ನು ಬೇರ್ಪಡಿಸಲು ಪ್ರಾರ್ಥಿಸಿದಾಗ ಬ್ರಹ್ಮನು ಹನ್ನೆರಡು ವರ್ಷಗಳ ಕಾಲ ಕಾಪಾಲಿಕನ ಜೀವನ ನಡೆಸಿದರೆ, ಕಪಾಲವು ಕಳಚಿ ಬೀಳುವುದೆಂದು ತಿಳಿಸಿದನು. ಇದರಂತೆ ರುದ್ರನು ಮಹೇಂದ್ರಗಿರಿಗೆ ಹೋಗಿ ಕೂದಲಿನಲ್ಲಿ ಯಜ್ಞೋಪವೀತವನ್ನು, ಮೂಳೆಗಳಲ್ಲಿ ಹಾರವನ್ನು, ರುಂಡಮುಕ್ತ ಜಟಾ ಮುಕುಟವನ್ನು ಧರಿಸಿ, ಕಪಾಲದಲ್ಲಿ ರಕ್ತವನ್ನು ತುಂಬಿಕೊಂಡು ಕಾಪಾಲಿಕನಂತೆ ಹಲವು ಪವಿತ್ರ ಕ್ಷೇತ್ರಗಳಿಗೆ ಭೇಟಿ ನೀಡುತ್ತಿದ್ದನು. ಹನ್ನೆರಡು ವರ್ಷದ ಅಂತ್ಯದ ಸಮಯದಲ್ಲಿ ವಾರಣಾಸಿಗೆ ಬಂದಾಗ ಶಿವನ ಕೈಯಿಂದ ಬ್ರಹ್ಮ ಕಪಾಲವು ಕಳಚಿ ಬಿದ್ದಿತು. (ಈಗಲೂ ವಾರಣಾಸಿಯಲ್ಲಿ ಕಪಾಲ ವಿಮೋಚನವಾದ ಸ್ಥಳವಿದೆ). ನಂತರ ರುದ್ರನು ಗಂಗೆಯಲ್ಲಿ ಸ್ನಾನ ಮಾಡಿ ಕಾಶಿಯಲ್ಲಿ ವಿಶ್ವೇಶ್ವರನನ್ನು ಪೂಜಿಸಿ ಕೈಲಾಸಕ್ಕೆ ಹಿಂತಿರುಗಿದನೆಂದು ಮಹಾಪುರಾಣವು ತಿಳಿಸುತ್ತದೆ.[19]

ಭೈರವನ ಶಿಲ್ಪದ ಬಗ್ಗೆ ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಉಲ್ಲೇಖವಿದೆ.ಒಟ್ಟು 64 ಭೈರವನ ಅವತಾರಗಳಿದ್ದು, ಇವುಗಳಲ್ಲಿ ವಟುಕಭೈರವ ಮತ್ತು ಸ್ವರ್ಣಾಕರ್ಷಣ ಭೈರವ ಶಿಲ್ಪಗಳು ಮುಖ್ಯವಾದವುಗಳಾಗಿವೆ.[20] ಭೈರವ ನಗ್ನ ರೂಪದಲ್ಲಿರುತ್ತಾನೆ. ಪೀಠದಲ್ಲಿ ಚೇಳಿನ ಶಿಲ್ಪವಿರುತ್ತದೆ. ಚತುರ್ಭುಜಗಳನ್ನು ಹೊಂದಿದ್ದು, ಕೈಗಳಲ್ಲಿ ತ್ರಿಶೂಲ, ಢಮರುಗ, ಖಡ್ಗ ಮತ್ತು ರುಂಡವನ್ನು ಹಿಡಿದಿರುತ್ತಾನೆ. ರುಂಡದಿಂದ ಬೀಳುತ್ತಿರುವ ರಕ್ತವನ್ನು ನಾಯಿ ನೆಕ್ಕುತ್ತಿರುತ್ತದೆ. ಕೆಲವು ಶಿಲ್ಪಗಳಲ್ಲಿ ರುಂಡಮಾಲೆಯನ್ನು ಧರಿಸಿ ಕಿವಿಗಳಿಗೆ ಸರ್ಪದ ಕುಂಡಲಗಳನ್ನು ಧರಿಸುವುದುಂಟು. ಕಾಲುಗಳಲ್ಲಿ ಪಾದುಕೆಗಳನ್ನು ಧರಿಸಿದ್ದು, ಸೊಂಟದಲ್ಲಿ ಗಂಟೆ ಇರುತ್ತದೆ. ಮಂಡಿಯ ಭಾಗದಲ್ಲಿ ಸರ್ಪ ಸುರುಳಿಯಾಕಾರದಲ್ಲಿ ಸುತ್ತಿಕೊಂಡಿರುತ್ತದೆ. ಇಕ್ಕೆಲಗಳಲ್ಲಿ ಬೇತಾಳಗಳು ನರ್ತಿಸುತ್ತಿರುವಂತೆ ಕೆತ್ತಲಾಗಿದೆಯಲ್ಲದೆ, ಸುಂದರವಾದ ಕಿರೀಟವನ್ನು ಕೆತ್ತಲಾಗಿರುತ್ತದೆ.[21] ಇವು ಭೈರವನ ಶಿಲ್ಪದ ಸಾಮಾನ್ಯ ಲಕ್ಷಣಗಳಾಗಿವೆ. **(ಚಿ.ಸಂ.245)**

ಕರ್ನಾಟಕದಲ್ಲಿರುವ ಭೈರವನ ಶಿಲ್ಪಗಳು ಶೈವ ದೇವಾಲಯಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವೆ. ಭೈರವ ಶಿವಸ್ವರೂಪಿಯಾಗಿ ಶಿವನ ಪರಿವಾರದಲ್ಲಿ ಪೂಜೆಗೊಳ್ಳುವುದಲ್ಲದೇ ಭೈರವನನ್ನು ಕ್ಷೇತ್ರಪಾಲನೆಂದೂ ಪೂಜಿಸುತ್ತಾರೆ. ಮೈಸೂರು ಜಿಲ್ಲೆಯ ಕೆಲವು ಶೈವ ದೇವಾಲಯಗಳಲ್ಲಿ ಭೈರವನ ಶಿಲ್ಪಗಳನ್ನು ಕಾಣಬಹುದಾಗಿದೆ.

ಕಲ್ಲಂಬಾಳನ ಕಾಮೇಶ್ವರ ದೇವಾಲಯ, ಕ್ಯಾತನಹಳ್ಳಿಯ ಲಕ್ಷ್ಮೀಕಾಂತ ದೇವಾಲಯದ ನವರಂಗದಲ್ಲಿ, ಕೆ.ಹೆಮ್ಮನಹಳ್ಳಿಯ ಮಹಾಲಿಂಗೇಶ್ವರ ದೇವಾಲಯದ ಮುಂದೆ ಭೈರವ ಶಿಲ್ಪಗಳು ಕಂಡುಬರುತ್ತವೆ.

**ದಕ್ಷಿಣಾಮೂರ್ತಿ**

ಸಕಲ ಜೀವರಾಶಿಗಳ ಒಡೆಯನಾಗಿ ಪಶುಪತಿ ಎನಿಸಿದ ಪರಮಶಿವನು ಸಕಲ ಶಾಸ್ತ್ರಜ್ಞರ ಅಧಿಪತಿಯಾಗಿ, ವಿಶೇಷವಾಗಿ ಬಹುಜ್ಞಾನವನ್ನು ಬೋಧಿಗೆ ಶ್ರೀಗುರು ಎನಿಸಿದ್ದಾನೆ. ಯೋಗ, ಸಂಗೀತ, ನೃತ್ಯ ಮುಂತಾದ ಕಲೆಗಳಿಗೂ ಅಧಿದೈವವಾದ ಶಿವನು ದಕ್ಷಿಣಾಭಿಮುಖವಾಗಿ ಕುಳಿತು ಮುನಿಗಳಿಗೆ ಜ್ಞಾನವನ್ನು ಬೋಧಿಸಿದ ರೂಪವನ್ನು ದಕ್ಷಿಣಾಮೂರ್ತಿ ಎನ್ನುವರು. ಶೈವ ದೇವಾಲಯಗಳಲ್ಲಿ ದಕ್ಷಿಣ ಭಾಗದ ದೇವಕೋಷ್ಠದಲ್ಲಿ ಈ ಶಿಲ್ಪವನ್ನು ಸ್ಥಾಪಿಸಬೇಕೆಂದು ಶಾಸ್ತ್ರವು ತಿಳಿಸಿದೆ. ದಕ್ಷಿಣಾ ಎಂಬ ಪದಕ್ಕೆ ಜ್ಞಾನ ಎಂಬ ಅರ್ಥವಿದ್ದು, ಜ್ಞಾನವು ಶಿವನಿಗೆ ಎದುರಾಗಿ ನಿಂತಿರುತ್ತದೆ. ಶಿವನ ಅಚಲ ದೃಷ್ಟಿಯು ಜ್ಞಾನದಲ್ಲಿ ನೆಟ್ಟಿದ್ದು, ಜ್ಞಾನರೂಪಿಯಾದ ಶಿವನೇ ದಕ್ಷಿಣಮೂರ್ತಿ ಎನಿಸಿದ್ದಾನೆ.[22] ಇವನ ಕಾಲ ಬಳಿ ಬಿದ್ದಿರುವ ಅಪಸ್ಮಾರ ಪುರುಷನು ಜಗತ್ತಿನ ಅಜ್ಞಾನದ ಸಂಕೇತವಾಗಿದ್ದು ಜಗತ್ತಿನ ಮಾಯಪಾಶವನ್ನು ಶಿವನು ತನ್ನ ಕಾಲಿನಿಂದ ಮೆಟ್ಟಿರುತ್ತಾನೆ. ದಕ್ಷಿಣಾಮೂರ್ತಿಯ ಕೈಯಲ್ಲಿ ಹಿಡಿದಿರುವ ಪುಸ್ತಕವು ಸಕಲಶಾಸ್ತ್ರಜ್ಞಾನವನ್ನು ತಿಳಿಸಿ ಆತ್ಮವನ್ನು ಎಚ್ಚರಿಸುವ ಸಾಧನವಾಗಿದೆ. ಮತ್ತೊಂದು ಕೈಯಲ್ಲಿರುವ ಅಕ್ಷಮಾಲೆಯು ತತ್ವಗಳನ್ನು ಪ್ರತಿನಿಧಿಸುತ್ತದೆ. ಚಿತ್‌ಶಕ್ತಿಯಿಂದ ಕೂಡಿರುವ ಅವನ ಶರೀರವು ಆತ್ಮಾನಂದದಿಂದ ಬೆಳಗುತ್ತಿರುತ್ತದೆ. ಇವನ ಹಿಂದೆ ಇರುವ ಆಲದ ಮರದ ವಿಶಾಲವಾದ, ದಟ್ಟವಾದ ನೆರಳು ಮಾಯೆಯನ್ನು ಪ್ರತಿನಿಧಿಸಿದರೆ, ಬಳಿಯಲ್ಲಿರುವ ವೃಷಭವು ಧರ್ಮವನ್ನು ಸೂಚಿಸುತ್ತದೆ. ದಕ್ಷಿಣಾಮೂರ್ತಿಯು ತನ್ನ ಬಳಿಯಲ್ಲಿರುವ ಮುನಿಗಳಿಗೆ ಬ್ರಹ್ಮಜ್ಞಾನವನ್ನು ಬೋಧಿಸುತ್ತಿರುತ್ತಾನೆ ಎಂದು ತಿಳಿಸಿದೆ.[23]

ದಕ್ಷಿಣಾಮೂರ್ತಿ ಸ್ವರೂಪದ ಬಗೆಗೆ ಇರುವ ಪೌರಾಣಿಕ ಸಂದರ್ಭವನ್ನು ಎಸ್.ಕೆ.ರಾಮಚಂದ್ರರಾಯರು ಹೀಗೆ ತಿಳಿಸಿದ್ದಾರೆ. "ಒಮ್ಮೆ ಸೋಮೆಕಾಸುರನು ನಾಲ್ಕು ವೇದಗಳನ್ನು ಕದ್ದು ಸಮುದ್ರದೊಳಗೆ ಹೋಗಿ ನಾಲ್ಕು ವೇದಗಳನ್ನು ನಾಲ್ಕು ಮಕ್ಕಳನ್ನಾಗಿ ಮಾಡಿ ಕರೆದುಕೊಂಡು ಬರುತ್ತಿದ್ದನು. ಅಷ್ಟರಲ್ಲಿ ಅಸುರನು ಎದುರಾಗಲು ಮಕ್ಕಳನ್ನು ರಕ್ಷಿಸುವ ಸಲುವಾಗಿ ವಿಷ್ಣುವು ಶಿವನಿಗೆ ಮೊರೆ ಇಟ್ಟನು. ಕೂಡಲೇ ಶಿವನು ದಕ್ಷಿಣಾಮೂರ್ತಿಯ ರೂಪತಾಳಿ ಅಸುರನನ್ನು ಬಲಗಾಲ ಅಡಿಯಲ್ಲಿ ಮೆಟ್ಟಿಕುಳಿತುಕೊಂಡನು. ಆ ನಾಲ್ಕು ಮಕ್ಕಳೇ ಸನಕ, ಸಂದನ, ಸನತ್ಕುಮಾರ, ಸನತ್ಸುಜಾತ ಎಂಬ ನಾಲ್ವರು ಮುನಿಗಳಾಗಿ

ದಕ್ಷಿಣಾಮೂರ್ತಿಯ ಶಿಷ್ಯರಾದರು. ಶಿವನು ಇವರಿಗೆ ವೇದಾರ್ಥಗಳನ್ನು ವ್ಯಾಖ್ಯಾನ ಮಾಡಿ ತಿಳಿಸಿದನು. ಹೀಗೆ ಬ್ರಹ್ಮಜ್ಞಾನವನ್ನು ತಿಳಿಸಿದ ದಕ್ಷಿಣಮೂರ್ತಿಯು ಆದಿಗುರು ಎನಿಸಿದನು. ದಕ್ಷಿಣಾಮೂರ್ತಿಯ ರೂಪವು ಶಿವನಾನುಗ್ರಹ ಮತ್ತು ಸಂಹಾರಗಳೆರಡನ್ನು ಅಳವಡಿಸಿಕೊಂಡ ಮೂರ್ತಿ. ಈ ಶಿಲ್ಪದಲ್ಲಿ ಸೌಮ್ಯ ಮುಖವಿದ್ದು, ಸಂಹಾರ ಸಂಕೇತವಾಗಿ ಅಪಸ್ಮಾರನು ಕಾಲಕೆಳಗೆ ಇರುತ್ತಾನೆ"[24] ಎಂದಿದ್ದಾರೆ. **(ಚಿ.ಸಂ.246)**

ಈ ದಕ್ಷಿಣಾಮೂರ್ತಿ ಸ್ವರೂಪದಲ್ಲಿ ನಾಲ್ಕು ಪ್ರಭೇದಗಳಿವೆ. ಯೋಗ ದಕ್ಷಿಣಾಮೂರ್ತಿ, ಜ್ಞಾನ ದಕ್ಷಿಣಾಮೂರ್ತಿ, ವೀಣಾಧರ ದಕ್ಷಿಣಾಮೂರ್ತಿ ಮತ್ತು ವ್ಯಾಖ್ಯಾನ ದಕ್ಷಿಣಾಮೂರ್ತಿ, ಮೈಸೂರು ಜಿಲ್ಲೆಯ ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಹೆಚ್ಚಾಗಿ ವ್ಯಾಖ್ಯಾನ ದಕ್ಷಿಣಾಮೂರ್ತಿ ಶಿಲ್ಪಗಳೇ ಕಂಡುಬರುತ್ತವೆ.[25] ಕಂಪಲಾಪುರದ ಕರಕಂಠೇಶ್ವರ ದೇವಾಲಯ ಹಾಗೂ ಕಲ್ಲಂಬಾಳಿನ ಕಾಮೇಶ್ವರ ದೇವಾಲಯದ ನವರಂಗದಲ್ಲಿ ಕಂಡುಬಂದಿದೆ.

**ಚಂಡಿಕೇಶ್ವರ**

ಚಂಡಿಕೇಶ್ವರನು ಶಿವನ ಪರಮಭಕ್ತ. ಇವನ ಸಣ್ಣಗುಡಿಯು ಶಿವಾಲಯದ ಈಶಾನ್ಯ ದಿಕ್ಕಿನಲ್ಲಿರುತ್ತದೆ.ಚಂಡೇಶನು ಪದ್ಮಾಸನದ ಮೇಲೆ ವೀರಾಸನ ಭಂಗಿಯಲ್ಲಿ ಕುಳಿತಿದ್ದು ಎಡಗಾಲನ್ನು ಮಡಚಿ ಬಲಗಾಲನ್ನು ಕೆಳಚಾಚಿರುತ್ತಾನೆ. ಚಂಡೇಶನ ಎಡಗೈ ತೊಡೆಯ ಮೇಲಿರುತ್ತದೆ. ಬಲಗೈ ವರದಹಸ್ತವಾಗಿರುತ್ತದೆ. ಕೆಲವೊಮ್ಮೆ ಚಂಡಿಕೇಶನ ಮೂರ್ತಿ ಅಂಜಲಿ ಬದ್ಧವಾಗಿರುವುದು ಉಂಟು".[26]

ಚಂಡಿಕೇಶನ ಶಿಲ್ಪದಲ್ಲಿ ನಾಲ್ಕು ಕೈಗಳಿದ್ದರೆ, ಮೂರು ಕೈಗಳಲ್ಲಿ ಟಂಕ, ಪಾಶ, ಶೂಲಗಳಿದ್ದು ಮತ್ತೊಂದು ಕೈ ಅಭಯಹಸ್ತವಾಗಿರಬೇಕೆಂದಿದೆ. ಅಲ್ಲದೇ ಚಂಡೇಶ್ವರನ ಶಿಲ್ಪವು ಶೈವ ದೇವಾಲಯಗಳ ಗರ್ಭಗೃಹದ ಹಿಂಭಾಗದಲ್ಲಿದ್ದು, ಶಿವನ ಅಭಿಷೇಕದ ನೀರು ಚಂಡಿಕೇಶನ ತಲೆಯ ಮೇಲೆ ಬೀಳಬೇಕೆಂದು ಹೇಳಿದೆ. ಈ ಪರಿವಾರ ದೇವತೆಗೆ ಎಷ್ಟು ಮಹತ್ವವಿದೆ ಎಂದರೆ ಚಂಡಿಕೇಶ್ವರನ ದರ್ಶನ ಮಾಡದಿದ್ದರೆ ಶಿವದರ್ಶನದ ಫಲ ದೊರೆಯುವುದಿಲ್ಲ ಎಂಬ ನಂಬಿಕೆ ಇದೆ. ಕ್ಯಾತನಹಳ್ಳಿಯ ಲಕ್ಷ್ಮೀಕಾಂತ ದೇವಾಲಯ, ಸುತ್ತೂರಿನ ಸೋಮೇಶ್ವರದ ದೇವಾಲಯದಲ್ಲಿ ಕಂಡುಬರುತ್ತದೆ. **(ಚಿ.ಸಂ.247)**

**ಸಪ್ತಮಾತೃಕೆಯರು**

ಸಪ್ತಮಾತೃಕೆಯರ ಬಗ್ಗೆ ಪುರಾಣ ಗ್ರಂಥಗಳಲ್ಲಿ ಮತ್ತು ಇತರ ಗ್ರಂಥಗಳಲ್ಲಿ ಉಲ್ಲೇಖಗಳು ಕಂಡುಬರುತ್ತವೆ. ಇವರು ಮೂಲತಃ ಶೈವಪಂಥದ ದೇವತೆಗಳು, ಬ್ರಾಹ್ಮಿ,

ಮಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ ಮತ್ತು ಚಾಮುಂಡಿ ಇವರೇ ಸಪ್ತಮಾತೃಕೆಯರು. ಸಾಮಾನ್ಯವಾಗಿ ಸ್ತ್ರೀ ದೇವತೆಗಳನ್ನು ಶಕ್ತಿದೇವತೆಗಳು ಎಂದು ಕರೆಯುತ್ತಾರೆ.[27] ಇವರು ಒಂದೊಂದು ದೈವದ ಶಕ್ತಿ ಎಂದು ಹೇಳುತ್ತಾರೆ. ಇವರನ್ನು ಕ್ರಮವಾಗಿ ಬ್ರಹ್ಮ, ಮಹೇಶ್ವರ, ಕುಮಾರ, ವಿಷ್ಣು, ವರಾಹ, ಇಂದ್ರ, ಯಮ ದೇವರುಗಳ ಶಕ್ತಿದೇವತೆಗಳೆಂದು ಹೇಳುವುದುಂಟು.[28, 29] ಸಪ್ತಮಾತೃಕೆಯರ ಶಿಲ್ಪಗಳನ್ನು ದೇವಾಲಯಗಳ ನವರಂಗದ ಒಂದು ಭಾಗದ ಪಟ್ಟಿಕೆಗಳಲ್ಲಿ ಶಿಲ್ಪಿಸಲಾಗುತ್ತದೆ. ಇವುಗಳು ಒಂದೇ ಪೀಠದಲ್ಲಿ ಪದ್ಮಾಸನದಲ್ಲಿ ಕುಳಿತಂತೆ ಕಂಡುಬಂದರೂ ಅವರವರ ಲಾಂಛನ ಸಹಿತವಾಗಿ ಕೆತ್ತಲಾಗಿರುತ್ತದೆ. ಕೆಲವೊಮ್ಮೆ ಇವರ ಜೊತೆಯಲ್ಲಿ ಗಣಪತಿ ಮತ್ತು ದಕ್ಷಿಣಾಮೂರ್ತಿ ಅಥವಾ ವೀಣಾಧಾರಿಯಾದ ಶಿವನನ್ನು ಶಿಲ್ಪಿಸಲಾಗಿರುತ್ತದೆ. ವಾಸ್ತು ವಿದ್ಯಾಗ್ರಂಥದಲ್ಲಿ ಸೂರ್ಯ ಮತ್ತು ಶಕ್ತಿ ದೇವತೆಗಳಿಗೆ ಈ ದೇವಿಯರು ಶ್ರೀಯೊಡನೆ ನಾಲ್ಕು ದಿಕ್ಕುಗಳ ಬಾಗಿಲು ಕಾಯುವವರಾಗಿದ್ದಾರೆ. ಇವರಲ್ಲಿ ಬ್ರಾಹ್ಮಿ ಮತ್ತು ಮಹೇಶ್ವರಿಯರು ಪಶ್ಚಿಮದ ಬಾಗಿಲಲ್ಲೂ, ಕೌಮಾರಿ ಮತ್ತು ವೈಷ್ಣವಿಯರು, ಉತ್ತರದ ಬಾಗಿಲಲ್ಲೂ, ವಾರಾಹಿ ಮತ್ತು ಇಂದ್ರಾಣಿಯರು ಪೂರ್ವದ ಬಾಗಿಲಲ್ಲೂ, ಚಾಮುಂಡಿ ಮತ್ತು ಶ್ರೀಯರು ದಕ್ಷಿಣದ ಬಾಗಿಲಲ್ಲೂ ಇರಬೇಕೆಂದು ತಿಳಿಸಿದೆ.[30]

ಬ್ರಾಹ್ಮಿಯು ಹಂಸವಾಹನೆ ಈಕೆ ಬ್ರಹ್ಮನ ಶಕ್ತಿದೇವತೆ, ಬ್ರಹ್ಮನ ರೀತಿಯಲ್ಲಿ ನಾಲ್ಕುಮುಖ, ಆರು ಕೈಗಳನ್ನು ಹೊಂದಿರುತ್ತಾಳೆ. ಮೂರು ಬಲಕೈಗಳಲ್ಲಿ ವರಮುದ್ರೆ, ಪಾಶ, ಸ್ತ್ರುವವಿದ್ದು, ಮೂರು ಎಡಕೈಗಳಲ್ಲಿ ಅಭಯ ಮುದ್ರೆ, ಪುಸ್ತಕ, ಕಮಂಡಲವನ್ನು ಹಿಡಿದಿರುತ್ತಾಳೆ.

ಮಹೇಶ್ವರಿಯನ್ನು ಭೈರವಿ ಎಂತಲೂ ಕರೆಯುವರು ಈಕೆ ಮಹೇಶ್ವರನ ಶಕ್ತಿದೇವತೆ. ಈಕೆಯ ವಾಹನ ವೃಷಭ. ಇವಳು ಐದು ಮುಖ, ಮೂರು ಕಣ್ಣು ಹಾಗೂ ಹತ್ತು ಕೈಗಳನ್ನು ಹೊಂದಿದ್ದು, ಬಾಲಚಂದ್ರ ಭೂಷಣಗಳಾಗಿದ್ದಾಳೆ. ಐದು ಬಲಕೈಗಳಲ್ಲಿ ಅಭಯಮುದ್ರೆ, ಕೊಡಲಿ, ಶೂಲ, ವಜ್ರ, ಖಡ್ಗವನ್ನು ಐದು ಎಡಕೈಗಳಲ್ಲಿ ವರಮುದ್ರೆ, ಅಂಕುಶ, ನಾಗ, ಘಂಟೆ ಮತ್ತು ಪಾಶವನ್ನು ಹಿಡಿದಿದ್ದಾಳೆ.

ಕೌಮಾರಿಯು ಆರು ತಲೆ ಹಾಗೂ ಹನ್ನೆರಡು ಕೈಗಳನ್ನು ಹೊಂದಿರುತ್ತಾಳೆ. ಆರು ಬಲಕೈಗಳಲ್ಲಿ ವರಮುದ್ರೆ, ಶಕ್ತಿ, ಪತಾಕೆ, ದಂಡ, ಪಾತ್ರೆ, ಬಾಣವನ್ನು ಆರು ಎಡಕೈಗಳಲ್ಲಿ ಅಭಯಮುದ್ರೆ, ಕೊಡಲಿ, ಕುಕ್ಕಟ(ಕೋಳಿ), ಕಮಲ, ಬಿಲ್ಲು ಮತ್ತು ಗಂಟೆಯನ್ನು ಹೊಂದಿರುತ್ತಾಳೆ. ಇವಳ ವಾಹನ ನವಿಲು, ಈಕೆ ಕುಮಾರನ ಶಕ್ತಿದೇವತೆ. **(ಚಿ.ಸಂ.248)**

ವೈಷ್ಣವಿಯು ಆರು ಕೈಗಗಳನ್ನು ಹೊಂದಿದ್ದು, ಎಡಕೈಗಳಲ್ಲಿ ಚಕ್ರಶಂಖವನ್ನು ವಿಶೇಷವಾಗಿ ವನಮಾಲೆಯನ್ನು ಹೊಂದಿರುತ್ತಾಳೆ. ಬಲಕೈಗಳಲ್ಲಿ ವರಮುದ್ರೆ, ಗದಾ, ಪದ್ಮವಿದ್ದು, ಈಕೆಯು ಗರುಡ ವಾಹನವನ್ನು ಹೊಂದಿದ್ದಾಳೆ. ಈಕೆ ವಿಷ್ಣುವಿನ ಶಕ್ತಿದೇವತೆ.

ವಾರಾಹಿಯು ವರಾಹದ ಮುಖವನ್ನು ಹೊಂದಿರುತ್ತಾಳೆ. ದೊಡ್ಡದಾದ ಹೊಟ್ಟೆಯಿಂದ ಕೂಡಿರುತ್ತಾಳೆ. ಇವಳು ಆರು ಕೈಗಳನ್ನು ಹೊಂದಿದ್ದು, ಬಲಕೈಗಳಲ್ಲಿ ವರದಹಸ್ತ, ಖಡ್ಗ, ದಂಡವಿದ್ದು, ಎಡಕೈಗಳಲ್ಲಿ ಅಭಯಮುದ್ರೆ, ಖೇಟಕ ಮತ್ತು ಪಾತ್ರೆಯನ್ನು ಹೊಂದಿರುತ್ತಾಳೆ ಹಾಗೂ ಇವಳ ವಾಹನ ಗರುಡ ಈಕೆ ವರಾಹದ ಶಕ್ತಿದೇವತೆ.

ಇಂದ್ರಾಣಿಯು ಇಂದ್ರನ ರೀತಿಯಲ್ಲಿ ಸಾವಿರ ಕಣ್ಣುಗಳನ್ನು ಹೊಂದಿರುತ್ತಾಳೆ. ಆರು ಕೈಗಳನ್ನು ಹೊಂದಿದ್ದು, ಬಲಕೈಗಳಲ್ಲಿ ವರಮುದ್ರೆ, ಸೂತ್ರ, ವಜ್ರವನ್ನು ಎಡಕೈಗಳಲ್ಲಿ ಅಭಯಮುದ್ರೆ, ಪಾತ್ರೆ ಮತ್ತು ಪದ್ಮವನ್ನು ಹೊಂದಿರುತ್ತಾಳೆ. ಇವಳ ವಾಹನ ಆನೆ. ಈಕೆ ಇಂದ್ರನ ಶಕ್ತಿದೇವತೆಯಾಗಿದ್ದಾಳೆ.

ಚಾಮುಂಡಿ ಕಪ್ಪನೆಯ ಶರೀರಕಾಂತಿಯ ಉಗ್ರದೇವತೆ. ಈಕೆಯು ಸರ್ಪಗಳನ್ನು ಭೂಷಣವಾಗಿ ಪಡೆದು ಕೋರೆಹಲ್ಲುಗಳಿಂದಲೂ ದೊಡ್ಡದಾದ ಶರೀರದಿಂದಲೂ ಗುಳಿ ಕಣ್ಣುಗಳಿಂದಲೂ, ಸಣ್ಣ ಹೊಟ್ಟೆಯಿಂದಲೂ ಕೂಡಿದವಳಾಗಿ, ಕಾಮರೂಪಿಣಿಯಾಗಿ ಕೊರಳಿಗೆ ರುಂಡಮಾಲೆಯನ್ನು ಧರಿಸಿರುತ್ತಾಳೆ. ಇವಳನ್ನು ಹಲವು ಕಡೆ ದುರ್ಗಿ ಎಂದು ಕರೆಯುವುದುಂಟು. ಈಕೆಯು ಹತ್ತು ಕೈಗಳನ್ನು ಹೊಂದಿದ್ದು, ಬಲಕೈಗಳಲ್ಲಿ ಖಡ್ಗ, ಬಾಣ, ಒನಕೆ, ಚಕ್ರ, ಚಾಮರವಿದ್ದು, ಎಡಕೈಗಳಲ್ಲಿ ಖೇಡ, ಪಾಶ, ದಂಡ, ಕೊಡಲಿ ಮತ್ತು ಬಿಲ್ಲನ್ನು ಹೊಂದಿರುತ್ತಾಳೆ. ಇವಳ ವಾಹನ ನರಿ. ಈಕೆ ಯಮನ ಶಕ್ತಿದೇವತೆಯಾಗಿದ್ದಾಳೆ.[31]

ಚಾಮುಂಡಿಯನ್ನು ಬಿಟ್ಟು ಉಳಿದವರಿಗೆ ಎಷ್ಟು ಕೈಗಳಿರಬೇಕೆಂಬ ಬಗೆಗೆ ನಿಯಮವಿಲ್ಲ. ಚಾಮುಂಡಿಗೆ 8 ರಿಂದ 10 ಕೈಗಳನ್ನು ಕೆತ್ತಲಾಗಿದೆ. ಉಳಿದವರಿಗೆ 2 ರಿಂದ 6 ಕೈಗಳನ್ನು ಬಿಡಿಸಿರುವುದುಂಟು. ಕೆಲವು ಕಡೆಗಳಲ್ಲಿ ನಾಲ್ಕು ಕೈಗಳನ್ನು ಕೆತ್ತಲಾಗಿದೆ. ಆಯುಧಗಳ ಸಂಖ್ಯೆಯ ವಿಚಾರದಲ್ಲಿ ಇದೇ ರೀತಿ ಇರುತ್ತದೆ.[32] ಮೇಲೆ ತಿಳಿಸಿರುವಂತೆ ಎಲ್ಲಾ ದೇವತೆಗಳು ವಿಶಿಷ್ಟ ಲಕ್ಷಣಗಳನ್ನು ಹೊಂದಿದ್ದರೂ, ಈಗ ದೊರೆಯುವ ಏಕಶಿಲಾ ಪಟ್ಟಿಕಾ ಸಮೂಹದ ಶಿಲ್ಪಗಳಲ್ಲಿ ಒಂದು ತಲೆ ಹಾಗೂ ಎರಡರಿಂದ ನಾಲ್ಕು ಕೈಗಳನ್ನು ಹೊಂದಿರುವಂತಹ ಶಿಲ್ಪಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಸಾಮಾನ್ಯವಾಗಿ ಈ ಶಿಲ್ಪಗಳು ದೇವಾಲಯಗಳಲ್ಲಿ ಅಥವಾ ಕೆರೆಯ ದಂಡೆಯಲ್ಲಿ ಕಂಡುಬರುತ್ತವೆ. ಇವರ ರಕ್ಷಣೆಗೆ ಗಣಪತಿ, ಭೈರವ, ಸ್ಕಂದಾ ಇತ್ಯಾದಿ ದೇವತೆಗಳಿರುತ್ತವೆ. ಇವರನ್ನು ಮಾತೃದೇವತೆಗಳ ಕುಮಾರರೆಂದೇ ಪುರಾಣಗಳು

ಪರಿಗಣಿಸಿವೆ.[33] ಸಪ್ತಮಾತೃಕೆಯರನ್ನು ಸಾಮಾನ್ಯವಾಗಿ ಕುಳಿತಿರುವಂತೆಯೂ ಕೆಲವು ಕಡೆ ಮಕ್ಕಳನ್ನು ಎತ್ತಿಕೊಂಡಿರುವಂತೆಯೂ ಶಿಲ್ಪಿಸಿರುವ ಉದಾಹರಣೆಗಳಿವೆ.[34] ಕಲ್ಲಂಬಾಳಿನ ಕಾಮೇಶ್ವರ ದೇವಾಲಯದ ನವರಂಗದಲ್ಲಿ ಕರಂಕಠೇಶ್ವರ ದೇವಾಲಯದ ಪ್ರಾಕಾರದ ಒಳಗೆ ಹಾಗೂ ಜೋರ್ತಿಮಹೇಶ್ವರ ದೇವಾಲಯದಲ್ಲಿ ಕಂಡುಬರುತ್ತದೆ.

**ಲಕ್ಷ್ಮೀ**

ಲಕ್ಷ್ಮೀಯು ಐಶ್ವರ್ಯ ದೇವತೆ. ವಿಷ್ಣುಪುರಾಣದ ಪ್ರಕಾರ ಇವಳು ಸಮುದ್ರಮಂಥನ ಮಾಡಿದಾಗ ಕ್ಷೀರಸಾಗರದಲ್ಲಿ ಜನಿಸಿದವಳು. ಇವಳು ವಿಷ್ಣುವಿನ ಹೆಂಡತಿ. ಇವಳಿಗೆ ಶ್ರೀ, ಪದ್ಮಾ, ಕಮಲಾ ಮುಂತಾದ ಹೆಸರುಗಳಿವೆ. ಎಲ್ಲಾ ಕಾರ್ಯಗಳಿಗೂ ಅನುಗುಣವಾಗಿ ಇವಳು ಒಲಿಯುತ್ತಾಳೆಂದು ನಂಬಿಕೆ. ಆದುದರಿಂದಲೇ ಇವಳನ್ನು ಸಂತಾನಲಕ್ಷ್ಮೀ, ಸೌಭಾಗ್ಯಲಕ್ಷ್ಮೀ, ಅಷ್ಟಲಕ್ಷ್ಮೀ, ಗಜಲಕ್ಷ್ಮೀ, ರಾಜ್ಯಲಕ್ಷ್ಮೀ, ಧನಲಕ್ಷ್ಮೀ, ವಿಜಯಲಕ್ಷ್ಮೀ, ಮಹಾಲಕ್ಷ್ಮೀ ಎಂಬ ಹೆಸರುಗಳು ಬಂದಿವೆ. ಇವಳಿಗೆ ಕೆಲವು ಕಡೆಗಳಲ್ಲಿ ಪ್ರತ್ಯೇಕವಾದ ದೇವಾಲಯಗಳಿವೆ. ಈಕೆ ಪದ್ಮಪೀಠದಲ್ಲಿ ಪದ್ಮಾಸನದಲ್ಲಿ ಕುಳಿತಿದ್ದು, ಕೈಯಲ್ಲಿ ಪದ್ಮದ ಮೊಗ್ಗುಗಳನ್ನು ಹಿಡಿದಿರುತ್ತಾಳೆ. ಸಾಮಾನ್ಯವಾಗಿ ದೇವಾಲಯದ ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ರೂಪದಲ್ಲಿಯೂ ಶಿಲ್ಪಿಸಲಾಗಿರುತ್ತದೆ. ಪದ್ಮಪುರಾಣದಲ್ಲಿ ವಿಷ್ಣುವಿಗೆ ಎಂಟು ಜನ ಶಕ್ತಿಯರಿದ್ದರು ಎಂದು ಹೇಳಿದೆ. ಅವರುಗಳೆಂದರೆ, ಭೂದೇವಿ, ಶ್ರೀದೇವಿ, ಸರಸ್ವತಿ, ಪ್ರೀತಿ, ಕೀರ್ತಿ, ಶಾಂತಿ, ತುಷ್ಠಿ ಮತ್ತು ಪುಷ್ಠಿ ಸಂಪ್ರದಾಯದ ಪ್ರಕಾರ ಈ ಎಲ್ಲವನ್ನು ಪಡೆದವನು ಮಹಾನ್ ವ್ಯಕ್ತಿಯಾಗುತ್ತಾನೆ. ಶ್ರೀದೇವಿ–ಶ್ರೀಮಂತಿಕೆ, ಭೂದೇವಿ–ಭೂಮಿ, ಸರಸ್ವತಿ–ವಿದ್ಯೆ ಈ ರೀತಿಯಲ್ಲಿ ಉಲ್ಲೇಖಿಸಲಾಗಿದೆ. ವಿಷ್ಣುವಿನ ಅವತಾರಗಳಲ್ಲಿ ಸತಿಯರಾದ ಸೀತೆ, ರುಕ್ಮಿಣಿ, ಸತ್ಯಭಾಮೆ, ರಾಧೆ ಮುಂತಾದ ದೇವಿಯರೂ ಇರುತ್ತಾರೆ.

**ಸರಸ್ವತಿ**

ಇವಳು ವಿದ್ಯಾದೇವತೆ, ಬ್ರಹ್ಮನ ಹೆಂಡತಿ, ಶ್ವೇತಪದ್ಮಾಸನೆ, ಶುಭ್ರವಸ್ತ್ರಾನ್ವಿತೆ, ಧವಳವರ್ಣೆ, ಇವಳ ಸುತ್ತಲೂ ಋಷಿಗಳು ಇರುತ್ತಾರೆ. ಎಲ್ಲಾ ಧರ್ಮಗಳಲ್ಲಿಯೂ ಸರಸ್ವತಿ ಪೂಜನೀಯಳು. ಅಕ್ಷರಮಾಲೆ, ಪುಸ್ತಕ, ವೀಣೆ, ಪಾಶ, ಅಂಕುಶ ಮುಂತಾದವು ಅವಳ ಕೈಯಲ್ಲಿರುತ್ತವೆ. ಸಾಮಾನ್ಯವಾಗಿ ಕೈಭಾಗದ ಎಡಗೈಯಲ್ಲಿ ವ್ಯಾಖ್ಯಾನ ಮುದ್ರೆಯನ್ನು ಹೊಂದಿರುತ್ತಾಳೆ. ಇವಳನ್ನು ವಿಷ್ಣುವಿನ ಶಕ್ತಿ ಎಂದು ಬಿಂಬಿಸಲಾಗುತ್ತದೆ. ಕೆಲವು ವಿಷ್ಣು ವಿಗ್ರಹಗಳ ಜೊತೆಗೆ ಭೂದೇವಿಯ ಬದಲು ಸರಸ್ವತಿ ಇರುತ್ತಾಳೆ.

**ಪಾರ್ವತಿ**

ಈಕೆ ಶಿವನ ಹೆಂಡತಿ. ಇವಳನ್ನು ಗೌರಿ ಎಂತಲೂ ಕರೆಯುವರು.ಶಿವನನ್ನು ಸ್ತ್ರೀ ರೂಪದಲ್ಲಿ ಪೂಜಿಸುವ ಶಾಕ್ತರು ಶಕ್ತಿಯ ಜೊತೆಯಿಲ್ಲದೆ ನಿರಾಕಾರ. ಶಿವನಿಗೆ ಯಾವ ಅಸ್ತಿತ್ವವೂ ಇಲ್ಲ ಎನ್ನುತ್ತಾರೆ. ಪಾರ್ವತಿ ಹಾಗೂ ಇನ್ನಿತರ ಸ್ತ್ರೀ ದೇವತೆಗಳಿಗೆ (ಸರಸ್ವತಿ, ಲಕ್ಷ್ಮೀ) ಪ್ರತ್ಯೇಕ ಗುಡಿಗಳನ್ನು ಕಟ್ಟುವ ಪದ್ಧತಿ ಇರಲಿಲ್ಲ. ಆದರೆ ವಿಜಯನಗರದ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳಲ್ಲಿ ವಾಸ್ತು ಪ್ರಕಾರವಾಗಿ ಒಂದು ಗುಡಿಯನ್ನು ಕಟ್ಟಿಸಿ ಅಲ್ಲಿ ದೇವಿಯನ್ನು ಪ್ರತಿಷ್ಠಾಪಿಸುವ ಪದ್ಧತಿ ರೂಢಿಗೆ ಬಂದಿತ್ತು. ಸುಪ್ರಭೇದಾಗಮದಲ್ಲಿ ಪಾರ್ವತಿಯು ಉನ್ನತ ಸ್ತನದೊಂದಿಗೆ ಹೆಚ್ಚಿನ ಕಂಠಿಹಾರದಿಂದ ಸೌಂದರ್ಯವತಿಯಾಗಿರುತ್ತಾಳೆ ಎಂದು ಉಲ್ಲೇಖಿಸಿದೆ. ಈಕೆ ಚತುರ್ಭುಜೆ ಕೈಯಲ್ಲಿ ಢಮರು, ತ್ರಿಶೂಲ, ಪಾಶ, ಅಂಕುಶವನ್ನು ಹೊಂದಿರುತ್ತಾಳೆ. ಕೆಲವು ಸಮಯದಲ್ಲಿ ಅಭಯಹಸ್ತವನ್ನು ಹೊಂದಿದ್ದು, ಜೊತೆಯಲ್ಲಿ ಅಕ್ಷರಮಾಲೆಯನ್ನು ಹೊಂದಿರುತ್ತಾಳೆ. ಕೆಲವು ಕಡೆಗಳಲ್ಲಿ ಶಿವನು ತೊಡೆಯ ಮೇಲೆ ಕುಳಿತಿರುವಂತೆಯೂ ಚಿತ್ರಿಸಲಾಗಿದೆ. ಕಲ್ಲಂಬಾಳಿನ ಕಾಮೇಶ್ವರ ದೇವಾಲಯದ ನವರಂಗದಲ್ಲಿ ಪಾರ್ವತಿಯ ಬಿಡಿಶಿಲ್ಪವಿದೆ.

**ನಂದಿ**

ಇದು ಶಿವನ ವಾಹನ. ಎಲ್ಲಿ ಶೈವ ದೇವಾಲಯಗಳು ಕಂಡುಬರುತ್ತವೆಯೋ ಅಲ್ಲಿ ನಂದಿ ಶಿಲ್ಪಗಳು ಇರುವುದು ಸಾಮಾನ್ಯ. ನಂದಿಯನ್ನು ಲಿಂಗಕ್ಕೆ ಎದುರಾಗಿ, ಶಿಖರದ ಮೊದಲ ಹಂತದ ಮೂಲೆಗಳಲ್ಲಿ ಹಾಗೂ ಸ್ತೂಪಿಯ ನಾಲ್ಕು ಮೂಲೆಗಳಲ್ಲಿ ನಂದಿ ಶಿಲ್ಪಗಳನ್ನು ಕೆತ್ತಿರುತ್ತಾರೆ. ಉಮಾಸಹಿತ ಶಿವನು ನಂದಿಯ ಮೇಲೆ ಕುಳಿತ ಶಿಲ್ಪಗಳನ್ನು ದೇವಾಲಯದ ಲಲಾಟಬಿಂಬದಲ್ಲಿ, ಭುವನೇಶ್ವರಿಗಳಲ್ಲಿ ಹಾಗೂ ಬಿಡಿಶಿಲ್ಪಗಳಲ್ಲಿ ಕಾಣಬಹುದು. ನಂದಿಯು ವಿನೀತ ಮೂರ್ತಿಯಾಗಿ ಲಿಂಗಕ್ಕೆ ಎದುರಾಗಿ ಕುಳಿತಿರುವಂತೆ ನವರಂಗದಲ್ಲಿ ಇಟ್ಟಿರುತ್ತಾರೆ. ಇದಕ್ಕೆ ವಿಶಿಷ್ಟ ಅಲಂಕಾರವಿರುತ್ತದೆ. ಕೆಲವು ಕಡೆಗಳಲ್ಲಿ ನಂದಿಗೆ ಪೂಜೆ ಸಲ್ಲಿಸುವ ವಿಶೇಷ ಪದ್ಧತಿ ಇದೆ. ಶಿವಲಿಂಗ ದರ್ಶನ ಮಾಡಬೇಕೆಂದು ಅಪೇಕ್ಷಿಸುವ ಭಕ್ತರು ಆಂಧ್ರಪ್ರದೇಶ ಮತ್ತು ಕರ್ನಾಟಕದ ಕೆಲವು ಕಡೆಗಳಲ್ಲಿ ಗರ್ಭಗೃಹದಲ್ಲಿರುವ ಲಿಂಗವನ್ನು ದರ್ಶಿಸದೆ ನೇರವಾಗಿ ನವರಂಗದಲ್ಲಿನ ನಂದಿವಿಗ್ರಹದ ಎಡಭಾಗದಲ್ಲಿ ನಿಂತು ಎಡಗೈಯಿಂದ ನಂದಿ ವಿಗ್ರಹದ ಕೋಡುಗಳೆರಡನ್ನು ಸ್ಪರ್ಶಿಸಿ ಕೋಡುಗಳ ಮಧ್ಯದ ಮೂಲಕ ದರ್ಶಿಸುವರು ಹೀಗೆ ಮಾಡುವಾಗ ಎಡಗೈಯಿಂದ ಕೋಡುಗಳನ್ನು ಬಲಗೈಯಿಂದ ನಂದಿಯ ವೃಷಣವನ್ನು ಸ್ಪರ್ಶಿಸುವುದುಂಟು. ಹೀಗೆ ಮಾಡುವುದು ಶಿವನ ದರ್ಶನ ಮಾಡಲು ನಂದಿಯ ಅಪ್ಪಣೆಯನ್ನು

ಪಡೆದುದರ ಸಂಕೇತವಿರಬಹುದು. ಆದರೆ ಬಲಗೈಯಿಂದ ನಂದಿಯ ವೃಷಣವನ್ನು ಸ್ಪರ್ಶಿಸುವುದು ಪ್ರಾಚೀನ ಕಾಲದ ಫಲವಂತಿಕೆಯ ವಿಧಿಗೆ ಸಂಬಂಧಿಸಿದ ಆರಾಧನೆ ಇರಬೇಕೆಂದು ಕಂಡುಬರುತ್ತದೆ.[35] ಸಂತಾನ ಪ್ರಾಪ್ತಿಗಾಗಿ ವೃಷಭದ 'ಅಂಡ'ವನ್ನು ಮುಟ್ಟಿ ವೃಷಭದ ಕೋಡುಗಳ ಮೂಲಕ ಶಿವಲಿಂಗವನ್ನು ದರ್ಶಿಸುವ ಪದ್ಧತಿಯೂ ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ. ಇದರ ವಿವರಣೆಯನ್ನು ಸಿಂಗಿರಾಜಪುರಾಣ ಮತ್ತು ರಾಘವಾಂಕ ಚಾರಿತ್ರ್ಯದಲ್ಲಿ ಕಾಣಬಹುದಾಗಿದೆ.[36]**(ಚಿ.ಸಂ.249)**

**ಅಷ್ಟ ದಿಕ್ಪಾಲಕರು**

ಪ್ರತಿಯೊಂದು ದಿಕ್ಕಿಗೂ ಒಬ್ಬೊಬ್ಬ ದೇವತೆಯರಿರುತ್ತಾರೆ. ಇವರನ್ನೇ ಅಷ್ಟದಿಕ್ಪಾಲಕರು ಎಂದು ಕರೆಯುತ್ತಾರೆ.[37] ಅಷ್ಟದಿಕ್ಪಾಲಕರಿಗೆ ಪ್ರತ್ಯೇಕವಾದ ದೇವಾಲಯಗಳು ಇಲ್ಲದಿದ್ದರೂ ಇವರಿಗೆ ಶೈವ-ವೈಷ್ಣವ ದೇವಾಲಯಗಳಲ್ಲಿ ಪ್ರತ್ಯೇಕವಾದ ಸ್ಥಾನವನ್ನು ಕಲ್ಪಿಸಲಾಗಿದೆ. ಇವರನ್ನು ಒಂದೊಂದು ದಿಕ್ಕಿಗೆ ಒಬ್ಬರಂತೆ ಪರಿಗಣಿಸಲಾಗುತ್ತದೆ.[38] ಸಾಮಾನ್ಯವಾಗಿ ದೇವಾಲಯಗಳಲ್ಲಿ ಪ್ರತ್ಯೇಕವಾದ ಬಿಡಿಶಿಲ್ಪಗಳು ಇರುವುದಿಲ್ಲ. ಇವರನ್ನು ದೇವಾಲಯಗಳ ಭುವನೇಶ್ವರಿಗಳಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಸಪತ್ನಿಕರಾಗಿ ವಾಹನರೂಢರಾಗಿರುವಂತೆ ಶಿಲ್ಪಿಸಲಾಗಿರುತ್ತದೆ. ಕೆಲವು ಕಡೆಗಳಲ್ಲಿ ಭುವನೇಶ್ವರಿಯ ಮಧ್ಯದಲ್ಲಿ ಪದ್ಮಮಂಡಲ ವಿತಾನವಿದ್ದು, ಕೆಳಭಾಗದ ಪಟ್ಟಿಕೆಯಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಚಿತ್ರಿಸಲಾಗಿರುತ್ತದೆ. ಮತ್ತೆ ಕೆಲವು ಕಡೆಗಳಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಕೇವಲ ಅಷ್ಟ ದಿಕ್ಪಾಲಕರನ್ನೇ ಚಿತ್ರಿಸಲಾಗಿದ್ದು, ಮಧ್ಯಭಾಗದಲ್ಲಿ ಆಯಾ ದೇವಾಲಯದ ಮುಖ್ಯ ದೇವರ ಮೂರ್ತಿಯ ಶಿಲ್ಪ ಅಥವಾ ಅವತಾರ ಶಿಲ್ಪವನ್ನು ಶಿಲ್ಪಿಸಲಾಗುತ್ತದೆ.

ಪೂರ್ವ ದಿಕ್ಕಿನಲ್ಲಿ ಇಂದ್ರನು ಐರಾವತದ(ಆನೆ) ಮೇಲೆ ಪತ್ನಿಯಾದ ಶಚಿದೇವ/ಇಂದ್ರಾಣಿಯೊಡನೆ ಇರುವನು. ಇವನು ಚತುರ್ಭುಜವನ್ನು ಹೊಂದಿದ್ದು, ಅಭಯ, ವರದಹಸ್ತಗಳೊಂದಿಗೆ ಕೈಯಲ್ಲಿ ಅಂಕುಶ ಮತ್ತು ಶಕ್ತಿಯನ್ನು ಹಿಡಿದಿರುತ್ತಾನೆ. ಇವನು ಋಷಿ ಶಾಪಕ್ಕೆ ಒಳಗಾಗಿ ಸಹಸ್ರಾಕ್ಷ (ಸಹಸ್ರಯೋಗಿ) ನಾದನೆಂದು ಕಥೆಯಿದೆ.

ಆಗ್ನೇಯ ದಿಕ್ಕಿನಲ್ಲಿ ಅಗ್ನಿಯು ಮೇಷದ (ಟಗರು) ಮೇಲೆ ಆತನ ಪತ್ನಿಯರಾದ ಸ್ವಾಹಾ ಹಾಗೂ ಸ್ವಧಾಳೊಡನೆ ಇರುವನು. ಈತ ಬೆಂಕಿಯ ನಿರ್ಮಾತೃ ಎಂದು ಹೇಳಲಾಗುತ್ತದೆ. ಯಾವುದೇ ಹೋಮಗಳನ್ನು ಮಾಡಬೇಕಾದರೂ ಈತನನ್ನು ಪೂಜಿಸಬೇಕು. ಇವನಿಗೆ ಎರಡು ತಲೆ, ಆರು ಕಣ್ಣು, ಏಳು ಕೈಗಳು, ಮೂರು ಕಾಲುಗಳನ್ನು ಹೊಂದಿದ್ದು, ಕೈಗಳಲ್ಲಿ ಸ್ರುಕ್, ಸ್ರುವ, ನೀರು ತುಂಬಿದ ಬಟ್ಟಲು, ತುಪ್ಪ ತುಂಬಿರುವ ಬಟ್ಟಲು ಮುಂತಾದವುಗಳಿರುತ್ತವೆ.[39] ದಕ್ಷಿಣ

ದಿಕ್ಕಿನಲ್ಲಿ ಯಮನು ಮಹಿಷದ(ಕೋಣ) ಮೇಲೆ ಆತನ ಪತ್ನಿ ದರ್ಮಾ ಜೊತೆ ಇರುವನು. ಈತ ದ್ವಿಭುಜವನ್ನು ಹೊಂದಿದ್ದು, ಕೈಯಲ್ಲಿ ದಂಡ ಮತ್ತು ಪಾಶವನ್ನು ಹಿಡಿದಿರುತ್ತಾನೆ.[40] ಸಾಮಾನ್ಯವಾಗಿ ಇವನ ಜೊತೆಯಲ್ಲಿ ಚಿತ್ರಗುಪ್ತ ಎಂಬ ಸೇವಕನಿರುತ್ತಾನೆ. ಆದರೆ ಶಿಲ್ಪಗಳಲ್ಲಿ ಈತನನ್ನು ತೋರಿಸಿರುವುದಿಲ್ಲ.

ನೈಋತ್ಯ ದಿಕ್ಕಿನಲ್ಲಿ ನಿರರುತಿ ಮನುಷ್ಯನ (ನರವಾಹನ) ಮೇಲೆ ಪತ್ನಿ ಕಾಳಕಾಳ ಜೊತೆ ಇರುತ್ತಾನೆ. ಈತ ದ್ವಿಭುಜವನ್ನು ಹೊಂದಿದ್ದು, ಒಂದು ಕೈಯಲ್ಲಿ ಗದೆಯನ್ನು ಹಿಡಿದಿರುತ್ತಾನೆ. ರಾಕ್ಷಸರು, ಭೂತ, ಪ್ರೇತಗಳನ್ನು ನಾಶ ಮಾಡುವುದು ಇವನ ಕಾಯಕ.[41]

ಪಶ್ಚಿಮ ದಿಕ್ಕಿನಲ್ಲಿ ವರುಣನು ಮಕರದ (ಮೊಸಳೆ) ಮೇಲೆ ಪತ್ನಿಯರಾದ ಗಂಗೆ ಮತ್ತು ಯಮುನೆಯರೊಡನೆ ಇರುತ್ತಾನೆ.[42] ಇವನು ಸಮುದ್ರದೇವತೆ ಹಾಗೂ ಮಳೆ ದೇವತೆಯೂ ಹೌದು. ಮಳೆ ಬಾರದಿದ್ದಾಗ ಇವನನ್ನು ಪೂಜಿಸುವುದುಂಟು. ಜನಪದರಲ್ಲಿ 'ಮಳೆರಾಯ'ನೆಂದು ಇವನನ್ನು ಪೂಜಿಸುವ ಸಂಪ್ರದಾಯವಿದೆ. ವಾಯುವ್ಯ ದಿಕ್ಕಿನಲ್ಲಿ ವಾಯುದೇವತೆಯು ಸಾಂಗದ (ಜಿಂಕೆ) ಮೇಲೆ ಪತ್ನಿ ಅಂಜನಾ ಜೊತೆ ಇರುವನು. ಈತ ವಾಯು (ಗಾಳಿ) ದೇವತೆ. ಈತನು ಕೈಗಳಲ್ಲಿ ಧ್ವಜ, ದಂಡವನ್ನು ಹಿಡಿದಿರುತ್ತಾನೆ.

ಉತ್ತರ ದಿಕ್ಕಿನಲ್ಲಿ ಕುಬೇರನು ಅಶ್ವದ (ಕುದುರೆ) ಮೇಲೆ ಪತ್ನಿಯಾದ ರಿದ್ಧಿಯೊಡನೆ ಕುಳಿತಿರುತ್ತಾನೆ. ಈತ ಸಂಪತ್ತಿನ ಅಧಿದೇವತೆ. ಕೈಯಲ್ಲಿ ದಂಡವನ್ನು ಹಿಡಿದಿರುತ್ತಾನೆ. ಮತ್ತೊಂದು ಕೈ ಅಭಯ ಹಸ್ತವನ್ನು ಹೊಂದಿರುತ್ತದೆ. ಇವನ ಅಕ್ಕಪಕ್ಕದಲ್ಲಿ ಶಂಖನಿಧಿ, ಪದ್ಮನಿಧಿ ಎಂಬ ಪರಿಚಾರಕಿಯರಿರುತ್ತಾರೆ.[43] ಈಶಾನ್ಯ ದಿಕ್ಕಿನಲ್ಲಿ ಈಶಾನು(ಶಿವ) ವೃಷಭದ (ನಂದಿ) ಮೇಲೆ ಪತ್ನಿ ಪಾರ್ವತಿಯೊಡನೆ ಕುಳಿತಿರುತ್ತಾನೆ. ಈ ಶಿಲ್ಪಗಳು ತರೀಕಲ್ಲಿನ ಸೋಮೇಶ್ವರ, ಸೋಮನಾಥಪುರದ ಕೇಶವ, ಭೇರ್ಯದ ಚನ್ನಕೇಶವ ಮುಂತಾದ ದೇವಾಲಯಗಳಲ್ಲಿ ಕಂಡುಬರುತ್ತವೆ.

**ವಿಶ್ವಕ್ಷೇನ**

ನಾಲ್ಕು ಕೈಗಳನ್ನು ಹೊಂದಿರುವ ಇವನು ಶಂಖ, ಚಕ್ರ, ಗದೆ ಮತ್ತು ತರ್ಜನಿಯ ಹಸ್ತ ಮತ್ತು ವೇತ್ರಹಸ್ತನಾಗಿರುತ್ತಾನೆ. ವೇತ್ರ ಎಂದರೆ ದಂಡ. ವಿಶ್ವಕ್ಷೇನನನ್ನು ಶತ್ರುಗಳನ್ನು ನಿಯಂತ್ರಿಸಲು ನಿಯೋಜಿಸುವುದರಿಂದ, ಇವನು ಕೈಯಲ್ಲಿ ದಂಡವನ್ನು ಹಿಡಿದು ನಿಯಂತ್ರಿಸುತ್ತಾನೆ ಎಂದು ಆಗಮಗಳಲ್ಲಿ ಹೇಳಲ್ಪಟ್ಟಿದೆ.[44] ಆದುದರಿಂದ ಇವನನ್ನು ವಿಷ್ಣುವಿನ ಸೇನಾಧಿಪತಿ ಎಂದು ಹೇಳಬಹುದು. ಇವನ ಮೂರ್ತಿಗಳು ವೈಷ್ಣವ ದೇವಾಲಯಗಳಲ್ಲಿ ಹೆಚ್ಚಾಗಿ

ಕಂಡುಬರುತ್ತವೆ. ಬಸವೇಶ್ವೇರ ದೇವಾಲಯ ಮಾಕೋಡಿನಲ್ಲಿ ಕಂಡುಬಂದಿದೆ. ಕಲ್ಲಂಬಾಳಿನ ಕಾಮೇಶ್ವರ ದೇವಾಲಯದ ನವರಂಗದಲ್ಲಿ ಅಗ್ನಿದೇವನ ವಾಹನವಾದ ಟಗರು ಶಿಲ್ಪವಿದೆ. ಧರ್ಮಾಪುರದ ಚನ್ನಕೇಶವ ದೇವಾಲಯದ ಭಿತ್ತಿಯಲ್ಲಿ, ತರೀಕಲ್ಲಿನ ಸೋಮೇಶ್ವರ ದೇವಾಲಯದ ಭುವನೇಶ್ವರಿ, ಹೆಡತಲೆಯ ಲಕ್ಷ್ಮೀನಾರಾಯಣ ದೇವಾಲಯದ ಭುವನೇಶ್ವರಿ, ಹಾಗೂ ಸೋಮನಾಥಪುರದ ಕೇಶವ ದೇವಾಲಯದಲ್ಲಿ ಕಂಡುಬರುತ್ತದೆ. **(ಚಿ.ಸಂ.250)**

**ದ್ವಾರಪಾಲಕರು**

ಸಾಮಾನ್ಯವಾಗಿ ದೇವಾಲಯಗಳಲ್ಲಿ ದ್ವಾರಪಾಲಕರಿಗೆ ವಿಶೇಷವಾದ ಸ್ಥಾನವಿರುತ್ತದೆ. ದೇವಾಲಯದ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳ ದ್ವಾರಬಂಧದ ಕೆಳಭಾಗದಲ್ಲಿ ಇವರನ್ನು ಶಿಲ್ಪಿಸುವುದು ರೂಢಿಯಲ್ಲಿದೆ. ದ್ವಾರಪಾಲಕರ ಶಿಲ್ಪಗಳು ಆಯಾ ಪಂಥಗಳಿಗೆ ಅನುಗುಣವಾಗಿರುತ್ತದೆ. ಶೈವ ದೇವಾಲಯಗಳಲ್ಲಿ ಶೈವ ದ್ವಾರಪಾಲಕರನ್ನು, ವೈಷ್ಣವ ದೇವಾಲಯಗಳಲ್ಲಿ ವೈಷ್ಣವ ದ್ವಾರಪಾಲಕರನ್ನು ಶಿಲ್ಪಿಸಲಾಗುತ್ತದೆ. ಆಯಾ ದಿಕ್ಕಿಗೆ ಅನುಗುಣವಾಗಿ ಇರುವ ದ್ವಾರಪಾಲಕರಿಗೆ ಬೇರೆ ಬೇರೆ ಹೆಸರುಗಳಿವೆ. ವೈಷ್ಣವ ದ್ವಾರಪಾಲಕರನ್ನು ಜಯ-ವಿಜಯ ಎಂದು ಕರೆಯುತ್ತಾರೆ. ಇವರು ಕೈಗಳಲ್ಲಿ ಶಂಖ, ಚಕ್ರ, ಗದೆ ಇದ್ದು, ಮತ್ತೊಂದು ಹಸ್ತವು ಸೂಚಿಹಸ್ತವಾಗಿರುತ್ತದೆ. ಶೈವ ದ್ವಾರಪಾಲಕರಲ್ಲಿ ತ್ರಿಶೂಲ, ಢಮರು, ಪಾಶ, ಗದೆ ಮತ್ತು ಅಭಯಹಸ್ತವನ್ನು ಹೊಂದಿರುತ್ತವೆ. ಇವರನ್ನು ನಂದಿ, ಭೃಂಗಿ ಎಂದು ಕರೆಯುತ್ತಾರೆ. ಪೂರ್ವ ದಿಕ್ಕಿನಲ್ಲಿರುವವರನ್ನು ಚಂಡಪ್ರಚಂಡ ಎಂತಲೂ, ಪಶ್ಚಿಮ ದಿಕ್ಕಿನಲ್ಲಿರುವವರನ್ನು ಜಯ-ವಿಜಯ ಎಂತಲೂ, ಉತ್ತರ ದಿಕ್ಕಿನಲ್ಲಿರುವವರನ್ನು ಧಾತ್ರ, ವಿಧಾತ್ರ ಎಂತಲೂ, ದಕ್ಷಿಣ ದಿಕ್ಕಿನಲ್ಲಿರುವವರನ್ನು ಭದ್ರ, ಸುಭದ್ರ ಎಂತಲೂ ಕರೆಯುತ್ತಾರೆ. (ಈಶ್ವರ ಸಂಹಿತೆ, ಪದ್ಮ ಸಂಹಿತೆ) ಸಾಮಾನ್ಯವಾಗಿ ತ್ರಿಕೂಟಚಲಾ ದೇವಾಲಯಗಳಲ್ಲಿ ಬೇರೆ ಬೇರೆ ದಿಕ್ಕಿಗಿರುವ ದ್ವಾರಪಾಲಕರ ಶಿಲ್ಪಗಳನ್ನು ಗಮನಿಸಬಹುದು. ಶಿಲ್ಪಿಗಳು ದೇವಾಲಯದ ಲಕ್ಷಣಕ್ಕೆ ಅನುಗುಣವಾಗಿ ಶಿಲ್ಪಿಸಿರುತ್ತಾರೆ. ಇವುಗಳನ್ನು ದೇವಾಲಯದ ಎಲ್ಲಾ ಭಾಗಗಳಲ್ಲೂ ನಿರ್ಮಿಸಬೇಕೆಂಬ ನಿಯಮವಿಲ್ಲ. ಆದುದರಿಂದ ಕೆಲವು ದೇವಾಲಯಗಳಲ್ಲಿ ಮುಖಮಂಟಪಗಳ ದ್ವಾರದ ಇಕ್ಕೆಲಗಳಲ್ಲಿ ಮಾತ್ರ ದ್ವಾರಪಾಲಕರ ಶಿಲ್ಪಗಳನ್ನು ಶಿಲ್ಪಿಸಿರುತ್ತಾರೆ. ಕೆಲವು ಕಡೆಗಳಲ್ಲಿ ದೇವಾಲಯದ ಆಕಾರ ಮತ್ತು ವಿಶಾಲತೆಗೆ ಅನುಗುಣವಾಗಿ ಶಿಲ್ಪಿಸಲಾಗುತ್ತದೆ. ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಆಳೆತ್ತರದ ದ್ವಾರಪಾಲಕರನ್ನು ಬಿಡಿಶಿಲ್ಪಗಳಾಗಿ ಕೆತ್ತಲಾಗಿದೆ. ಇದನ್ನು ವಿಜಯನಗರ ಕಾಲದವರು ಮುಂದುವರೆಸಿಕೊಂಡು ಬಂದರು. ಇವರಿಗೂ ದೇವತೆಗಳಂತೆ,

ಅಲಂಕರಣವನ್ನು ಮಾಡಲಾಗುತ್ತದೆ. ಹೊಯ್ಸಳರ ಕಾಲದ ದ್ವಾರಪಾಲಕರ ಬಿಡಿ ಶಿಲ್ಪಗಳಂತೂ ಬಹಳ ಅದ್ಭುತ ಕಲಾಸೃಷ್ಟಿಯಾಗಿವೆ. **(ಚಿ.ಸಂ.251)**

**ನಾಗದೇವತೆ**

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ನಾಗಪೂಜೆ, ನಾಗಾರಾಧನೆ ಒಂದಲ್ಲ ಒಂದು ರೀತಿಯಲ್ಲಿ ಕಂಡುಬರುತ್ತದೆ. ಇದನ್ನು ವೈಷ್ಣವಧರ್ಮ, ಬೌದ್ಧಧರ್ಮ ಮತ್ತು ಜೈನಧರ್ಮಗಳೂ ಕೂಡ ತಮ್ಮದೇ ಆದ ಧಾರ್ಮಿಕ ವ್ಯವಸ್ಥೆಗಳಲ್ಲಿ ಸರ್ಪವನ್ನು ಒಂದು ಅಧೀನ ಶಕ್ತಿಯಾಗಿ ಮಾಡಿಕೊಂಡಿದ್ದಾರೆ.[45] ನಾಗಪ್ರತಿಮೆಯ ಪ್ರತಿಷ್ಠೆ ಮತ್ತು ಪೂಜೆಗೆ ಸಂತಾನಪೇಕ್ಷೆಯೇ ಮೂಲವೆಂಬ ಅಭಿಪ್ರಾಯವಿದೆ. ನಾಗಪೂಜೆ ನಡೆಯುವ ಸ್ಥಳಗಳು ಸಾಮಾನ್ಯವಾಗಿ ದಟ್ಟವಾದ ಕಾಡುಗಳು ಮತ್ತು ನದಿಗಳು ಹರಿಯುವ ಬೆಟ್ಟಗಳ ತಪ್ಪಲುಗಳಾದ್ದರಿಂದ ಕೃಷಿ ಸಂಸ್ಕೃತಿಯ ಹಿನ್ನೆಲೆಯಲಿ ನಾಗಾರಾಧನೆ ರೂಢಿಗೆ ಬಂದಿರಬೇಕು. ಇಲಿ, ಹೆಗ್ಗಣಗಳಿಂದ ಫಸಲನ್ನು ರಕ್ಷಿಸಲು ನೆರವಾಗುವಂತೆ ನಾಗ ಅಥವಾ ಸರ್ಪಗಳ ಪೂಜೆ ಆರಂಭವಾಗಿರುವ ಸಾಧ್ಯತೆಗಳಿವೆ. ವಿಷ್ಣುವು ಹಾವಿನ ಹಾಸಿಗೆಯಲ್ಲಿ ಶಯನಿಸಿರುವುದರಿಂದ, ಆತ ಅನಂತಶಾಯಿ, ಅನಂತಶಯನ ಎಂದು ಕರೆಯುತ್ತೆವೆ. ಆಗಮಗಳಲ್ಲಿ ನಾಗಗಳು ಎಂಟು ದೇವತೆಗಳ ಜೊತೆಯಲ್ಲಿರುವಂತೆ ಉಲ್ಲೇಖಿಸಿದೆ. ನಾಗನನ್ನು ಶಿವನ ಕೊರಳಲ್ಲಿ ಮೈಮೇಲಿನ ಇತರ ಭಾಗಗಳಲ್ಲಿ ಕಾಣಬಹುದು. ಉದಾಹರಣೆಗೆ ಭೈರವ ಶಿಲ್ಪ. ಇದಲ್ಲದೆ ಹಲವು ದೇವಾಲಯದ ಭಿತ್ತಿಯಲ್ಲಿ, ಭುವನೇಶ್ವರಿಯಲ್ಲಿ ಕಾಳಿಂಗ ಮರ್ಧನ ಶಿಲ್ಪಗಳಿವೆ. ಹುತ್ತ ಪೂಜಿಸುವ ಪದ್ಧತಿಯೂ ನಾಗಾರಾಧನೆಯ ಹಿನ್ನೆಲೆಯಲ್ಲಿಯೇ ಬಂದಿರುವಂತಹ ಒಂದು ಸಂಪ್ರದಾಯ. ನಾಗಾರಾಧನೆ ಜೈನಧರ್ಮದಲ್ಲಿಯೂ ಕಂಡುಬರುತ್ತದೆ. ಪಾರ್ಶ್ವನಾಥನ ತಲೆಯ ಮೇಲೆ ಐದು ಏಳು ಹೆಡೆಗಳ ಸರ್ಪ ಇರುವಂತೆ ಶಿಲ್ಪಿಸಲಾಗಿರುತ್ತದೆ. ಹಿಂದಿನ ಕಾಲದಲ್ಲಿ ನಿರ್ಮಾಣವಾಗಿರುವ ದೇವಾಲಯಗಳಲ್ಲಿ ಶಿಲ್ಪಿಸಿರುವ ನಾಗಶಿಲ್ಪಗಳು, ನಾಗಬಂಧಗಳೇ ನಾಗಶಿಲ್ಪದ ಪ್ರಾಧಾನ್ಯತೆಗೆ ಸಾಕ್ಷಿಗಳಾಗಿವೆ. ಅನಂತರದಲ್ಲಿ ಅದಕ್ಕೆ ಗಂಡು ಹೆಣ್ಣಿನ ರೂಪಕೊಟ್ಟು ನಾಗ-ನಾಗಿಣಿ ಎಂದು ಪೂಜಿಸತೊಡಗಿದರು. **(ಚಿ.ಸಂ.252)**

**ಭಗ್ನಗೊಂಡಿರುವ ಜೈನ ಶಿಲ್ಪಗಳು**

ದಕ್ಷಿಣಭಾರತದ ಇತಿಹಾಸದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಪ್ರಬಲವಾಗಿ ಬೆಳೆದ ಜೈನಧರ್ಮವು ಭಾರತದ ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ಚಂದ್ರಗುಪ್ತ ಮೌರ್ಯ ತನ್ನ ಗುರುಗಳಾದ ಭದ್ರಬಾಹುವಿನ ಜೊತೆಗೆ ಕರ್ನಾಟಕಕ್ಕೆ ಬಂದು ಇಲ್ಲಿ ಜೈನಧರ್ಮ ಪ್ರಬುದ್ಧವಾಗಿ ಬೆಳೆಯಲು ಕಾರಣರಾದರು. ನಂತರ ಕರ್ನಾಟಕವನ್ನಾಳಿದ ಅರಸರ ಪ್ರೋತ್ಸಾಹದಿಂದ ಉನ್ನತ ಮಟ್ಟಕ್ಕೇರಿದ ಜೈನಧರ್ಮ ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ,

ಕಲ್ಯಾಣಿ ಚಾಲುಕ್ಯ ಹಾಗೂ ಹೊಯ್ಸಳರಲ್ಲದೆ ತಂಜಾವೂರಿನ ಚೋಳರು ಜೈನಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದಾರೆ. ತಲಕಾಡು ಜೈನ ಸಂಸ್ಕೃತಿಯ ಪ್ರಮುಖ ಪ್ರವಾಸಿ ತಾಣವಾಗಿದೆ. ತಲಕಾಡು ಗಂಗರ ರಾಜಧಾನಿಯಾಗಿ ಜೈನ ಸಂಸ್ಕೃತಿಗೆ ತನ್ನದೇಯಾದ ಕೊಡುಗೆಯನ್ನು ನೀಡಿ ಈ ಪ್ರದೇಶದಲ್ಲಿ ಹೆಚ್ಚು ಪ್ರಭಾವಶಾಲಿಯಾಗಿ ಬೆಳೆಯಲು ಕಾರಣವಾಗಿದೆ.

ಬನ್ನಹಳ್ಳಿ(ಹುಂಡಿ)ಯ ಗ್ರಾಮದ ಹೊಲವೊಂದರಲ್ಲಿ ಭಗ್ನಗೊಂಡಿರುವ ಜೈನ ಶಿಲ್ಪವೊಂದು ಪತ್ತೆಯಾಗಿದೆ. ಈ ಶಿಲ್ಪವು ಮಹಾವೀರನ ಮುಖಭಾಗವನ್ನು ಹೊಂದಿದ್ದು, ಉಳಿದ ಭಾಗವು ಮುರಿದುಹೋಗಿದೆ. ಈ ಶಿಲ್ಪವು ಭಗ್ನಗೊಂಡಿರುವುದರಿಂದ ಇದನ್ನು 24 ತೀರ್ಥಂಕರರಲ್ಲಿ ಯಾವುದು ಎಂದು ಹೇಳುವುದು ತುಂಬ ಕಷ್ಟಕರವಾಗಿದೆ. ಜೈನಧರ್ಮದ ಪ್ರಭಾವವು ಈ ಪ್ರದೇಶದಲ್ಲಿ ಎಷ್ಟು ಪ್ರವರ್ಧಮಾನದಲ್ಲಿತ್ತು ಎಂದು ಹೇಳುವುದಕ್ಕೆ ಪತ್ತೆಯಾಗಿರುವ ಈ ಜೈನ ಶಿಲ್ಪವೇ ಸಾಕ್ಷಿಯಾಗಿದೆ ಎಂದು ಹೇಳಬಹುದು. ಈ ಶಿಲ್ಪವು ಹೊಯ್ಸಳರ ಕಾಲಕ್ಕೆ ಸೇರಿದ್ದು ಎಂದು ಹೇಳುವುದಕ್ಕೆ ಅಲ್ಲಿ ಬಿದ್ದಿರುವ ಬಳಪದ ಕಲ್ಲಿನಲ್ಲಿ ಕೆತ್ತಿರುವ ಜೈನ ಶಿಲ್ಪದಿಂದ ತಿಳಿಯಬಹುದಾಗಿದೆ. **(ಚಿ.ಸಂ.253)**

ಮೈಸೂರಿನಿಂದ 10ಕಿ.ಮೀ ದೂರದಲ್ಲಿ ನೈರುತ್ಯದಿಕ್ಕಿನಲ್ಲಿರುವ ಕೆ.ಹೆಮ್ಮನಹಳ್ಳಿ ಗ್ರಾಮದಲ್ಲಿ ಹೊಯ್ಸಳರ ಕಾಲದ ಮಹಾಲಿಂಗೇಶ್ವರ ದೇವಾಲಯವಿದೆ. ಈ ದೇವಾಲಯದ ಬಲ ಪಾರ್ಶ್ವದಲ್ಲಿ ಭಗ್ನಗೊಂಡಿರುವ ಹೊಯ್ಸಳರ ಕಾಲದ ತೀರ್ಥಂಕರನ ಜೈನ ಶಿಲ್ಪವಿದ್ದು, ಈ ಜೈನ ತೀರ್ಥಂಕರನ ಶಿಲ್ಪವು ಭಗ್ನಗೊಂಡಿರುವುದರಿಂದ ಪೀಠದ ಭಾಗ ಉಳಿದಿಲ್ಲ, ಹಾಗಾಗಿ ಇದು ಯಾವ ತೀರ್ಥಂಕರನ ಶಿಲ್ಪವೆಂದು ಖಚಿತವಾಗುವುದಿಲ್ಲ. (ಪಾರ್ಶ್ವನಾಥ ಹಾಗೂ ಆದಿನಾಥ ತೀರ್ಥಂಕರನರನ್ನು ಹೊರತು ಪಡಿಸಿ ಉಳಿದ ಎಲ್ಲಾ ತೀರ್ಥಂಕರರನ್ನು ಅವರ ಪೀಠದಲ್ಲಿರುವ ವಾಹನದ ಚಿಹ್ನೆಯಿಂದ ಮಾತ್ರ ಗುರುತಿಸಲು ಸಾದ್ಯ) ಮತ್ತು ಈ ಶಿಲ್ಪದ ಕೆತ್ತನೆಯ ಶೈಲಿ ಹಾಗೂ ಸೂಕ್ಷ್ಮಕೆತ್ತನೆಗಳು, ಬಳಸಿರುವ ಮಾಧ್ಯಮದಿಂದ ಮಾತ್ರ ಈ ಶಿಲ್ಪ ಹೊಯ್ಸಳರ ಕಾಲದ್ದೆಂದು ಹೇಳಬಹುದಾಗಿದೆ. ಇದು ಹೊಯ್ಸಳರ ಕಾಲದಲ್ಲಿ ನಿರ್ಮಿತವಾದ ದೇವಾಲಯದ ಬಳಿ ದೊರೆತಿರುವುದರಿಂದ ಈ ಪ್ರಾಂತ್ಯದಲ್ಲಿ ಆಳ್ವಿಕೆ ನಡೆಸಿದ ಹೊಯ್ಸಳರ ಕಾಲದ ಮೂರ್ತಿಶಿಲ್ಪವೆಂದು ತೀರ್ಮಾನಿಸಬಹುದಾಗಿದ್ದು, ಇದಕ್ಕೆ ಸಂಬಂಧಿಸಿದ ಯಾವುದೇ ಶಾಸನ ಆಧಾರಗಳಿಲ್ಲ. ಈ ಮೂರ್ತಿಶಿಲ್ಪವು ಪದ್ಮಾಸನದಲ್ಲಿ ಧ್ಯಾನ ಮುದ್ರೆಯಲ್ಲಿ ಕುಳಿತಿರುವ ಈ ತೀರ್ಥಂಕರನ ಮುಖವು ಸಂಪೂರ್ಣವಾಗಿ ಭಗ್ನಗೊಂಡಿದ್ದು, ಈತನ ಇಕ್ಕೆಲಗಳಲ್ಲಿ ಇರುವ ಕ್ಷೇತ್ರಪಾಲಕರಾದ ಯಕ್ಷ-ಯಕ್ಷಿಯರು ಸೂಕ್ಷ್ಮ ಅಲಂಕರಣೆಗಳಿಂದ ಕೂಡಿದ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ಆದರೆ ಇವರ ಮುಖಗಳು ಸಹ ತ್ರುಟಿತಗೊಂಡಿದ್ದು ಅವರ ಕಿರೀಟಗಳು ಕಣ್ಮರೆ ಗೊಂಡಿವೆ. ಈ ಶಿಲ್ಪವನ್ನು ದೇವಾಲಯದ ಜೀರ್ಣೋದ್ಧಾರದ

ಸಂದರ್ಭದಲ್ಲಿ ಧರ್ಮಸ್ಥಳ ಧರ್ಮೋತ್ಥಾನ ಸಂಘದವರು ರಕ್ಷಿಸಿರುವುದು ನಿಜಕ್ಕೂ ಶ್ಲಾಘನಿಯ ಸಂಗತಿಯಾಗಿದೆ.

**ಶಾಸನೋಕ್ತ ವೀರಗಲ್ಲುಗಳು**

ಕರ್ನಾಟಕದ ಶಾಸನಗಳಲ್ಲಿ ದೊರೆಯುವಂತಹ ಮೂಲಸಾಮಾಗ್ರಿಗಳಲ್ಲೂ ವಿಭಿನ್ನವಾದ ದೃಷ್ಠಿಯಿಂದ ವಿಶ್ಲೇಷಿಸಿದ ಯಶಸ್ಸು ಎಂ.ಚಿದಾನಂದಮೂರ್ತಿಯವರಿಗೆ ಸಲ್ಲುತ್ತದೆ. ಇವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಎಂಬ ಕೃತಿಯಲ್ಲಿ ಉಲ್ಲೇಖಿಸಿರುವ ಕೆಲವು ವಿಚಾರಗಳನ್ನು ಇಲ್ಲಿ ಹೇಳುವುದು ಔಚಿತ್ಯವೆಂದೆನಿಸುತ್ತದೆ. ರಾಜರು ಕಾಲದಿಂದ ಕಾಲಕ್ಕೆ ಆಡಳಿತ ನಡೆಸಿರುವುದಕ್ಕೆ ಇತಿಹಾಸವೆಂಬ ಭಾವನೆ ಬಹಳ ಪ್ರಚಲಿತವಾಗಿದೆ. ಜನತೆ ಬಾಳಿ ಬದುಕಿದ ರೀತಿ, ಅನುಸರಿಸಿದ ಧರ್ಮ, ಬೆಳೆಸಿದ ಕಲೆ, ಅವರ ಜೀವನ ಸಮಸ್ಯೆಗಳು, ಅವರ ಜೀವನ ಮೌಲ್ಯಗಳು ಇತ್ಯಾದಿಗಳ ವಿವರಣೆಯ, ಆ ದೇಶದ ಮತ್ತು ಜನತೆಯ ಇತಿಹಾಸ,[46] ಈ ರೀತಿಯ ಇತಿಹಾಸವನ್ನು ಒದಗಿಸುವಲ್ಲಿ ವೀರಗಲ್ಲುಗಳು ಬಹಳ ಪ್ರಮುಖವಾದವು. ವೀರ ಮರಣವನ್ನಪ್ಪಿದ ವ್ಯಕ್ತಿಯನ್ನು ಸಮಾಧಿ ಅಥವಾ ಸಂಸ್ಕಾರ ಮಾಡಿದ ನಿರ್ದಿಷ್ಟ ಸ್ಥಳದ ಗುರುತಿಗಾಗಿಯೋ, ಮಡಿದವರ ಸ್ಮರಣಾರ್ಥವಾಗಿಯೋ, ಕೆಲವಾರು ಸಂಕೇತಗಳನ್ನೋ, ಗುರುತುಗಳನ್ನೋ ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ವೀರಗಲ್ಲುಗಳನ್ನು ನಿಲ್ಲಿಸುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ದೇಶಗಳಲ್ಲಿನ ಧರ್ಮ, ನಂಬಿಕೆ, ಸಾಮಾಜಿಕ ಪ್ರತಿಷ್ಠೆಗಳನ್ನು ಅನುಸರಿಸಿಯೇ ಬೆಳೆದಿದೆ. ಪ್ರಪಂಚದಾದ್ಯಂತ ಇಂತಹ ಸ್ಥಳಗಳ ಮೇಲೆ ತಮ್ಮದೆ ಆದಂತಹ ಸ್ಮಾರಕಗಳನ್ನು ಕಟ್ಟಿರುವುದನ್ನು ಕಾಣಬಹುದು.[47]

ಜೀವದ ಹಂಗನ್ನು ತೊರೆದು ಗ್ರಾಮವನ್ನು ಕಳ್ಳರಿಂದ ರಕ್ಷಿಸಿ, ಗೋವು ಕಳ್ಳರ ಜೊತೆ ಹೋರಾಡಿ, ಅಬಲೆಯರ ಮೇಲೆರಗುವ ಕಾಮುಕರ ವಿರುದ್ಧ ಹೋರಾಡಿ ಹಾಗೂ ತಮ್ಮ ಅರಸರ ಪರವಾಗಿ ಹೋರಾಡಿ ಮಡಿದ ವೀರರ ಸ್ಮರಣಾರ್ಥವಾಗಿ ಹಾಕಿಸಿದ ಕಲ್ಲುಗಳನ್ನು ವೀರಗಲ್ಲುಗಳು ಎನ್ನಬಹುದು.[48] ಹೋರಾಟದಲ್ಲಿ ಮಡಿದ ವ್ಯಕ್ತಿಯ ಜ್ಞಾಪಕಾರ್ಥಕವಾಗಿ ನಿಲ್ಲಿಸಿರುವ ಕಲ್ಲುಗಳೆ ವೀರಗಲ್ಲು.[49] ಈ ವೀರರು ತಮ್ಮ ಸ್ವಾರ್ಥಕ್ಕಾಗಿ ಮಡಿಯದೆ ಸಮಾಜದ ಒಳಿತಿಗಾಗಿ ಪ್ರಾಣತ್ಯಾಗ ಮಾಡಿದ್ದರಿಂದ ಇವರ ಸ್ಮರಣಾರ್ಥವಾಗಿ ಮಾಡಿರುವ ಕಲ್ಲುಗಳೆ ವೀರಗಲ್ಲುಗಳು.[50] ಅವರು ಮಾಡಿದ ಹೋರಾಟ ಇಂದಿನ ನಮ್ಮ ದೃಷ್ಟಿಯಲ್ಲಿ ಏನಾದರೂ ಆಗಿರಲಿ ಸಮಾಜದ ಒಳಿತಿಗಾಗಿ ಜೀವದ ಹಂಗನ್ನು ತೊರೆದ ಅವರ ಧೀಮಂತಿಕೆಯನ್ನು ಊಹಿಸಲಸಾಧ್ಯವಾದುದು. ಅವರ ಹೋರಾಟವು ಸಾಮಾಜಿಕನಿಷ್ಠೆ, ಸ್ವಾಮಿಭಕ್ತಿ, ಸ್ವಾಭಿಮಾನಗಳಿಂದ ಕೂಡಿದುದಾಗಿದೆ.[51]

**ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾ**

**ಕ್ಷಣ ವಿಧ್ವಂಸಿನೀ ಕಾಯೇ ಕಾ ಚಿಂತ್ಯಾ ಮರಣೇ ರಣೇ'**[52]

ಯುದ್ಧದಲ್ಲಿ ಗೆದ್ದರೆ ಲಕ್ಷ್ಮೀ ದೊರಕುವಳು, ಸತ್ತರೆ ಸ್ವರ್ಗದಲ್ಲಿ ಸುರಾಂಗನೆಯರು ದೊರಕುವರು ಎಂಬ ನಂಬಿಕೆ ಇತ್ತು. ಈ ನಂಬಿಕೆಯ ಪ್ರಕಾರ ರಣರಂಗದಲ್ಲಿ ಸತ್ತ ವೀರನಿಗಾಗಿ ದೇವಲೋಕದಲ್ಲಿ ದೇವಕನ್ನೆಯರು ಕಾಯ್ದುಕೊಂಡಿರುತ್ತಿದ್ದರಷ್ಟೆ ಅಲ್ಲ. ಅವನನ್ನು ಪಡೆಯಲು ಅವರಲ್ಲಿ ಪೈಪೋಟಿಯು ನಡೆಯುತಿತ್ತು. ಅವನನ್ನು ದೇವಾಂಗನೆಯರು ಸ್ವರ್ಗಕ್ಕೋ, ಶಿವನೋಲಗಕ್ಕೋ ಕೊಂಡೊಯ್ಯುತ್ತಾರೆ ಎಂದು ಜನರು ನಂಬಿದ್ದರು. ಯುದ್ಧದಲ್ಲಿ ಗೆದ್ದು ಹಿಂದಕ್ಕೆ ಬರುವುದು ಅಥವಾ ಸೋತು ಪ್ರಾಣ ಬಿಡುವುದು ಎರಡಕ್ಕೂ ಸಮಾನವಾದ ಗೌರವವಿದೆ. ಸೋತು ಹಿಂದಕ್ಕೆ ಬರುವುದು ಸಾವಿಗಿಂತಲೂ ಕಡೆಯಾದುದು ಎಂಬ ನಂಬಿಕೆ ಸಮಾಜದಲ್ಲಿತ್ತು. ಆದರೆ ಯುದ್ಧದಲ್ಲಿ ಪ್ರಾಣತ್ಯಾಗವನ್ನು ಮಾಡಿದ ವೀರರ ಹೆಸರು ಈ ಲೋಕದಲ್ಲಿ ಮಾತ್ರವಲ್ಲ ಪರಲೋಕದಲ್ಲಿಯೂ ಪ್ರಶಂಸೆಗೊಳಗಾಗುತ್ತಿತ್ತು. ಆದುದ್ದರಿಂದಲೇ ವೀರನನ್ನು ಕುರಿತು ಕಥೆಗಳು ಹುಟ್ಟಿಕೊಳ್ಳುತ್ತಿದ್ದವು. ಈ ಕಾರಣಗಳಿಂದಲೇ ಪ್ರಪಂಚದಾದ್ಯಂತ ವೀರಕಾವ್ಯಗಳೆಂಬ ಶಿಷ್ಟ ಮತ್ತು ಜನಪದ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡಿರುವುದು.[53]

ವೀರಗಲ್ಲುಗಳು ಸಾಮಾನ್ಯವಾಗಿ ಶಿಲ್ಪದ ಮೂರು ಹಂತಗಳನ್ನು ಒಳಗೊಂಡಿರುತ್ತವೆ. ಕೆಳಗಿನ ಹಂತದಲ್ಲಿ ವೀರನು ಶತ್ರುಪಕ್ಷದವರೊಡನೆ ಹೋರಾಟ ಮಾಡುತ್ತಿರುವ ಶಿಲ್ಪವಿರುತ್ತದೆ. ಮಧ್ಯದ ಹಂತದಲ್ಲಿ ಮೃತವೀರನನ್ನು ಕೈಲಾಸಕ್ಕೆ ಕೊಂಡೊಯ್ಯುತ್ತಿರುವ ಅಪ್ಸರೆಯರನ್ನು ಕೆತ್ತಿಸಲಾಗಿರುತ್ತದೆ. ಮೇಲಿನ ಹಂತದಲ್ಲಿ ಅವನು ಶಿವನ ಸಾನಿಧ್ಯದಲ್ಲಿರುವುದನ್ನು ಕೆತ್ತಿಸಿರುತ್ತದೆ. ಇದಕ್ಕೆ ಸಾಕ್ಷಿಯಾಗಿ ವೀರಗಲ್ಲಿನ ಮೇಲ್ಭಾಗದಲ್ಲಿ ಒಂದು ಕಡೆ ಸೂರ್ಯ, ಮತ್ತೊಂದು ಕಡೆ ಚಂದ್ರರನ್ನು ಕೆತ್ತಿರುತ್ತಾರೆ. ಇಲ್ಲಿ ಶಿಲ್ಪಿಯು ತನ್ನ ಸಮಕಾಲೀನದಲ್ಲಿ ಕಣ್ಣಾರೆ ಕಂಡ ನೈಜ ಘಟನೆಗಳ ಹಿನ್ನೆಲೆಯನ್ನು ಕಲ್ಲಿನ ಮೇಲೆ ಮೂಡಿಸಿರುತ್ತಾನೆ.

ಇಂತಹ ವೀರಗಲ್ಲುಗಳು ಕರ್ನಾಟಕದಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ದೊರೆಯುತ್ತವೆ. ಇವುಗಳ ಶಿಲ್ಪವನ್ನು ಶಾಸನಸಹಿತ ಮತ್ತು ಶಾಸನರಹಿತ ಶಿಲ್ಪವೆಂದು ಎರಡು ಭಾಗಗಳಾಗಿ ಮಾಡಬಹುದು.[54] ಶಾಸನಗಳು ಇರಲಿ ಇಲ್ಲದಿರಲಿ ಸಾಮಾನ್ಯವಾಗಿ ಆ ವೀರಗಲ್ಲಿನ ಉದ್ದೇಶ ಒಂದೇ ಆಗಿರುತ್ತದೆ. ಆದುದರಿಂದ ಇಲ್ಲಿ ಶಾಸನೋಕ್ತ ವೀರಗಲ್ಲುಗಳ ಬಗ್ಗೆ ವಿವೇಚಿಸಲಾಗಿದೆ.

ಈ ವೀರಗಲ್ಲುಗಳ ವಿಷಯ ಮತ್ತು ಅವುಗಳ ಮೇಲಿರುವ ಶಿಲ್ಪದ ಆಧಾರದಿಂದ ಹಾಗೂ ಅಧ್ಯಯನದ ದೃಷ್ಟಿಯಿಂದ ಹಲವು ಭಾಗಗಳನ್ನಾಗಿ ಮಾಡಬಹುದು. ವೀರಗಲ್ಲುಗಳು

ಸಮಾಜದ ಒಳಿತಿಗಾಗಿ ಪ್ರಾಣತ್ಯಾಗ ಮಾಡಿದ್ದರಿಂದ ಇವರನ್ನು ದೈವಾಂಶಸಂಭೂತರೆಂದು ತಿಳಿದು ಇವುಗಳ ಪೂಜೆಗೆ ದಾನದತ್ತಿಗಳನ್ನು ಬಿಡುವ ಸಂಪ್ರದಾಯ ಬೆಳೆದುಬಂತು. ಮಡಿದ ವೀರನಿಗೆ ಅಂತ್ಯಸಂಸ್ಕಾರಗಳನ್ನು ಮಾಡುತ್ತಿದ್ದರು. ಆ ವ್ಯಕ್ತಿಯ ಮಕ್ಕಳು, ಅವನಿಗೆ ಮಕ್ಕಳು ಇಲ್ಲದಿದ್ದಾಗ ಮಡಿದ ವ್ಯಕ್ತಿಯ ನೇರ ಸಂಬಂಧಿಕರು ವೀರಗಲ್ಲನ್ನು ಮಾಡಿಸಿ ದಾನವಿತ್ತು ಪೂಜೆ ಮಾಡುತ್ತಿದ್ದರು. ವೀರಮರಣವನ್ನು ಪಡೆಯುವುದು ವೀರನಿಗೆ ಮಾತ್ರವಲ್ಲ ಎಲ್ಲಾ ಸಂಬಂಧಿಕರಿಗೂ, ಆತನ ತಾಯಿಗೂ ಮತ್ತು ಮಡದಿಗೂ ಇದು ಹೆಮ್ಮೆಯ ವಿಷಯವಾಗಿತ್ತು. ಸ್ವ ಇಚ್ಛೆಯಿಂದ ವೀರನ ಬಗ್ಗೆ ಇರುವ ವಿಶ್ವಾಸಕ್ಕೆ, ಕೃತಜ್ಞತೆಗೆ ಸಾರ್ವಜನಿಕರು ಸಹ ವೀರಗಲ್ಲನ್ನು ಹಾಕಿಸುತ್ತಿದ್ದರು.[55]

ಮೈಸೂರು ಜಿಲ್ಲೆಯ ಹಲವು ಗ್ರಾಮಗಳಲ್ಲಿ ವೀರಗಲ್ಲುಗಳು ಕಂಡುಬರುತ್ತವೆ. ಆದರೆ ನನ್ನ ಮಹಾಪ್ರಬಂಧದ ವ್ಯಾಪ್ತಿಗನುಗುಣವಾಗಿ ಮೈಸೂರು ಜಿಲ್ಲೆಯಲ್ಲಿ ದೊರೆಯುವ ಹೊಯ್ಸಳರ ಕಾಲದ ವೀರಗಲ್ಲುಗಳನ್ನು ಹಾಗೂ ಬಿಡಿಶಿಲ್ಪಗಳನ್ನು ಮಾತ್ರ ನನ್ನ ಅಧ್ಯಯನಕ್ಕೆ ಸೀಮಿತಗೊಳಿಸಿಕೊಂಡಿದ್ದೇನೆ.

ಪಿರಿಯಾಪಟ್ಟಣ ತಾಲೂಕಿನ ಕಂಪಲಾಪುರ ಗ್ರಾಮದ ಕರಕಂಠೇಶ್ವರ ದೇವಾಲಯದ ಬಳಿ ಇರುವ ವೀರರ ಗುಡಿಯಲ್ಲಿ ಎರಡು ವೀರಗಲ್ಲುಗಳುಗಳಿದ್ದು, ಈ ವೀರಗಲ್ಲುಗಳು ಕ್ರಿ.ಶ.1174ರಲ್ಲಿ ಹೊಯ್ಸಳರ ರಾಜಧಾನಿ ದ್ವಾರಸಮುದ್ರದಿಂದ ಆಳ್ವಿಕೆ ಮಾಡುತ್ತಿದ್ದ 2ನೇ ವೀರಬಲ್ಲಾಳನ ಕಾಲದಲ್ಲಿ ಕೆತ್ತಿಸಿದ ಶಾಸನಗಳನ್ನೊಂದಿದೆ. ಈ ಶಾಸನವನ್ನು ಹೊಯ್ಸಳರ ಪರವಾಗಿ ಹೋರಾಡಿದ ವೀರರಿಗೆ ನೆತ್ತರು ಕೊಡುಗೆಯಾಗಿ ದತ್ತಿಬಿಟ್ಟ ಪ್ರಸ್ತಾಪವಿದೆ.

ಈ ಶಾಸನದಲ್ಲಿ ಹುಯಿಣಬಾಳಿನ ಹತ್ತು ಕುದುರೆಗಳ ನಾಯಕತನವನ್ನು ಪಡೆದ ಕೋಟೆಯ ಕುಪ್ಪೆಯ ಮಾದೇಯನಾಯಕನು ಕಂದಾಯವನ್ನು ವಸೂಲಿ ಮಾಡುವ ಕೆಲಸಕ್ಕೆ ನೇಮಕಗೊಂಡಿದ್ದನು. ಇದಕ್ಕಾಗಿ ಕುಪ್ಪೆನಾಡಿನ ಕೋಟೆಯ ಕುಪ್ಪೆ ಗ್ರಾಮದ ಹತ್ತು ಕಾಲುವಳಿಗಳನ್ನು ಅವನು ಪಡೆದಿದ್ದನು. ಬೆಟ್ಟರಸದಣ್ಣಾಯಕನಿಗೂ ಚಂಗಾಳ್ವ ಮಹಾದೇವನಿಗೂ ನಡೆದ ಮಹಾಯುದ್ಧದಲ್ಲಿ ಚಂಗಾಳ್ವ ಮಹಾದೇವನು ಮರಣ ಹೊಂದಿದನು. ಆ ಸೇಡನ್ನು ತೀರಿಸಿಕೊಳ್ಳಲು ಆತನ ಉತ್ತರಾಧಿಕಾರಿಯಾದ ಮಹಾಮಂಡಲೇಶ್ವರ ಪೆಮ್ಮವೀರರಸ ಚಂಗಾಳ್ವನು ಹೊಯ್ಸಳ ಸೇನಾಪತಿಯ ವಶದಲ್ಲಿದ್ದ ಪಾಲ್ಪರೆ ಮೇಲೆ ದಾಳಿ ಮಾಡಿದನು. ಆಗ ನಡೆದ ಯುದ್ಧದಲ್ಲಿ ಮಹಾದೇವ ನಾಯಕನು ಹೊಯ್ಸಳ ಸೇನಾಪತಿಯ ಪರವಾಗಿ ಪರಾಕ್ರಮದಿಂದ ಯುದ್ಧ ಮಾಡಿ ಮರಣ ಹೊಂದಿದನು. ವಿಜಯವು ಹೊಯ್ಸಳರಾದಾಯಿತು.

ಈ ವೀರನ ಗೌರವಾರ್ಥವಾಗಿ ದಂಡನಾಯಕನು ನೆತ್ತರು ಕೊಡುಗೆಯಾಗಿ ದತ್ತಿಯನ್ನು ಬಿಟ್ಟನು ಎಂದು ಈ ಶಾಸನದಿಂದ ತಿಳಿದುಬರುತ್ತದೆ.[56]

ಕೃಷ್ಣರಾಜನಗರ ತಾಲೂಕಿನ ಚಿಕ್ಕಹನಸೋಗೆ ಗ್ರಾಮದ ಕೆರೆಕಟ್ಟೆಯ ಬಳಿ ಕ್ರಿ.ಶ.12ನೇ ಶತಮಾನದ ವೀರಗಲ್ಲು ದೊರೆತಿದ್ದು, ಈ ಶಾಸನೋಕ್ತ ವೀರಗಲ್ಲು ಹೊಯ್ಸಳರ ಕಾಲದಲ್ಲಿದ್ದ ಲೆಂಕಾರರ ಬಗ್ಗೆ ತಿಳಿಸುತ್ತದೆ. (ಹೊಯ್ಸಳ ಸಾಮ್ರಾಜ್ಯದ ಸೈನ್ಯದಲ್ಲಿ ಯುದ್ಧ ತರಬೇತಿ ಪಡೆದು ತಮ್ಮ ಗ್ರಾಮಗಳಲ್ಲಿಯೇ ಹೋಗಿ ನೆಲೆಸುತ್ತಿದ್ದು, ಯುದ್ಧದ ಸಂದರ್ಭದಲ್ಲಿ ಸೇನೆಯನ್ನು ಸೇರಿ ರಾಜನ ಪರವಾಗಿ ಹೋರಾಡುತ್ತಿದ್ದರು.ಇವರನ್ನು ಲೆಂಕಾರರು ಎಂದು ಆರ್.ಶೇಷಶಾಸ್ತ್ರಿಯವರು ತಮ್ಮ 'ಕರ್ನಾಟಕದ ವೀರಗಲ್ಲುಗಳು' ಎಂಬ ಪುಸ್ತಕದಲ್ಲಿ ನಮೂದಿಸಿದ್ದಾರೆ.) ಈ ರೀತಿಯ ಲೆಂಕಾರರಿಗೆ ಸಂಬಂಧಿಸಿದ ಶಾಸನೋಕ್ತ ವೀರಗಲ್ಲು ಇದಾಗಿದ್ದು, ಇದರಲ್ಲಿ ಕೊಳೆಯೂರ ಕೋಟೆಯನ್ನು ಮುತ್ತಿದಾಗ ಹನಸೋಗೆಯ ಮಾದಿಗೌಂಡನ ಪಟ್ಟದ ಮಗ ಕೇತಭುವನ ಸುಪುತ್ರ ಮಾರಸಿಂಗನು ಹೋರಾಡಿ ಕೋಟೆಯನ್ನು ರಕ್ಷಿಸಿದನು ಎಂಬುದನ್ನು ಈ ಶಾಸನವು ತಿಳಿಸುತ್ತದೆ. ಈ ಶಾಸನದ ಕೊನೆಯಲ್ಲಿ ಇರುವ 'ಶ್ರೀಲೆಂಕಾರಗಂಡ' ಎಂಬ ಉಲ್ಲೇಖವು ಮಾರಸಿಂಗನು ಹೊಯ್ಸಳ ಸೈನ್ಯದಲ್ಲಿ ಲೆಂಕಾರನಾಗಿದ್ದನು[57] ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಇದೇ ಸ್ಥಳದಲ್ಲಿ ದೊರೆತಿರುವ ಮತ್ತೊಂದು ವೀರಗಲ್ಲಿನಲ್ಲಿ ಹನಸೋಗೆ ಗ್ರಾಮದ ಬನ್ನಜ್ಜನ ಮಗ ತಳರ ಎಂಬುವವನು ಹೋರಾಡಿ ಮರಣ ಅಪ್ಪಿದ ವಿಚಾರವನ್ನು ತಿಳಿಸುತ್ತದೆ.[58]

ಕೃಷ್ಣರಾಜನಗರ ತಾಲೂಕಿನ ಹೆಬಸೂರು ಗ್ರಾಮದಲ್ಲಿ ಹೋಯ್ಸಳ ವೀರ ಬಲ್ಲಾಳನ ಕ್ರಿ.ಶ.12ನೇ ಶತಮಾನದ ವೀರಗಲ್ಲಿದ್ದು, ಇದರಲ್ಲಿ ವೀರಬಲ್ಲಾಳನ ಆಳ್ವಿಕೆಯಲ್ಲಿ ಮಲ್ಲಿಭವನ ಮಗ ಮಾದಿಭವನು ಹೋರಾಡಿ ಮಡಿದನು[59] ಎಂಬ ವಿವರಗಳಷ್ಟೇ ತಿಳಿದುಬಂದಿದ್ದು, ಉಳಿದ ಶಾಸನದ ಭಾಗ ತ್ರುಟಿತಗೊಂಡಿದೆ.

ಕೃಷ್ಣರಾಜನಗರ ತಾಲೂಕಿನ ತಿಪ್ಪೂರು ಗ್ರಾಮದ ಲಕ್ಷ್ಮೀನಾರಾಯಣ ದೇವಾಲಯದ ಉತ್ತರ ದಿಕ್ಕಿನ ಮಂಟಪದ ಬಳಿ ಕ್ರಿ.ಶ.1102-03ರ ಶಾಸನೋಕ್ತ ವೀರಗಲ್ಲು ಇದ್ದು, ಹೊಯ್ಸಳರಿಗೂ ಮತ್ತು ಕುಲೋತ್ತುಂಗ ಚೋಳನಿಗೂ ನಡೆದ ಕದನದ ಉಲ್ಲೇಖಗಳನ್ನು[60] ಒಳಗೊಂಡಿದ್ದು, ಈ ಶಾಸನವು ತ್ರುಟಿತಗೊಂಡಿರುವುದರಿಂದ ಮುಂದಿನ ಭಾಗ ಯುದ್ಧದ ಬಗ್ಗೆ ಸ್ಪಷ್ಟವಾಗಿ ದೊರೆಯುವುದಿಲ್ಲ.

ಮೈಸೂರು ತಾಲೂಕಿನ ಕುಮಾರಬೀಡು ಗ್ರಾಮದ ಈಶ್ವರ ದೇವಾಲಯಕ್ಕೆ ನೀಡಿರುವ ಕೊಡುಗೆ. ಹೊಲದಲ್ಲಿ ಹೊಯ್ಸಳ ವಿಷ್ಣುವರ್ಧನನ ಶಾಸನೋಕ್ತ ವೀರಗಲ್ಲಿದ್ದು, ತಲಕಾಡು,

ಕೊಂಗುನಂಗಲಿ, ಗಂಗವಾಡಿ, ಬನವಾಸಿಯನ್ನು ಗೆದ್ದ ಹೊಯ್ಸಳ ದೇವರು ಎಂಬ ಉಲ್ಲೇಖಗಳನ್ನು ಹೊಂದಿದೆ.[61]

ಇದೇ ಗ್ರಾಮದಲ್ಲಿ ದೊರೆತಿರುವ ಹೊಯ್ಸಳ ದೊರೆ 2ನೇ ನರಸಿಂಹನ ಕಾಲದ ಕ್ರಿ.ಶ.1223-24ರ ಶಾಸನೋಕ್ತ ವೀರಗಲ್ಲಿನಲ್ಲಿ ದ್ವಾರಸಮುದ್ರದಿಂದ ಆಳ್ವಿಕೆ ಮಾಡುತ್ತಿರುವ ನರಸಿಂಹನ ಪರಮ ವಿಶ್ವಾಸಿ ಬಿಳವಳ ದಣ್ಣಾನಾಯಕರ ಕುಮಾರಬೀಡಿನ ಕೊಟ್ಟಿಗೆಯ ಮಾರನಾಯಕನ ಮಗ ದೇಪಯ್ಯನಾಯಕನು ಹೋರಾಡಿ ಸುರಲೋಕಕ್ಕೆ ಪ್ರಾಪ್ತನಾದನು. ಇವನ ಸ್ಮರಣಾರ್ಥವಾಗಿ ಆಕೆಯ ಸಹೋದರಿ ಈ ವೀರಗಲ್ಲನ್ನು ನಿಲ್ಲಿಸಿದಳು ಎಂದು ತಿಳಿದುಬರುತ್ತದೆ.[62]

ಅದೇ ಸ್ಥಳದಲ್ಲಿ ದೊರೆತ್ತಿರುವ ಕ್ರಿ.ಶ.1167-68ರ ಹೊಯ್ಸಳ ದೊರೆ 1ನೇ ನರಸಿಂಹನ ಶಾಸನವಿದ್ದು, ಇದರಲ್ಲಿ ಆತನ ಮಹಾಪ್ರದಾನ ಸರ್ವಾಧಿಕಾರಿ ದಂಡನಾಯಕ ಬಿಟ್ಟಿಮಯ್ಯನ ಮಗಳು ಆಕೆಯ ಮೈದುನನ ಸ್ಮರಣಾರ್ಥವಾಗಿ ನಿಲ್ಲಿಸಿರುವ ವೀರಗಲ್ಲಿದೆ.[63] ಈ ವೀರಗಲ್ಲು ಸವೆದಿರುವುದರಿಂದ ವೀರನ ಹೆಸರು ಹೋರಾಟದ ಕಾರಣ ತಿಳಿದುಬರುವುದಿಲ್ಲ.

ಮೈಸೂರು ತಾಲೂಕಿನ ಕೆ.ಹೆಮ್ಮನಹಳ್ಳಿ ಗ್ರಾಮದ ಮಹಾಲಿಂಗೇಶ್ವರ ದೇವಾಲಯದ ಎಡಪಾರ್ಶ್ವದಲ್ಲಿ ಕ್ರಿ.ಶ.1193ರ ಹೊಯ್ಸಳ ದೊರೆ 2ನೇ ವೀರಬಲ್ಲಾಳನ ಕಾಲದ ಶಾಸನೋಕ್ತ ವೀರಗಲ್ಲಿದ್ದು, ಬೆಳ್ವಲದ ಕದನದಲ್ಲಿ ಹೋರಾಡಿ ಮಡಿದ ನೆನಪಿಗಾಗಿ ನಿಲ್ಲಿಸಿದ ವೀರಗಲ್ಲಿದೆ.[64]

ಮಹಾಲಿಂಗೇಶ್ವರ ದೇವಾಲಯದ ಬಲಪಾರ್ಶ್ವದಲ್ಲಿ ಭಗ್ನಗೊಂಡ ವೀರಗಲ್ಲಿದೆ. ಈ ವೀರಗಲ್ಲು 4.5 ಅಡಿ ಎತ್ತರ ಮೂರು ಅಡಿ ಅಗಲ ಹಾಗೂ ಅರ್ಧ ಅಡಿ ದಪ್ಪವಾಗಿದ್ದು, ಮೂರು ಹಂತಗಳಿಂದ ಕೂಡಿದೆ. ಈ ಮೂರು ಹಂತಗಳನ್ನು ವಿಭಾಗಿಸಿರುವ ಅಡ್ಡಪಟ್ಟಿಕೆಯಲ್ಲಿ ಶಾಸನವಿದೆ. ಈ ವೀರಗಲ್ಲು ಹಂದಿ ಬೇಟೆಯ ವೀರಗಲ್ಲಾಗಿದ್ದು, ಕೆಳಹಂತದಲ್ಲಿ ವೀರನು ಹಂದಿಯೊಡನೆ ಹೋರಾಡುತ್ತಿರುವ ದೃಶ್ಯವಿದೆ. ಈ ವೀರನ ಕೈಯಲ್ಲಿರುವ ಭರ್ಜಿಯು ಹಂದಿಗೆ ಚುಚ್ಚಿದ್ದು, ಹಂದಿಯು ವೀರನ ಮೈಮೇಲೆ ದಾಳಿ ಮಾಡುತ್ತಿರುವಂತೆ ಚಿತ್ರಿಸಲಾಗಿದೆ. ಈ ವೀರನ ಹಿಂಭಾಗದಲ್ಲಿ ಮತ್ತೊರ್ವ ವೀರ ಮತ್ತು ಆತನ ಸಹಚರರಿದ್ದಾರೆ, ಹಂದಿಯ ಹಿಂಭಾಗದಲ್ಲಿ ನಾಯಿಗಳು ಹಂದಿಗೆ ದಾಳಿ ಮಾಡುತ್ತಿರುವಂತೆ ಚಿತ್ರಿಸಿರುವುದನ್ನು ಕಾಣಬಹುದಾಗಿದೆ. ಈ ಹಂದಿ ಬೇಟೆಯು ಕಾಡಿನಲ್ಲಿ ಜರುಗಿತು ಎಂಬುದನ್ನು ಶಿಲ್ಪಿಯು ಯುದ್ಧ ಸನ್ನಿವೇಶದ ಹಿಂಭಾಗದಲ್ಲಿ ಮರಗಳನ್ನು ಬಿಡಿಸಿರುವುದರ ಮುಖಾಂತರ ತೋರಿಸಿದ್ದಾನೆ. ಎರಡನೇ ಪಟ್ಟಿಕೆಯಲ್ಲಿ ಚಾಮರಧಾರಿಣಿಯಾದ ಅಪ್ಸರೆಯರು ಪಲ್ಲಕ್ಕಿಯ ಮೇಲೆ ನಭೋಮಂಡಲದಲ್ಲಿ ವೀರನನ್ನು ಕರೆದೊಯ್ಯುತ್ತಿರುವ ದೃಶ್ಯವಿದ್ದು, ಈ ಪಲ್ಲಕ್ಕಿಯ ಇಕ್ಕೆಲಗಳಲ್ಲಿ

ವಾದ್ಯಗಾರರು ವಾದ್ಯನುಡಿಸುತ್ತಿದ್ದು, ಇವರ ತಾಳಕ್ಕೆ ತಕ್ಕಂತೆ ನರ್ತಿಸುತ್ತಿರುವ ಅಪ್ಸರೆಯರಿದ್ದಾರೆ. ಮೂರನೇ ಪಟ್ಟಿಕೆಯಲ್ಲಿ ಶಿವಲಿಂಗವಿದ್ದು, ಲಿಂಗದ ಇಕ್ಕೆಲಗಳಲ್ಲಿ ಕುಳಿತಿರುವ ನಂದಿ, ಪುರೋಹಿತ ಹಾಗೂ ಮರಣವನ್ನಪ್ಪಿದ ವೀರನನ್ನು ತೋರಿಸಲಾಗಿದೆ. ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಕೆತ್ತನೆ ಇದ್ದು ಅಂತ್ಯದಲ್ಲಿ ಕೀರ್ತಿಮುಖವಿದೆ.

ತಿ.ನರಸೀಪುರ ತಾಲೂಕಿನ ಕಲಿಯೂರು ಗ್ರಾಮದ ಮಾರಿಗುಡಿಯ ಬಲಭಾಗದಲ್ಲಿರುವ ವೀರಗಲ್ಲು ಕ್ರಿ.ಶ.1241ಕ್ಕೆ ಸೇರಿದ್ದು, ಬಲ್ಲಾಳನ ಕಾಲದಲ್ಲಿ ಹೋರಾಡಿ ಮಡಿದ ರಣಭಯಂಕರ ಮಾರೋಜನ ನೆನಪಿಗಾಗಿ ನಿಲ್ಲಿಸಲಾಗಿದೆ.[65]

ಈ ವೀರಗಲ್ಲು 5 ಅಡಿ ಎತ್ತರ, 1.5 ಅಡಿ ಅಗಲ, 4.5 ಇಂಚು ದಪ್ಪವಾಗಿದ್ದು ಬಿಳಿ ಅರೆಗಲ್ಲಿನಿಂದ ಕೆತ್ತನೆಯನ್ನು ಮಾಡಲಾಗಿದೆ. ಈ ವೀರಗಲ್ಲು 4 ಹಂತಗಳನ್ನು ಒಳಗೊಂಡಿದ್ದು, ಮೊದಲನೇ ಹಂತದಲ್ಲಿ ವೀರರಿಬ್ಬರು ಖಡ್ಗ ಹಿಡಿದು ಹೋರಾಡುತ್ತಿರುವ ದೃಶ್ಯವನ್ನು ಕೆತ್ತನೆ ಮಾಡಲಾಗಿದೆ. 2ನೇ ಹಂತದಲ್ಲಿ ವೀರ ಮತ್ತು ಮಾಸ್ತಿಯರನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಉಬ್ಬು ಅಪ್ಸರೆಯರ ಶಿಲ್ಪವಿದೆ. 3ನೇ ಹಂತದಲ್ಲಿ ಪೀಠದ ಮೇಲೆ ಕುಳಿತ ವೀರನಿಗೆ ಪುಷ್ಪಮಾಲೆಯನ್ನು ಹಾಕುತ್ತಿರುವ ದೇವಕನ್ಯೆಯರ ಶಿಲ್ಪವಿದೆ. 4ನೇ ಹಂತದಲ್ಲಿ ಕೈಮುಗಿದು ಕುಳಿತ ಇಬ್ಬರು ವೀರರು, ಲಿಂಗ, ಪುರೋಹಿತ, ಬಸವನ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ.

ಅದೇ ಸ್ಥಳದಲ್ಲಿ ಮಾಲಂಗಿ, ಮಾವಿನಹಳ್ಳಿ ಕದನದಲ್ಲಿ ಬಲ್ಲಾಳನ ಪರವಾಗಿ ಹೋರಾಡಿ ಮಡಿದವರ ಸ್ಮರಣಾರ್ಥವಾದ ವೀರಗಲ್ಲಿದೆ.[66] ಅದೇ ಸ್ಥಳದಲ್ಲಿ ಇದೇ ಕದನದಲ್ಲಿ ಹೋರಾಡಿದ ಅಲೋಜ[22] ಎಂಬ ವೀರನ ಸ್ಮರಣಾರ್ಥವಾದ ಮತ್ತೊಂದು ವೀರಗಲ್ಲಿದೆ.

ಈ ವೀರಗಲ್ಲು 5 ಅಡಿ ಎತ್ತರ, 2.5 ಅಡಿ ಅಗಲ, 6 ಇಂಚು ದಪ್ಪದಾಗಿರುವ ಬೆಣಚುಕಲ್ಲಿನಿಂದ ಕೆತ್ತನೆ ಮಾಡಲಾಗಿದೆ. ಈ ವೀರಗಲ್ಲು 3 ಹಂತಗಳನ್ನು ಹೊಂದಿದೆ. ಮೊದಲನೆ ಹಂತದಲ್ಲಿ ವೀರರಿಬ್ಬರ ಹೋರಾಟದ ದೃಶ್ಯವಿದೆ. ಎಡಭಾಗದ ವೀರ ಬಿಲ್ಲಿಗೆ ಬಾಣ ಹೂಡಿ ನಿಂತಿದ್ದಾನೆ. ಆತನ ಬತ್ತಳಿಕೆಯಲ್ಲಿ ಹಲವಾರು ಬಾಣಗಳಿವೆ, ಬಲಭಾಗದಲ್ಲಿ ವೀರ ಖಡ್ಗ ಮತ್ತು ಈಟಿಯನ್ನು ಹಿಡಿದಿದ್ದಾನೆ. 2ನೇ ಹಂತದಲ್ಲಿ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರ ಶಿಲ್ಪವಿದೆ. ಮೂರನೆಯ ಹಂತದಲ್ಲಿ ಕೈಮುಗಿದು ಕುಳಿತ ವೀರ, ಲಿಂಗ, ಬಸವ, ಸೂರ್ಯ–ಚಂದ್ರರ ಶಿಲ್ಪಗಳಿವೆ.

ತಿ.ನರಸೀಪುರ ತಾಲೂಕಿನ ವಾಟಾಳು ಗ್ರಾಮದ ದುರ್ಗಮ್ಮನ ದೇವಾಲಯದ ಬಳಿಯಿರುವ ಹೊಯ್ಸಳ ದೊರೆಯ 2ನೇ ಬಲ್ಲಾಳನ ಕಾಲದ ಕ್ರಿ.ಶ.1196ರ ವೀರಗಲ್ಲಿದ್ದು,[67]

ಗಡಿಗೆ ಸಂಬಂಧಿಸಿದ ವಿಚಾರದಲ್ಲಿ ಹೋರಾಡಿ ಮಡಿದ ಭಾವಚಾರಿ ನೆನಪಿಗಾಗಿ ಈ ಕಲ್ಲನ್ನು ನಿಲ್ಲಿಸಲಾಗಿದೆ.

ಹುಣಸೂರು ತಾಲೂಕಿನ ಹರವೆ ಗ್ರಾಮದ ಈಶ್ವರ ದೇವಾಲಯದ ಮುಂದೆ ಇರುವ ವೀರಗಲ್ಲು ಕ್ರಿ.ಶ.13ನೇ ಶತಮಾನಕ್ಕೆ ಸೇರಿದ್ದು, ಹೊಯ್ಸಳರ ಕೊನೆಯ ಕಾಲಘಟ್ಟದಲ್ಲಿ ಬಸವಗಾವುಂಡ ಎಂಬುವನು ಹೋರಾಡಿ ಮಡಿದ ವಿಚಾರವನ್ನು ತಿಳಸುತ್ತದೆ.[68] ಈ ಶಾಸನವು ತ್ರುಟಿತಗೊಂಡಿದ್ದು ಸ್ಪಷ್ಟವಾದ ಮಾಹಿತಿ ತಿಳದುಬರುವುದಿಲ್ಲ.

ಪಿರಿಯಾಪಟ್ಟಣ ತಾಲೂಕಿನ ಚಪ್ಪರದಹಳ್ಳಿ ಮಲ್ಲಿಕಾರ್ಜುನ ದೇವಾಲಯದ ಬಳ ಇರುವ ಒಂದನೇ ನರಸಿಂಹನ ವೀರಗಲ್ಲಿದ್ದು, ಚಂಗಾಳ್ವರಿಗೂ ಸೇರಿದ ಗ್ರಾಮ ಹಾಗೂ ಹೊಯ್ಸಳರಿಗೆ ಸೇರಿದ ಗ್ರಾಮಗಳ ನಡುವೆ ತುರುಕಾಳಗ ನಡೆದಿದ್ದು, ಈ ಕಾಳಗದಲ್ಲಿ ಹೊಯ್ಸಳರ ಪ್ರಜೆಯಾದ ಅಂಕರಸನ ಮಗ ಮಹಾದೇವನು ಹೋರಾಡಿ ಮಡಿದನು.[69] ಇವನ ನೆನಪಿಗೋಸ್ಕರ ಈ ವೀರಗಲ್ಲನ್ನು ನಿಲ್ಲಿಸಲಾಗಿದೆ.

ಇದೇ ಪಿರಿಯಾಪಟ್ಟಣದ ಅಡಗೂರು ಗ್ರಾಮದ ದೊಡ್ಡ ಆಲದಮರದ ಕೆಳಗೆ ನಿಲ್ಲಿಸಿರುವ ಕ್ರಿ.ಶ.1174ರ 2ನೇ ಬಲ್ಲಾಳನ ಶಾಸನದಲ್ಲಿ ಅಡಗೂರಿನ ಮಲ್ಲಿಶೆಟ್ಟಿಯ ಮದುವೆ ದಿಬ್ಬಣದಲ್ಲಿ ಚಂಗಾಳ್ವರು ಮಾಡಿದ ದಾಳಯಲ್ಲಿ ಹೋರಾಡಿ ಮಡಿದ ಭುವಿಶೆಟ್ಟಿಯ ಸ್ಮರಣಾರ್ಥವಾಗಿ ನಿಲ್ಲಿಸಿದ ವೀರಗಲ್ಲಿದೆ.[70]

ಪಿರಿಯಾಪಟ್ಟಣ ತಾಲೂಕಿನ ಜೋಗನಹಳ್ಳಿಯ ಗ್ರಾಮದ ಊರ ಒಳಗೆ ಇರುವ ಅರಳಕಟ್ಟೆಯ ಬಳ ಕ್ರಿ.ಶ.1130-31ರ ವಿಷ್ಣುವರ್ಧನನ ಕಾಲದ ವೀರಗಲ್ಲಿದ್ದು, ಚಂಗಾಳ್ವ ರಾಜ್ಯದ ಬಸವಗಾವುಂಡನು ನಡೆಸಿದ ತುರುಕಾಳಗದಲ್ಲಿ ಹೊಯ್ಸಳ ರಾಜ್ಯದ ವೀರ ಹೋರಾಡಿ ಮಡಿದಿರುವ ವೀರನ ಸ್ವರಣಾರ್ಥವಾಗಿ ನಿಲ್ಲಿಸಿರುವ ಶಾಸನೋಕ್ತ ವೀರಗಲ್ಲಿದೆ.[71] ಶಾಸನವು ಕಾಲಪುರುಷ ಹಾವಳಯಿಂದ ಸವೆದಿದ್ದು ಮಡಿದ ವೀರ ಯೋಧನ ಹೆಸರು ತಿಳದುಬರುವುದಿಲ್ಲ.

ಪಿರಿಯಾಪಟ್ಟಣ ತಾಲೂಕಿನ ಕಿತ್ತೂರು ಗ್ರಾಮದ ಕೋಟೆಯ ಬಾಗಿಲಿನ ಬಳ ನಿಲ್ಲಿಸಿರುವ ವೀರಗಲ್ಲು ಕ್ರಿ.ಶ.12ನೇ ಶತಮಾನಕ್ಕೆ ಸೇರಿದ್ದು, ಹೊಯ್ಸಳರಿಗೂ ಮತ್ತು ಚಂಗಾಳ್ವರಿಗೂ ನಡೆದ ಕೋಟೆ ಕದನದಲ್ಲಿ ಹೆಮ್ಮಡಿಗೌಡ ಎಂಬುವನು ವೀರ ಮರಣವನ್ನಪ್ಪಿದನು.[72] ಆತನ ಸ್ಮರಣಾರ್ಥವಾಗಿ ನಿಲ್ಲಿಸಿದ ವೀರಗಲ್ಲಾಗಿದೆ.

ಪಿರಿಯಾಪಟ್ಟಣ ತಾಲೂಕಿನ ಮಾಕೋಡು ಗ್ರಾಮದಲ್ಲಿ ಬಸವೇಶ್ವರ ದೇವಾಲಯದ ಪ್ರಾಕಾರದಲ್ಲಿರುವ ಕ್ರಿ.ಶ.1165-66ರ ಒಂದನೇ ನರಸಿಂಹನ ಕಾಲದ ವೀರಗಲ್ಲಿದ್ದು, ಈ ಕಲ್ಲಿನಲ್ಲಿ

ಒಂದನೇ ನರಸಿಂಹನ ಮಹಾಮಂಡೇಲೇಶ್ವರ ಕದನವೊಂದರಲ್ಲಿ ವೀರಮರಣವನ್ನಪ್ಪಿದ ಮಾಹಿತಿ ದೊರಕುತ್ತದೆ. ಈ ಶಾಸನದಲ್ಲಿ ವೀರನ ಹೆಸರು ತೃಟಿತಗೊಂಡಿದೆ.[73] ದೇವಾಲಯದ ಮುಂದೆ ಎರಡು ವೀರಗಲ್ಲು ಶಾಸನಗಳಿವೆ. ಈ ವೀರಗಲ್ಲುಗಳ ಮೇಲೆ ಶಾಸನವನ್ನು ಬರೆಯಲಾಗಿದೆ.

ವೀರಗಲ್ಲಿನಲ್ಲಿ ಎರಡು ಹಂತಗಳಿವೆ. ಮೊದಲನೇ ಹಂತದಲ್ಲಿ ವೀರ ಪುರುಷರು ಕುದುರೆ ಮೇಲೆ ಕುಳಿತು ಹೋರಾಡುತ್ತಿದ್ದಾರೆ. ಸ್ತ್ರೀಯೊರ್ವಳು ಹಿಂಭಾಗದಲ್ಲಿ ನಿಂತಿದ್ದಾಳೆ. ಮೇಲ್ಭಾಗದಲ್ಲಿ ಮರಣವನ್ನಪ್ಪಿದ ಪುರುಷ ಸ್ವರ್ಗಕ್ಕೆ ಹೋಗಿದ್ದು ಶಿವನ ಬಳಿ ಕುಳಿತಿದ್ದಾನೆ. ಶಿವನಿಗೆ ಪೂಜೆಯನ್ನು ಮಾಡುತ್ತಿರುವ ಪುರೋಹಿತನ ಶಿಲ್ಪವಿದೆ. ಮತ್ತೊಂದು ವೀರಗಲ್ಲು ಮೂರು ಅಂಕಣ ಪಟ್ಟಿಕೆಯಿಂದ ಕೂಡಿದ್ದು, ವೀರಪುರುಷರಿಬ್ಬರು ಒಬ್ಬರಿಗೊಬ್ಬರು ದಂತವನ್ನು ಎತ್ತಿ ಮತ್ತೊರ್ವನು ಇನ್ನೊರ್ವ ಪುರುಷನಿಗೆ ಇರಿಯುತ್ತಿದ್ದಾರೆ, ಎರಡನೇ ಹಂತದಲ್ಲಿ ಮರಣವನ್ನು ಅಪ್ಪಿದ ಪುರುಷನನ್ನು ಸ್ವರ್ಗಲೋಕಕ್ಕೆ ಕೊಂಡ್ಯೊಯುತ್ತಿದ್ದಾರೆ, ಒಟ್ಟಾರೆ ಸ್ವರ್ಗಲೋಕದಲ್ಲಿ ಶಿವ, ಶಿವನ ಮುಂದೆ ನಂದಿ, ಮರಣ ಅಪ್ಪಿದ ಪುರುಷನ ಕೈಯಲ್ಲಿ ಅಂತ್ಯದಲ್ಲಿ ಕೀರ್ತಿಮುಖವಿದೆ.

ಈ ದೇವಾಲಯಕ್ಕೆ ಇತ್ತೀಚೆಗೆ ನಿರ್ಮಿಸಲಾಗಿರುವ ಕಲ್ಲಿನ ಪ್ರಾಕಾರವಿದೆ. ಅಲ್ಲದೆ ದೇವಾಲಯಕ್ಕೆ ಸುಣ್ಣ ಹಾಗೂ ಬಣ್ಣವನ್ನು ಬಳಿದು ದೇವಾಲಯದ ಲಕ್ಷಣವನ್ನು ಗ್ರಾಮಸ್ಥರು ಹಾಳು ಮಾಡಿದ್ದಾರೆ.

ನಂಜನಗೂಡು ತಾಲೂಕಿನ ಮೊತ್ತ ಗ್ರಾಮದ ಮಾರಿ ಚಾವಡಿಯ ಬಳಿ ಇರುವ ವೀರಗಲ್ಲು. 3ನೇ ವೀರಬಲ್ಲಾಳನ ಕಾಲದ ಕ್ರಿ.ಶ.1312ರ ವೀರಗಲ್ಲಿದ್ದು,[74] ಇದನ್ನು ಈ ಗ್ರಾಮದ ಕೋಟೆ ಕಾಳಗದಲ್ಲಿ ಮಡಿದ ಕಾರ-ಚೋರ ಕೇತನ ಮಗ ಮಾಳ ಎಂಬುವನು ವೀರ ಮರಣವನ್ನಪ್ಪಿದುದ್ದರ ಸ್ಮರಣಾರ್ಥವಾಗಿ ನಿಲ್ಲಿಸಿದ ವೀರಗಲ್ಲಾಗಿದೆ.

ಇದೇ ಗ್ರಾಮದ ಸೋಮೇಶ್ವರ ದೇವಾಲಯದ ದಕ್ಷಿಣ ಪಾರ್ಶ್ವದಲ್ಲಿರುವ ಅರಳಿಕಟ್ಟೆಯ ಬಳಿ ಇರುವ ಕ್ರಿ.ಶ.1312ರ ವೀರಬಲ್ಲಾಳನ ಕಾಲದ ವೀರಗಲ್ಲಿದ್ದು, ಕೊಣನೂರು ಕೋಟೆ ಕಾಳಗದಲ್ಲಿ ಹೋರಾಡಿ ಮಡಿದ ವೀರನ ನೆನಪಿಗಾಗಿ ನಿಲ್ಲಿಸಿರುವ ವೀರಗಲ್ಲಿದೆ.[75]

ನಂಜನಗೂಡು ತಾಲೂಕಿನ ಮೂಡಹಳ್ಳಿ ಗ್ರಾಮದ ಕೇತಿ ದೇವರ ಗುಡಿಯಲ್ಲಿರುವ ಕ್ರಿ.ಶ.11ನೇ ಶತಮಾನದ ಕದನದಲ್ಲಿ ಎರೆಯಂಗನು ಮಡಿದ ವಿಚಾರವಿದೆ.[76] ಆದರೆ ಈ ಎರೆಯಂಗನ ಬಗ್ಗೆ ಸ್ಪಷ್ಟ ಮಾಹಿತಿಯಾಗಲೀ ಕದನ ವಿವರಣೆಯಾಗಲಿ ಶಾಸನವು ತೃಟಿತವಾಗಿರುವುದರಿಂದ ತಿಳಿದುಬರುವುದಿಲ್ಲ. ಇದೇ ಸ್ಥಳದಲ್ಲಿ 2ನೇ ವೀರಗಲ್ಲು ಶಾಸನದಲ್ಲಿ

ಕೆರೆಯಮ್ಮನ ಮಗ ವೇದಗಾವುಂಡನು ಹೋರಾಡಿ ಮಡಿದನೆಂದು ಆತನ ಸ್ಮರಣಾರ್ಥವಾಗಿ ಈ ವೀರಗಲ್ಲನ್ನು ನಿಲ್ಲಿಸಲಾಗಿದೆ.[77]

ನಂಜನಗೂಡಿನ ಸುತ್ತೂರು ಸೋಮೇಶ್ವರ ದೇವಾಲಯದಲ್ಲಿರುವ ಎರಡನೇ ವೀರಬಲ್ಲಾಳನ ಕಾಲದ ಕ್ರಿ.ಶ.1196–97ರ ಶಾಸನೋಕ್ತ ವೀರಗಲ್ಲಿದ್ದು, ಎಡೆನಾಡಿನ ಶತೃವಿನ ಜೊತೆ ಲಕ್ಷ್ಮೀದೇವ ದಂಡನಾಯಕನ ತಮ್ಮ ಮಂಚೆಯಣ್ಣನು ಹೋರಾಡಿ ಮಡಿದ ಸ್ಮರಣಾರ್ಥವಾಗಿ ನಿಲ್ಲಿಸಿದ ವೀರಗಲ್ಲಿದೆ. ಅದೇ ಸ್ಥಳದಲ್ಲಿ ಇದೇ ಕದನದಲ್ಲಿ ಹೋರಾಡಿ ಮಡಿದ ಚಿಕ್ಕಣ ಕಣಿಯಲ ಎಂಬುವನ ಸ್ಮರಣಾರ್ಥವಾಗಿ ನಿಲ್ಲಿಸಿದ ಮತ್ತೊಂದು ವೀರಗಲ್ಲಿದೆ.[78]

ನಂಜನಗೂಡು ತಾಲೂಕಿನ ಸರಗೂರು ಗ್ರಾಮದ ಸೋಮೇಶ್ವರ ದೇವಾಲಯದ ಮುಂದೆ ಇರುವ ಒಂದನೇ ನರಸಿಂಹನ ಕಾಲದ ಕ್ರಿ.ಶ.1158ರ ಶಾಸನೋಕ್ತ ವೀರಗಲ್ಲಿದ್ದು, ಸರಗೂಗಾವುಂಡ ಎಂಬುವನು ಮಡಿದ ಸ್ಮರಣಾರ್ಥವಾಗಿ ನಿಲ್ಲಿಸಿದ್ದಾಗಿದೆ.[79] ಈ ಶಾಸನವು ಸವೆದಿರುವುದರಿಂದ ಮಾಹಿತಿ ಅಸ್ಪಷ್ಟವಾಗಿದೆ.

ನಂಜನಗೂಡು ತಾಲೂಕಿನ ಕಾರ್ಯ ಗ್ರಾಮದಲ್ಲಿ ವಿಷ್ಣುವರ್ಧನನ ಕಾಲದ ವೀರಗಲ್ಲಿದ್ದು, ತಲಕಾಡಿನ ಕದನದಲ್ಲಿ ಹೋರಾಡಿ ಮಡಿದ ಎರೆಯಗಾವುಂಡ ಎಂಬ ವೀರನ ಸ್ಮರಣಾರ್ಥವಾಗಿ ನಿಲ್ಲಿಸಿದ ವೀರಗಲ್ಲಿದೆ.[80] ಅದೇ ಸ್ಥಳದಲ್ಲಿ ಅದೇ ಕದನದಲ್ಲಿ ಹೋರಾಡಿ ಮಡಿದ ಕಾರ್ಯಗಾವುಂಡ ಎಂಬ ವೀರನ ಸ್ಮರಣಾರ್ಥವಾಗಿ ನಿಲ್ಲಿಸಿದ ಮತ್ತೊಂದು ವೀರಗಲ್ಲಿದೆ.[81]

ಹೆಗ್ಗಡದೇವನಕೋಟೆಯ ನರಸೀಪುರ ಗ್ರಾಮದ ಹೊಲವೊಂದರಲ್ಲಿ ಕ್ರಿ.ಶ.1137ರ ಹೊಯ್ಸಳ ವಿಷ್ಣುವರ್ಧನನ ಕಾಲದ ಶಾಸನೋಕ್ತ ವೀರಗಲ್ಲಿನಲ್ಲಿ ಹೆಗ್ಗವಾಡಿಯ ಭಮ್ಮಗಾವುಂಡನ ಮಗ ಬೀಚಗಾವುಂಡನು ತುರುಕಾಳಗದಲ್ಲಿ ಹೋರಾಡಿ ಮಡಿದ ಸ್ಮರಣಾರ್ಥವಾಗಿ ನಿಲ್ಲಿಸಿದ ವೀರಗಲ್ಲಿದೆ.[82] **(ಚಿ.ಸಂ.254)**

## ಅಡಿಟಿಪ್ಪಣಿಗಳು

### ಬಿಡಿಶಿಲ್ಪಗಳು

1. ರಾಮಚಂದ್ರ ರಾವ್ ಎಸ್.ಕೆ. – ಮೂರ್ತಿಶಿಲ್ಪ ನೆಲೆ – ಹಿನ್ನೆಲೆ, ಲೇಖಕರ ಮಾತು, ಪು.ಸಂ.1.
2. ಕೃಷ್ಣಸ್ವಾಮಿ ಅಯ್ಯಂಗಾರ್ ಎಚ್.ಎಸ್. (ಸಂ) – ಅವಲೋಕನ – ಕರ್ನಾಟಕ ಪರಂಫರೆಯ ಸಮೀಕ್ಷೆ (ಲೇಖಕರು), ಗೋಪಾಲ ಬಾ.ರಾ. (ಲೇಖನ) ಕರ್ನಾಟಕ ಮೂರ್ತಿಶಿಲ್ಪ, ಪು.ಸಂ.132.
3. ಜ್ಞಾನಾನಂದ – ಶಿಲ್ಪಾದರ್ಶ, ಸಂಪುಟ–1, ಪು.ಸಂ.147.
4. ಅಲ್ಲೈಯಿನ್ ಡ್ಯಾನಿಯಿಲು – ಹಿಂದು ಪಾಲಿಥಿಸಮ್, ಪು.ಸಂ.295–296.
5. ಮಜುಂದಾರ್ ಆರ್.ಸಿ.(ಸಂ)–ಭಾರತೀಯ ಇತಿಹಾಸ ಮತ್ತು ಸಂಸ್ಕೃತಿ, ಸಂ–4, ಪು.ಸಂ.133.
6. ಗೋಪಿನಾಥರಾವ್ ಟಿ.ಎ., – ಎಲಿಮೆಂಟ್ಸ್ ಆಫ್ ಹಿಂದು ಎಕನಾಗ್ರಫಿ, ಸಂಪುಟ,–1, ಭಾಗ–1, ಪು.ಸಂ.54.
7. ಅಲ್ಲೈಹಿನ್ ಡ್ಯಾನಿಯಿಲು – ಪೂರ್ವೋಕ್ತ, ಪು.ಸಂ.222–228.
8. ಗೋಪಿನಾಥ ರಾವ್ ಟಿ.ಎ. – ಪೂರ್ವೋಕ್ತ, ಪು.ಸಂ.75.
9. ಅಲ್ಲೈಹಿನ್ ಡ್ಯಾನಿಯಿಲು – ಪೂರ್ವೋಕ್ತ, ಪು.ಸಂ.153–154.
10. ಲಕ್ಷ್ಮಣ್ ತೆಲಗಾವಿ (ಸಂ) – ಸಂಶೋಧನೆ, ಪು.ಸಂ.787.
11. ದೇವರ ಕೊಂಡಾರೆಡ್ಡಿ – ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಪು.ಸಂ.92.
12. ಅಲ್ಲೈಹಿನ್ ಡ್ಯಾನಿಯಿಲು – ಪೂರ್ವೋಕ್ತ, ಪು.ಸಂ.95–97.
13. ಲಕ್ಷ್ಮಣ್ ತೆಲಗಾವಿ (ಸಂ) – ಸಂಶೋಧನೆ, ಪು.ಸಂ.785.
14. ಕೃಷ್ಣಸ್ವಾಮಿ ಎಚ್. ಸಾಹೇಬ್ ರಾವ್ – ಸೌತ್ ಇಂಡಿಯನ್ ಇಮೇಜಸ್ ಆಫ್ ಗಾಡ್ ಅಂಡ್ ಗಾಡೆಸಸ್, ಪುಸಂ.178.
15. ಕೃಷ್ಣಸ್ವಾಮಿ ಎಚ್. ಸಾಹೇಬ್ ರಾವ್ –ಪೂರ್ವೋಕ್ತ, ಪು.ಸಂ.178
16. ಅಲ್ಲೈಹಿನ್ ಡ್ಯಾನಿಯಿಲು – ಪೂರ್ವೋಕ್ತ, ಪು.ಸಂ.298–300.
17. ಗೋಪಿನಾಥರಾವ್ ಟಿ.ಎ. – ಪೂರ್ವೋಕ್ತ, ಸಂಪುಟ–2, ಭಾಗ–1, ಪು.ಸಂ.182–183.
18. ರಾಮಚಂದ್ರರಾವ್ ಎಸ್.ಕೆ. ಪೂರ್ವೋಕ್ತ, ಸಂಪುಟ–3, ಪು.ಸಂ.1558–1559.

